Funding: Tattva Heritage Foundation, Kolkata. Digitization: eGangotri.

ಶ್ರೀರಾಮಃ ಶ್ರೀರಾಮಃ ಶ್ರೀರಾಮಃ ಶ್ರೀರಾಮಃ ಶ್ರೀರಾಮಃ ಶ್ರೀರಾಮಃ ಶ್ರೀರಾಮಃ ಶ್ರೀರಾಮಃ ಶ್ರೀರಾಮಃ ಶ್ರೀರಾಮಃ ಶ್ರೀರಾಮಃ ಶ್ರೀರಾಮಃ

# ಶ್ರೀಮದ್ವಾಲ್ಮೀಕಿರಾಮಾಯಣ

ಭಾರತ ದರ್ಶನ ಪ್ರಕಾಶನ

ಶ್ರೀರಾಮಃ ಶರಣಂ ಮಮ



ಶ್ರೀರಾಮಃ ಶರಣಂ ಮಮ

ಅರಣ್ಯ ಕಾಂಡ
ಕಿಷ್ಕಿಂಧಾ ಕಾಂಡ

ತಪಃಸ್ವಾಧ್ಯಾಯನಿರತಂ ತಪಸ್ವೀ ವಾಗ್ವಿದಾಂ ವರಮ್।
ನಾರದಂ ಪರಿಪಪ್ರಚ್ಛ ವಾಲ್ಮೀಕಿರ್ಮುನಿಪುಂಗವಮ್॥

ಸಂಪುಟ ೩

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಭಾರತ ದರ್ಶನ ಪ್ರಕಾಶನ

# ವಾಲ್ಮೀಕಿರಾಮಾಯಣ

ವಾಲ್ಮೀಕಿಗಿರಿಸಂಭೂತಾ
ರಾಮಸಾಗರಗಾಮಿನೀ ।
ಪುನಾತು ಭುವನಂ ಪುಣ್ಯಾ
ರಾಮಾಯಣಮಹಾನದೀ ॥

ಸಂಪುಟ 5

ಮುದ್ರಕರು :
ಭಾರತ ದರ್ಶನ ಮುದ್ರಣಾಲಯ,
163, ಮಂಜುನಾಥ ರಸ್ತೆ, 2ನೇ ಬ್ಲಾಕ್, ತ್ಯಾಗರಾಜನಗರ,
ಬೆಂಗಳೂರು-560 028
ದೂರವಾಣಿ: 605381

CC-0. Bhagavan Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಪ್ರಥಮಮುದ್ರಣ - ಫೆಬ್ರುವರಿ ೧೯೮೪-೪,೦೦೦ ಪ್ರತಿಗಳು.

**ಸಂಪಾದಕಮಂಡಲಿ**

ವಿದ್ವಾನ್ ಹೆಚ್. ಎನ್. ರಂಗಸ್ವಾಮೀ

ವಿದ್ವಾನ್ ರಾಮೇಶ್ವರಾವಧಾನೀ

ಶ್ರೀ ಶ್ರೀಹರಿ

ಶ್ರೀ ನೆ. ವೆಂ. ಶ್ರೀನಿವಾಸರಾಯ

**ಭಾರತ ದರ್ಶನ ಪ್ರಕಾಶನ**

ವಿದ್ವಾನ್ ಹೆಚ್. ಎಸ್. ವರದದೇಶಿಕಾಚಾರ್ಯರಂಗಪ್ರಿಯ, M.A.,
ಅಧ್ಯಕ್ಷರು

ಶ್ರೀ ವಿ. ಸೂರ್ಯನಾರಾಯಣ್, M.A., B.Com., B.L.,
ಕೋಶಾಧ್ಯಕ್ಷರು

'ವಿಶ್ವಾಮಿತ್ರ' ವ್ಯವಸ್ಥಾಪಕ ಸಂಪಾದಕ

**ಬೆಲೆ:**

ಸಾಧಾರಣ ಪ್ರತಿ: ರೂ. 15-00. ಕ್ಯಾಲಿಕೋ ಪ್ರತಿ: ರೂ. 18-00

ಪ್ಲಾಸ್ಟಿಕ್ ಹೊದ್ದಿಕೆ (ಐಚ್ಛಿಕ) ಬೆಲೆ: ರೂ. 2-50

(ಪೂರ್ಣಮಾಲೆಯ ಸದಸ್ಯರಿಗೆ ಸಂಪುಟವು ಉಚಿತ.)

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

# ವಿನಮ್ರವಚನಗಳು

ಪರಮಾತ್ಮನ ದಯೆಯಿಂದಲೂ, ಗುರುಭಗವಂತನ ಆಶೀರ್ವಾದಗಳಿಂದಲೂ, ಸತ್ಪುರುಷರ ಸಹಕಾರ-ಸದಾಶಯಗಳಿಂದಲೂ ಶ್ರೀಮದ್ವಾಲ್ಮೀಕಿ ರಾಮಾಯಣದ ಐದನೆಯ ಸಂಪುಟರೂಪವಾದ ದಿವ್ಯಕುಸುಮವನ್ನು ಸಿದ್ಧಗೊಳಿಸಿ ದಯಾಮಯನಾದ ಅವನ ದಿವ್ಯಪಾದಗಳಲ್ಲಿಯೇ ಸಮರ್ಪಿಸಿ ಭಗವಂತನ ದಿವ್ಯಪ್ರಸಾದರೂಪವಾದ ಈ ಸಂಪುಟವನ್ನು ನಮ್ಮ ಪ್ರಿಯ ಗ್ರಾಹಕರ ಅಂಜಲಿಪುಟಗಳಲ್ಲಿಡುತ್ತಿದ್ದೇವೆ.

ಇದು ಐದನೆಯ ಸಂಪುಟ. ರಾಮಾಯಣದಲ್ಲಿ ಅರ್ಧಭಾಗವು ಮುಗಿಯಬೇಕಾಗಿದ್ದಿತು. ನಾವು ಪಾರಾಯಣಕ್ಕೆ ಅನುಕೂಲವಾಗುವಂತೆ ಮೂಲಶ್ಲೋಕಗಳನ್ನು ಪ್ರತ್ಯೇಕವಾಗಿಯೂ ಮತ್ತು ಬಹುಪಾಲು ಶ್ಲೋಕಗಳನ್ನು ಅನುವಾದದಲ್ಲಿಯೂ ಕೊಡುತ್ತಿರುವುದರಿಂದ ಐದನೆಯ ಸಂಪುಟಕ್ಕೆ ಅರ್ಧವನ್ನು ಮುಗಿಸಲು ಸಾಧ್ಯವಾಗಲಿಲ್ಲ. ಕಾಂಡಾನುಕ್ರಮವಾಗಿ ಶ್ಲೋಕಗಳು ಹೀಗಿವೆ: ಬಾಲಕಾಂಡ–2,257, ಅಯೋಧ್ಯಾಕಾಂಡ–4,261, ಅರಣ್ಯಕಾಂಡ–2,458, ಐದನೆಯ ಸಂಪುಟದಲ್ಲಿ ಕಿಷ್ಕಿಂಧಾಕಾಂಡ–1,613. ಸಂಪುಟಗಳಲ್ಲಿ ಅನುಕ್ರಮವಾಗಿ ಶ್ಲೋಕಗಳ ಸಂಖ್ಯೆಗಳು ಹೀಗಿವೆ: ಪ್ರಥಮ ಸಂಪುಟ–2,257, ದ್ವಿತೀಯ ಸಂಪುಟ–2,018, ತೃತೀಯ ಸಂಪುಟ–2,155, ಚತುರ್ಥ ಸಂಪುಟ–2,074, ಪಂಚಮಸಂಪುಟ–2,185. ಈ ಸಂಪುಟವೂ ಸೇರಿ ಒಟ್ಟು–10,689 ಶ್ಲೋಕಗಳ ಅನುವಾದವಾಗಿದೆ. ಇನ್ನೂ 13,317 ಶ್ಲೋಕಗಳ ಅನುವಾದವಾಗಬೇಕಾಗಿದೆ. ಆದುದರಿಂದ ಒಂದು ಅಥವಾ ಎರಡು ಸಂಪುಟಗಳು ಹೆಚ್ಚಾಗುವುದು ಅನಿವಾರ್ಯವಾಗಿ ಕಾಣುತ್ತಿದೆ. ವಾಚಕರು ಸಹಕರಿಸುವರೆಂಬ ಭರವಸೆಯಿದೆ. ಸುಂದರ ಕಾಂಡವನ್ನು ಪ್ರತ್ಯೇಕವಾಗಿ ಕೊಡುವ ಆಶಯವಿದ್ದಿತು. ಆದರೆ ಕಿಷ್ಕಿಂಧಾ ಕಾಂಡವನ್ನು ಈ ಸಂಪುಟದಲ್ಲಿ ಮುಗಿಸಲು ಸಾಧ್ಯವಾಗದೇ ಇದ್ದುದರಿಂದ ಸುಂದರಕಾಂಡವನ್ನು ಪ್ರತ್ಯೇಕವಾಗಿ ಮಾಡಲು ಸಾಧ್ಯವಾಗುವುದಿಲ್ಲ. ಎರಡು ಸಂಪುಟಗಳಲ್ಲಿ ಸುಂದರಕಾಂಡವು ಬರುವುದು ಅನಿವಾರ್ಯವಾಗಿದೆ. ಪಾರಾಯಣಮಾಡುವವರಿಗೆ ಅನುಕೂಲಮಾಡಿಕೊಡಲು ಸುಂದರಕಾಂಡದ ಮೂಲವನ್ನು ಪಾರಾಯಣಕ್ರಮದ ವಿಶೇಷವಿಷಯಗಳೊಡನೆ ಪ್ರಕಟಿಸಲಾಗುವುದು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ರಾಮಾಯಣವಿಭಾಗಕ್ಕೆ ನಾವು ನಿರೀಕ್ಷಿಸಿದ್ದಂತೆ 1987ನೇ ಜನವರಿಯಿಂದ ಡಿಸೆಂಬರ್ ಕಡೆಯವರೆಗೆ ಎರಡು ಸಾವಿರ ಮಂದಿ ಗ್ರಾಹಕರಾಗಿ ಪ್ರೋತ್ಸಾಹಿಸಿದ್ದಾರೆ. ಇವರೆಲ್ಲರೂ ಒಬ್ಬೊಬ್ಬ ಗ್ರಾಹಕರನ್ನು ಕೂಡಿಸಿ ಕೊಟ್ಟರೂ ಈ ವರ್ಷ ಗ್ರಾಹಕರ ಸಂಖ್ಯೆಯು ಇಮ್ಮಡಿಯಾಗುತ್ತದೆ. ಪ್ರಚಾರದ ದೃಷ್ಟಿಯಿಂದ ಕನ್ನಡಿಗರೆಲ್ಲರ ಮನೆಗಳಲ್ಲಿಯೂ ರಾಮಾಯಣ-ಮಹಾಭಾರತಜ್ಯೋತಿಗಳು ಬೆಳಗಲೆಂಬ ಒಂದೇ ಒಂದು ಆಶಯದಿಂದ ಪೂರ್ಣಮಾಲೆಯ ಚಂದಾಹಣವನ್ನು ಕೂಡ ಹೆಚ್ಚಿಸಿರುವುದಿಲ್ಲ. ಆದರೆ ರಾಮಾಯಣದ ಪೂರ್ಣಮಾಲೆಗೆ ಗ್ರಾಹಕರಾಗುವವರು ಭಾರತ ದರ್ಶನದ ಸದಸ್ಯ ಚಂದಾ 20/– ರೂ.ಗಳನ್ನು ಕೊಡಬೇಕೆಂದು ಕಡ್ಡಾಯಮಾಡಲಾಗಿದೆ. ಇವರೆಲ್ಲರಿಗೂ ಭಾರತ ದರ್ಶನ ಮಾಸಪತ್ರಿಕೆಯನ್ನು ಒಂದು ವರ್ಷ ಕಳುಹಿಸಲಾಗುವುದು. ಮಹಾಭಾರತ ಮಹಾಮಂಗಳದ ಸ್ಮರಣಸಂಚಿಕೆಯನ್ನೂ ಕೊಡಲಾಗುವುದು. ನಮ್ಮ ಕಾರ್ಯಕ್ರಮಗಳೆಲ್ಲವೂ ಮಾಸಪತ್ರಿಕೆಯಲ್ಲಿ ಪ್ರಕಟವಾಗುವುದರಿಂದ ಸಂಪುಟಗಳ ಪ್ರಕಟಣೆಯ ಬಗೆಗೆ ನಮ್ಮಿಂದ ಪತ್ರವನ್ನು ನಿರೀಕ್ಷಿಸುವ ಅಗತ್ಯವಿರುವುದಿಲ್ಲ. ಹರಿವಂಶಮಹಾಪುರಾಣದ ಧಾರಾವಾಹಿಯನ್ನೂ ತಪ್ಪದೇ ಓದಬಹುದು. ಆದುದರಿಂದ ರಾಮಾಯಣ-ಮಹಾಭಾರತಗಳಿಗೆ ಗ್ರಾಹಕರಾಗಿರುವವರೆಲ್ಲರೂ ಅಗತ್ಯವಾಗಿ ಭಾರತ ದರ್ಶನ ಮಾಸಪತ್ರಿಕೆಗೂ ಗ್ರಾಹಕರಾಗಬೇಕೆಂದು ಕಳಕಳಿಯಿಂದ ಪ್ರಾರ್ಥಿಸುತ್ತೇವೆ.

1–2–1988ರಿಂದ ಮಹಾಭಾರತದ ಪೂರ್ಣಮಾಲೆಯ ಚಂದಾಹಣವನ್ನು ಸ್ವಲ್ಪ ಹೆಚ್ಚಿಸಲಾಗಿದೆ. 32 ಸಂಪುಟಗಳ ಸಾಧಾರಣಪ್ರತಿಗಳ ಪೂರ್ಣಮಾಲೆಗೆ 400/– ರೂ.ಗಳು. ಕ್ಯಾಲಿಕೋ ಪೂರ್ಣಮಾಲೆಗೆ 500/– ರೂ.ಗಳು. ದರದ ಹೆಚ್ಚಳವನ್ನು ಪೂರ್ವಭಾವಿಯಾಗಿಯೇ ಕೆನರಾ ಮತ್ತು ಸಿಂಡಿಕೇಟ್ ಬ್ಯಾಂಕ್ ಶಾಖೆಗಳಿಗೆ ತಿಳಿಸಿದ್ದರಿಂದ ನೂರಾರು ಜನರು ಹಿಂದಿನ ದರದಲ್ಲಿಯೇ ಪಡೆದುಕೊಳ್ಳಲು ಅನುಕೂಲವಾಯಿತು. ಮುಂದೆ ಮಹಾಭಾರತದ ಸಂಪುಟಗಳನ್ನು ತೆಗೆದುಕೊಳ್ಳಲು ಅನುಕೂಲವಾಗುವಂತೆ ಕೆನರಾ ಮತ್ತು ಸಿಂಡಿಕೇಟ್ ಬ್ಯಾಂಕಿನವರು 400/– ಮತ್ತು 500/– ರೂ.ಗಳ ಸಾಲವನ್ನು ಮಂಜೂರುಮಾಡಬೇಕೆಂಬ ಪ್ರಾರ್ಥನಾಪತ್ರವನ್ನು ಕಳುಹಿಸಿ ಕೊಡಲಾಗಿದೆ. ಈ ನಮ್ಮ ಪ್ರಾರ್ಥನೆಯನ್ನು ಅವರು ಅನುಮೋದಿಸುವ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ತೆಂಬ ಭರವಸೆಯಿದೆ. ನ್ಯಾಷನಲ್ ಕೋ-ಆಪರೇಟಿವ್ ಬ್ಯಾಂಕಿನವರು ಹೊಸ ದರದಂತೆ ಸಾಲವನ್ನು ಮಂಜೂರುಮಾಡುತ್ತಿರುವುದಲ್ಲದೇ ರಾಮಾಯಣಕ್ಕೂ ಸೇರಿಸಿ ಸಾಲವನ್ನು ಮಂಜೂರುಮಾಡುತ್ತಿದ್ದಾರೆ. ಇವರ ಉದಾರತೆಗೆ ನಾವು ಕೃತಜ್ಞರಾಗಿದ್ದೇವೆ. ಇದರ ಉಪಯೋಗವನ್ನು ಧರ್ಮಪ್ರಿಯರು ಪಡೆದುಕೊಳ್ಳಬೇಕೆಂದು ಪ್ರಾರ್ಥಿಸುತ್ತೇವೆ. ಸರ್. ಎಂ. ವಿಶ್ವೇಶ್ವರಯ್ಯ ಕೋ-ಆಪರೇಟಿವ್ ಬ್ಯಾಂಕಿನವರಿಗೂ ಸಾಲದ ಮೊತ್ತವನ್ನು ಚಂದಾಹಣಕ್ಕೆ ಅನುಗುಣವಾಗಿ ಹೆಚ್ಚಿಸುವಂತೆ ಪ್ರಾರ್ಥನಾಪತ್ರವನ್ನು ಸಲ್ಲಿಸಲಾಗಿದೆ. ಅವರಿಂದಲೂ ನಾವು ಪ್ರೋತ್ಸಾಹಕರವಾದ ಪ್ರತಿಕ್ರಿಯೆಯನ್ನು ನಿರೀಕ್ಷಿಸಿದ್ದೇವೆ.

ನಮ್ಮ ಕರ್ನಾಟಕದಲ್ಲಿರುವ ಎಲ್ಲ ಪ್ರೌಢಶಾಲೆಗಳಲ್ಲಿಯೂ ಮಹಾಭಾರತ-ರಾಮಾಯಣಗಳ ಸಂಪುಟಗಳು ಇರುವಂತಾಗಬೇಕೆಂಬುದು ನಮ್ಮ ಬಹಳ ದಿವಸಗಳ ಬಯಕೆಯಾಗಿದೆ. ಇದಕ್ಕಾಗಿ ಸರ್ಕಾರವನ್ನು ಕಾಡಿ ಬೇಡುತ್ತಿದ್ದೇವೆ. ನಾವೆಷ್ಟೇ ಪ್ರಯತ್ನಿಸಿದರೂ ನಮ್ಮ ಆಶಯವು ಕೈಗೂಡಿಲ್ಲ. ಎಲ್ಲವೂ ಆಶ್ವಾಸನೆಗಳಲ್ಲಿಯೇ ಮುಕ್ತಾಯಗೊಳ್ಳುತ್ತಿವೆ. ಆದರೂ ನಾವು ಪ್ರಯತ್ನವನ್ನು ನಿಲ್ಲಿಸಿಲ್ಲ. ಕಂಬ-ಕಂಬಕ್ಕೂ ಕೈಮುಗಿಯುತ್ತಲೇ ಇದ್ದೇವೆ. ಇದರ ಜೊತೆಗೆ ದೈವಪ್ರೇರಣೆಯಂತೆ ಹೊಸಯೋಜನೆಯೊಂದನ್ನು ಸಂಕ್ರಾಂತಿಯ ಶುಭದಿನದಂದು ಪ್ರಾರಂಭಿಸಲಾಗಿದೆ. ನಮ್ಮ ರಾಜ್ಯದಲ್ಲಿರುವ ಸುಮಾರು 4,000 ಪ್ರೌಢಶಾಲೆಗಳಿಗೆ ಮಹಾಭಾರತ-ರಾಮಾಯಣಗಳನ್ನು ಒದಗಿಸಲು ದಾನಿಗಳನ್ನು ಹುಡುಕುವುದು. ಕೇವಲ 200/- ರೂ.ಗಳನ್ನು ಕೊಟ್ಟರೆ ದಾನಿಗಳ ಹೆಸರಿನಲ್ಲಿ ರಾಮಾಯಣದ ಪೂರ್ಣಮಾಲೆಯನ್ನು ಅವರು ಅಪೇಕ್ಷಿಸಿದ ಶಾಲೆಗೆ ಕಳುಹಿಸಲಾಗುವುದು. 500/- ರೂ.ಗಳನ್ನು ಕೊಟ್ಟರೆ ಮಹಾಭಾರತದ ಪೂರ್ಣಮಾಲೆಯನ್ನು ಅವರು ಅಪೇಕ್ಷಿಸಿದ ಶಾಲೆಗೆ ಕಳುಹಿಸಲಾಗುವುದು. ಸಂಪುಟಗಳನ್ನು ವ್ಯವಸ್ಥಿತವಾಗಿ ಕಳುಹಿಸುವ ಪೂರ್ಣ ಹೊಣೆ ನಮ್ಮದು. ಸಾಗಾಣಿಕೆಯ ವೆಚ್ಚವೂ ನಮ್ಮದೇ. ದಾನಿಗಳ ಹೆಸರನ್ನೂ ಮತ್ತು ಶಾಲೆಯ ಹೆಸರನ್ನೂ ಮುದ್ರಿಸಿ ಪ್ರತಿಯೊಂದು ಸಂಪುಟದಲ್ಲಿಯೂ ಇಟ್ಟು ಕಳುಹಿಸಲಾಗುವುದು. ಜ್ಞಾನಪ್ರಸಾರದ ಜೊತೆಗೆ ದಾನಿಗಳ ಹೆಸರುಗಳೂ ಶಾಶ್ವತವಾಗಿ ನಿಲ್ಲುತ್ತವೆ. ಇದು ಕಾರ್ಯಗತವಾಗಲು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ನಮ್ಮ ಎಲ್ಲ ಗ್ರಾಹಕರೂ ಒಂದೊಂದು ರಾಮಾಯಣದ ಅಥವಾ ಮಹಾಭಾರತದ ಸೆಟ್ಟನ್ನು ತಾವು ಓದಿದ ಶಾಲೆಗೆ ದಾನಮಾಡಲು ಮುಂದೆ ಬರಬೇಕಾಗಿ ಕಳ-ಕಳಿಯಿಂದ ವಿನಂತಿಸುತ್ತೇವೆ. ಹಾಗೆ ದಾನಮಾಡಲು ಈಗಾಗಲೇ ಹಲವಾರು ಮಂದಿ ಮುಂದೆ ಬಂದಿರುವುದು ಸಂತಸದಾಯಕವಾಗಿದೆ.

ಶಾಲೆಗಳಿಗೆ ಮಹಾಭಾರತ-ರಾಮಾಯಣ ಮಹಾಗ್ರಂಥಗಳನ್ನು ದಾನಮಾಡಲು ಇದುವರೆಗೆ ಮುಂದೆ ಬಂದಿರುವ ಮಹನೀಯರುಗಳು :–

ಶ್ರೀ ಸಿ. ಎಸ್. ಅಶ್ವತ್ಥನಾರಾಯಣರಾವ್, ಉಪಾಧ್ಯಾಯರು, ನಂ. ಜಿ 19, ಸರ್ಕಾರಿ ನೌಕರರ ವಸತಿಗೃಹಗಳು, 6ನೇ ವಿಭಾಗ, ರಾಜಾಜಿನಗರ, ಬೆಂಗಳೂರು–10.
ಮಹಾಭಾರತ ಮತ್ತು ರಾಮಾಯಣ
ಶ್ರೀ ಕಾವೇರಿ ಸ್ಕೂಲ್, ಬೆಂಗಳೂರು–38.

ಡಾ॥ ಎಚ್. ಎ. ನಾಗಭೂಷಣ, ಬಿ. ವಾಸುದೇವರಾವ್, ಅಮೆರಿಕ.
ಮಹಾಭಾರತ ಮತ್ತು ರಾಮಾಯಣ
ಭಾರತ ಧರ್ಶನ ಸೂಚಿಸುವ ಪ್ರೌಢಶಾಲೆಗೆ.

ಶ್ರೀ ಕೆ. ರಾಜಗೋಪಾಲ ರೆಡ್ಡಿ, ಮಾಜಿ ಪಟೇಲರು, ಕೊತ್ತೂರು, ಪಾವಗಡ ತಾಲ್ಲೂಕ್.
ರಾಮಾಯಣ
ಸಿದ್ಧೇಶ್ವರ ಹೈಸ್ಕೂಲ್, ಹರಿಹರಪುರ.

ಶ್ರೀ ಹೆಚ್. ವಿ. ಎಲ್. ಕೆ. ಮೂರ್ತಿ, ನಂ. 169, ಇ. ಡಬ್ಲ್ಯೂ. ಎಸ್. 1ನೇ ಹಂತ, ಎಚ್. ಕೆ. ಬಿ. ಕಾಲೋನಿ, ಬೆಂಗಳೂರು–79.
ರಾಮಾಯಣ
ನ್ಯಾಷನಲ್ ಇಂಗ್ಲಿಷ್ ಸ್ಕೂಲ್, ರಾಜಾಜಿನಗರ, ಬೆಂಗಳೂರು–10.

ಶ್ರೀಮತೀ ಸಿ. ಜಿ. ಜಯ, ನಂ. 50, ಎನ್. ಎಸ್. ಅಯ್ಯಂಗಾರ್ ರಸ್ತೆ, ಶೇಷಾದ್ರಿಪುರಂ, ಬೆಂಗಳೂರು–20.
ಮಹಾಭಾರತ ಮತ್ತು ರಾಮಾಯಣ
ಇಂಗ್ಲಿಷ್ ಹೈಸ್ಕೂಲ್, ವನಿತಾಸೇವಾಮಂದಿರ, ರಾಜಾಜಿನಗರ, ಬೆಂಗಳೂರು–10.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಮೆ॥ ಗಣೇಶಪದ್ಮಾ ಟ್ರೇಡರ್ಸ್‌, ಆಲ್ವೇಗದ್ದೆ, ಶಿರೂರು ಅಂಚೆ.

ಮಹಾಭಾರತ ಮತ್ತು ರಾಮಾಯಣ

ಗೌ॥ ಫಿಷರೀಸ್ ಹೈಸ್ಕೂಲ್, ಹದವನಕೋಣೆ, ಶಿರೂರು ಅಂಚೆ,
ಕುಂದಾಪುರ ತಾಲ್ಲೂಕ್.

ಶ್ರೀ ಎಸ್. ರಾಜಗೋಪಾಲನ್, ನಂ. 84, ಎಲ್. ಐ. ಸಿ. ಕಾಲೋನಿ, 4ನೇ ಅಡ್ಡ ರಸ್ತೆ, ಜಯನಗರ, ಬೆಂಗಳೂರು-11.

ಮಹಾಭಾರತ ಮತ್ತು ರಾಮಾಯಣ

ಸರಸ್ವತೀ ವಿದ್ಯಾಮಂದಿರ, ಮಾಧವನ್ ಪಾರ್ಕ್, ಜಯನಗರ,

ಶ್ರೀ ಹನುಮಯ್ಯ, ಶ್ರೀ ನಾರಾಯಣ, ಅಮೆರಿಕ.

ರಾಮಾಯಣ

ಭಾರತ ದರ್ಶನ ಸೂಚಿಸುವ ಶಾಲೆಗೆ.

ಶ್ರೀ ಹೆಚ್. ಎಸ್. ನಾಯಕ, ಬಿ.ಇ., ಸೂಪರಿಂಟೆಂಡಿಂಗ್ ಇಂಜನಿಯರ್ (ರಿಟೈರ್ಡ್), ನಂ. 106, 'ಅರ್ಚನ', 7ನೇ ಮುಖ್ಯರಸ್ತೆ, 4ನೇ ಬಡಾವಣೆ, 3ನೇ ಹಂತ, ಬಸವೇಶ್ವರನಗರ, ಬೆಂಗಳೂರು-79.

ಮಹಾಭಾರತ

ಗಾಂಧಿನಗರ ಹೈಸ್ಕೂಲ್, ಕುಮಾರಪಾರ್ಕ್ ವೆಸ್ಟ್ ಎಕ್ಸ್‌ಟೆಂಶನ್
ಬೆಂಗಳೂರು-20

ಶ್ರೀಮತೀ ಎಂ. ಎನ್. ವತ್ಸಲಕುಮಾರಿ, ಅಮೆರಿಕ.

ಮಹಾಭಾರತ ಮತ್ತು ರಾಮಾಯಣ

ಶ್ರೀ ಬಿ. ವಿಶ್ವೇಶ್ವರಯ್ಯ, ಶ್ರೀ ಲಲಿತಾ ವಿದ್ಯಾಮಂದಿರ, ನಂ. 108/4,
ಗಣೇಶಮಂದಿರ ಕಾಂಪೌಂಡ್, ತ್ಯಾಗರಾಜನಗರ, ಬೆಂಗಳೂರು-28.

ಶ್ರೀ ಎಂ. ಜಿ. ಪ್ರಸಾದ್, ಅಮೆರಿಕ. ಮಹಾಭಾರತ ಮತ್ತು ರಾಮಾಯಣ

ಗಾಂಧೀನಗರ ಪ್ರೌಢ ಶಾಲೆ.

ಕುಮಾರ ಪಾರ್ಕ್, ವೆಸ್ಟ್ ಎಕ್ಸ್‌ಟೆಂಶನ್, ಬೆಂಗಳೂರು-20

ಮೆ॥ ಭಾಗ್ಯಲಕ್ಷ್ಮಿ ಮೆಡಿಕಲ್ಸ್, ಪಾವಗಡ. ರಾಮಾಯಣ

ಬಾಲಾಜಿ ಹೈಸ್ಕೂಲ್, ವೆಂಕಟಾಪುರ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri

ಮೆ॥ ಬಾಲಾಜಿ ಅಂಡ್ ಕಂ., ಪಾವಗಡ. ಮಹಾಭಾರತ
ಬಾಲಾಜಿ ಹೈಸ್ಕೂಲ್, ವೆಂಕಟಾಪುರ.

ಮೆ॥ ಓಂಕಾರ್ ಆಯಿಲ್ ಟ್ರೇಡರ್ಸ್, 2ನೇ ಮುಖ್ಯರಸ್ತೆ, ಮಂಡಿಪೇಟೆ, ತುಮಕೂರು. ಮಹಾಭಾರತ ಮತ್ತು ರಾಮಾಯಣ
ವಾಸವೀ ವಿದ್ಯಾಪೀಠ ಹೈಸ್ಕೂಲ್,
ಬಿ. ಹೆಚ್. ರಸ್ತೆ, ತುಮಕೂರು.

ಶ್ರೀ ಎಂ. ಸಿ. ಸತ್ಯಪ್ರಕಾಶ್, ಶ್ರೀ ಛಾಯಾ ಇಂಡಸ್ಟ್ರೀಸ್, ಬಳ್ಳಾರಿ ರಸ್ತೆ, ಪಾವಗಡ. ಮಹಾಭಾರತ ಮತ್ತು ರಾಮಾಯಣ
ಶಾಲೆಯನ್ನು ಸೂಚಿಸಲಿದ್ದಾರೆ.

ಶ್ರೀ ಗೋವಿಂದರಾಜು, ಮೋಹನ್ ಇಂಡಸ್ಟ್ರೀಸ್, ಪಾವಗಡ.
ಮಹಾಭಾರತ ಮತ್ತು ರಾಮಾಯಣ
ಶಾಲೆಯನ್ನು ಸೂಚಿಸಲಿದ್ದಾರೆ.

ಶ್ರೀ ಪಾಮುಡಿ ರಾಮಚಂದ್ರ ಶೆಟ್ಟಿ ಮತ್ತು ಮಕ್ಕಳು, ಜ್ಯೂಯಲರ್ಸ್, ಅವಿನ್ಯೂ ರೋಡ್, ಬೆಂಗಳೂರು-2.
ಮಹಾಭಾರತ ಮತ್ತು ರಾಮಾಯಣ
ವಾಸವೀ ವಿದ್ಯಾನಿಕೇತನ ಹೈಸ್ಕೂಲ್, ವಾಣೀವಿಲಾಸ ರಸ್ತೆ,
ಬಸವನಗುಡಿ, ಬೆಂಗಳೂರು-4.

ಡಾ॥ ಎಸ್. ವಿ. ನಾಗಲಿಂಗಶೆಟ್ಟಿ, ನಂ. 30, ಕುಮಾರಪಾರ್ಕ್ ಪಶ್ಚಿಮ ಬಡಾವಣೆ, ರೈಲ್ವೆ ಪ್ಯಾರಲಲ್ ರೋಡ್, 12ನೇ ಬ್ಲಾಕ್, ಬೆಂಗಳೂರು-20.
ಮಹಾಭಾರತ ಮತ್ತು ರಾಮಾಯಣ
ಗೌ॥ ಪ್ರೀ ಯೂನಿವರ್ಸಿಟಿ ಕಾಲೇಜ್, ಚಿಕ್ಕಬಳ್ಳಾಪುರ.

ಇವರೆಲ್ಲರಿಗೂ ನಮ್ಮ ಕೃತಜ್ಞತಾಪೂರ್ವಕವಂದನೆಗಳು.

ರಾಮಾಯಣದ 4ನೇ ಸಂಪುಟವು ಪ್ರಕಟವಾದನಂತರ ಮಹಾಭಾರತ 6, 8, 23ನೇ ಸಂಪುಟಗಳನ್ನು ಪುನರ್ಮುದ್ರಣಮಾಡಿರುತ್ತೇವೆ. ಈಗಾಗಲೇ 17, 30ನೇ ಸಂಪುಟಗಳು ಮುಗಿದಿದ್ದು 1, 2, 18 ಮತ್ತು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.
20ನೇ ಸಂಪುಟಗಳು ಅತ್ಯಲ್ಪಪ್ರಮಾಣದಲ್ಲಿವೆ. ಸಂಪುಟಗಳು ಮುಗಿಯುತ್ತಿರುವಷ್ಟು ಬೇಗ ಪುನರ್ಮುದ್ರಣಮಾಡಲು ಸಾಧ್ಯವಾಗುತ್ತಿಲ್ಲ. ಸತತವಾಗಿ ಪ್ರಯತ್ನಿಸುತ್ತಿದ್ದೇವೆ. ನಮ್ಮ ಪ್ರಯತ್ನಕ್ಕೆ ದೈವದ ಅನುಗ್ರಹ ಸಿಕ್ಕಬೇಕು. ಆಗಲೇ ಯಾವ ವಿಧವಾದ ಅಡಚಣೆಗಳೂ ಇಲ್ಲದೇ ಸಂಪುಟಗಳು ಹೊರಬರಲು ಸಾಧ್ಯವಾಗುತ್ತದೆ. ಇದಕ್ಕಾಗಿ ನಾವೆಲ್ಲರೂ ದಯಾಮಯನಾದ ಪರಮಾತ್ಮನನ್ನು ಒಕ್ಕೊರಳಿನಿಂದ ಪ್ರಾರ್ಥಿಸೋಣ.

ರಾಮಾಯಣ-ಮಹಾಭಾರತಗಳನ್ನು ಮನೆ-ಮನೆಗೂ ಹಂಚುವ ಕಾರ್ಯದಲ್ಲಿ ನಮ್ಮ ಅನೇಕ ಗ್ರಾಹಕರು ಸತತವಾಗಿ ಪ್ರಯತ್ನಿಸುತ್ತಿದ್ದಾರೆ. ಊರೂರುಗಳಿಗೆ ಹೋಗಿ ಶ್ರಮಿಸುತ್ತಿದ್ದಾರೆ. ಎಷ್ಟೋ ಸಂದರ್ಭಗಳಲ್ಲಿ ಹಾಗೆ ಪ್ರಚಾರಮಾಡುವವರು ಯಾರೆಂಬ ವಿಷಯವೂ ನಮಗೆ ತಿಳಿದಿರುವುದಿಲ್ಲ. ಅವರ ಪರಿಚಯವೂ ಇರುವುದಿಲ್ಲ. ಕೇವಲ ಧರ್ಮಾಭಿಮಾನಿಗಳಾಗಿ ನಿಃಸ್ವಾರ್ಥಸೇವೆ ಸಲ್ಲಿಸುತ್ತಿರುವ, ಪರೋಕ್ಷದಲ್ಲಿರುವ ಈ ಸಜ್ಜನರಿಗೆ ದಯಾಮಯನಾದ ಪರಮಾತ್ಮನು ಅವರ ಸಕಲೇಷ್ಟಾರ್ಥಗಳನ್ನೂ ನೆರವೇರಿಸಿಕೊಡಲಿ. ಅವರಿಂದ ಈ ವಿಧವಾದ ಧರ್ಮಪ್ರಚಾರಕಾರ್ಯವು ಸತತವಾಗಿ ನಡೆಯಲಿ–ಎಂದು ಆಶಿಸುತ್ತೇವೆ.

ಶ್ರೀಮದ್ವಾಲ್ಮೀಕಿರಾಮಾಯಣದ ನಾಲ್ಕನೆಯ ಸಂಪುಟದ ಪ್ರಕಾಶನ ಸಮಾರಂಭವು ದೀಪಾವಳಿ ಅಮಾವಾಸ್ಯೆಯ ದಿನದಂದು (ದಿ. 22-10-1987) ಬೆಂಗಳೂರಿನ ಬಸವನಗುಡಿಯ ಬಸವೇಶ್ವರ ದೇವಾಲಯದ ರಸ್ತೆಯಲ್ಲಿರುವ ಶ್ರೀ ನಿಜಗುಣಕ್ಷೇತ್ರದಲ್ಲಿ ಸಾಯಂಕಾಲ 6-30ಕ್ಕೆ ಜರುಗಿತು. ಗಣ್ಯ ಅತಿಥಿಗಳನ್ನು "ಪೂರ್ಣಕುಂಭ – ಮಂಗಳವಾದ್ಯಗಳೊಡನೆ ಸ್ವಾಗತಿಸಲಾಯಿತು. ಕಾರ್ಯಕ್ರಮವು ವೇದಘೋಷದೊಂದಿಗೆ ಆರಂಭವಾಯಿತು. ವಿದುಷೀ ನಾಗಮಣಿ ಕೃಷ್ಣಮೂರ್ತಿಯವರು ಸ್ವಾಗತಪದ್ಯಮಾಲಿಕೆಯನ್ನು ಹಾಡಿದರು. ಶ್ರೀ ಕೆ. ವಿ. ಶ್ರೀನಿವಾಸಮೂರ್ತಿಯವರು ಸ್ವಾಗತಭಾಷಣ ಮಾಡಿ ಭಾರತ ದರ್ಶನದ ಕನ್ನಡ ಸೇವೆಯನ್ನು ಅತಿಥಿಗಳಿಗೆ ಹಾಗೂ ಗಣ್ಯರಿಗೆ ಪರಿಚಯಿಸಿದರು. ಬಳಿಕ ಬೆಂಗಳೂರಿನ ವಿಶ್ವಭಾರತೀ ಗೃಹನಿರ್ಮಾಣ ಸಮುಚ್ಚಯ ಮಂಡಲಿಯ ಕಾರ್ಯನಿರ್ವಹಣಾಧಿಕಾರಿಗಳೂ–ಗಣ್ಯದಾನಿಗಳೂ ಆದ ಶ್ರೀ ಬಿ. ಕೃಷ್ಣಭಟ್ಟರು ರಾಮಾಯಣಸರಸ್ವತಿಗೆ ಪೂಜೆಮಾಡಿ, ಆರತಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri

ಗೈದು ರಾಮಾಯಣದ ನಾಲ್ಕನೆಯ ಸಂಪುಟವನ್ನು ಬಿಡುಗಡೆಮಾಡಿದರು. ಅನಂತರ ಅವರು ಮಾತನಾಡುತ್ತಾ ರಾಮಾಯಣ-ಮಹಾಭಾರತಗಳ ಕಥೆಯು ಎಲ್ಲರಿಗೂ ತಿಳಿದೇ ಇದೆ. ಆದರೆ ಅವುಗಳಲ್ಲಿನ ಅಂತರಾರ್ಥದ ಪರಿಚಯವು ನಮಗೆ ಆಗಿಲ್ಲ. ಈ ಹಿನ್ನೆಲೆಯಲ್ಲಿ ಭಾರತ ದರ್ಶನದ ಸೇವೆಯು ಶಾಶ್ವತ ವಾದುದು. ಇದರ ಪೂರ್ಣಪ್ರಯೋಜನವನ್ನು ಕನ್ನಡಿಗರೆಲ್ಲರೂ ಪಡೆಯ ಬೇಕು. ರಾಮಾಯಣದ ಪುಸ್ತಕಗಳನ್ನು ಇತರರಿಂದ ಎರವಲು ಪಡೆಯದೇ ಕೊಂಡುಕೊಳ್ಳಬೇಕೆಂದು ತಿಳಿಸಿದರು.

ಪ್ರಕಾಶಿತಸಂಪುಟವನ್ನು ಪರಿಚಯಿಸಿದ ಭಾರತ ದರ್ಶನ ಪ್ರಕಾಶನದ ಅಧ್ಯಕ್ಷರಾದ ಶ್ರೀ ಹೆಚ್. ಎಸ್. ವರದದೇಶಿಕಾಚಾರ್ಯರಂಗಪ್ರಿಯ ಅವರು ಪ್ರಸಕ್ತ ಸಂಪುಟದಲ್ಲಿ ಅಯೋಧ್ಯಾಕಾಂಡದ ಕಥಾಭಾಗವು ಮುಕ್ತಾಯ ಗೊಂಡು ಅರಣ್ಯಕಾಂಡದ ಕೆಲವು ಸರ್ಗಗಳ ಕಥಾಭಾಗವು ಅಂತರ್ಗತ ವಾಗಿದೆ. ಧರ್ಮರಕ್ಷಣೆಗಾಗಿಯೇ ಜನಿಸಿದ ಶ್ರೀರಾಮನು ಖರ-ದೂಷಣರೇ ಮೊದಲಾದ ಸಾವಿರಾರು ರಾಕ್ಷಸರನ್ನು ಸಂಹರಿಸುತ್ತಾನೆ. ಶೂರ್ಪಣಖೆಯು ಹೆಂಗಸಾದ್ದರಿಂದ ವಧಾರ್ಹಳಲ್ಲವೆಂಬ ಧರ್ಮಸೂಕ್ಷ್ಮವನ್ನು ತೋರಿಸಿದ್ದಾನೆ. ಮತ್ತು ಶಿಕ್ಷೆಯು ಯಾರಿಗೆ ಯಾವ ಹಂತದಲ್ಲಿ ಕೊಡಬೇಕು-ಎಂಬ ಬಗ್ಗೆಯೂ ಈ ಸಂಪುಟದಲ್ಲಿ ಚೆನ್ನಾಗಿ ನಿರೂಪಿತವಾಗಿದೆ. ಭಾರತೀಯ ಮೌಲ್ಯಗಳಾದ ಪುರುಷಾರ್ಥಗಳ ನಿರೂಪಣೆಯೂ ಈ ಸಂಪುಟದಲ್ಲಿ ಚೆನ್ನಾಗಿ ಮೂಡಿಬಂದಿದೆ-ಎಂದು ತಿಳಿಸಿದರು.

ಮುಖ್ಯ ಅತಿಥಿಗಳಾಗಿದ್ದ ಕರ್ನಾಟಕ ಅಪೆಕ್ಸ್ ಬ್ಯಾಂಕಿನ ಅಧ್ಯಕ್ಷ, ಶಾಸಕ ಶ್ರೀ ಹೆಗಡೆ ಅಜ್ಜೀಬಾಳ ಅವರು ರಾಮಾಯಣ-ಮಹಾಭಾರತಗಳಂತೂ ಭಾಷೆ, ನದೀ, ದೇಶಗಳ ಪರಿಧಿಯನ್ನೂ ಮೀರಿ ನಿಂತ ವಿಶ್ವಕಾವ್ಯಗಳಾಗಿವೆ. ರಾಜಾಜಿಯವರು ತಮ್ಮ ಜೀವನದ ಉತ್ತಮೋತ್ತಮಸಾಧನೆಯೆಂದರೆ ತಾವು ಬರೆದ ರಾಮಾಯಣ-ಮಹಾಭಾರತಗಳೆಂದೇ ಉತ್ತರಿಸುತ್ತಿದ್ದರು. ಸಿನಿಮಾ, ಕಾದಂಬರಿ-ಇತ್ಯಾದಿಗಳ ಬೆನ್ನುಹತ್ತಿರುವ ನಮ್ಮ ಯುವಪೀಳಿಗೆಗೆ ಚಿರ ನೂತನವಾದ ಸಂದೇಶವನ್ನು ರಾಮಾಯಣವು ನೀಡಬಲ್ಲುದು-ಎಂಬುದಕ್ಕೆ ದೂರದರ್ಶನದಲ್ಲಿ ಬಹುಪ್ರಸಿದ್ಧವಾಗಿರುವ ರಾಮಾಯಣದ ಧಾರಾವಾಹಿಯೇ ಸಾಕ್ಷಿಯೆಂದು ಹೇಳಿದರು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

## ಶಾಂತಿಗಾಗಿ ರಾಮಾಯಣ

ಅನುಗ್ರಹಭಾಷಣವನ್ನು ಮಾಡಿದ ಶ್ರೀರಾಮಚಂದ್ರಾಪುರಮಠದ ಜಗದ್ಗುರು ಶ್ರೀ ಶ್ರೀ ರಾಘವೇಂದ್ರಭಾರತೀ ಮಹಾಸ್ವಾಮಿಗಳವರು ವಿವಿಧಭಾಷೆಗಳಲ್ಲಿ ರಾಮಾಯಣ-ಮಹಾಭಾರತಗಳು ಪ್ರಕಟವಾಗಿದ್ದುವು. ಹಾಗಿದ್ದರೂ ಮೂಲರಾಮಾಯಣ-ಮೂಲಮಹಾಭಾರತಗಳ ಕನ್ನಡ ಅವತರಣಿಕೆಯು ಬೇಕೆಂಬ ಆಸೆಯು ಅನೇಕ ಜನರಲ್ಲಿದ್ದಿತು. ಈಗ ಅದಕ್ಕೆ ಪರಿಹಾರವು ದೊರಕಿದೆ. ಭಾರತ ದರ್ಶನವು ಅತ್ಯಂತ ಸ್ತುತ್ಯರ್ಹವಾದ ಸಾರಸ್ವತಸೇವೆಗೈದಿದೆ. ಅವರ ಸಂಪಾದಕಮಂಡಲಿಯ ವಿದ್ವಾಂಸರಂತೂ ಯಾವ ಪ್ರಚಾರವನ್ನೂ ಬಯಸದೇ ಸೇವೆ ಸಲ್ಲಿಸುತ್ತಿದ್ದಾರೆ.

ಇಂದು ಜನರು ತಮ್ಮ ಲೌಕಿಕಸಾಧನ-ಸಂಪತ್ತುಗಳನ್ನು ಹೆಚ್ಚಿಸಿಕೊಂಡಿದ್ದರೂ–ಶಾಂತಿಯನ್ನು ಪಡೆಯದೇ ಚಿಂತಾಕುಲರಾಗಿದ್ದಾರೆ. ರಾಮಾಯಣದ ಮೌಲ್ಯಗಳನ್ನು ನಾವು ಜೀವನದಲ್ಲಿ ಅಳವಡಿಸಿಕೊಂಡರೆ ದೇಶವು ಆಧಿ-ವ್ಯಾಧಿರಹಿತವಾಗಿ ಶಾಂತಿಯು ನೆಲೆಸುತ್ತದೆ. ಇಂದು ದೌರ್ಭಾಗ್ಯವಶದಿಂದ ದೂರದರ್ಶನ ಹಾಗೂ ಕ್ರಿಕೆಟ್ ಪ್ರಭಾವದಿಂದ ನಮ್ಮ ಜನರ ವಿದ್ಯೆ ಹಾಳಾಗಿದೆ. ಚಿಂತನಶಕ್ತಿಯು ಕುಂಠಿತವಾಗಿದೆ. ಈ ಹಿನ್ನೆಲೆಯಲ್ಲಿ ರಾಮಾಯಣವು ಮಾರ್ಗದರ್ಶಿಯಾದ ಕಾವ್ಯವಾಗಿದೆ–ಎಂದು ತಿಳಿಸಿದರು. ಪೂಜ್ಯ ಶ್ರೀ ಶ್ರೀಗಳವರು ಸಂಪಾದಕಮಂಡಲಿಯ ವಿದ್ವಾಂಸರಿಗೆ ಸುವರ್ಣಮಂತ್ರಾಕ್ಷತೆಗಳನ್ನು ಅನುಗ್ರಹಿಸಿದರು. ಶ್ರೀಮತೀ ನಾಗಮಣಿಕೃಷ್ಣಮೂರ್ತಿಯವರು ಪ್ರಕಾಶನವಾದ ಸಂಪುಟದಿಂದ ಆಯ್ದ ಶ್ಲೋಕಗಳನ್ನು ಸುಶ್ರಾವ್ಯವಾಗಿ ಹಾಡಿದರು. ಶ್ರೀ ಟಿ. ಎನ್. ಪ್ರಭಾಕರ್‌ರವರು ವಂದನಾರ್ಪಣೆ ಮಾಡಿದ ಬಳಿಕ ಸಾಮೂಹಿಕಶಾಂತಿಪಾಠದೊಂದಿಗೆ ಕಾರ್ಯಕ್ರಮವು ಮುಕ್ತಾಯಗೊಂಡಿತು.

ಪ್ರಕಾಶನಸಮಿತಿಯ ಅಧ್ಯಕ್ಷರಾದ ವಿದ್ವಾನ್ ಹೆಚ್. ಎಸ್. ವರದದೇಶಿಕಾಚಾರ್ಯರಂಗಪ್ರಿಯರ ನೇತೃತ್ವದಲ್ಲಿ ಸಂಪಾದಕಮಂಡಲಿಯ ವಿದ್ವಾಂಸರು ಎಂದಿನಂತೆ ನಿಷ್ಠೆಯಿಂದ ನಿಃಸ್ವಾರ್ಥಸೇವೆಯನ್ನು ಸಲ್ಲಿಸುತ್ತಿದ್ದಾರೆ. ದಯಾಳುಗಳಾದ ಈ ವಿದ್ವಾಂಸರ ಸಹಯೋಗವು ದೈವಸಂಕಲ್ಪ

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri

ದಿಂದಲೇ ಪ್ರಾಪ್ತವಾಗಿದೆ. ಮಹಾಭಾರತ-ರಾಮಾಯಣಗಳ ಪ್ರಕಾಶನ ಕಾರ್ಯವು ಸಂಪೂರ್ಣವಾಗಿ ಅವನ ದಿವ್ಯಾನುಗ್ರಹದಿಂದಲೇ ನಡೆಯುತ್ತಿರುವುದೆಂಬುದಕ್ಕೆ ಇದಕ್ಕಿಂತಲೂ ಹೆಚ್ಚಿನ ನಿದರ್ಶನ ಬೇಕಾಗಿಲ್ಲ. ಇವರೆಲ್ಲರಿಗೂ ಕರುಣಾಮಯನಾದ ಪರಮಾತ್ಮನು ಆಯುರಾರೋಗ್ಯ – ಐಶ್ವರ್ಯಾದಿಗಳನ್ನಿತ್ತು ಕಾಪಾಡಲಿ.

ಈ ಸಂಪುಟಕ್ಕೆ ವಿಖ್ಯಾತ ವಿದ್ವಾಂಸರಾದ ವೇ॥ ಬ್ರ॥ ಶ್ರೀ ವಿದ್ವಾನ್ ಪಂಡಿತರಾಜ ಎನ್. ಟಿ. ಶ್ರೀನಿವಾಸಐಯ್ಯಂಗಾರ್ಯರು ಮುನ್ನುಡಿಯನ್ನು ಬರೆದುಕೊಟ್ಟು ಉಪಕರಿಸಿರುತ್ತಾರೆ. ಇವರಿಗೆ ನಮ್ಮ ಹೃತ್ಪೂರ್ವಕವಾದ ವಂದನೆಗಳು.

ಶ್ರೀರಾಮನ ಜಾತಕದ ವಿಷಯವಾಗಿ ಯಾವುದೇ ನಿರ್ಣಯವೂ ಆಗಲಿಲ್ಲ. 4ನೇ ಸಂಪುಟದ ಪರಿಶಿಷ್ಟದ 46ನೇ ಪುಟದ ಟಿಪ್ಪಣಿಯಲ್ಲಿ ವಾಕ್ಯ ಅಥವಾ ದೃಗ್ಗಣಿತದ ಪ್ರಕಾರ ಆ ಲೇಖನವನ್ನು ಬರೆದಿರುವ ವಿದ್ವಾಂಸರು ಸೂಚಿಸಿರುವಂತೆ ಇರಬಹುದೆಂದು ಬಗೆದಿದ್ದೆವು. ಆದರೆ ವಾಕ್ಯ ಮತ್ತು ದೃಗ್ಗಣಿತದ ಪಂಚಾಂಗಗಳಲ್ಲಿಯೂ ಅವರು ಹೇಳಿರುವಂತೆ (1924–25) ರಕ್ತಾಕ್ಷಿ ಸಂವತ್ಸರದ ಮೇಷ ಮಾಸ ಶುಕ್ಲ ನವಮಿ ತಿಥಿಯು ಪುನರ್ವಸೂ ನಕ್ಷತ್ರದಲ್ಲಿ ಆರಂಭವಾಗಿ ಆಶ್ಲೇಷಾನಕ್ಷತ್ರದಲ್ಲಿ ಮುಕ್ತಾಯಗೊಳ್ಳುವುದಿಲ್ಲ. ಇದರ ಬಗೆಗೆ ವಿದ್ವಾಂಸರನ್ನು ಪ್ರಶ್ನಿಸುತ್ತಲೇ ಇದ್ದೇವೆ. ಪ್ರಶ್ನಿಸುತ್ತಲೇ ಇದ್ದರೆ ಎಂದಾದರೊಮ್ಮೆ ಇದರ ರಹಸ್ಯವು ತಿಳಿಯುವುದೆಂಬ ಆಸೆಯಂತೂ ಇದ್ದೇ ಇದೆ. ಪರಮಾತ್ಮನ ದಯೆದಿಂದ ಈ ನಮ್ಮ ಆಶಯವೂ ಪೂರ್ಣಗೊಳ್ಳುವುದೆಂಬ ಭರವಸೆಯಿದೆ. ಎಲ್ಲರ ಜಿಜ್ಞಾಸೆಗೂ ಕಾರಣವಾಗಿರುವ ವಾಲಿವಧೆಯ ಪ್ರಕರಣವನ್ನು ಪ್ರಕಾಶನದ ಅಧ್ಯಕ್ಷರಾದ ವಿದ್ವಾನ್ ಹೆಚ್. ಎಸ್. ವರದದೇಶಿಕಾಚಾರ್ಯರಂಗಪ್ರಿಯರು ಸಂಪೂರ್ಣವಾಗಿ ಸಮರ್ಥವಾಗಿ ವಿಶ್ಲೇಷಿಸಿರುತ್ತಾರೆ. ಇವರಿಗೆ ನಮ್ಮ ಹೃತ್ಪೂರ್ವಕವಂದನೆಗಳು.

ಅಯಾಚಿತವಾದ ಸಾತ್ತ್ವಿಕ ಕೊಡುಗೆಗಳು ಆಗಿಂದಾಗ್ಗೆ ಬರುತ್ತಲೇ ಇರುತ್ತವೆ. ದೈವಪ್ರೇರಣೆಯಿಂದ ಇವರು ಕೊಡುವ ದ್ರವ್ಯವು ಶುದ್ಧವಾದುದೆಂದೂ, ಸಾತ್ತ್ವಿಕವಾದುದೆಂದೂ, ದೈವಪ್ರಸಾದವೆಂದೂ ಭಾವಿಸಿ ಕೃತಜ್ಞತೆಯಿಂದ ಸ್ವೀಕರಿಸಿದ್ದೇವೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಈ ಸಂಪುಟದ ಪ್ರಕಟಣೆಗೆ ದ್ರವ್ಯಸಹಾಯ ಮಾಡಿರುವ ಮಹನೀಯರು :

ಪ್ರೊ|| ಬಿ. ವೆಂಕಟೇಶಾಚಾರ್ ಮೆಮೋರಿಯಲ್ ಟ್ರಸ್ಟ್
ನಂ. ೪2, ಗಾಂಧೀಬಜಾರ್, ಬಸವನಗುಡಿ,
ಬೆಂಗಳೂರು ಇವರಿಂದ .... 2,500/–

ಶ್ರೀ ಕೆ. ಎನ್. ಶಿವರಾಮ್ ಶ್ರೀಮತೀ ಪಿ. ವಿಜಯಲಕ್ಷ್ಮಿ
ಮತ್ತು ರಾವ್, ಪಿಲಿಂಗುಲಿ ನಿಲಯ, ವಸಿಷ್ಠವನಂ,
ಹೊಸಬೆಟ್ಟು .... 1,000/–

ಶ್ರೀ ಭಾಸ್ಕರ ಶೇಟ್ ಇವರು, ಇವರ ಸುಪುತ್ರಿ ಕುಮಾರಿ
ಶ್ಯಾಮಲಾ ಇವರ ಹೆಸರಿನಲ್ಲಿ ಸುಂದರಕಾಂಡದ
ಪ್ರಕಟಣೆಗಾಗಿ .... 501/–

ವೇ|| ಬ್ರ|| ಶ್ರೀ ಟಿ. ಆರ್. ಸುಬ್ರಹ್ಮಣ್ಯಶಾಸ್ತ್ರಿಗಳು
ಉರುಫ್ ಗುಂಡಪ್ಪಶಾಸ್ತ್ರಿಗಳು, ಮನವಾರ್ತೆಪೇಟೆ,
ಬೆಂಗಳೂರು .... 200/–

ಶ್ರೀಮತೀ ಲಲಿತಮ್ಮನವರು ಅವರ ಪತಿ ದಿವಂಗತ
ವೈ. ಎಸ್. ನಾರಾಯಣರಾವ್ ಇವರ
ಸ್ಮರಣಾರ್ಥವಾಗಿ .... 105/–

ಶ್ರೀ ಕೆ. ಎಂ. ಪೂವಯ್ಯ, ವಿಠಲನಗರ ಇವರು ಕರ್ತಮಾಡ
ಮೇದಪ್ಪ ಮತ್ತು ಮುತ್ತಮ್ಮ, ಬಿರುವಾಣಿ, ಕೊಡಗು
ಇವರ ನೆನಪಿಗಾಗಿ .... 101/–

ಶ್ರೀ ಬಿ. ಕೆ. ಅನಂತರಾಮಯ್ಯ, ಸಬ್ ಪೋಸ್ಟ್‌ಮಾಸ್ಟರ್,
ಬಾಗೇಶಪುರ .... 101/–

ಶ್ರೀ ಜಿ. ಗಂಗಾಧರಯ್ಯ, ಶಿಕ್ಷಕರು, ಮಿಡಿಗೇಶಿ .... 101/–

ಶ್ರೀ ಬಿ. ಸಂಪಂಗಿರಾಮಯ್ಯನವರು, ತಾಯಿ ಅಕ್ಕಯ್ಯಮ್ಮ
ನವರ ಸ್ಮರಣಾರ್ಥವಾಗಿ .... 101/–

ಶ್ರೀ ಬಿ. ಎಸ್. ಶ್ರೀನಿವಾಸ, ಇವರು ಇವರ ತಂದೆ ಆರ್ಯ
ವಿದ್ಯಾಶಾಲಾ ನಿವೃತ್ತಉಪಾಧ್ಯಾಯ
ಬಿ. ಸತ್ಯನಾರಾಯಣರಾವ್ ಅವರ ಜ್ಞಾಪಕಾರ್ಥ .... 101/–

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಶ್ರೀ ಗೋಪಾಲಕೃಷ್ಣಯ್ಯ ಶೆಟ್ಟಿ, ಲಕ್ಷ್ಮೀಪುರ, ಅಲಸೂರು, ಬೆಂಗಳೂರು, ಇವರಿಂದ ಇವರ ತಂದೆ ಮಾಲೂರು ಕೆ. ರಾಮಕೃಷ್ಣಯ್ಯ ಶೆಟ್ಟಿ ಜ್ಞಾಪಕಾರ್ಥ .... 101/-

ಶ್ರೀ ಮೇಲುಕೋಟೆ ಕೈಂಕರ್ಯಂ ಸ್ಥಳಾಚಾರ್ಯಪುರುಷ ವೆಂಕಟಾಚಾರ್ (ಶ್ರೀ ಎಂ. ಕೆ. ಆಚಾರ್ಯ) ಇವರ ಸ್ಮರಣಾರ್ಥವಾಗಿ ಅವರ ಮಕ್ಕಳಿಂದ .... 101/-

ಶ್ರೀ ಹೆಚ್. ಎನ್. ಗುಂಡಪ್ಪ, ರಾಜಾಜಿನಗರ, ಬೆಂಗಳೂರು. 90/-

ಶ್ರೀ ಹೆಚ್. ಡಿ. ಹೊನ್ನೇಗೌಡ, ಬೆಮೆಲ್, ಮೈಸೂರು ಇವರಿಂದ ಇವರ ತಂದೆ ಶ್ರೀಮಾನ್ ಎನ್. ದೇವೇಗೌಡರು ಇವರ ಪರವಾಗಿ .... 51/-

ಶ್ರೀ ವಿ. ಕೃಷ್ಣಪ್ಪ, ಬೆಮೆಲ್, ಮೈಸೂರು ಇವರಿಂದ ಇವರ ತಂದೆ ಶ್ರೀಮಾನ್ ಆವಲಪ್ಪ ಇವರ ಪರವಾಗಿ.. 51/-

ಯಶವಂತಪುರದ ಶ್ರೀ ಎನ್. ಸುಬ್ರಹ್ಮಣ್ಯ ಇವರಿಂದ ಇವರ ಮಾತೃಶ್ರೀ ದಿವಂಗತ ಸುಬ್ಬಮ್ಮನವರ ಸ್ಮರಣಾರ್ಥ 51/-

ಶ್ರೀ ಪಿ. ಎನ್. ಹನುಮಂತಾಚಾರ್, ಮಲ್ಲೇಶ್ವರ, ಬೆಂಗಳೂರು-3 .... 51/-

ಇವರೆಲ್ಲರಿಗೂ ನಮ್ಮ ಹೃತ್ಪೂರ್ವಕವಂದನೆಗಳು.

ಈ ಮಹಾಕಾರ್ಯಕ್ಕೆ ಸಹಾಯಮಾಡುತ್ತಿರುವ ಕೆಲವರ ಸೇವೆಯು ಅಳಿಲುಸೇವೆಯಾಗಿರಬಹುದು; ಕೆಲವರ ಸೇವೆಯು ಹನುಮಂತನದಾಗಿರಬಹುದು. ನಮ್ಮ ದೃಷ್ಟಿಯಿಂದ ಎಲ್ಲರೂ ಪುರಸ್ಕಾರಾರ್ಹರೇ ಆಗಿರುತ್ತಾರೆ. ಆ ಎಲ್ಲ ಮಹನೀಯರಿಗೂ ಸಜ್ಜನರಿಗೂ ಅನಂತಾನಂತವಂದನೆಗಳನ್ನು ಸಮರ್ಪಿಸಿ ವಿರಮಿಸುವೆವು.

—ಪ್ರಕಾಶಕರು.

ಶಾನ್ತಿಃ ಪುಷ್ಟಿಸ್ತುಷ್ಟಿಶ್ಚಾಸ್ತು – ಸಮಸ್ತಸನ್ಮಙ್ಗಲಾನಿ ಭವನ್ತು.

---

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

# ನಿವೇದನೆ

ಪರಮರಹಸ್ಯತತ್ತ್ವಗಳನ್ನು ಯಥಾವತ್ತಾಗಿ ಕಾಣಲು ಪರಿಶುದ್ಧವೂ ಶ್ಲಾಘ್ಯವೂ ಆದ ಎರಡು ದಿವ್ಯನೇತ್ರಗಳು ಶ್ರೀಮದ್ರಾಮಾಯಣ ಮತ್ತು ಮಹಾಭಾರತ. ಈ ಎರಡು ಭವ್ಯಕೃತಿಗಳಿಂದ ವೇದಾರ್ಥನಿರ್ಣಯಕ್ಕೆ ಆಗುವ ಉಪಕಾರ ಅನುಪಮ. 'ಭಾರತಂ ಪಂಚಮೋ ವೇದಃ' ಮಹಾಭಾರತವು ಐದನೆಯ ವೇದ ಎಂದೇ ಪ್ರಸಿದ್ಧವಾಗಿದೆ. 'ಆದಿಕಾವ್ಯ' ಎಂಬ ಪಟ್ಟ ವಾಲ್ಮೀಕಿಮುನಿಪ್ರಣೀತವಾದ ಶ್ರೀಮದ್ರಾಮಾಯಣಕ್ಕೇ ಮೀಸಲು.

ಸಕಲವಿದ್ಯೆಗಳ ಗಣಿಯಾದ ದೇವರ್ಷಿ ನಾರದರ ಉಪದೇಶದಿಂದ ಶ್ರೀರಾಮನ ಯಾಥಾತ್ಮ್ಯವನ್ನು ಗ್ರಹಿಸಿದ ತಪೋಮೂರ್ತಿಯಾದ ಪ್ರಾಚೇತಸಮುನಿಯು

'ತತ್ಸರ್ವಂ ಧರ್ಮವೀರ್ಯೇಣ ಯಥಾವತ್ ಸಂಪ್ರಪಶ್ಯತಿ'

ಪರಮಾತ್ಮನ ನಿರಂತರಧ್ಯಾನರೂಪವಾದ ಧರ್ಮದ ಬಲದಿಂದ, ಧರ್ಮ ಮೂರ್ತಿಯಾದ ಶ್ರೀರಾಮನ ಅನುಗ್ರಹಪ್ರಭಾವದಿಂದ, ಎಲ್ಲವನ್ನೂ ನಡೆದ ಹಾಗೆ ಸ್ಪಷ್ಟವಾಗಿ ಕಂಡುಕೊಂಡು ಅವಧಾನದಿಂದ ರಚಿಸಿದ ಭವ್ಯಕೃತಿ ರಾಮಾಯಣ. ಶ್ರೀಮದ್ರಾಮಾಯಣಕಾವ್ಯಾರಂಭ ಸಕಲವಿದ್ಯಾಧಿದೇವತೆ ಯಾದ ವಾಗ್ದೇವತೆಯ ಸುಂದರ ನುಡಿಯಿಂದ

'ನ ತೇ ವಾಗನೃತಾ ಕಾವ್ಯೇ ಕಾಚಿದತ್ರ ಭವಿಷ್ಯತಿ'

'ನಿನ್ನ ಬಾಯಿಂದ ಹೊರಬರುವ ರಾಮಚರಿತಾತ್ಮಕವಾದ ಕಾವ್ಯನುಡಿ ಯಲ್ಲಿ ಸುಳ್ಳಿನ ಲೇಶವೂ ಇರದು'–ಎಂದು ಸರಸ್ವತೀವಲ್ಲಭನಾದ ವಿಧಾತೃ ವಿನ ಶುಭಾಶಂಸನೆಯನ್ನು ಪಡೆದ ಭಾಗ್ಯ ವಾಲ್ಮೀಕಿರಾಮಾಯಣಕ್ಕೇ. ಈ ಭವ್ಯಕೃತಿರತ್ನವನ್ನು ಕೇಳಿ ಅಭಿನಂದಿಸಿದವರು ಆನಂದಿಸಿದವರು, ಋಷಿ ವರ್ಯರು, ಜ್ಞಾನಿಗಳು, ತಪೋಮೂರ್ತಿಗಳು. ಇಷ್ಟೇ ಅಲ್ಲ; ವಾಲ್ಮೀಕಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಮುನಿಗಳ ಶಿಷ್ಯರಾಗಿ ಬೆಳೆದ, ಅವರಿಂದಲೇ ಸಕಲವಿದ್ಯೆಗಳಲ್ಲೂ ಪಾರಂಗತ ರಾದ, ಮೇಧಾವಿಗಳಾದ, ಶ್ರೀರಾಮನ ಸತ್ಪುತ್ರರಾದ ಲವ-ಕುಶರು ಮುನಿ ಗಳಿಂದ ಕಲಿತ ರಾಮಾಯಣವನ್ನು ಮಧುರವಾಗಿ ಹಾಡಲು ಗ್ರಂಥಪ್ರತಿಪಾದ್ಯ ನಾದ ಶ್ರೀರಾಮನೇ ಸ್ವತಃ ಆಮೂಲಾಗ್ರವಾಗಿ ಪರಮಾದರದಿಂದ ಕೇಳಿ ಮೆಚ್ಚಿಕೊಂಡ ಸೌಭಾಗ್ಯ ಈ ರಾಮಾಯಣದ ವೈಶಿಷ್ಟ್ಯ.

ಶ್ರೀಮದ್ರಾಮಾಯಣ ಕೇವಲ ಮನರಂಜನೆಯ ಕಥೆ ಅಲ್ಲ. ಮಾನವನ ಉದ್ಧಾರಕ್ಕೆ, ಅಭ್ಯುದಯಕ್ಕೆ ಅವಶ್ಯ ಅರಿತು ಆಚರಿಸಬೇಕಾದ ವೇದ ಬೋಧಿತ ಧರ್ಮಗಳನ್ನೂ ರಹಸ್ಯಗಳನ್ನೂ ಮನದಟ್ಟಾಗುವ ರೀತಿಯಲ್ಲಿ ಹಿತ ವಾಗಿ ಚೊಕ್ಕವಾಗಿ ಪ್ರಕಾಶಪಡಿಸುವ ಸುಂದರ ಗ್ರಂಥ. ವೇದಾಭಿಪ್ರಾಯ ಗಳನ್ನು ಸುಲಲಿತವಾಗಿ ತಿಳಿಸುವ ಅಪೂರ್ವ ವಿವರಣಗ್ರಂಥ.

‘ ವೇದೋಪಬೃಂಹಣಾರ್ಥಾಯ ತಾವಗ್ರಾಹಯತ ಪ್ರಭುಃ ’

ವೇದಾರ್ಥಗಳನ್ನು ತಿಳಿಯುವ ಸಲುವಾಗಿಯೇ ವಾಲ್ಮೀಕಿಗುರುವು ಶಿಷ್ಯೋತ್ತಮರಾದ ಕುಶ-ಲವರಿಗೆ ಬೋಧಿಸಿದರು ರಾಮಾಯಣವನ್ನು— ಎಂಬ, ರಾಮಾಯಣೋಕ್ತಿಯೇ ಈ ಅಭಿಪ್ರಾಯವನ್ನು ಸೂಚಿಸುತ್ತದೆ. “ ಸಮುದ್ರಮಿವ ರತ್ನಾಢ್ಯಂ ” ಎಂಬುದು ವಾಲ್ಮೀಕಿಯೇ ಹೇಳಿರುವ ಮಾತು.

ಶ್ರೀಮದ್ರಾಮಾಯಣ ರತ್ನಾಕರ. ಇದರ ಗರ್ಭದಲ್ಲಿ ಅಡಗಿವೆ ಅನೇಕ ಅಪೂರ್ವತತ್ತ್ವರತ್ನಗಳು—ಎಂಬುದು ಆ ಮಾತಿನ ಆಶಯ.

ಘನವಾದ ರತ್ನಗಳು ಸಮುದ್ರದ ಆಳದಲ್ಲಿ ಅಡಗಿರುತ್ತವೆ. ಆಳಕ್ಕೆ ಇಳಿದು ತಳದವರೆಗೆ ಹೋಗಿ ಶೋಧಿಸುವ ಸಾಮರ್ಥ್ಯವುಳ್ಳವರಿಗೆ ಮಾತ್ರ ಅವು ಗೋಚರ. ಜಲರಾಶಿಯನ್ನೂ ಅಲೆಗಳ ನೃತ್ಯವನ್ನೂ ಮಾತ್ರ ನೋಡಿ ಆನಂದಿಸುವವರಿಗೆ, ತೃಪ್ತಿಪಡುವವರಿಗೆ ಅವು ಗೋಚರಿಸವು-ಎಂಬುದು ಸರ್ವವಿದಿತ. ಅಂತೆಯೇ ರಾಮಾಯಣಮಹೋದಧಿಯಲ್ಲಿ ಆಳಕ್ಕಿಳಿದು ತಳ ಮುಟ್ಟಿ ಶೋಧನೆಮಾಡುವ ಪರಿಶ್ರಮ, ತಾಳ್ಮೆಯುಳ್ಳ ಧೀರರಿಗೆ ಮಾತ್ರ ಅಪೂರ್ವ ಹಾಗೂ ಅಮೂಲ್ಯ ಧರ್ಮರತ್ನಗಳು, ತತ್ತ್ವರತ್ನಗಳು ಗೋಚರಿಸು ತ್ತವೆ. ಅವನ್ನು ಪಡೆಯುವ ಭಾಗ್ಯ ಅವಕಾಶ ಅಂಥವರಿಗೇ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಇಂತಹ ವೈಶಿಷ್ಟ್ಯಪೂರ್ಣವಾದ ರಾಮಾಯಣ-ಮಹಾಭಾರತಗ್ರಂಥಗಳ ಅಧ್ಯಯನ ಪ್ರತಿಯೊಬ್ಬರಿಗೂ ಅದರಲ್ಲೂ ಭಾರತೀಯರಿಗೆ ಅತ್ಯಗತ್ಯ.

ವೇದ-ವೇದಾಂಗ-ಶಾಸ್ತ್ರಗಳ ಅಧ್ಯಯನದಿಂದ ಆಗುವ ಲಾಭಕ್ಕಿಂತಲೂ ಹೆಚ್ಚಿನ ಲಾಭ ರಾಮಾಯಣ-ಮಹಾಭಾರತಗ್ರಂಥಗಳ ಅಧ್ಯಯನದಿಂದ ದೊರೆಯುವುದೆಂಬುದು ಯಥಾರ್ಥ ಸಂಗತಿ.

ಆದರೆ ಇವೆರಡು ಗ್ರಂಥಗಳೂ ಸಂಸ್ಕೃತಭಾಷೆಯಲ್ಲಿ ರಚಿತವಾಗಿರುವುದರಿಂದ ಸಂಸ್ಕೃತಭಾಷೆಯ ಪರಿಚಯವಿಲ್ಲದ ಜನಸಾಮಾನ್ಯರಿಗೆ ಆ ಮೂಲ ಗ್ರಂಥಗಳಿಂದ ಮಾತ್ರ ಅಪೇಕ್ಷಿತ ಫಲ ದೊರೆಯದು. ಇದನ್ನು ಮನಗಂಡು ಅನೇಕ ಮಹನೀಯರು ಆ ಎರಡು ಗ್ರಂಥಗಳನ್ನೂ ದೇಶಭಾಷೆಗಳಲ್ಲಿ ಅನುವಾದ ಮಾಡಿ ದೇಶೀಯಭಾಷಾ ಪರಿಚಯವುಳ್ಳವರು ಮೂಲ ಮಾತುಗಳ ಶಬ್ದಾರ್ಥವನ್ನು ಗ್ರಹಿಸುವ ಉಪಕಾರ ಮಾಡಿದರು. ಕೆಲವರು ರಾಮಾಯಣದ ಮೂಲಶ್ಲೋಕಗಳನ್ನೆಲ್ಲ ಕೊಟ್ಟು ಅದರ ಕೆಳಗೇ ಆ ಶ್ಲೋಕಗಳ ಭಾವಾನುವಾದವನ್ನೂ ಕನ್ನಡದಲ್ಲಿ ಒದಗಿಸಿ ಶ್ಲೋಕಗಳ ಜೊತೆಗೇ ಶ್ಲೋಕಾರ್ಥವನ್ನು ಅರಿಯುವ ಸಹಾಯ ಮಾಡಿದರು. ಇದೊಂದು ರೀತಿಯ ಉಪಕೃತಿ.

ಭಾಷೆಯ ಪರಿಚಯವಿಲ್ಲದವರಿಗೆ ಪ್ರತಿ ಒಂದು ಮೂಲ ಪದ್ಯದ ಪಠನೆ ಅಗತ್ಯವಿರದು. ವಿಷಯಪರಿಜ್ಞಾನ ಆ ಪದ್ಯಗಳ ಅಭಿಪ್ರಾಯವನ್ನು ತಿಳಿದರೂ ಆಗುವುದೆಂದು ಭಾವಿಸಿ ಅತಿಮುಖ್ಯವಾದ, ಸ್ಮರಿಸಲು ಯೋಗ್ಯವಾದ ಕೆಲವು ಪದ್ಯಗಳನ್ನು ಬಿಡದೇ ಸಮಯೋಚಿತವಾಗಿ ಉದಾಹರಿಸಿ, ಅವುಗಳ ಭಾವವನ್ನೂ, ಉಳಿದ ಪದ್ಯಗಳೆಲ್ಲದರ ಅಭಿಪ್ರಾಯಗಳನ್ನೂ ಚೊಕ್ಕವಾಗಿ, ತಿಳಿಯಾಗಿ, ಸರಳಕನ್ನಡದಲ್ಲಿ ಔಚಿತ್ಯವನ್ನು ಮೀರದೆ ನಿರೂಪಣೆ ಮಾಡುವ ನವಪದ್ಧತಿಯನ್ನು ಅನುಸರಿಸಿರುತ್ತಾರೆ ಪ್ರಕಾಶನಮಂಡಲಿಯ ಅಧ್ವರ್ಯುಗಳಾದ ಶ್ರೀಯುತ ವಿಶ್ವಾಮಿತ್ರರು.

ಗಹನವಾದ, ಸಂದಿಗ್ಧವಾದ ಚರ್ಚಾಸ್ಪದವಾದ ಅನೇಕವಿಷಯಗಳನ್ನು ಚರ್ಚಿಸಿ, ಒಪ್ಪುವ, ಉಚಿತವಾದ, ಸಮಂಜಸವಾದ ಪರಿಹಾರಕ್ರಮ



CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.

ಗಳನ್ನು ಪರಿಶಿಷ್ಟದಲ್ಲಿ ತೋರಿರುವುದು ಮತ್ತೊಂದು ವೈಶಿಷ್ಟ್ಯ ಈ ಗ್ರಂಥದಲ್ಲಿ. ವಿಶ್ವಾಮಿತ್ರಸೃಷ್ಟಿ ಎಂದು ಪ್ರಸಿದ್ಧಿಯುಂಟು. ಇದೂ ಅದೇ ಆಗಿದೆ-ಎನ್ನಬಹುದು. ಸಕಲಮಾನವೋಪಯೋಗಿಯಾದ ಕ್ರಮವನ್ನನುಸರಿಸಿ ಮಹಾಭಾರತವನ್ನು ಸಮಗ್ರವಾಗಿ ಪ್ರಕಟಿಸಿ ಜನೋಪಕಾರಮಾಡಿರುವ ಜ್ಞಾನವಿತರಣಾಧರ್ಮವನ್ನಾಚರಿಸುತ್ತಿರುವ ಶ್ರೀಮಾನ್ ವಿಶ್ವಾಮಿತ್ರರು ಸರ್ವಸಾಮಾನ್ಯವೂ ಅತ್ಯಂತಜನಾದರಣೀಯವೂ ಆದ ಶ್ರೀಮದ್ರಾಮಾಯಣ ಗ್ರಂಥದ ಸಮಗ್ರಪರಿಚಯವನ್ನೂ ಅದೇ ರೀತಿ ತೃಪ್ತಿಕರವಾಗಿ ಮಾಡಿ ಕೊಡುವ ಪ್ರಯತ್ನದಲ್ಲಿ ತೊಡಗಿರುವುದು ಅತ್ಯಂತಶ್ಲಾಘನೀಯ ಮತ್ತು ಅಭಿನಂದನೀಯ. ವಿಷಯಪ್ರತಿಪಾದನೆಯ ಧಾಟಿ, ಗಹನವಿಚಾರಗಳನ್ನೂ ಸರಳವಾಗಿ ವಿಶ್ಲೇಷಿಸಿ ನಿರೂಪಿಸಿರುವ ರೀತಿ, ಕ್ಲೇಶವಿಲ್ಲದೆ ಪ್ರತಿಯೊಬ್ಬರ ಮನಸ್ಸನ್ನೂ ಹೊಕ್ಕು ಹೃದಯಾಂತರಾಳದಲ್ಲಿ ನೆಲೆಸುವಂತೆ ಶ್ಲೋಕಾಭಿಪ್ರಾಯಗಳನ್ನು ತಿಳಿಸಿರುವ ವೈಖರಿ – ಇವೆಲ್ಲವೂ ಶ್ರೀಯುತರ ಮತ್ತು ಸಂಪಾದಕಮಂಡಲಿಯ ಘನವಿದ್ವಾಂಸರ ಅಧ್ಯಯನಪರಿಶ್ರಮದ ಆಳವನ್ನೂ ಜ್ಞಾನಸಾಧನೆಯ ಅತಿಶಯವನ್ನೂ ಎತ್ತಿತೋರುತ್ತವೆ. ಇಂತಹ ಪವಿತ್ರ ಗ್ರಂಥಗಳ ಆಶಯವನ್ನು ಮೊದಲು ಅನುಭವಿಸಿ ಎಲ್ಲರೂ ಅನುಭವಿಸುವಂತೆ ಆಗುವ ರೀತಿಯಲ್ಲಿ ಪ್ರಕಾಶಪಡಿಸಲು ಭಗವದನುಗ್ರಹವೂ ವ್ಯಾಸ-ವಾಲ್ಮೀಕಿಗಳ ಪೂರ್ಣಕೃಪಾಕಟಾಕ್ಷವೂ ಅವಶ್ಯ. ಈ ಭಾಗ್ಯವನ್ನೂ ಸಂಪಾದಕಮಂಡಲಿಯವರು ಪಡೆದಿರುವರು ಎಂಬುದರಲ್ಲಿ ಸಂಶಯವಿಲ್ಲ. ಎಲ್ಲಕ್ಕಿಂತಲೂ ಮಿಗಿಲಾಗಿ ವಿಮರ್ಶನಧುರಂಧರರೂ, ವಿದ್ವನ್ಮಣಿಗಳೂ, ಮೇಧಾವಿಗಳೂ ಆದ ಪ್ರೊ॥ ವರದದೇಶಿಕಾಚಾರ್ಯರಂತಹ ಅಧ್ಯಕ್ಷರು ನಾಯಕರಾಗಿರುವಾಗ, ಮಾರ್ಗದರ್ಶಿಗಳಾಗಿರುವಾಗ, ಸಮಿತಿಯವರು ಕೈಗೊಂಡಿರುವ ಕಾರ್ಯ ಸರ್ವಾಂಗಸುಂದರವಾಗಿದೆ ಎಂಬುದನ್ನು ಪುನಃ ಹೇಳುವ ಅಗತ್ಯವಿರದು.

ಅನೇಕರು ಶ್ರೀಮದ್ರಾಮಾಯಣವನ್ನು ಪಾರಾಯಣಮಾಡುವ (ನಿಯತವಾಗಿ ಕ್ರಮತಪ್ಪದೆ ಶ್ಲೋಕಗಳನ್ನೇ ಪಠಿಸುವ) ಸಂಪ್ರದಾಯ ದಕ್ಷಿಣದೇಶದಲ್ಲಿ ಹಿಂದಿನಿಂದ ಬೆಳೆದುಬಂದಿರುವುದಾಗಿದೆ. ಪಾರಾಯಣ ಮಾಡಬೇಕೆಂಬ ಆಸಕ್ತಿಯುಳ್ಳ ಜನರಿಗೆ ಕೇವಲ ಭಾಷಾನುವಾದದಲ್ಲಿ ಪಠನದಲ್ಲಿ ತೃಪ್ತಿ ಇರದು. ಪಾರಾಯಣಮಾಡಬೇಕೆಂಬ ಆಸಕ್ತಿಯುಳ್ಳವರ ಆಸೆ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಯನ್ನೂ ಈಡೇರಿಸುವ ದೃಷ್ಟಿಯಿಂದ ಪ್ರತ್ಯೇಕವಾಗಿ ರಾಮಾಯಣದ ಮೂಲ ಶ್ಲೋಕಗಳನ್ನೂ ಪ್ರಕಾಶಪಡಿಸಿರುವುದು ಶ್ರೀಮದ್ರಾಮಾಯಣಪ್ರಕಾಶನದ ಮಾಲೆಯಲ್ಲಿರುವ ವೈಶಿಷ್ಟ್ಯ.

ಇದೀಗ ಶ್ರೀಮದ್ವಾಲ್ಮೀಕಿರಾಮಾಯಣದ ಐದನೆಯ ಸಂಪುಟವು ಮುದ್ರಿತವಾಗಿ ಬಿಡುಗಡೆಗೆ ಸಿದ್ಧವಾಗಿದೆ. ಅರಣ್ಯಕಾಂಡದಲ್ಲಿ ಎರಡನೆಯ ಭಾಗವೆಂದು ಪರಿಗಣಿಸಲ್ಪಡುವ ಈ ಸಂಪುಟದಲ್ಲಿ ಅರಣ್ಯಕಾಂಡ 58ನೆಯ ಸರ್ಗದಿಂದ ಆರಂಭವಾಗಿ ಅರಣ್ಯಕಾಂಡ ಮುಗಿದು ಕಿಷ್ಕಿಂಧಾಕಾಂಡದಲ್ಲಿ 39 ಸರ್ಗಗಳು ಮುಗಿದಿವೆ. ಹಿಂದಿನ ಸಂಪುಟಗಳಲ್ಲಿದ್ದಂತೆ ಈ ಸಂಪುಟದಲ್ಲೂ ರಾಮಾಯಣದ ಮೂಲಶ್ಲೋಕಭಾಗವು ಪ್ರತ್ಯೇಕವಾಗಿ ಮಿಲಿತವಾಗಿದೆ.

ಭಾರತ ದರ್ಶನ ಪ್ರಕಾಶನ ಸಂಸ್ಥೆಯವರ ಶ್ರದ್ಧೆ, ಪರಿಶ್ರಮ, ಸಾಧನೆ ಪರಮಸ್ತುತ್ಯರ್ಹ ಎಂದು ಮನಃಪೂರ್ವಕವಾಗಿ ಅಭಿನಂದಿಸುವುದರ ಜೊತೆಗೆ ಇವರ ಉದ್ದೇಶ (ಸಫಲವಾಗುವಂತೆ) ಸಾರ್ಥಕವಾಗುವಂತೆ ಜನತೆ ಈ ಭವ್ಯಕೃತಿಯನ್ನು ಪಡೆದು ಅಧ್ಯಯನಮಾಡಬೇಕು, ಅನುಭವಿಸಬೇಕು. ತಾವೂ ಪರಮಲಾಭವನ್ನು ಪಡೆಯಬೇಕು ಎಂದು ವಿನಂತಿಸುತ್ತೇನೆ.

ಪಂಡಿತರಾಜ ಎನ್. ಟಿ. ಶ್ರೀನಿವಾಸಯ್ಯಂಗಾರ್,
ನಿವೃತ್ತ ವ್ಯಾಕರಣಶಾಸ್ತ್ರ ಪ್ರಾಧ್ಯಾಪಕ.



CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

# ಶ್ರೀಮದ್ವಾಲ್ಮೀಕಿರಾಮಾಯಣ-ಐದನೆಯ ಸಂಪುಟ

## ಮೂಲಶ್ಲೋಕಗಳ ಸರ್ಗಾನುಕ್ರಮಣಿಕೆ ಮತ್ತು ವಿಷಯಾನುಕ್ರಮಣಿಕೆ

( ವಿ. ಸೂ. ಮೊದಲನೆಯದು : ಮೂಲಶ್ಲೋಕಗಳ ಸರ್ಗಗಳ ಪುಟಸಂಖ್ಯೆ–
ಎರಡನೆಯದು : ವಿಷಯಗಳ ಪುಟಸಂಖ್ಯೆ )

### ಅರಣ್ಯಕಾಂಡ



CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.




CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



## ಕಿಷ್ಕಿಂಧಾಕಾಂಡ



CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.




CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.





CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.





CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.





CC-0. Bhagavad Ramanuja National Research Institute, Melukote Collection.

ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯ ಶ್ರೀಮಜ್ಜಗದ್ಗುರು ಶಂಕರಾಚಾರ್ಯ
Heritage Foundation Kolkata. Digitization: eGangotri

ಶ್ರೀರಾಮಚಂದ್ರಾಪುರಮಠಸ್ಥ



ಶ್ರೀಮದ್ರಾಘವೇಂದ್ರಭಾರತೀ ಶ್ರೀಸ್ವಾಮಿಭಿಃ ।

ಅಸ್ಮದತ್ಯಂತ ಪ್ರಿಯಶಿಷ್ಯ ಶ್ರೀಯುತ ಕೇಶವ ಸುಬ್ರಹ್ಮಣ್ಯ ಕೌಶಿಕರು,
ಸಂಪಾದಕರು, ಭಾರತ ದರ್ಶನ ಪ್ರಕಾಶನ, ತ್ಯಾಗರಾಜನಗರ,
ಬೆಂಗಳೂರು-28 ಇವರಿಗೆ

ಶ್ರೀಮನ್ನಾರಾಯಣಸ್ಮರಣಪುರಸ್ಸರಂ ಸಂದಿಷ್ಟೋಽಯಂ
ಸಂದೇಶಃ

ಆದಾಗಿ ; ಶ್ರೀಮದ್ವಾಲ್ಮೀಕಿರಾಮಾಯಣ ( ಸಂಸ್ಕೃತ ಛಂದೋಬದ್ಧ) ವನ್ನು ಕನ್ನಡಾನುವಾದದೊಂದಿಗೆ ಸಂಪುಟ – ಸಂಪುಟವಾಗಿ ಪ್ರಕಾಶಿಸುತ್ತಿರುವ ನೀವು ಇದೀಗ ಐದನೇ ಸಂಪುಟವನ್ನು ಹೊರತರುತ್ತಿರುವುದನ್ನು

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.


ತಿಳಿದು ಸಂತೋಷವಾಯಿತು. ಅನುವಾದವು ಸರಳ ಕನ್ನಡ ಭಾಷೆಯಲ್ಲಿದ್ದು ವಿಶೇಷ ಟಿಪ್ಪಣಿಗಳನ್ನು ಕೊಟ್ಟಿರುವುದು ವಾಚಕರಿಗೆ ತುಂಬ ಪ್ರಯೋಜನಕಾರಿಯಾಗಿದೆಯೆಂದು ಭಾವಿಸಿದೆ.

ಶ್ರೀಮದ್ರಾಮಾಯಣದ ಪ್ರತಿಯೊಂದು ಕಾಂಡ-ಸರ್ಗಗಳಲ್ಲಿಯೂ ಸಾರ್ವಕಾಲಿಕವಾದ ನೀತಿಸಂಹಿತೆಯು ಎದ್ದು ಕಾಣುತ್ತಿದ್ದು ಈ ಸಂಪುಟದಲ್ಲಿ ಸೀತಾವಿರಹ, ಹನುಮತ್ಸಮಾಗಮ, ಸುಗ್ರೀವಮೈತ್ರಿ, ವಾಲಿಸಂಹಾರ ಇತ್ಯಾದಿಗಳಲ್ಲಿ ಎಷ್ಟೆಷ್ಟು ಪರಿಶೀಲಿಸಿದರೂ ಸಂಗ್ರಾಹ್ಯವಿಚಾರಗಳಿವೆ.

ಶ್ರೀರಾಮನು ವಾಲಿಯ ಹತ್ತಿರ ಹೇಳಿರುವ ರಾಜನ ಹೊಣೆಗಾರಿಕೆಯ ಮಾತಂತೂ ಮಾನವಲೋಕಕ್ಕೆ ಹಿತಾವಹವಾಗಿ, ಈ ಲೋಕದ ಶಾಂತಿಯನ್ನೂ ಪರಲೋಕದ ಸುಖವನ್ನೂ ಮಾಡುವಂತಹದ್ದಾಗಿದೆ. ಕನ್ನಡಿಗರೆಲ್ಲ ಇದರ ಪ್ರಯೋಜನ ಪಡೆಯುವಂತಾಗಲಿ. ಉಳಿದ ಸಂಪುಟಗಳೂ ಶೀಘ್ರ ಹೊರಬರುವಂತಾಗಿ ಕನ್ನಡಭಾಷೆಯ ಪುಸ್ತಕಭಂಡಾರವು ಇಂತಹ ಅಮೂಲ್ಯ ಸದ್ಗ್ರಂಥಗಳಿಂದ ಶೋಭಿಸುವಂತಾಗಲೆಂದೂ ನಿಮಗೆ ಶ್ರೀರಾಮಾನುಗ್ರಹದಿಂದ ಉತ್ತರೋತ್ತರ ಅಭಿವೃದ್ಧಿಯಾಗಲೆಂದೂ ಸುವರ್ಣಮಂತ್ರಾಕ್ಷತೆಯೊಂದಿಗೆ ಹಾರೈಸುತ್ತೇವೆ.

ಇತಿ ಶ್ರೀಮನ್ನಾರಾಯಣಸ್ಮೃತಯಃ

---

ಮಿತಿ :- ಪ್ರಭವಸಂವತ್ಸರ ಫಾಲ್ಗುಣ ಶುಕ್ಲ ೧೨ಯು ಚಂದ್ರವಾಸರೇ

ತಾ॥ 29-2-1988

ವಸತಿ:- ತೀರ್ಥಹಳ್ಳಿ ಶ್ರೀರಾಮಚಂದ್ರಾಪುರಮಠೇ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಶ್ರೀರಂಗಸದ್ಗುರವೇ ನಮಃ

## ವಾಲಿವಧೆಯ ಸಂಕ್ಷಿಪ್ತ ವಿಮರ್ಶೆ

ಆದಿಕವಿಯ ಅಮರಕಾವ್ಯವಾದ ಶ್ರೀಮದ್ರಾಮಾಯಣದ ಕಥಾವಾಹಿನಿಯಲ್ಲಿ ಬಿಸಿ-ಬಿಸಿಯಾದ ವಾದ-ವಿವಾದಗಳಿಗೆ ಆಸ್ಪದವಾಗಿರುವ ಘಟ್ಟಗಳಲ್ಲಿ ವಾಲಿವಧೆಯ ಪ್ರಕರಣವೂ ಒಂದು. ಅದನ್ನು ಕುರಿತ ವಿಮರ್ಶೆ ಬಹಳ ಹಿಂದಿನ ಕಾಲದಿಂದ ನಡೆಯುತ್ತಾ ಬಂದಿದೆ. ಇಂದೂ ನಡೆಯುತ್ತಿದೆ. ತತ್ತ್ವಜಿಜ್ಞಾಸುಗಳಾದ ಜನ ಮತ್ತು ಬುದ್ಧಿಯ ವ್ಯಾಯಾಮಮಾಡುವ ಜನ ಇರುವವರೆಗೂ ನಡೆಯುತ್ತಲೇ ಇರುತ್ತದೆ.

ವಾಲ್ಮೀಕಿರಾಮಾಯಣದಲ್ಲಿಯೇ ಈ ವಿಷಯದ ಬಗೆಗೆ ಆಳವಾದ ಮತ್ತು ಅರ್ಥವತ್ತಾಗಿರುವ ಚರ್ಚೆ ನಡೆದಿದೆ. (ಕಿಷ್ಕಿಂಧಾಕಾಂಡ ಸರ್ಗ ೧೭ ಮತ್ತು ೧೮) ಇಬ್ಬರು ಮಹಾಪುರುಷರ ಮೂಲಕ ಆಕ್ಷೇಪ-ಸಮಾಧಾನಗಳ ರೂಪದಲ್ಲಿ ವಾಲ್ಮೀಕಿ ಆ ವಿಮರ್ಶೆಯನ್ನು ಮಂಡಿಸಿದ್ದಾರೆ. ವಿಮರ್ಶಾಚರ್ಚೆಯಲ್ಲಿ ತೊಡಗಿರುವ ಆ ಇಬ್ಬರು ಮಹಾಪುರುಷರೂ ಮಹಾಮೇಧಾವಿಗಳು, ಮನೀಷಿಗಳು, ಮಹಾವೀರರು, ಧೀರರು, ಧರ್ಮಜ್ಞರು, ಉಪನ್ಯಾಸ ಮಾಡುವ ಕಲೆಯಲ್ಲಿ ಅತ್ಯಂತನಿಷ್ಣಾತರಾದವರು. ಇದಲ್ಲದೇ ಪ್ರಸಕ್ತವಾದ ಘಟನೆಯಲ್ಲಿ ನೇರವಾಗಿ ಭಾಗವಹಿಸಿದ ಪಾತ್ರಗಳಾಗಿ ಕಾಲ-ದೇಶ-ಸನ್ನಿವೇಶಗಳನ್ನು ಚೆನ್ನಾಗಿ ಅರ್ಥಮಾಡಿಕೊಂಡಿದ್ದವರು.

ವಾನರರಾಜ 'ವಾಲಿ ಮತ್ತು ಮಾನವೇಂದ್ರ ರಾಘವ ಶ್ರೀರಾಮಚಂದ್ರ-ಇವರೇ ಆ ಮಹಾಪುರುಷರು. ಆ ಇಬ್ಬರನ್ನೂ ಕ್ರಮವಾಗಿ ವಾದಿ ಮತ್ತು ಪ್ರತಿವಾದಿಗಳ (ಆಕ್ಷೇಪಕ ಮತ್ತು ಉತ್ತರದಾತರ) ಸ್ಥಾನಗಳಲ್ಲಿ ನಿಲ್ಲಿಸಿ, ಅವರ ಮೂಲಕ ವೇಗವಿದ್ದರೂ ವಿಚಾರಪೂರಿತವಾದ ಮತ್ತು ಸಂಕ್ಷೇಪವಾಗಿದ್ದರೂ ಸರ್ವತೋಮುಖವಾಗಿರುವ ಪ್ರಭಾವಪೂರ್ಣವಾದ ವಿಮರ್ಶೆಯ ಕಾರ್ಯಕ್ರಮವನ್ನು ಒದಗಿಸಿಕೊಟ್ಟಿದ್ದಾರೆ ವಾಲ್ಮೀಕಿಮಹರ್ಷಿ. ವಿವೇಕಿಗಳಾದ ಆ ವಾದಿ-ಪ್ರತಿವಾದಿಗಳಿಬ್ಬರೂ ಮಹಾಜನರ ಎದುರಿಗೆ ಸಂಭಾಷಣೆಯ ಮೂಲಕ ತಮ್ಮ ಅಭಿಪ್ರಾಯಗಳನ್ನು ಮಂಡಿಸಿ ಉಭಯಸಮ್ಮತವಾದ ಒಂದು ನಿರ್ಣಯವನ್ನು ಪಡೆದು ಕೃತಕೃತ್ಯರಾಗಿದ್ದಾರೆ. ಆದ್ದರಿಂದ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಅಷ್ಟು ಅಚ್ಚುಕಟ್ಟಾಗಿ ತೀರ್ಮಾನವಾಗಿರುವ ವಿಷಯದ ಬಗೆಗೆ ಚರ್ಚೆಯನ್ನು ಮುಂದುವರಿಸುವುದೇ ಕೇವಲ ಚಾಪಲ್ಯದ ಕೆಲಸವಾಗುತ್ತದೆ. ಆದರೂ 'ಕಕ್ಷಿಗಾರ ಬಿಟ್ಟರೂ ಸಾಕ್ಷಿಗಾರ ಬಿಡ' ಎಂಬ ಗಾದೆಯಂತೆ ಅನೇಕ ಮಂದಿ ವಾದಯುದ್ಧವನ್ನು ಮುಂದುವರಿಸುತ್ತಲೇ ಬಂದಿದ್ದಾರೆ. ಹೀಗೆ ಚರ್ಚೆಯನ್ನು ಮುಂದುವರಿಸುವುದಕ್ಕೆ ಅವರು ಕೊಡುವ ಕಾರಣಗಳು ಎರಡು :–

1) ರಾಮಾಯಣದಲ್ಲಿ ಆ ವಿಷಯವನ್ನು ಕುರಿತು ನಡೆದಿರುವ ಚರ್ಚೆ ಸಾಲದು. ವಾದ-ವಿವಾದಗಳಿಗಿನ್ನೂ ಅವಕಾಶ ಇದೆ–ಎನ್ನುವುದು ಒಂದು ಕಾರಣ.

2) ವಾದಿಯಾಗಿದ್ದ ವಾಲಿ ಚರ್ಚೆಯ ಸಮಯದಲ್ಲಿ ತುಂಬಾ ಆಯಾಸಗೊಂಡಿದ್ದ. ಆಗ ಅವನಿಗೆ ಕುಟುಕುಜೀವ ಮಾತ್ರ ಇತ್ತು. ಆದ್ದರಿಂದ ಅವನು ತನ್ನ ಪ್ರೀತಿಯ ಪತ್ನಿ ತಾರೆಗೆ ಮತ್ತು ಪ್ರಿಯಪುತ್ರ ಅಂಗದನಿಗೆ ಶ್ರೀರಾಮ ಮತ್ತು ಸುಗ್ರೀವರು ತೊಂದರೆಕೊಡದೇ ಅವರನ್ನು ಚೆನ್ನಾಗಿ ನೋಡಿಕೊಳ್ಳಲಿ ಎಂದು ಕುಟುಂಬವಾತ್ಸಲ್ಯ ಮತ್ತು ನೀತಿಯ ಕಾರಣಕ್ಕಾಗಿ ಶ್ರೀರಾಮನು ಮಾಡಿದ್ದೇ ಸರಿ ಎಂದು ಒಪ್ಪಿಕೊಂಡು ಸುಮ್ಮನಾದ. ಶ್ರೀರಾಮನ ಉತ್ತರಗಳಿಂದ ಅವನಿಗೆ ನಿಜವಾಗಿಯೂ ಸಮಾಧಾನ ಉಂಟಾಗಿರಲಿಲ್ಲ. ಆದ್ದರಿಂದ ವಿಷಯವು ಪೂರ್ಣವಾಗಿ ನಿರ್ಣಯವಾಗಿಲ್ಲ. ಚರ್ಚೆಯನ್ನು ಮುಂದುವರಿಸುವುದಕ್ಕೆ ಅವಕಾಶ ಇದೆ–ಎಂಬುದು ಮತ್ತೊಂದು ಕಾರಣ.

ಇದು ಹೇಗಾದರೂ ಇರಲಿ. ವಿಷಯವನ್ನು ಕುರಿತಾದ ವಿಮರ್ಶೆಯನ್ನು ಈ ಪರಿಶಿಷ್ಟದಲ್ಲಿ ಸಂಕ್ಷೇಪವಾಗಿ ನಾವು ವಿಮರ್ಶೆಮಾಡುವುದು ಪ್ರಾಸಂಗಿಕವಾಗಿದೆ.

ವಿಮರ್ಶೆ ಮಾಡುವವರಲ್ಲಿ ಕೆಲವು ಯೋಗ್ಯತೆಗಳೂ ಮತ್ತು ಗುಣಗಳೂ ಇರಬೇಕು :–

1) ಅವರು ವಿಷಯದ ಎಲ್ಲ ಭಾಗಗಳನ್ನೂ ವಿಚಾರಕ್ಕೆ ತೆಗೆದುಕೊಳ್ಳಬೇಕು.

2) ಸಾರ್ವಕಾಲಿಕವಾದ ನ್ಯಾಯಗಳಿಗೆ ಮನ್ನಣೆ ನೀಡುವಂತೆಯೇ

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.


ಆಯಾ ದೇಶ-ಕಾಲಗಳ ವ್ಯಕ್ತಿಗಳಿಗೆ ಸಂಬಂಧಪಟ್ಟಂತೆ ಇರುವ ವಿಶೇಷವಾದ ನ್ಯಾಯಗಳನ್ನೂ ಗಮನಕ್ಕೆ ತೆಗೆದುಕೊಳ್ಳಬೇಕು. ನಮ್ಮ ದೇಶ-ಕಾಲಗಳಿಗೆ ಸಂಬಂಧಪಟ್ಟ ಕಾನೂನುಗಳ ದೃಷ್ಟಿಯಿಂದಲೇ ಅಂದಿನ ಕಾಲ-ದೇಶಗಳ ವಿಷಯಗಳನ್ನೂ ವಿಮರ್ಶಿಮಾಡಿ ತೀರ್ಪನ್ನು ನೀಡಬಾರದು.

3) ವಿಮರ್ಶಕರಿಗೆ ಅಭಿನಿವೇಶ ಅಥವಾ ಪೂರ್ವಗ್ರಹ ಇರಬಾರದು. ಅವುಗಳ ಆಕ್ರಮಣಕ್ಕೆ ಒಳಪಟ್ಟವರು ವಿದ್ವಾಂಸರಾಗಿದ್ದರೂ ಅವರಿಗೆ ಭ್ರಮೆ ಯುಂಟಾಗುತ್ತದೆ.

ಅಭಿನಿವೇಶವಶೀಕೃತಚೇತಸಾಂ ಬಹುವಿದಾಮಪಿ ಸಂಭವತಿ
ಭ್ರಮಃ । *

ಈ ದೋಷಗಳಿಗೆ ಒಳಗಾಗದೇ ಪಕ್ಷಪಾತರಹಿತವಾದ ಶುದ್ಧವಾದ ದೃಷ್ಟಿಯಿಂದ ವಿಷಯವನ್ನು ವಿಚಾರಮಾಡಬೇಕು. ಬಣ್ಣದ ಕನ್ನಡಕದಿಂದ ನೋಡಿದರೆ ವಿಷಯದ ನಿಜವಾದ ಸ್ವರೂಪ ತಿಳಿಯುವುದಿಲ್ಲ. ಕೆಲವರು ತಮ್ಮ ಪಕ್ಷವು ತಪ್ಪು ಎಂದು ಮನವರಿಕೆಯಾದಮೇಲೆಯೂ ಹಠಮಾರಿತನ ದಿಂದ ವಾದವನ್ನು ಮುಂದುವರಿಸುತ್ತಾರೆ. ವಿತಂಡಾವಾದ ಮಾಡುತ್ತಾರೆ. ಈ ದೌರ್ಬಲ್ಯಕ್ಕೆ ನಾವು ಎಡೆಗೊಡಬಾರದು. ರಾಗ-ದ್ವೇಷಗಳಿಗೆ ಎಡೆ ಗೊಡದೆ ಶಾಂತವಾಗಿ ವಿಚಾರವನ್ನು ಮುಂದುವರಿಸಬೇಕು.

3) ನಿರ್ಣಯವು ವಾಲಿಯ ಪರವಾಗಿ ಬರಲೀ ಅಥವಾ ಶ್ರೀರಾಮನ ಪರವಾಗಿ ಬರಲಿ – ಅದರಿಂದ ನಮಗೆ ಯಾವ ಲಾಭ-ನಷ್ಟಗಳೂ ಇಲ್ಲ. ದಾಕ್ಷಿಣ್ಯ ಅಥವಾ ಭಯಗಳಿಗೆ ಅವಕಾಶಕೊಡದೇ ಧೈರ್ಯವಾಗಿ ನಿರ್ಣಯ ವನ್ನು ಕೈಗೊಳ್ಳಬಹುದು. ಏಕೆಂದರೆ: ಸಂಬಂಧಪಟ್ಟ ವಾದಿ-ಪ್ರತಿವಾದಿ ಗಳಿಬ್ಬರೂ ನಮ್ಮ ಎದುರಿಗೇ ಇಲ್ಲ. ರಾಜಕೀಯವಾದ ಅಥವಾ ಸಾಮಾಜಿಕ ವಾದ ಭಯವಿಲ್ಲದೇ ನಾವು ವಿಚಾರಮಾಡಿ ನಿರ್ಣಯವನ್ನು ಕೈಗೊಳ್ಳ ಬಹುದು.

ವಾಲ್ಮೀಕಿರಾಮಾಯಣದಲ್ಲಿ ವಾಲಿವಧೆಯನ್ನು ಕುರಿತು ನಡೆದಿರುವ ಚರ್ಚೆಯ ಸಂಕ್ಷೇಪ ಹೀಗಿದೆ:

---

* ಆಗಮ ಪ್ರಾಮಾಣ್ಯ, ಭಗವದ್ಯಾಮುನ ಮುನಿಗಳು.



CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

1. ವಾಲಿಯ ಆಕ್ಷೇಪ :

" ಶ್ರೀರಾಮ ! ನೀನು ಬೂದಿಮುಚ್ಚಿದ ಕೆಂಡದಂತೆ ಮತ್ತು ಹುಲ್ಲು ಮುಚ್ಚಿದ ಬಾವಿಯಂತೆ ಮಹಾ ಮೋಸಗಾರ. ಧರ್ಮರಹಿತನಾದ ಧಾರ್ಮಿಕ ವೇಷಧಾರಿ. " ತೃಣೈಃ ಕೂಪಮಿವಾವೃತಂ " " ಸತಾಂ ವೇಷಧರಂ ಪಾಪಂ ಪ್ರಚ್ಛನ್ನಮಿವ ಪಾವಕಮ್ "

" ನಿರಪರಾಧಿಯಾದ ನನ್ನನ್ನು ನೀನು ಕೊಂದಿರುವುದು ಅನ್ಯಾಯದ ಪರಮಾವಧಿ. ನಾನು ಹೇಗೆ ನಿರಪರಾಧಿ? ಎಂದರೆ : ನಾನು ಯಾರಿಗೂ ಅನ್ಯಾಯವನ್ನು ಮಾಡಿಲ್ಲ. ನಿನಗೆ ಯಾವ ಅಪಕಾರವನ್ನೂ ಮಾಡಿಲ್ಲ. ನಿನ್ನ ರಾಜ್ಯದಲ್ಲಾಗಲೀ, ನಗರದಲ್ಲಾಗಲೀ ಯಾರಿಗೂ ಯಾವ ಅಪಕಾರ ವನ್ನೂ ಎಸಗಿಲ್ಲ. ಹಾಗೇ ಯಾವುದಾದರೂ ಅಪರಾಧಮಾಡಿದ್ದರೂ ನಾನು ನಿನ್ನ ರಾಜ್ಯದ ಪ್ರಜೆಯೇ ಅಲ್ಲ. ನನಗೆ ಶಿಕ್ಷೆ ಮಾಡಲು ನಿನಗೆ ಏನೂ ಅಧಿ ಕಾರವಿಲ್ಲ. ಚಿನ್ನ-ಬೆಳ್ಳಿ, ಭೂಮಿ-ಕಾಣಿ ಇತ್ಯಾದಿಗಳಿಗಾಗಿ ಯುದ್ಧ ಮಾಡ ಬೇಕಾಗುತ್ತದೆ. ನಿನಗೆ ನನ್ನಿಂದ ಅಂತಹ ಯಾವ ಪ್ರಯೋಜನವೂ ಆಗ ಬೇಕಾಗಿಲ್ಲ. ನಾನು ಕಾಡಿನಲ್ಲಿ ಗೆಡ್ಡೆ-ಗೆಣಸು, ಹಣ್ಣು-ಹಂಪಲುಗಳನ್ನು ತಿಂದು ಜೀವಿಸುವ ಪ್ರಾಣಿ. ನನಗೂ ನಿನಗೂ ಯಾವ ವಿಷಯದಲ್ಲೂ ಸ್ಪರ್ಧೆಗೆ ಕಾರಣವಿಲ್ಲ."

" ನಾನು ನಿನಗೆ ಬೇಟೆಗೆ ಯೋಗ್ಯವಾಗಿ ಪ್ರಯೋಜನಕ್ಕೆ ಬರುವ ಪ್ರಾಣಿಯೇ ಅಲ್ಲ. ನನ್ನ ಮಾಂಸ ಚರ್ಮ ಮೂಳೆ ಯಾವುದನ್ನೂ ಶಿಷ್ಟರು ಸ್ವೀಕರಿಸುವುದಿಲ್ಲ."

" ನನ್ನನ್ನು ಯಾವುದೇ ಕಾರಣದಿಂದ ಕೊಲ್ಲಲೇ ಬೇಕಾಗಿದ್ದರೂ ಎದುರು ಯುದ್ಧದಲ್ಲಿ ಸಂಹರಿಸಬೇಕಾಗಿತ್ತು. ಹಾಗೆ ಮಾಡದೇ ಹೇಡಿಯಂತೆ ಮರೆಯಿಂದ ನನ್ನ ಮೇಲೆ ಬಾಣಪ್ರಯೋಗ ಮಾಡಿದ್ದೀಯೆ. ಮತ್ತೊಬ್ಬ ರೊಡನೆ ಯುದ್ಧಮಾಡುತ್ತಿರುವವನನ್ನು ಕೊಲ್ಲುವುದು ಮಹಾ ಅನ್ಯಾಯ. ಯುದ್ಧನೀತಿಗೆ ವಿರುದ್ಧ. ಧರ್ಮನೀತಿಗೆ ವಿರುದ್ಧ. ಆರ್ಯರಿಗೆ ಸಲ್ಲದ ಕೆಲಸ."

" ಅರಿಯದ ಜನ ಅಥವಾ ಕೀಳುಮಟ್ಟದ ಜನ ಇಂತಹ ಅನ್ಯಾಯ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಮಾಡಿದ್ದರೆ ಅದನ್ನು ಕ್ಷಮಿಸಬಹುದಾಗಿತ್ತು. ಆದರೆ ನೀನು ವೀರಕ್ಷತ್ರಿಯ. ಕೀರ್ತಿಶಾಲಿ ಮತ್ತು ವಿದ್ವಾಂಸ. ಹೀಗಿದ್ದರೂ ನೀನು ಮೇಲ್ಕಂಡ ಮಹಾ ಪಾತಕ ಮಾಡಿರುವುದೇ ಅಕ್ಷಮ್ಯ."

'ಸುಗ್ರೀವನ ಮೂಲಕ ಸೀತೆಯನ್ನು ಹುಡುಕಿಸುವ ಪ್ರಯೋಜನ ಕ್ಕಾಗಿ ಮಿತ್ರನಾದ ಸುಗ್ರೀವನ ಇಷ್ಟದಂತೆ ನಿನ್ನನ್ನು ಕೊಂದೆ'–ಎಂದು ನೀನು ವಾದಿಸುವುದೂ ಸರಿಯಲ್ಲ. ದುರ್ಬಲನಾದ ಆ ಸುಗ್ರೀವನನ್ನು ಸಹಾಯ ಕೋರುವುದರ ಬದಲು ಮಹಾವೀರನಾದ ನನಗೆ ಒಂದು ಮಾತು ಹೇಳಿದ್ದರೆ ನಾನು ಒಂದೇ ದಿವಸದಲ್ಲಿ ಸೀತೆಯನ್ನು ನಿನಗೆ ತಂದು ಒಪ್ಪಿಸು ತ್ತಿದ್ದೆ. ನಿನ್ನ ಪತ್ನಿಯನ್ನು ಅಪಹರಿಸಿರುವ ದುಷ್ಟರಾವಣನನ್ನು ಹಿಂಗಟ್ಟು ಮುಂಗಟ್ಟು ಕಟ್ಟಿ ನಿನಗೆ ಒಪ್ಪಿಸುತ್ತಿದ್ದೆ. ನೀನು ಸುಗ್ರೀವನನ್ನು ಆಶ್ರಯಿಸಿ ನನ್ನನ್ನು ಕೊಂದಿರುವುದು ರಾಜನೀತಿಗೂ ವಿರುದ್ಧ. ಮಹಾಮೂರ್ಖತನ ಅದು."

ಈ ಆಕ್ಷೇಪಕ್ಕೆ ಶ್ರೀರಾಮನು ಶಾಂತವಾದ ಮನಸ್ಸಿನಿಂದ ಹೀಗೆ ಸಮಾಧಾನನೀಡುತ್ತಾನೆ.

"ನೀನು ಧರ್ಮಾರ್ಥ-ಕಾಮಗಳನ್ನೂ, ಕಾಲವ್ಯವಹಾರಗಳನ್ನೂ ಅರಿ ಯದೇ ಬಾಲಿಶಬುದ್ಧಿಯಿಂದ ಹೀಗೆ ಒದರಿದ್ದೀಯೆ. ಬುದ್ಧಿವಂತರಾದ ಗುರು-ಹಿರಿಯರನ್ನೂ ವಿದ್ವಾಂಸರನ್ನೂ ವಿಚಾರಮಾಡದೇ ಕಪಿಚಾಪಲ್ಯ ದಿಂದಲೂ ಕಾಮ-ಕ್ರೋಧಗಳಿಂದಲೂ ಪ್ರೇರಿತನಾಗಿ ಕರ್ತವ್ಯವನ್ನು ಮಾಡಿ ರುವ ನನ್ನ ಮೇಲೆ ಆಪಾದನೆಗಳ ಮಳೆಯನ್ನು ಸುರಿಸಿದ್ದೀಯೆ."

"ನಾನು ಏನು ಅಪರಾಧ ಮಾಡಿದ್ದೇನೆ? ಎಂದು ಅರಿಯದವನಂತೆ ಕೇಳುತ್ತಿದ್ದೀಯೆ. ನೀನು ಮಾಡಿರುವುದು ಘೋರತಮವಾದ ಪಾತಕ. ನಿನ್ನ ತಮ್ಮನ ಪತ್ನಿಯಾಗಿ ಸೊಸೆಯ ಸ್ಥಾನದಲ್ಲಿರುವ ರುಮೆಯಲ್ಲಿ ಅತ್ಯಾ ಚಾರ ನಡೆಸಿದ್ದೀಯೆ. ಇದಕ್ಕೆ ಮರಣದಂಡನೆಯೇ ತಕ್ಕ ಶಿಕ್ಷೆ.

ಔರಸೀಂ ಭಗಿನೀಂ ವಾಪಿ ಭಾರ್ಯಾಂ ವಾಪ್ಯನುಜಸ್ಯ ಯಃ ।
ಪ್ರಚರೇತ ನರಃ ಕಾಮಾತ್ ತಸ್ಯ ದಂಡೋ ವಧಃ ಸ್ಮೃತಃ ॥

ಸಾಧಾರಣಮನುಷ್ಯನು ಪಾಪವನ್ನಾಚರಿಸಿದ್ದರೆ ಅವನನ್ನು ಕ್ಷಮಿಸ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಬಹುದಾಗಿತ್ತು. ಆದರೆ ನೀನು ರಾಜನಾಗಿ ಧರ್ಮಜ್ಞನಾಗಿ ಈ ಪಾತಕವನ್ನು ಮಾಡಿರುವುದರಿಂದ ನಿನಗೆ ದಂಡನೆ ಮಾಡಲೇಬೇಕಾಗಿ ಬಂತು."

"ನಿನಗೆ ಶಿಕ್ಷೆಮಾಡಲು ನನಗೆ ಪೂರ್ಣವಾದ ಅಧಿಕಾರವಿದೆ. ಹೇಗೆಂದರೆ: ಗಿರಿ-ಕಾನನಗಳಿಂದ ಕೂಡಿರುವ ಈ ಭೂಮಂಡಲವೆಲ್ಲಾ ಇಕ್ಷ್ವಾಕುವಂಶದ ಅರಸರ ಅಧಿಕಾರಕ್ಕೆ ಒಳಪಟ್ಟದ್ದು. ಇದನ್ನು ಧರ್ಮಿಷ್ಠನಾದ ನನ್ನ ತಮ್ಮ ಭರತನು ಆಳುತ್ತಿದ್ದಾನೆ. ಅರಣ್ಯದಲ್ಲಿ ಅವನ ಪರವಾಗಿ ಧರ್ಮಶಾಸನವನ್ನು ಮಾಡುವ ಅಧಿಕಾರ ನನಗಿದೆ."

"ನಿನ್ನ ಈ ಅಪರಾಧವನ್ನು ತಿಳಿದೂ ನಾನು ನಿನಗೆ ದಂಡನೆ ಮಾಡದೇ ಇದ್ದರೆ ನಾನೇ ಈ ಪಾಪಕ್ಕೆ ಗುರಿಯಾಗುತ್ತಿದ್ದೆ."

"ಸುಗ್ರೀವನಿಗೆ ವೈರಿಯಾದ ನಿನ್ನನ್ನು ಕೊಲ್ಲುವುದಾಗಿ ನಾನು ನನ್ನ ಪ್ರಾಣಮಿತ್ರನಾದ ಆತನಿಗೆ ಮಾತುಕೊಟ್ಟಿದ್ದೆ. ಮಿತ್ರನನ್ನು ರಕ್ಷಣೆಮಾಡುವುದೂ ಮತ್ತು ಪ್ರತಿಜ್ಞೆಯನ್ನು ಪಾಲನೆಮಾಡುವುದೂ ನನ್ನ ಧರ್ಮವೇ ಆಗಿದೆ."

"ನಿನ್ನನ್ನು ಮಾಂಸ ಚರ್ಮ ಮುಂತಾದುವುಗಳ ಆಸೆಗಾಗಿ ಕೊಂದಿಲ್ಲ. ಅಪರಾಧಿಯಾದ ನಿನಗೆ ದಂಡನೆಯನ್ನು ವಿಧಿಸಿದ್ದೇನೆ. ನೀನು ಅಪರಾಧಿಯೂ ಆಗಿ ಶಾಖಾಮೃಗವೂ ಆಗಿದ್ದೀಯೆ. ಆದ್ದರಿಂದ ನಿನ್ನನ್ನು ಮರೆಯಿಂದಲಾಗಲೀ-ಎದುರಿನಿಂದಲಾಗಲೀ ಹೇಗೆ ಬೇಕಾದರೂ ದಂಡಿಸಬಹುದು."

"ಮನುಷ್ಯರು ಮಾಡುವ ಸರಿ-ತಪ್ಪುಗಳಿಗೆ ಆತ್ಮವು ಸಾಕ್ಷಿ. ಆ ಆತ್ಮಸಾಕ್ಷಿಗೆ ಅನುಣಗುವಾಗಿ ನೀನು ಅಪರಾಧಿಯೋ ನಿರಪರಾಧಿಯೋ ವಿಚಾರ ಮಾಡಿನೋಡು. ಇಂತಹ ಧರ್ಮಸೂಕ್ಷ್ಮಗಳ ತೀರ್ಮಾನದ ವಿಷಯದಲ್ಲಿ ಅಂತಃಕರಣವೇ ಪರಮಪ್ರಮಾಣ.

ಹೃದಿಸ್ಥಃ ಸರ್ವಭೂತಾನಾಂ ಆತ್ಮಾ ವೇದ ಶುಭಾಶುಭಮ್ |
ಸೂಕ್ಷ್ಮಃ ಪರಮದುರ್ಜ್ಞೇಯಃ ಸತಾಂ ಧರ್ಮಃ ಪ್ಲವಂಗಮ ||

"ರಾಜನಿಂದ ಸರಿಯಾದ ದಂಡನೆಯನ್ನು ಇಲ್ಲಿ ಪಡೆದಿದ್ದರೆ ಅಂತಹವರಿಗೆ ನರಕದಲ್ಲಿ ಶಿಕ್ಷೆ ಇಲ್ಲ. ಸ್ವರ್ಗಪ್ರಾಪ್ತಿಯಾಗುತ್ತದೆ. ಹೀಗೆ ಅಪ

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

ಾಧಿಯ ಪಾಪಪರಿಹಾರಕ್ಕಾಗಿ ತಕ್ಕ ಶಿಕ್ಷೆಯನ್ನು ವಿಧಿಸುವ ರಾಜರನ್ನು ಗೌರವಿಸಬೇಕೇ ಹೊರತು ನಿಂದಾವಾಕ್ಯಗಳಿಂದ ನೋಯಿಸಬಾರದು."

ಇವಿಷ್ಟು ವಾಲ್ಮೀಕಿರಾಮಾಯಣದಲ್ಲಿ ಚಿತ್ರಿತವಾಗಿರುವ ವಾಲಿವಧ ವಿಮರ್ಶೆ. ಇದನ್ನು ಮನಸ್ಸಿನಲ್ಲಿ ಗ್ರಹಿಸಿ ನಾವು ವಿಷಯವಿಮರ್ಶೆಯನ್ನು ಮುಂದುವರಿಸಬಹುದು.

ಪೂರ್ವಾಚಾರ್ಯರುಗಳ ಅಭಿಪ್ರಾಯ:

I "ವಾಲಿವಧೆಯನ್ನು ಮಾಡಿದವನು ಶ್ರೀರಾಮ. ಆತನು ಸರ್ವಜ್ಞನೂ, ಸರ್ವಶಕ್ತನೂ, ಸರ್ವಭೂತಗಳ ಸುಹೃತ್ತೂ ಆಗಿರುವ ಪರಮಾತ್ಮ-ಶ್ರೀಮನ್ನಾರಾಯಣನ ಅವತಾರ.

1 ಯಃ ಸರ್ವಜ್ಞಃ ಸರ್ವವಿತ್ ।

2 ಪರಾಸ್ಯ ಶಕ್ತಿಃ ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲ ಕ್ರಿಯಾ ಚ ।

3 ಸುಹೃದಂ ಸರ್ವಭೂತಾನಾಂ ಜ್ಞಾತ್ವಾ ಮಾಂ ಶಾನ್ತಿಮೃಚ್ಛತಿ ।

4 ಅರ್ಥಿತೋ ಮಾನುಷೇ ಲೋಕೇ ಜಜ್ಞೇ ವಿಷ್ಣುಃ ಸನಾತನಃ ।

ಆತನು ಏನು ಮಾಡಿದರೂ ಅದು ಸರಿಯಾಗಿರುತ್ತದೆ. ಲೋಕಕಲ್ಯಾಣಕರವೇ ಆಗುತ್ತದೆ. ಅಲ್ಪಜ್ಞರಾದ ನಾವು ಆ ಜಗತ್ಪ್ರಭುವಿನ ಕಾರ್ಯವನ್ನು ವಿಮರ್ಶೆಮಾಡುವುದೇ ಅಪರಾಧ" ಎಂದು ಹೇಳುವ ಭಕ್ತಶ್ರೇಷ್ಠರೂ ಉಂಟು. ಇವರ ಭಕ್ತಿಯ ಪರಾಕಾಷ್ಠೆಯನ್ನು ನಾವು ಅಭಿನಂದಿಸುತ್ತೇವೆ. ಆದರೆ ಭಗವಂತನು ಮನುಷ್ಯರೂಪದಲ್ಲಿ ಅವತಾರಮಾಡಿರುವುದಕ್ಕೆ ಲೋಕಶಿಕ್ಷಣ ಮಾಡುವುದೂ ಒಂದು ಮುಖ್ಯಪ್ರಯೋಜನವೇ ಆಗಿದೆ.

"ಮರ್ತ್ಯಾವತಾರಸ್ತ್ವಿಹ ಲೋಕಶಿಕ್ಷಣಂ
ರಕ್ಷೋವಧಾಯೈವ ನ ಕೇವಲಂ ವಿಭೋಃ ।" (ಭಾಗವತ)

ಆದ್ದರಿಂದ ಮನುಷ್ಯಾವತಾರ ಮಾಡಿರುವ ಆ ಭಗವಂತನ ಕೃತಿಯು ಮನುಷ್ಯರಿಗೆ ಹೇಗೆ ಆದರ್ಶವಾಗುತ್ತದೆ-ಎಂಬುದನ್ನು ವಿಚಾರಮಾಡುವುದು ದೋಷವಲ್ಲ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

"The King can do no wrong" (ರಾಜನು ಮಾಡಿದ್ದೆಲ್ಲಾ ಸರಿಯೇ) ಎಂದು ಹೇಳುವ ರಾಜಭಕ್ತಿಯ ಉದ್ಗಾರ ಮಾನ್ಯವಾಗಿರುವಂತೆಯೇ "ಯಥಾ ರಾಜಾ ತಥಾ ಪ್ರಜಾಃ" (ರಾಜನಿದ್ದಂತೆ ಪ್ರಜೆಗಳು) ಅವನು ಪ್ರಜೆಗಳಿಗೆ ಮಾದರಿಯಾಗಬೇಕು ಎಂಬ ಹೇಳಿಕೆಯೂ ಮಾನ್ಯವೇ ಅಲ್ಲವೇ ?

II ಶ್ರೀರಾಮನು ಸಾಕ್ಷಾತ್ ಪರಮಾತ್ಮನೇ ಆಗಿದ್ದಾನೆ – ಎಂಬ ದೃಢವಾದ ನಂಬಿಕೆಯನ್ನು ಹೊಂದಿರುವುದರ ಜೊತೆಗೆ ಅವನು ವಾಲಿಯನ್ನು ಸಂಹಾರಮಾಡಿದ್ದಕ್ಕೆ ಮತ್ತು ಮರೆಯಿಂದ ಬಾಣಹೊಡೆದು ಆತನನ್ನು ಕೊಂದಿದ್ದಕ್ಕೆ ಏನು ಕಾರಣ ಇರಬಹುದು ? ಆ ಬಗೆಗೆ ಭಗವಂತನ ಭಾವ ಏನಾಗಿರಬಹುದು ? ಎಂಬುದನ್ನು ವಿಚಾರಮಾಡುತ್ತಾ ಆಚಾರ್ಯ ಶ್ರೀ ಆನಂದತೀರ್ಥರು ಹೀಗೆ ಅಪ್ಪಣೆಕೊಡಿಸುತ್ತಾರೆ :

"ಈ ವಾಲಿಯು ನನ್ನ ಭಕ್ತ. ನಾನು ಅವನ ಎದುರಿಗೆ ಹೋದರೆ ನನ್ನನ್ನು ಕಂಡೊಡನೆಯೇ ಅವನು ನಿಜವಾಗಿಯೂ ನನ್ನ ಪಾದಗಳಿಗೆ ಎರಗುತ್ತಾನೆ. ಕಾಲಿಗೆರಗಿದವನನ್ನು ಕೊಲ್ಲುವುದು ತರವಲ್ಲ. ಆದರೆ ಸುಗ್ರೀವನು ಕಪಿರಾಜ್ಯದ ಬಯಕೆಯಿಂದ ವಾಲಿಯನ್ನು ಕೊಲ್ಲಬೇಕೆಂದು ನನ್ನನ್ನು ಕೇಳಿಕೊಂಡಿದ್ದಾನೆ. ಮೊದಲು ಶರಣಾಗತನಾಗಿರುವವನು ಸುಗ್ರೀವ. ಅವನ ಆಸೆಯನ್ನು ಮೊದಲು ಈಡೇರಿಸಬೇಕು. ಆದರೆ ಅದಕ್ಕಾಗಿ ಕಾಲಿಗೆ ಬಿದ್ದವರನ್ನು ಕೊಲ್ಲುವುದು ಯೋಗ್ಯವಲ್ಲ. ಆದ್ದರಿಂದ ಅದೃಶ್ಯನಾಗಿಯೇ ಇದ್ದು ವಾಲಿಯನ್ನು ಕೊಲ್ಲುವುದೇ ಸರಿ.

ಭಕ್ತೋ ಮಮೈಷ ಯದಿ ಮಾಮಭಿಪಶ್ಯತೀಹ
ಪಾದೌ ಧ್ರುವಂ ಮಮ ಸಮೇಷ್ಯತಿ ನಿರ್ವಿಚಾರಃ ।
ಯೋಗ್ಯೋ ವಧೋ ನ ಹಿ ಜನಸ್ಯ ಪದಾನತಸ್ಯ
ರಾಜ್ಯಾರ್ಥಿನಾ ರವಿಸುತೇನ ವಧೋಽರ್ಥಿತಶ್ಚ ॥೧೯॥
ಕಾರ್ಯಂ ಹ್ಯಭೀಷ್ಟಮಪಿ ತತ್ಪ್ರಣತಸ್ಯ ಪೂರ್ವಂ
ಶಸ್ತೋ ವಧೋ ನ ಪದಯೋಃ ಪ್ರಣತಸ್ಯ ಚೈವ ।
ತಸ್ಮಾದದೃಶ್ಯತನುರೇವ ನಿಹನ್ಮಿ ಶಕ್ರ-
ಪುತ್ರಂ ತ್ವಿತೀಹ ತಮದೃಷ್ಟತಯಾ ಜಘಾನ ॥೨೦॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.


ಅಷ್ಟೇ ಅಲ್ಲ. ಶ್ರೀರಾಮಚಂದ್ರನು ನರಳುತ್ತಿದ್ದ ವಾಲಿಯ ಬಳಿಗೆ ಬಂದು ಪ್ರೇಮಾರ್ದ್ರವಾದ ನುಡಿಯಿಂದ ಅವನನ್ನು ಸಂತೈಸುತ್ತಾ "ಓ ಮಹಾವೀರ! ನೀನು ಬಯಸುವಿಯಾದರೆ ನಿನ್ನನ್ನು ಬದುಕಿಸುವೆನು"– ಎಂದು ಹೇಳುತ್ತಾನೆ. ಆದರೆ ವಾಲಿಗೆ ಬದುಕುವುದು ಬೇಕಾಗಿರಲಿಲ್ಲ.

"ಪುರುಷೋತ್ತಮ! ನಿನ್ನ ಕಣ್ಣೆದುರು ಸಾಯುವುದು ಯಾರಿಗೆ ತಾನೇ ಇಷ್ಟವಿಲ್ಲ? ಬಯಸಿದವರಿಗೆಲ್ಲಾ ಆ ಭಾಗ್ಯ ದೊರಕಲಾರದು" ಎಂದು ವಿಜ್ಞಾಪನೆ ಮಾಡಿದ* ಎಂಬುದಾಗಿಯೂ ಆಚಾರ್ಯರು ಹೇಳುತ್ತಾರೆ.

ಸನ್ನೇಥವಾಲಿನಿ ಜಗಾಮ ಚ ತಸ್ಯ ಪಾರ್ಶ್ವಂ
ಪ್ರಾಹೈನಮಾರ್ದ್ರವಚಸಾ ಯದಿ ವಾಂಛಸಿ ತ್ವಮ್ ।
ಉಜ್ಜೀವಯಿಷ್ಯ ಇತಿ ನೈಚ್ಛದಸೌ ತ್ವದಗ್ರೇ
ಕೋ ನಾಮ ನೇಚ್ಛತಿ ಮೃತಿಂ ಪುರುಷೋತ್ತಮೇತಿ ॥
(ಮಧ್ವರಾಮಾಯಣ ಪುಟ ೩೭–೩೮)

III ವಾಲಿಯು ದೇವರಾಜನಾದ ಇಂದ್ರನ ಪುತ್ರ. ಆದರೂ ಶ್ರೀರಾಮನು ಅವನನ್ನು ಏಕೆ ಸಂಹಾರಮಾಡಿದ?–ಎನ್ನುವುದಕ್ಕೆ ಮತ್ತೊಬ್ಬ ಭಕ್ತಶ್ರೇಷ್ಠರು ಹೀಗೆ ಕಾರಣವನ್ನು ಊಹಿಸುತ್ತಾರೆ.

"ಇಂದ್ರಪುತ್ರನಾದ ವಾಲಿಯು ತನ್ನ ಬಲವನ್ನು ನಾರಾಯಣನ ಅವತಾರವಾದ ಶ್ರೀರಾಮನ ಸೇವೆಗೆ ಮೀಸಲಿಡಬೇಕಾಗಿತ್ತು. ಆದರೆ ಅವನು ಹಾಗೆ ಮಾಡಲಿಲ್ಲ. ದೇವಶತ್ರುವಾದ ರಾವಣನೊಂದಿಗೆ ಅಗ್ನಿಸಾಕ್ಷಿಕವಾಗಿ ಸ್ನೇಹಮಾಡಿಕೊಂಡ. ಆದ್ದರಿಂದ ರಾಕ್ಷಸಸಂಹಾರದ ವಿಷಯದಲ್ಲಿ ಇನ್ನು ಮುಂದೆ ಇವನ ಸಹಾಯವಾಗುವಂತಿಲ್ಲ. ದೇವಕಾರ್ಯಕ್ಕೆ ಪ್ರತಿಕೂಲವೇ ಆಗುವುದು. ಆದ್ದರಿಂದ ಶ್ರೀರಾಮನು ಮೊದಲು ವಾಲಿಗೆ ಶಿಕ್ಷೆಯನ್ನು ವಿಧಿಸಿದ."

(ಶ್ರೀರಾಮಕಥಾಸಾರ–ಕಿಷ್ಕಿಂಧಾಕಾಂಡ–ಪುಟ ೧೫೪)

ಈ ವಿವರಣೆ ಭಕ್ತರಿಗೆ ಅತ್ಯಂತಹೃದ್ಯವಾಗಿದೆ.

IV ಶ್ರೀರಾಮನು ಶರಣಾಗತಸಂರಕ್ಷಣವ್ರತವನ್ನು ತೊಟ್ಟಿದ್ದವನು.

---

*ವಾಲ್ಮೀಕಿರಾಮಾಯಣದಲ್ಲಿ ಇದು ಉಲ್ಲೇಖಿತವಾಗಿಲ್ಲ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.


ಶರಣಾಗತನಾಗಿದ್ದ ಸುಗ್ರೀವನು ಅವನಿಂದ ವಾಲಿವಧೆಯನ್ನು ಪ್ರಾರ್ಥಿಸಿದ್ದನು. ಆದ್ದರಿಂದ ಆ ಶರಣಾಗತಿಗೆ ವಶನಾಗಿ ತನ್ನ ಸ್ವಾತಂತ್ರ್ಯವನ್ನು ಬಿಟ್ಟು ಕೊಟ್ಟ ಕರುಣಾಳುವಾದ ಭಗವಂತ ವಾಲಿಯನ್ನು ನಿಗ್ರಹಿಸಿಬಿಟ್ಟ.

" ತರಣಿಸುತಶರಣಾಗತಿಪರತಂತ್ರೀಕೃತಸ್ವಾತಂತ್ರ್ಯ " ಎಂದು ಆಚಾರ್ಯ ಶ್ರೀ ವೇಂಕಟನಾಥರು ರಘುವೀರಗದ್ಯದಲ್ಲಿ ಹೃದ್ಯವಾಗಿ ಅಪ್ಪಣೆ ಕೊಡಿಸಿದ್ದಾರೆ. ಈ ವಿವರಣೆಯೂ ಶ್ರೀರಾಮಭಕ್ತರಿಗೆ ಉಲ್ಲಾಸಕರವಾಗಿದೆ.

ಹೀಗೆ ವಾಲಿವಧೆಯನ್ನು ಕುರಿತು ಪೂರ್ವಾಚಾರ್ಯರ ಅಭಿಪ್ರಾಯಕ್ಕೆ ಕೃತಜ್ಞತೆಯಿಂದ ಮಂಡನೆ ಕೊಟ್ಟ ಬಳಿಕ ಇತರ ದೃಷ್ಟಿಗಳಿಂದಲೂ ವಿಮರ್ಶೆ ಯನ್ನು ವಿಶದೀಕರಿಸಬೇಕಾಗಿದೆ.

ಶ್ರೀರಾಮನು ಮಾಡಿದ ವಾಲಿವಧೆಯು ಧರ್ಮ-ನ್ಯಾಯಗಳಿಗೆ ಸಮ್ಮತ ವಾದ ಸತ್ಕಾರ್ಯವೇ? ಅಥವಾ ಅಧರ್ಮ-ಅನ್ಯಾಯಗಳಿಗೆ ಉದಾಹರಣೆ ಯಾದ ದುಷ್ಕೃತಿಯೇ?–ಎಂಬ ವಿಮರ್ಶೆಯನ್ನು ಇಲ್ಲಿ ಪ್ರಶ್ನೋತ್ತರರೂಪ ದಲ್ಲಿ ಮಂಡಿಸುತ್ತೇವೆ. ವಿಷಯವು ನೇರವಾಗಿ ಮನವರಿಕೆಯಾಗಲು ಸಹಾ ಯಕವಾಗುವ ಕ್ರಮವಿದು–ಎಂದು ನಮ್ಮ ಭಾವನೆ. ಈ ಹಿಂದೆ ಹೇಳಲ್ಪಟ್ಟಿ ರುವ ಶ್ರೀ ವಾಲ್ಮೀಕಿ ಮತ್ತು ಪೂರ್ವಾಚಾರ್ಯರ ಸೂಕ್ತಿಗಳು ಮಾಡಿರುವ ವಿಮರ್ಶೆಯ ಹಿನ್ನೆಲೆಯಲ್ಲಿ ಇದನ್ನು ಗ್ರಹಿಸಬೇಕು.

ಪ್ರಶ್ನೆ :– 1) ಕೊಲೆಮಾಡುವುದೇ ಪಾಪ. ಅದರಲ್ಲಿಯೂ ರಾಜ ವಧೆಯು ಅತ್ಯಂತ ದೊಡ್ಡ ಪಾಪ. ಏಕೆಂದರೆ: ರಾಜನು ಪ್ರಜೆಗಳ ರಕ್ಷಕ. ಅವನನ್ನು ಕೊಂದರೆ ಅವನ ಎಲ್ಲ ಪ್ರಜೆಗಳ ಶಿಸ್ತು, ಸುಖ-ಶಾಂತಿಗಳಿಗೆ ಭಂಗ ಉಂಟಾಗುತ್ತದೆ. ರಾಜವಧೆಯನ್ನು ಅರಿಯದೇ ಮಾಡಿದರೂ ಅದು ಪ್ರಾಯ ಶ್ಚಿತ್ತಕ್ಕೆ ವಿಷಯವಾಗುವ ಒಂದು ಉಪಪಾತಕ ಎಂದು ಸ್ಮೃತಿಗಳು ಹೇಳು ತ್ತವೆ. ' ಉಪಪಾತಕಸಂಯುಕ್ತೋ ಗೋಘ್ನೋ ಮಾಸಂ ಯವಂ ಪಿಬೇತ್ ' (ಮನು–11–109) ಹೀಗಿರುವಾಗ ಶ್ರೀರಾಮನು ತಿಳಿದೂ ತಿಳಿದೂ ರಾಜಶ್ರೇಷ್ಠನಾದ ವಾಲಿಯನ್ನು ಸಂಹರಿಸಿದ್ದು ಸರಿಯೇ?

ಉತ್ತರ :– ರಾಜನು ಮಹಾಪಾತಕಿಯಾಗಿದ್ದರೆ ಶಿಕ್ಷೆಯ ರೂಪದಲ್ಲಿ ಆತನನ್ನು ಸಂಹರಿಸುವುದು ಕೆಲವು ಸಮಯಗಳಲ್ಲಿ ಧರ್ಮವೇ ಆಗುತ್ತದೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

ಅದರಿಂದ ಪ್ರಜೆಗಳ ಶಿಸ್ತು, ಸುಖ-ಶಾಂತಿಗಳಿಗೆ ಅನುಕೂಲವೇ ಆಗುತ್ತದೆ. ಯುದ್ಧದಲ್ಲಿ ಎದುರಾಳಿಯಾಗಿ ಬಂದ ದುಷ್ಟನಾದ ರಾಜನನ್ನು ಅಥವಾ ತನ್ನನ್ನು ಸಂಹರಿಸಲು ಬಂದ ರಾಜನನ್ನು ಕೊಂದುಹಾಕುವುದು ಪಾಪವಲ್ಲ. ‘ ಆತತಾಯಿನಮಾಯಾಂತಂ ಹನ್ಯಾದೇವಾವಿಚಾರಯನ್ । ’
‘ ಯುಧ್ಯಂತಮಭಿಯುಧ್ಯೇತ ನಾತ್ರ ಧರ್ಮಕ್ಷತಿರ್ಭವೇತ್॥ ’

ಪ್ರಶ್ನೆ :– 2) ವಾಲಿಯು ಯುದ್ಧದಲ್ಲಿ ರಾಮನಿಗೆ ಎದುರಾಳಿಯಾಗಿರಲಿಲ್ಲ. ಅವನನ್ನು ಸಂಹರಿಸಲು ಯಾವ ಪ್ರಯತ್ನವನ್ನೂ ಮಾಡಲಿಲ್ಲ. ಅವನ ಸಂಪತ್ತನ್ನೂ ಅಪಹರಿಸಿರಲಿಲ್ಲ. ಅವನಿಗೆ ಯಾವ ಬಗೆಯ ಹಿಂಸೆಯನ್ನೂ ಉಂಟುಮಾಡಿರಲಿಲ್ಲ. ರಾಮನ ವಿಷಯದಲ್ಲಿ ಯಾವ ಅಪಚಾರವನ್ನೂ ಎಸಗಿರಲಿಲ್ಲ. ಹೀಗೆ ಪಾತಕರಹಿತನಾದ, ನಿರಪರಾಧಿಯಾದ ಕಪಿರಾಜನನ್ನು ಶ್ರೀರಾಮನು ವಧಿಸಿದ್ದು ಹೇಗೆ ಸರಿಯಾಗುತ್ತದೆ?

ಉತ್ತರ :– ವಾಲಿಯು ಶ್ರೀರಾಮನಿಗೆ ನೇರವಾಗಿ ಯಾವ ಕೆಡುಕನ್ನೂ ಉಂಟುಮಾಡಿರಲಿಲ್ಲ. ಆದರೆ ಧರ್ಮಕ್ಕೆ ಹಿಂಸೆಯನ್ನುಂಟುಮಾಡಿದ್ದ. ನಿರಪರಾಧಿಗೆ ದ್ರೋಹವನ್ನು ಎಸಗಿದ್ದ. ನಿರಪರಾಧಿಗಳಾದ ಸಾಧುಗಳನ್ನು ರಕ್ಷಿಸಬೇಕಾದದ್ದು ಎಲ್ಲ ಕ್ಷತ್ರಿಯರ ಧರ್ಮ. ‘ ಕ್ಷತಾತ್ ಕಿಲ ತ್ರಾಯತ ಇತ್ಯುದಗ್ರಃ ಕ್ಷತ್ರೇತಿ ಶಬ್ದೋ ಭುವನೇಷು ರೂಢಃ । ’ ಎಲ್ಲ ಸಾಧುಗಳನ್ನೂ ರಕ್ಷಿಸುವ ಹೊಣೆ ಶ್ರೀರಾಮನದಾಗಿತ್ತು. ತನಗೆ ನೇರವಾಗಿ ಕೆಡಕನ್ನು ಉಂಟುಮಾಡಲಿಲ್ಲ ಎಂಬ ಕಾರಣದಿಂದ ದುಷ್ಟಪಾತಕಿಯನ್ನು ತಿಳಿದೂ ತಿಳಿದೂ ಶಿಕ್ಷಿಸದೇ ಹೋದರೆ ಅವನಿಗೆ ಕರ್ತವ್ಯಲೋಪದ ಪಾತಕ ಬರುತ್ತಿತ್ತು. “ಈತನು ನನ್ನನ್ನು ದರೋಡೆಮಾಡಿಲ್ಲ. ಇತರರನ್ನು ದರೋಡೆಮಾಡಿದರೆ ನಾನು ಆ ಬಗ್ಗೆ ಕೈಹಾಕಬಾರದು”–ಎಂದು ಆರಕ್ಷಕ (Police) ಅಧಿಕಾರಿ ಸುಮ್ಮನಿದ್ದರೆ ಅದು ಅವನ ಮಹಾಪರಾಧವೇ ಆಗುತ್ತದೆಯಲ್ಲವೇ? ಹಾಗೆಯೇ ವಾಲಿಯು ಶ್ರೀರಾಮನಿಗೆ ದ್ರೋಹಮಾಡಿರದಿದ್ದರೂ, ನಿರಪರಾಧಿಯಾದ ಸುಗ್ರೀವನಿಗೆ ದ್ರೋಹಮಾಡಿರುವುದರಿಂದ ಅವನಿಗೆ ತಕ್ಕ ಶಿಕ್ಷೆಮಾಡುವುದು ಕ್ಷತ್ರಿಯಶ್ರೇಷ್ಠನಾದ ಶ್ರೀರಾಮನ ಕರ್ತವ್ಯವೇ ಆಗಿತ್ತು. ಆದ್ದರಿಂದ ಅವನು ವಾಲಿಗೆ ಮರಣದಂಡನೆಯನ್ನು ನೀಡಿದ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

ಪ್ರಶ್ನೆ :– 3) ವಾಲಿಯು ಶಿಕ್ಷೆಗೆ ಯೋಗ್ಯವಾದ ಯಾವ ಪಾತಕವನ್ನು ಮಾಡಿದ್ದ ? ಅವನಿಂದ ಧರ್ಮಕ್ಕೆ ಏನು ಹಿಂಸೆಯಾಗಿತ್ತು ?

ಉತ್ತರ :– ಅವನು ಅತ್ಯಂತಘೋರವಾದ ಅನ್ಯಾಯವನ್ನು ಮಾಡಿದ್ದ. ನಿರಪರಾಧಿಯಾಗಿದ್ದ ತನ್ನ ತಮ್ಮ ಸುಗ್ರೀವನನ್ನು ದೇಶದಿಂದ ಹೊರಕ್ಕೆ ಅಟ್ಟಿದ್ದ. ಘಾತುಕನಾಗಿ ದೇಶ-ವಿದೇಶಗಳಿಗೂ ಅವನನ್ನು ಅಟ್ಟಸಿಕೊಂಡು ಹೋಗಿ ಅವನಿಗೆ ಪ್ರಾಣಭಯವನ್ನುಂಟುಮಾಡಿದ್ದ.

" ಸ ಮಾಂ ಜಿಘಾಂಸುರ್ದುಷ್ಟಾತ್ಮಾ ವಾಲೀ ಪ್ರವ್ಯಥಿತೇನ್ದ್ರಿಯಃ । ಪರಿಕಾಲಯತೇ ಕ್ರೋಧಾತ್ ಧಾವಂತಂ ಸಚಿವೈಃ ಸಹ ॥ " ( ಕಿಷ್ಕಿಂಧಾಕಾಂಡ 46–11 )

ಸುಗ್ರೀವನು ಬದುಕಿರುವಾಗಲೇ ಆತನ ಪತ್ನಿಯಾದ ರುಮೆಯಲ್ಲಿ ಪಶುವಿನಂತೆ ಅತ್ಯಾಚಾರ ನಡೆಸಿದ್ದ. ಇದು ಭ್ರಾತೃದ್ರೋಹ, ಕುಟುಂಬ ದ್ರೋಹ. ಧರ್ಮಕ್ಕೆ ಮಹಾಹಿಂಸೆಯನ್ನುಂಟುಮಾಡಿದ ದುಷ್ಕೃತಿ. ಅದಕ್ಕಾಗಿ ಅವನಿಗೆ ಶಿಕ್ಷೆ ವಿಧಿಸಲ್ಪಟ್ಟಿತು.

' ಭ್ರಾತೃಭಾರ್ಯಾಭಿಮರ್ಶೇಽಸ್ಮಿನ್ ದಂಡೋಽಯಂ ಪ್ರತಿಪಾದಿತಃ ' ( ಕಿಷ್ಕಿಂಧಾಕಾಂಡ–18–20 )

ಪ್ರಶ್ನೆ :– 4) ವಾಲಿಯು ಮಾಡಿದ್ದು ಅಪರಾಧವೇ ಆಗಿದ್ದರೂ, ಅದಕ್ಕೆ ಬೇರೆ ರೀತಿಯ ದಂಡವನ್ನು ವಿಧಿಸಬಹುದಾಗಿತ್ತು. ಘೋರವಾದ ಮರಣದಂಡನೆಯನ್ನೇ ಶ್ರೀರಾಮನು ಏಕೆ ವಿಧಿಸಿದ ?

ಉತ್ತರ :– ನಮ್ಮ ಕಾಲದಲ್ಲಿ ಸಮಾಜ ಮತ್ತು ಸರಕಾರಗಳಲ್ಲಿ ಶೀಲದ ಬಗ್ಗೆ ಶಿಸ್ತು-ಸಂಯಮಗಳು ಕಡಿಮೆಯಾಗಿರುವುದರಿಂದ ವಾಲಿಯು ರುಮೆಯ ವಿಷಯದಲ್ಲಿ ಮಾಡಿದ್ದ ಪಶುವರ್ತನೆಯನ್ನು ನಾವು ಸಣ್ಣ ಅಪರಾಧವೆಂದು ಪರಿಗಣಿಸುತ್ತೇವೆ. ಅದಕ್ಕೆ ಹಗುರವಾದ ಶಿಕ್ಷೆಯನ್ನು ವಿಧಿಸುತ್ತೇವೆ. ಆದರೆ ಶ್ರೀರಾಮನ ಕಾಲದಲ್ಲಿನ ಕಾನೂನಿನಂತೆ ಅದು ಮರಣದಂಡನೆಗೆ ಯೋಗ್ಯವಾದ ಮಹಾಪರಾಧವಾಗಿತ್ತು. ರುಮೆಯು ವಾಲಿಗೆ ಸೊಸೆಯ ಸ್ಥಾನದಲ್ಲಿರತಕ್ಕವಳು. ಆದ್ದರಿಂದ ಅವಳಲ್ಲಿ ಅವನು ತೋರಿದ ವರ್ತನೆಗೆ ಮರಣದಂಡನೆಯೇ ತಕ್ಕ ಶಿಕ್ಷೆ ಎಂದು ಶಾಸ್ತ್ರಗಳು ಸ್ಪಷ್ಟವಾಗಿ ಸಾರುತ್ತವೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

ಔರಸೀಂ ಭಗಿನೀಂ ವಾಪಿ ಭಾರ್ಯಾಂ ವಾಪ್ಯನುಜಸ್ಯಯಃ ।
ಪ್ರಚರೇತ ನರಃ ಕಾಮಾತ್ತಸ್ಯ ದಣ್ಡೋ ವಧಃ ಸ್ಮೃತಃ ॥

ಪ್ರಶ್ನೆ :– 5) ವಾಲಿಯು ಅಂತಹ ದೊಡ್ಡ ಶಿಕ್ಷೆಗೆ ಯೋಗ್ಯನಾಗಿರ ಬಹುದು. ಆದರೆ ಅವನು ಶ್ರೀರಾಮನ ರಾಜ್ಯಕ್ಕೆ ಸೇರಿದವನಲ್ಲ. ರಾಜನಿಗೆ ತನ್ನ ರಾಜ್ಯದಲ್ಲಿರುವ ದುಷ್ಟರನ್ನು ದಂಡಿಸುವ ಅಧಿಕಾರವಿದೆಯೇ ಹೊರತು, ದೇಶಾಂತರದಲ್ಲಿರುವ ಅಪರಾಧಿಗಳನ್ನು ಪತ್ತೆಮಾಡಿ, ಅವರಿಗೆ ಶಿಕ್ಷೆವಿಧಿಸುವು ದಕ್ಕೆ ಅಧಿಕಾರವಿಲ್ಲ. ಪ್ರಕೃತದಲ್ಲಿ ಅಯೋಧ್ಯೆಯ ಅರಸುವಂಶಕ್ಕೆ ಸೇರಿದ ರಾಮನಿಗೆ ಕಿಷ್ಕಿಂಧೆಯ ರಾಜ ಅಥವಾ ಪ್ರಜೆಗಳ ಅನ್ಯಾಯಗಳನ್ನು ವಿಮರ್ಶೆ ಮಾಡಿ ಶಿಕ್ಷೆ ವಿಧಿಸಲು ಏನು ಅಧಿಕಾರ ?

ಉತ್ತರ :– ಇದಕ್ಕೆ ರಾಮಾಯಣದಲ್ಲೇ ಉತ್ತರವನ್ನು ಹೇಳಿದೆ. ಚತುಃಸಮುದ್ರಗಳ ಮಧ್ಯದಲ್ಲಿರುವ ಭೂಮಿಯೆಲ್ಲವೂ ಇಕ್ಷ್ವಾಕುವಂಶದ ಅರಸರ ಸಾಮ್ರಾಜ್ಯಕ್ಕೆ ಒಳಪಟ್ಟಿತ್ತು. ಆ ಸಾಮ್ರಾಜ್ಯದ ಯಾವುದೇ ಭಾಗ ದಲ್ಲಾದರೂ ಧರ್ಮಶಾಸನವನ್ನು ನಡೆಸಲು ಅವರು ಅಧಿಕೃತರಾಗಿದ್ದರು.

ಪ್ರಶ್ನೆ :– 6) ಶ್ರೀರಾಮನು ತಾನು ಮಾಡಿದ ವಾಲಿವಧೆಯನ್ನು ಹೇಗಾದರೂ ಸಮರ್ಥಿಸಿಕೊಳ್ಳಲು ಆ ಸಮಯದಲ್ಲಿ ಆಧಿಪತ್ಯ–ಅಧಿಕಾರಗಳ ಸುಳ್ಳು ಶಾಸನವನ್ನು ಕಲ್ಪಿಸಿ ಹೇಳಿರಬಹುದೇ ?

ಉತ್ತರ :– ಇಲ್ಲ. ಖಂಡಿತವಾಗಿಯೂ ಇಲ್ಲ. ರಾಮಾಯಣದ ಬಾಲಕಾಂಡದಲ್ಲಿಯೇ ಆ ಅಧಿಕಾರದ ವಿಷಯ ಸ್ಪಷ್ಟವಾಗಿ ಬಂದಿದೆ.

ಸರ್ವಾ ಪೂರ್ವಮಿಯಂ ಯೇಷಾಮಾಸೀತ್ ಕೃತ್ಸ್ನಾ ವಸುಂಧರಾ ।
ಪ್ರಜಾಪತಿಮುಪಾದಾಯ ನೃಪಾಣಾಂ ಜಯಶಾಲಿನಾಮ್ ॥

(ಬಾಲಕಾಂಡ–ಸರ್ಗ 5–ಶ್ಲೋ. 1)

ಪ್ರಶ್ನೆ :– 7) ಇಕ್ಷ್ವಾಕುವಂಶದ ಅರಸರ ಈ ಆಧಿಪತ್ಯವನ್ನು ಭಾರತದೇಶದ ಎಲ್ಲ ರಾಜರೂ ಒಪ್ಪಿದ್ದರೇ ?

ಉತ್ತರ : ಒಪ್ಪಿದ್ದರು ಎಂಬ ವಿಷಯದಲ್ಲಿ ಯಾವ ಸಂಶಯವೂ ಇಲ್ಲ. ನಗರ-ಗ್ರಾಮಗಳ ರಾಜರು ಮಾತ್ರವಲ್ಲದೇ ಅರಣ್ಯವಾಸಿಗಳಾಗಿದ್ದ ಬೇಡರ ರಾಜನಾಗಿದ್ದ ಗುಹ ಮುಂತಾದವರೂ ಕೂಡ ಅವರ ಆಧಿಪತ್ಯವನ್ನು ಅಂಗೀ ಕರಿಸಿದ್ದರು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಪ್ರಶ್ನೆ :– 8) ಇಕ್ಷ್ವಾಕುವಂಶದ ಅರಸರು ಚಕ್ರವರ್ತಿಗಳಾಗಿದ್ದರೂ ಉಳಿದ ರಾಜ್ಯಗಳ ಆಂತರಿಕವಿಷಯಗಳಲ್ಲಿ ಕೈಹಾಕಲು ಅವರಿಗೆ ಅಧಿಕಾರ ವಿತ್ತೇ ?

ಉತ್ತರ :– ಕೇಂದ್ರದ ಅಧಿಕಾರವ್ಯಾಪ್ತಿಯ ಪಟ್ಟಿ, ರಾಜ್ಯಗಳ ಅಧಿಕಾರವ್ಯಾಪ್ತಿಯ ಪಟ್ಟಿ, ಉಭಯಾಧಿಕಾರದ ಪಟ್ಟಿ– ಎಂದು ನಾವು ಮಾಡಿಕೊಂಡಿರುವ ಕಾನೂನನ್ನು ಆಗಿನ ಕಾಲದ ಸಂವಿಧಾನವು ಅಂಗೀಕರಿಸಿರಲಿಲ್ಲ. ಧರ್ಮರಕ್ಷಣೆಗೆ ಸಂಬಂಧಪಟ್ಟ ವಿಷಯದಲ್ಲಿ ತನ್ನ ಸಾಮ್ರಾಜ್ಯದ ಯಾವುದೇ ಜಾಗದಲ್ಲಾದರೂ ಕೈಹಾಕಲು ಚಕ್ರವರ್ತಿಗೆ ಆಗ ಅಧಿಕಾರ ವಿತ್ತು. ಇಕ್ಷ್ವಾಕುವಂಶದ ಅರಸರು ಭೂಮಂಡಲದ ರಾಜರಿಗೆ ಮಾತ್ರವಲ್ಲದೇ ದೇವತೆಗಳಿಗೂ ಮಾನ್ಯರಾದ ರಾಜರಾಗಿದ್ದರು ಎಂಬ ಮಾತನ್ನು ರಾಮಾಯಣದಲ್ಲಿ ಕೇಳುತ್ತೇವೆ.

ಪ್ರಶ್ನೆ :– 9) ಕೋಸಲಸಾಮ್ರಾಜ್ಯದ ಅರಸನಾಗಿದ್ದವನು ಭರತ. ಅವನ ರಾಜ್ಯಶಾಸನದ ಕಾರ್ಯಭಾರದಲ್ಲಿ ವನವಾಸಿಯಾಗಿದ್ದ ಶ್ರೀರಾಮನು ಕೈಹಾಕಿದ್ದು ಸರಿಯೇ ?

ಉತ್ತರ :– ಭರತನ ಪರವಾಗಿ ಧರ್ಮಶಾಸನ ಮಾಡಲು ಶ್ರೀರಾಮನಿಗೆ ಅಧಿಕಾರವಿತ್ತು–ಎಂದು ರಾಮಾಯಣವು ಹೇಳುತ್ತದೆ. ಇದಲ್ಲದೇ ಶ್ರೀರಾಮನು ಭರತನಿಗೆ " ನೀನು ನಗರವಾಸಿಗಳಾದ ಜನರಿಗೆ ರಾಜನಾಗಿರು: ನಾನು ಅರಣ್ಯವಾಸಿಗಳಿಗೆ ರಾಜನಾಗಿರುತ್ತೇನೆ. ನಿನಗೆ ಶತ್ರುಘ್ನನು ಸಹಾಯಕನಾಗಿರಲಿ. ನನಗೆ ಲಕ್ಷ್ಮಣನು ಸಹಾಯಮಾಡುತ್ತಾನೆ "–ಎಂದು ಹೇಳಿ ಒಪ್ಪಂದಮಾಡಿಕೊಂಡಿದ್ದ ವಿಷಯ ಅಯೋಧ್ಯಾಕಾಂಡದಲ್ಲಿಯೇ ಬರುತ್ತದೆ. ( ಸರ್ಗ 107–18 )

ಪ್ರಶ್ನೆ : –10) ಕಿಷ್ಕಿಂಧೆ ಮುಂತಾದ ಇತರ ರಾಜ್ಯಗಳಲ್ಲಿ ತಪ್ಪಿತಸ್ಥರಿಗೆ ಶಿಕ್ಷೆಯನ್ನು ಈ ಹಿಂದೆಯೇ ರಾಮನು ಏಕೆ ಮಾಡಿರಲಿಲ್ಲ ?

ಉತ್ತರ :– ಸಾಮಾನ್ಯವಾಗಿ ಶೋಷಣೆಗೆ ಗುರಿಯಾದವರ ಅಹವಾಲು ಬಂದಾಗಲೇ ಅವರನ್ನು ರಕ್ಷಿಸಲು ರಾಜರು ಬರುತ್ತಾರೆ. ಈ ಹಿಂದೆ ಋಷಿಗಳು ರಾಕ್ಷಸರ ವಿರುದ್ಧವಾಗಿ ಶ್ರೀರಾಮನಿಗೆ ಅಹವಾಲನ್ನು ತಂದಿದ್ದರು. ಈಗ ಸುಗ್ರೀವನು ವಾಲಿಯ ವಿರುದ್ಧವಾಗಿ ಅಹವಾಲನ್ನು ತಂದ. ಆದ್ದ

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.


ರಿಂದ ಆಗ ಅವುಗಳನ್ನು ಗಮನಿಸಿ ಶ್ರೀರಾಮನು ಆ ದುಷ್ಟರಿಗೆ ಶಿಕ್ಷೆಯನ್ನು ಕೊಟ್ಟ.

ಪ್ರಶ್ನೆ :–11) ಕಿಷ್ಕಿಂಧೆಯ ಜನರು ಕೋಸಲಸಾಮ್ರಾಜ್ಯದ ಪ್ರಜೆಗಳೇ ಆಗಿದ್ದರೂ ಅವರು ಮನುಷ್ಯರಲ್ಲ, ಕಪಿಗಳು. ಸ್ತ್ರೀ-ಪುರುಷರ ಸಂಬಂಧ, ವಿವಾಹಾದಿ ವಿಷಯಗಳಲ್ಲಿ ಮನುಷ್ಯಸಮಾಜದ ಕಟ್ಟುಪಾಡುಗಳ ಆಧಾರದಿಂದ ಕಪಿಗಳ ವಿಷಯವನ್ನು ವಿಮರ್ಶಿಸಿ ತೀರ್ಪು ಮತ್ತು ಶಿಕ್ಷೆ ಕೊಡುವುದು ಸರಿಯಲ್ಲ. ಸೊಸೆಯಲ್ಲಿ ಅತ್ಯಾಚಾರ ಮಾಡಬಾರದು ಇತ್ಯಾದಿ ನಿಯಮಗಳು ಮನುಷ್ಯರಿಗೆ ಅನ್ವಯಿಸುವುದೇ ಹೊರತು ವಾನರಜಾತಿಗೆ ಅನ್ವಯಿಸುವುದಿಲ್ಲ. ಆದ್ದರಿಂದ ಅದನ್ನು ದೊಡ್ಡ ಅಪರಾಧವೆಂದು ಮನ್ನಿಸಿ ವಾಲಿಗೆ ಶ್ರೀರಾಮನು ಶಿಕ್ಷೆವಿಧಿಸಿದ್ದು ಸರಿಯೇ ?

ಉತ್ತರ :– ವಾಲಿ-ಸುಗ್ರೀವರಿಬ್ಬರೂ ಹುಟ್ಟಿನಿಂದ ಮತ್ತು ರೂಪದಿಂದ ಕಪಿಗಳು. ಅವರಲ್ಲಿ ಕಪಿಚೇಷ್ಟೆಗಳೂ ಮತ್ತು ಕಪಿಗಳ ವಿಶೇಷಶಕ್ತಿಗಳೂ ಇದ್ದರೂ ವಾಸ್ತವವಾಗಿ ಅವರು ದೇವಾಂಶಪುರುಷರು. ಕಾಮರೂಪಿಗಳು. ಧಾರ್ಮಿಕ–ಸಾಮಾಜಿಕವಿಷಯಗಳಲ್ಲಿ ಆರ್ಯಮಹರ್ಷಿಗಳು ಮನುಷ್ಯರಿಗೆ ವಿಧಿಸಿರುವ ಕಟ್ಟುಪಾಡುಗಳನ್ನೇ ಅವರು ಅನುಸರಿಸುತ್ತಿದ್ದರು. ಸದಾಚಾರ ಸಂಪನ್ನರಾಗಿದ್ದರು ಎಂಬುದಕ್ಕೆ ರಾಮಾಯಣದಲ್ಲಿ ಅನೇಕಪ್ರಮಾಣಗಳಿವೆ. ಉದಾಹರಣೆಗೆ : ವಾಲಿಯು ಸಂಧ್ಯಾವಂದನೆಯನ್ನು ಮಾಡುತ್ತಿದ್ದ, ವಾನರರಾಜನಿಗೆ ವೈದಿಕವಿಧಿಯಂತೆ ಪಟ್ಟಾಭಿಷೇಕವಾಗುತ್ತಿತ್ತು. ಅಣ್ಣ-ತಮ್ಮ, ತಂದೆ-ತಾಯಿ, ಹೆಂಡತಿ, ಮಗಳು, ಸೊಸೆ ಮುಂತಾದ ವಿಷಯಗಳಲ್ಲಿ ಧರ್ಮಶಾಸ್ತ್ರಗಳು ಹೇಳುವ ನಿಯಮಗಳನ್ನು ಅವರು ಒಪ್ಪಿದ್ದರು. ವಾಲಿಯು ತನ್ನ ಸೊಸೆಯಾದ ರುಮೆಯಲ್ಲಿ ನಡೆದುಕೊಂಡ ರೀತಿ ಸರಿಯೆಂದು ವಾನರ ಜಾತಿಯವರೇ ಆದ ಯಾರೂ ರಾಮಾಯಣದಲ್ಲಿ ವಾದಿಸುವುದಿಲ್ಲ. ವಾಲಿಯೂ ಹಾಗೆ ಹೇಳುವುದಿಲ್ಲ. ನಾವು ಮಾತ್ರ ಹಾಗೆ ಏಕೆ ವಾದಿಸಬೇಕು ?'

ಪ್ರಶ್ನೆ :–12) ಹಾಗೆ ವಾಲಿಯು ಮನುಷ್ಯರ ಧಾರ್ಮಿಕ–ಸಾಮಾಜಿಕ ಕಟ್ಟುಪಾಡುಗಳಿಗೆ ಒಳಪಟ್ಟವನಾಗಿದ್ದರೆ ಶ್ರೀರಾಮನು ಅವನಿಗೆ 'ನೀನು ಮೃಗವಾದ್ದರಿಂದ ನಿನ್ನನ್ನು ಮರೆಯಿಂದ ಹೊಡೆಯಬಹುದು–ಎಂದು ಏಕೆ ಹೇಳಿದ ? ಅವನು ಮೃಗವೆಂದೇ ನಿಶ್ಚಿತವಾಗಿದ್ದರೆ ಅವನು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಸುಗ್ರೀವನ ಪತ್ನಿ ರುಮೆಯಲ್ಲಿ ನಡೆದುಕೊಂಡ ರೀತಿ ಶಿಕ್ಷಾರ್ಹವಾಗುವುದೇ ಇಲ್ಲ. ಆದಕ್ಕಾಗಿ ಅವನನ್ನು ಶ್ರೀರಾಮನು ದಂಡಿಸಿದ್ದು ಸರಿಯಾಗುವುದೇ ಇಲ್ಲ.

ಉತ್ತರ: – ಶ್ರೀರಾಮನು ವಾಲಿಯನ್ನು ಶಾಖಾಮೃಗ ಎಂದು ನಿರ್ದೇಶಿಸಲು ಕಾರಣ ಅವನು ಮೃಗಗಳಂತೆ ಯಾವ ನೀತಿ-ನಿಯಮಗಳೂ ಇಲ್ಲದೇ ಇಷ್ಟಬಂದಂತೆ ನಡೆಯಬಹುದು ಎಂಬ ಅಭಿಪ್ರಾಯವಲ್ಲ. ಮೃಗ ಗಳಂತೆ ವಾನರದೇಹವನ್ನು ಹೊಂದಿದ್ದಾನೆ ವಾಲಿ. ಮೃಗಗಳಂತೆ ಮೋಸ ಮಾಡುವ ಮತ್ತು ಮೇಲಕ್ಕೆ ಹಾರಿ ಅಥವಾ ದೂರಕ್ಕೆ ಓಡಿಹೋಗಿ ಕೈಗೆ ಸಿಕ್ಕದೇ ತಪ್ಪಿಸಿಕೊಂಡು ಹೋಗುವ ಮಹಾಶಕ್ತಿಯನ್ನು ಹೊಂದಿದ್ದಾನೆ. ಅವನನ್ನು ಉಚಿತವಾದ ಉಪಾಯದಿಂದ ಹಿಡಿದುಹಾಕಿ ದಂಡಿಸಬೇಕು–ಎಂಬ ಅರ್ಥದಲ್ಲಿ ಆ ಮಾತನ್ನು ಹೇಳಿದ್ದಾನೆ.

ಪ್ರಶ್ನೆ : 13) ವಾಲಿಯು ಸೋದರನ ಪತ್ನಿಯ ವಿಷಯದಲ್ಲಿ ಅತ್ಯಾಚಾರಮಾಡಿದ್ದು ಮರಣದಂಡನೆಗೆ ಯೋಗ್ಯವಾದ ಪಾತಕವಾಗಿದ್ದರೆ, ಸುಗ್ರೀವನೂ ಅದೇ ಬಗೆಯ ಪಾತಕವನ್ನು ಮಾಡಿದ್ದನು. ಶ್ರೀರಾಮನು ಅವನಿಗೂ ಏಕೆ ಮರಣದಂಡನೆಯನ್ನು ವಿಧಿಸಲಿಲ್ಲ ?

ಮರುಪ್ರಶ್ನೆ :– ಸುಗ್ರೀವನು ಅಂತಹ ಅತ್ಯಾಚಾರವನ್ನು ಯಾವಾಗ ಮಾಡಿದ್ದನು ?

ಉತ್ತರ ಮತ್ತು ಪ್ರಶ್ನೆ :–14). ವಾಲಿಯು ಮಾಯಾವೀರಾಕ್ಷಸ ನೊಡನೆ ಗುಹೆಯಲ್ಲಿ ಯುದ್ಧಮಾಡುತ್ತಿದ್ದಾಗ ಸುಗ್ರೀವನು ಕಿಷ್ಕಿಂಧೆಯಲ್ಲಿ ರಾಜ್ಯಸೂತ್ರಗಳನ್ನು ವಹಿಸಿಕೊಂಡದ್ದಲ್ಲದೇ ತನ್ನ ಅಣ್ಣನ ಹೆಂಡತಿಯಾಗಿದ್ದ ತಾರೆಯನ್ನು ಮದುವೆಯಾಗಿಬಿಟ್ಟ. ವಾಲಿಯ ಮರಣಾನಂತರ ಮತ್ತೆ ತಾರೆ ಯನ್ನು ಮದುವೆಯಾದ. ಇದೂ ಸೋದರನ ಹೆಂಡತಿಯ ವಿಷಯದಲ್ಲಿ ಅತ್ಯಾ ಚಾರದ ಪಾತಕವೇ ಅಲ್ಲವೇ ?

ಉತ್ತರ :– ಈ ವಿಷಯದಲ್ಲಿ ವಾಲಿಯು ಮಾಡಿದ್ದಕ್ಕೂ ಸುಗ್ರೀವನು ಮಾಡಿದ್ದಕ್ಕೂ ತುಂಬಾ ವ್ಯತ್ಯಾಸವಿದೆ. ವಾಲಿಯು ಸುಗ್ರೀವನು ಬದು ಕಿರುವನೆಂದು ತಿಳಿದಿದ್ದರೂ ಅವನ ಹೆಂಡತಿಯಾದ ರುಮೆಯನ್ನು ಪಶು ವೃತ್ತಿಯಿಂದ ಆಕ್ರಮಿಸಿದ್ದನು. ಇದಕ್ಕೆ ಅವನ ಕಾಮವೃತ್ತಿ ಮತ್ತು

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.


ಅವನಿಗೆ ಸುಗ್ರೀವನ ಮೇಲಿದ್ದ ದ್ವೇಷಗಳೇ ಕಾರಣ. ಆದ್ದರಿಂದ ಅವನು ಮಾಡಿದ್ದು ಮಹಾಪಾತಕ. ಸುಗ್ರೀವನಾದರೋ, ತನ್ನ ಅಣ್ಣನು ಜೀವಂತನಾಗಿಲ್ಲ ಎಂದು ತಿಳಿದುಕೊಂಡಿದ್ದಾಗ ಮತ್ತು ಅಣ್ಣನು ಮರಣಹೊಂದಿದ ನಂತರ ಅನಾಥೆಯಾಗಿದ್ದ ಅವನ ಹೆಂಡತಿಗೆ ಆಶ್ರಯಕೊಡಲು ಅವರ ಸಾಮಾಜಿಕವಾದ ಕಟ್ಟುಪಾಡಿನಂತೆ ಶಾಸ್ತ್ರ-ಸಮಾಜ-ಸಂಪ್ರದಾಯಗಳ ಅನುಮತಿಯಂತೆ ಆಕೆಯನ್ನು ವಿವಾಹವಾದ.* ಅದರಲ್ಲಿ ದುಷ್ಟವಾದ ಕಾಮ-ಕ್ರೋಧಗಳ ಪಾತ್ರವೇನೂ ಇಲ್ಲ. ಅವನು ಮಾಡಿದುದು ಅಪರಾಧವಲ್ಲ. ಅದಕ್ಕೇ ಅವನನ್ನು ರಾಮನು ಶಿಕ್ಷಿಸಲಿಲ್ಲ.

ಪ್ರಶ್ನೆ : 15) ವಾಲಿಯು ರುಮೆಯಲ್ಲಿ ನಡೆದುಕೊಂಡ ರೀತಿಯು ಶಿಕ್ಷಾರ್ಹವಾಗಿದ್ದರೆ–ಅವನ ರಾಜ್ಯದ ಪ್ರಜೆಗಳು ಅದನ್ನು ಏಕೆ ಪ್ರತಿಭಟಿಸಲಿಲ್ಲ ?

ಉತ್ತರ :– ವಾಲಿಯ ಪರಾಕ್ರಮ ಮತ್ತು ಉದ್ಧಟತನಗಳಿಗೆ ಹೆದರಿ ಅವರು ಸುಮ್ಮನಿದ್ದರು. ಅವರು ಅವನ ವರ್ತನೆಯನ್ನು ಅನುಮೋದಿಸಿದ್ದರು– ಎಂಬುದಕ್ಕೆ ರಾಮಾಯಣದಲ್ಲಿ ಯಾವ ಪ್ರಮಾಣವೂ ಇಲ್ಲ.

ಪ್ರಶ್ನೆ : 16) ವಾಲಿಗೆ ಮರಣದ ಮಹಾದಂಡನೆಯನ್ನು ವಿಧಿಸಲು ಮತ್ತೇನಾದರೂ ಕಾರಣವಿತ್ತೇ ?

ಉತ್ತರ :–ವಾಲಿಯು ಸಾಮಾನ್ಯಪ್ರಜೆಯಲ್ಲ. ಜನರಿಗೆ ಆದರ್ಶ ತೋರಬೇಕಾಗಿದ್ದ ರಾಜ. ವಿದ್ವಾಂಸ ಮತ್ತು ವಿವೇಕಿಯಾಗಿರಬೇಕು. ರಾಜನು ಕೆಟ್ಟಮಾರ್ಗವನ್ನು ಅನುಸರಿಸಿದರೆ– ' ಯಥಾ ರಾಜಾ ತಥಾ ಪ್ರಜಾಃ ' ಎಂಬಂತೆ ಅವನ ಪ್ರಜೆಗಳೆಲ್ಲರೂ ಹಾಳಾಗುತ್ತಾರೆ. ಮುಂದೆ ಸೀತಾದೇವಿಯು ರಾವಣನಿಗೆ ಉಪದೇಶಮಾಡುವಂತೆ " ರಾಜನಿಗೆ ತನ್ನ ಹೆಂಡತಿಯನ್ನು

---

*ಉದಾ : ತನ್ನ ಅಣ್ಣನಾದ ರಾಮಗುಪ್ತನು ಮೃತನಾಗಲು ಚಂದ್ರಗುಪ್ತನು ಆತನ ಹೆಂಡತಿಯಾಗಿದ್ದ ಧ್ರುವಾದೇವಿಯನ್ನು ವಿವಾಹವಾಗುತ್ತಾನೆ. ಇದು ಶ್ರೇಷ್ಠವಾದ ಬ್ರಾಹ್ಮವಿವಾಹ ಪದ್ಧತಿಯಲ್ಲ. ಆದರೆ ಕ್ಷತ್ರಿಯನಾದವನಿಗೆ ಕೆಲವು ವಿವಾಹಪದ್ಧತಿಗಳಲ್ಲಿ ಇದಕ್ಕೆ ಅನುಮತಿಯುಂಟು. ಮೃತೇ ಪ್ರವ್ರಜಿತೇ ಕ್ಲೈವ ಪತಿರನ್ಯೋ ವಿಧೀಯತೇ | ಇದರಂತೆಯೇ ಗುಪ್ತಸಾಮ್ರಾಜ್ಯದ ಎರಡನೇ ಚಂದ್ರಗುಪ್ತ ತನ್ನ ಅಣ್ಣ ರಾಮಗುಪ್ತನು ಮೃತನಾದಾಗ ಅವನ ಹೆಂಡತಿ ಧ್ರುವಾದೇವಿಯನ್ನು ವಿವಾಹವಾದ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.


ಕಾಪಾಡುವುದು ಹೇಗೆ ಧರ್ಮವೋ-ಹಾಗೆಯೇ ಇತರರ ಹೆಂಡತಿಯರ ಮರ್ಯಾದೆಯನ್ನೂ ಕಾಪಾಡುವುದು ಧರ್ಮ. 'ದಾರಾ ಯಥಾತ್ಮನೋ ರಕ್ಷ್ಯಾಃ ತಥಾನ್ಯೇಷಾಂ ನಿಶಾಚರ' ಹಾಗೆ ಮಾಡದೇ ಪ್ರಜಾನಾಯಕನಾದ ರಾಜನು ತಾನೇ ಆ ಬಗ್ಗೆ ತಪ್ಪುದಾರಿ ಹಿಡಿದರೆ– ಅವನಿಗೆ ಮಹಾದಂಡನೆಯನ್ನು ವಿಧಿಸಲೇ ಬೇಕು.

ಇದಲ್ಲದೇ ವಾಲಿಯು, ಅಗ್ನಿಸಾಕ್ಷಿಕವಾಗಿ ಶ್ರೀರಾಮನ ಪ್ರಾಣಮಿತ್ರನಾಗಿದ್ದ ಸುಗ್ರೀವನಲ್ಲಿ ಘಾತುಕತನದಿಂದ ವರ್ತಿಸಿದ್ದ. ಆದುದರಿಂದ ತನ್ನ ಮಿತ್ರನ ಅಪೇಕ್ಷೆಯಂತೆ ಮಹಾದುಷ್ಟನೂ ಮಹಾವೀರನೂ ಆಗಿದ್ದ ವಾಲಿಗೆ ಶ್ರೀರಾಮನು ಮಹಾದಂಡನೆಯನ್ನು ವಿಧಿಸಬೇಕಾಯಿತು. ಮಿತ್ರನಿಗೆ ಮಾಡಿದ್ದ ಪ್ರತಿಜ್ಞೆಯನ್ನು ಪಾಲಿಸುವುದು ಅವನ ಕರ್ತವ್ಯವೇ ಆಗಿತ್ತು.

ಪ್ರಶ್ನೆ : 17) ಶ್ರೀರಾಮನು ಒಡಹುಟ್ಟಿದವರ ಪ್ರೇಮದ ಸುಖವನ್ನು ಅನುಭವಿಸಿದ್ದನು. ಆದ್ದರಿಂದ ವಾಲಿ-ಸುಗ್ರೀವರಿಗೂ ಒಳ್ಳೆಯ ಸಹೋದರಭಾವದ ಉಪದೇಶ ಮಾಡಬಹುದಾಗಿತ್ತು. ವಾಲಿಗೆ ಅವನ ತಪ್ಪನ್ನು ತಿದ್ದಿಕೊಳ್ಳಲು ಕಾಲಾವಕಾಶವನ್ನೇ ಕೊಡದೆ ಅವನನ್ನು ಏಕೆ ಸಂಹರಿಸಿದ ?

ಉತ್ತರ :– ವಾಲಿಯು ಸುಗ್ರೀವನೊಡನೆ ರಾಜಿಮಾಡಿಕೊಂಡು ಅವನ ಸಂಪತ್ತನ್ನೂ ಪತ್ನಿಯನ್ನೂ ಹಿಂದಿರುಗಿಸುವುದಿಲ್ಲ–ಎಂಬುದು ರಾಮನಿಗೆ ಖಚಿತವಾಗಿತ್ತು. ಏಕೆಂದರೆ : ವಾಲಿಯ ಸ್ವಭಾವದ ಪರಿಚಯವನ್ನು ಸುಗ್ರೀವನು ಶ್ರೀರಾಮನಿಗೆ ಮಾಡಿಕೊಟ್ಟಿದ್ದ. ದಿವ್ಯಜ್ಞಾನಸಂಪನ್ನನಾಗಿದ್ದ ಕಬಂಧನೂ ಶ್ರೀರಾಮನಿಗೆ ಸುಗ್ರೀವನ ಸಲಹೆಯಂತೆ ನಡೆಯಲು ಸೂಚಿಸಿದ್ದ. ಇದಲ್ಲದೆ ವಾಲಿಯು ತಪ್ಪನ್ನು ತಿದ್ದಿಕೊಳ್ಳುವವನಲ್ಲ–ಎಂಬುದನ್ನು ಅವನ ಪ್ರಥಮಸಂದರ್ಶನದಲ್ಲೇ ಇಂಗಿತಜ್ಞನಾದ ಶ್ರೀರಾಮನು ಅರಿತಿದ್ದನು. ಒಂದು ಪಕ್ಷ ವಾಲಿಯು ಒಡಂಬಡಿಕೆಗೆ ಬಂದಿದ್ದರೂ ಅನಂತರವಾದರೂ ಅವನ ಮಹಾಪಾತಕಕ್ಕೆ ಮರಣದಂಡನೆಯನ್ನು ಅವನಿಗೆ ವಿಧಿಸಲೇ ಬೇಕಾಗಿತ್ತು. ವಾಲಿ-ಸುಗ್ರೀವರಿಗೆ ಅಕಸ್ಮಾತ್ತಾಗಿ ರಾಜಿ ಆಗಿದ್ದರೆ ವಾಲಿಗೆ ಮರಣದಂಡನೆ ವಿಧಿಸಿ ಅವನನ್ನು ಶುದ್ಧಿಪಡಿಸುವುದು ಕಷ್ಟಸಾಧ್ಯವಾಗುತ್ತಿತ್ತು. ವಾಲಿಯ ಸಪ್ತಧಾತುಗಳೂ ಅನೇಕವರ್ಷಗಳ ಕಾಲದ ದುಷ್ಟ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.
ಕಾಮದ ಪಾಪಾಚರಣೆಯಿಂದ ಕಲುಷಿತವಾಗಿದ್ದುವು. ಅವನ ಆ ಪಾಪವು ಪಶ್ಚಾತ್ತಾಪ–ಪ್ರಾಯಶ್ಚಿತ್ತಗಳಿಂದ ಕಳೆದುಹೋಗುವಷ್ಟು ಕಡಿಮೆ ಪ್ರಮಾಣದಲ್ಲಿರಲಿಲ್ಲವಾದ್ದರಿಂದ ಶರೀರವನ್ನು ಧ್ವಂಸಮಾಡುವ ಮರಣದಂಡನೆಯಿಂದಲೇ ಅದಕ್ಕೆ ಪರಿಹಾರವಾಗಬೇಕಾಗಿತ್ತು. ವಾಲಿಯ ಮನಸ್ಸಿನಲ್ಲಿ ಔದ್ಧತ್ಯವಿಲ್ಲದೇ ವಿವೇಕ ಮೂಡಿದ್ದರೆ–ಅವನು ತನಗೆ ತಾನೇ ಮರಣದಂಡನೆಯನ್ನು ವಿಧಿಸಿಕೊಳ್ಳಬೇಕಾಗಿತ್ತು. ಅವನು ಅದನ್ನು ವಿಧಿಸಿಕೊಳ್ಳಲಿಲ್ಲವಾದ್ದರಿಂದ ಶ್ರೀರಾಮನು ಅವನಿಗೆ ಅದನ್ನು ವಿಧಿಸಿ ಅವನನ್ನು ಶುದ್ಧಿಗೊಳಿಸಿದ. ಕೆಲವು ಕೊಳೆಬಟ್ಟೆಗಳನ್ನು ಸಾಬೂನು-ನೀರುಗಳಿಂದ ಶುದ್ಧಿಮಾಡಬಹುದು. ಆದರೆ ಅತ್ಯಂತಕೊಳಕಾದ ಬಟ್ಟೆಗಳಿಗೆ ಅಗ್ನಿಯಲ್ಲಿ ಅರ್ಪಣೆ ಮಾಡುವುದರಿಂದಲೇ ಶುದ್ಧಿ.

ಪ್ರಶ್ನೆ : 18) ಶ್ರೀರಾಮನಿಗೆ ವಾಲಿಯನ್ನು ಶುದ್ಧಿಪಡಿಸುವುದರಿಂದ ಯಾವ ಲಾಭವೂ ಆಗಬೇಕಾಗಿರಲಿಲ್ಲ. ಅದು ಕೇವಲ ನೆಪ. ಆರ್ಯಸಂಸ್ಕೃತಿ ಮತ್ತು ಆರ್ಯಶಾಸನಗಳನ್ನು ದಕ್ಷಿಣದೇಶದಲ್ಲಿ ವಿಸ್ತಾರಪಡಿಸುವುದಕ್ಕೋಸ್ಕರ ಅವನು ಅಲ್ಲಿ ಅಷ್ಟೆಲ್ಲಾ ಕಾರ್ಯಭಾರ ನಡೆಸಿದ – ಎಂದು ಕೆಲವರು ಹೇಳುತ್ತಾರೆ. ಇದು ಸರಿಯೇ ?

ಉತ್ತರ :– ಶುದ್ಧಾಂಗವಾಗಿ ತಪ್ಪು. ಏಕೆಂದರೆ : ಶ್ರೀರಾಮನು ಕಿಷ್ಕಿಂಧೆಗೆ ಪ್ರವೇಶಮಾಡುವುದಕ್ಕೆ ಮೊದಲೇ ಆರ್ಯಸಂಸ್ಕೃತಿಯು ಅಲ್ಲಿ ಹರಡಿತ್ತು. ಶ್ರೀರಾಮನು ಕಿಷ್ಕಿಂಧೆಯಲ್ಲಾಗಲಿ, ಮುಂದೆ ತಾನು ಜಯಿಸುವ ಲಂಕೆಯಲ್ಲಾಗಲಿ–ತನ್ನ ಬಂಧುಗಳನ್ನು ರಾಜರನ್ನಾಗಿ ನೇಮಿಸುವುದಿಲ್ಲ. ಆಯಾ ಸ್ಥಳದ ಧರ್ಮನಿಷ್ಠರಾಗಿದ್ದ ನಾಯಕರನ್ನೇ ಅಲ್ಲಿಯ ರಾಜರನ್ನಾಗಿ ಮಾಡುತ್ತಾನೆ.

ಪ್ರಶ್ನೆ : 19) ಶ್ರೀರಾಮನು ಕಿಷ್ಕಿಂಧೆಯ ರಾಜಕೀಯದಲ್ಲಿ ಒಡಕನ್ನುಂಟುಮಾಡಲಿಲ್ಲವೇ ?

ಉತ್ತರ :– ಖಂಡಿತವಾಗಿಯೂ ಇಲ್ಲ. ಶ್ರೀರಾಮನು ಕಿಷ್ಕಿಂಧೆಗೆ ಹೋಗುವುದಕ್ಕೆ ಮುಂಚೆಯೇ ಅಲ್ಲಿ ವಾಲಿ-ಸುಗ್ರೀವರಲ್ಲಿ ಒಂದುಗೂಡಿಸಲು ಸಾಧ್ಯವಾಗದಷ್ಟು ಒಡಕು ಉಂಟಾಗಿತ್ತು. ಅವರು ಸಂಧಿಮಾಡಿಕೊಳ್ಳಲು



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಒಪ್ಪಿದ್ದರೆ—ಅದನ್ನು ರಾಮನು ನಿಷೇಧಿಸುತ್ತಿರಲಿಲ್ಲ. ಆದರೆ ವಾಲಿಯು ಬಲದಿಂದ ಕೊಬ್ಬಿ ಹಠಗಾರನೂ ಆಗಿದ್ದುದರಿಂದ ಶ್ರೀರಾಮನು ಅವನನ್ನು ನಿಗ್ರಹಿಸಿ ಸುಗ್ರೀವನನ್ನು ರಾಜನನ್ನಾಗಿಯೂ, ಅಂಗದನನ್ನು ಯುವರಾಜ ನನ್ನಾಗಿಯೂ ಅಭಿಷೇಕ ಮಾಡಿಸಿ ವಾನರರಾಜ್ಯದಲ್ಲಿ ಐಕಮತ್ಯವನ್ನೇ ಉಂಟುಮಾಡಿದ.

ಪ್ರಶ್ನೆ : 20) ವಾಲಿಯು ತನ್ನನ್ನು ತಿದ್ದಿಕೊಳ್ಳಲಾಗದಷ್ಟು ಪ್ರಮಾಣದಲ್ಲಿ ಪಾತಕವನ್ನು ಮಾಡಿದ್ದರಿಂದ ಶ್ರೀರಾಮನು ಅವನನ್ನು ಸಂಹರಿಸಿದ್ದು ಸರಿ—ಎಂದು ಒಪ್ಪಿಕೊಳ್ಳೋಣ. ಆದರೆ ಶ್ರೀರಾಮನು ಅವ ನನ್ನು ಮರೆಯಿಂದ ಹೊಡೆದು ಕೊಂದುಹಾಕಿದ್ದು ದೊಡ್ಡ ಅಧರ್ಮ ; ಹೇಡಿ ತನದ ಪರಮಾವಧಿ ; ಯುದ್ಧನೀತಿಗೆ ವಿರುದ್ಧವಾದದ್ದು. ಶ್ರೀರಾಮನಂತಹ ಧೀರ-ವೀರನೂ, ಧರ್ಮಿಷ್ಠನೂ, ಯಶಸ್ವಿಯೂ ಆಗಿದ್ದ ಮಹಾಪುರುಷ ಈ ಹೀನಾಯದ ಕೆಲಸವನ್ನು ಮಾಡಿದ್ದು ಸರಿಯೇ ?

ಉತ್ತರ :— ಅದು ತಪ್ಪು ಎಂದು ಸಾಮಾನ್ಯದೃಷ್ಟಿಗೆ ಅನ್ನಿಸುತ್ತದೆ. ಧೀರೋದಾತ್ತನಾದ ನಾಯಕನು ಮರೆಯಿಂದ ಯುದ್ಧಮಾಡಬಾರದು. ಮತ್ತೊಬ್ಬರೊಡನೆ ಯುದ್ಧಮಾಡುತ್ತಿರುವವನ ಮೇಲೆ ಆಯುಧಪ್ರಯೋಗ- ಆಕ್ರಮಣಗಳನ್ನು ಮಾಡಬಾರದು.

ನನು ನಾಮಾಸ್ತ್ರಧರ್ಮಜ್ಞಸ್ತ್ವಂ ಲೋಕೇಽಭ್ಯಧಿಕಃ ಪರೈಃ ।
ಸೋಽಯುಧ್ಯಮಾನಸ್ಯ ಕಥಂ ರಣೇ ಪ್ರಹೃತವಾನಸಿ ॥

ಮ. ಭಾ. ದ್ರೋಣಪರ್ವ—143—7

ಎಂದು ಮಹಾಭಾರತದಲ್ಲಿ ಭೂರಿಶ್ರವನು ಅರ್ಜುನನಿಗೆ ಇದೇ ವಿಷಯ ವನ್ನು ಆಕ್ಷೇಪದ ಮೂಲಕ ಜ್ಞಾಪಿಸುತ್ತಾನೆ. ಶ್ರೀರಾಮನನ್ನು ಈ ಹೇಡಿ ತನದ ಕಳಂಕದಿಂದ ತಪ್ಪಿಸಲು ಭವಭೂತಿಯೆಂಬ ಕವಿಯು ತನ್ನ "ಮಹಾ ವೀರಚರಿತ" ಎಂಬ ನಾಟಕದಲ್ಲಿ "ಶ್ರೀರಾಮನು ಯುದ್ಧರಂಗದಲ್ಲಿ ವಾಲಿ ಯೊಡನೆ ನೇರವಾಗಿ ಯುದ್ಧಮಾಡಿ ಅವನನ್ನು ಸಂಹರಿಸಿದ"—ಎಂದು ಕಥೆ ಯನ್ನು ಬದಲಾಯಿಸಿದ್ದಾನೆ. "ಶ್ರೀರಾಮನು ಮಹಾಪುರುಷನಾಗಿದ್ದರೂ ಇದೊಂದು ವಿಷಯದಲ್ಲಿ ಮಾತ್ರ ತಪ್ಪನ್ನು ಎಸಗಿದ. ಅದಕ್ಕಾಗಿ ವಾಲಿ ಯಲ್ಲಿ ಕ್ಷಮೆ ಬೇಡಿದ" ಎಂದೂ ಕೆಲವರು ಕಥೆಯನ್ನು ಮಾರ್ಪಡಿಸಿದ್ದಾರೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಇದು ಅವರವರ ಅಭಿರುಚಿಗೆ ತಕ್ಕ ಮಾತಾಯಿತು. ಆದರೆ ವಾಲ್ಮೀಕಿ ರಾಮಾಯಣವು ಅತ್ಯಂತಪ್ರಾಮಾಣಿಕವಾದ ಗ್ರಂಥ. ಶ್ರೀರಾಮಚಂದ್ರನಿಗೆ ಕಾಲ ದೇಶ ಮತ್ತು ಧರ್ಮಗಳಲ್ಲಿ ಅತ್ಯಂತನಿಕಟನಾಗಿದ್ದ ಮಹರ್ಷಿಯ ಗ್ರಂಥ. ಅದರಲ್ಲಿ ಚಿತ್ರಿತವಾಗಿರುವ ಘಟನೆಗಳನ್ನು ಮಾತ್ರವೇ ನಾವು ಇಲ್ಲಿ ವಿಮರ್ಶಿಸುತ್ತಿದ್ದೇವೆ.

ಹಾಗಾದರೆ ಮಹಾಪರಾಕ್ರಮಿಯಾದ ಶ್ರೀರಾಮ ವಾಲಿಯನ್ನು ಮರೆಯಿಂದ ಏಕೆ ಹೊಡೆದ ? ಇದಕ್ಕೆ ಪುರಾಣಕಾರರು ಈ ರೀತಿ ಸಮಾಧಾನ ಹೇಳುತ್ತಾರೆ :

ಬ್ರಹ್ಮದೇವರು ವಾಲಿಗೆ "ಓ ಮಹಾವೀರನೇ ! ಯಾವನಾದರೂ ಯುದ್ಧದಲ್ಲಿ ನಿನ್ನನ್ನು ಎದುರಿಸಿದರೆ ಅವನ ಬಲದ ಅರ್ಧಭಾಗವು ನಿನಗೆ ಬರಲಿ" "ಪ್ರತೀಪಸಮರ್ತಿನೋ ಭೂಯಾದರ್ಧಂ ಬಲಮರಿಂದಮ" ಎಂದು ವರಕೊಟ್ಟಿದ್ದನು. ಈ ಕಾರಣದಿಂದ ವಾಲಿಯು ಎದುರುಯುದ್ಧದಲ್ಲಿ ಸರ್ವರಿಗೂ ಅವಧ್ಯನಾಗಿದ್ದನು. ಆದ್ದರಿಂದ ಬ್ರಹ್ಮದೇವರ ವರವನ್ನು ಮಾನ್ಯಮಾಡುವುದಕ್ಕೋಸ್ಕರ, ಶ್ರೀರಾಮನು ವಾಲಿಯನ್ನು ಮರೆಯಿಂದ ಹೊಡೆದ.

ಈ ವಿವರಣೆಯು ಪುರಾಣದಲ್ಲಿ ವಿಶ್ವಾಸಕ್ಕೆ ಯೋಗ್ಯವಾಗಿದ್ದರೂ ವಾಲ್ಮೀಕಿಯ ಶ್ರೀಮದ್ರಾಮಾಯಣದಲ್ಲಿ ವಾಲಿಗೆ ಇಂತಹ ವರವಿತ್ತೆಂಬ ಉಲ್ಲೇಖ ಎಲ್ಲಿಯೂ ಕಂಡುಬರುವುದಿಲ್ಲ. ಆದ್ದರಿಂದ ವಾಲ್ಮೀಕಿರಾಮಾಯಣಕಥಾಚಿತ್ರಣದಿಂದಲೇ ಶ್ರೀರಾಮನು ಮರೆಯಿಂದ ಮಾಡಿದ ಬಾಣ ಪ್ರಯೋಗದ ವಿಷಯವನ್ನು ವಿಮರ್ಶಿಸುವುದು ಒಳ್ಳೆಯದು.

"ಶ್ರೀರಾಮನಿಗೆ ವಾಲಿಯೊಡನೆ ಎದುರುಯುದ್ಧಮಾಡಲು ಸಾಮರ್ಥ್ಯವಿರಲಿಲ್ಲ. ವಾಲಿಯ ಪರಾಕ್ರಮವನ್ನು ನೋಡಿ ಆತನಿಗೆ ಭಯವಾಯಿತು. ಅದಕ್ಕಾಗಿ ಅವನು ಮರೆಯಿಂದ ಬಾಣಹೊಡೆದ"—ಎಂಬ ಅಭಿಪ್ರಾಯವಂತೂ ಹೇಗೂ ಸರಿಯಲ್ಲ. ಏಕೆಂದರೆ ಸಪ್ತಸಾಲವೃಕ್ಷಗಳನ್ನೂ ಒಂದೇ ಬಾಣದಿಂದ ಭೇದಿಸಿ ಶ್ರೀರಾಮ ವಾಲಿಗಿಂತ ತಾನು ಮಹಾಪರಾಕ್ರಮಿಯೆಂಬುದನ್ನು ಪ್ರಮಾಣಪಡಿಸಿದ್ದಾನೆ. ಆದರೂ ಮರೆಯಿಂದ ಬಾಣಪ್ರಯೋಗ ಮಾಡಲು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಕಾರಣ ಸುಗ್ರೀವನ ಮುಂದೆ ಅವನು ಮಾಡಿದ್ದ ಪ್ರತಿಜ್ಞೆ–"ನಿನ್ನ ಪತ್ನಿಯನ್ನು ಅಪಹರಿಸಿದ ಆ ದುಷ್ಟನನ್ನು ಇಂದೇ ಕೊಂದುಹಾಕುತ್ತೇನೆ."

"ಅದ್ಯೈವ ತಂ ವಧಿಷ್ಯಾಮಿ ತವ ಭಾರ್ಯಾಪಹಾರಿಣಮ್ "

ಎಂದು ಅವನು ಸುಗ್ರೀವನ ಮುಂದೆ ಪ್ರತಿಜ್ಞೆಮಾಡಿದ್ದ. ವಾಲಿಯೊಡನೆ ಎದುರುಯುದ್ಧಮಾಡಿದ್ದರೆ ಅವನನ್ನು ಸಂಹರಿಸಲು ಒಂದು ದಿನ ಸಾಕಾಗುತ್ತಿರಲಿಲ್ಲ. ಆದ್ದರಿಂದ ಮರೆಯಿಂದ ಬಾಣಪ್ರಯೋಗ ಮಾಡಿದ–ಎಂದು ಕೆಲವರು ವಿವರಣೆ ಕೊಡುತ್ತಾರೆ (ರೈಟ್ ಆನರಬಲ್ ಶ್ರೀನಿವಾಸ ಶಾಸ್ತ್ರಿ–Lectures on Ramayana )

ವಾಲಿ-ಸುಗ್ರೀವರ ಎರಡನೆಯ ಯುದ್ಧದಲ್ಲಿ ವಾಲಿಯು ಸುಗ್ರೀವನನ್ನು ತುಂಬಾ ಘಾಸಿಮಾಡಿ ಇನ್ನೇನು ಕೊಂದುಬಿಡುವುದರಲ್ಲಿದ್ದ. ಆಗ ಶ್ರೀರಾಮನು ವಾಲಿಯನ್ನು ಎದುರುಯುದ್ಧಕ್ಕೆ ಆಹ್ವಾನಿಸಬೇಕೆಂದು ತಡಮಾಡಿದ್ದರೆ ಅಷ್ಟರಲ್ಲಿ ಸುಗ್ರೀವನ ಪ್ರಾಣವೇ ಹೋಗಿಬಿಡುತ್ತಿತ್ತು. ಆದ್ದರಿಂದ ತನ್ನ ಮಿತ್ರನ ಪ್ರಾಣವನ್ನು ಉಳಿಸಲು ಮರೆಯಲ್ಲಿ ನಿಂತಿದ್ದ ಶ್ರೀರಾಮನು ಒಡನೆಯೇ ವಾಲಿಯ ಮೇಲೆ ಒಂದು ಅಮೋಘವಾದ ಬಾಣಪ್ರಯೋಗವನ್ನು ಮಾಡಿ ಅವನನ್ನು ಬೀಳಿಸಿದ. ಆ ಸಮಯದಲ್ಲಿ ಅವನಿಗೆ ಯುದ್ಧನೀತಿಯನ್ನು ವಿಮರ್ಶೆಮಾಡುವುದಕ್ಕಿಂತ ಸ್ನೇಹಿತನ ಪ್ರಾಣರಕ್ಷಣೆ ಹೆಚ್ಚು ಮುಖ್ಯವಾಗಿತ್ತು. (ಇದೇ ನೀತಿಯನ್ನನುಸರಿಸಿ ಮಹಾಭಾರತಯುದ್ಧದಲ್ಲಿ ಅರ್ಜುನನು ತನ್ನ ಮಿತ್ರನಾದ ಸಾತ್ಯಕಿಯ ಪ್ರಾಣವನ್ನು ಉಳಿಸಲು ಭೂರಿಶ್ರವನ ಮೇಲೆ ಬಾಣಪ್ರಯೋಗಮಾಡಿ ಅವನ ತೋಳನ್ನು ಕತ್ತರಿಸುತ್ತಾನೆ.) ಯುದ್ಧಮಾಡಿದ ಕ್ರಮದಲ್ಲಿ ವ್ಯತ್ಯಾಸಮಾಡಿದ್ದರಿಂದ ಕೆಲವರು ತನ್ನನ್ನು ನಿಂದಿಸಬಹುದೆಂದು ತಿಳಿದರೂ ಶ್ರೀರಾಮನು ಮಿತ್ರನ ಪ್ರಾಣರಕ್ಷಣೆಗಾಗಿ ವಾಲಿಯ ಮೇಲೆ ಹಿಂದಿನಿಂದ ಬಾಣ ಹೊಡೆದ ಎಂದು ಕೆಲವರು ವಿವರಣೆ ನೀಡುತ್ತಾರೆ. ಈ ಎರಡು ವಿವರಣೆಗಳೂ ಸರಿ ಇರಬಹುದು.

ಆದರೆ, ಶ್ರೀರಾಮನು ವಾಲಿಯನ್ನು ಎದುರಿಸಿ ಹೊಡೆಯಲಿ ಅಥವಾ ಮರೆಯಿಂದ ಹೊಡೆಯಲಿ–ಹೇಗಿದ್ದರೂ ಅದರಲ್ಲಿ ಯಾವ ದೋಷವೂ ಇಲ್ಲ–ಎಂಬುದು ನಮ್ಮ ಅಭಿಪ್ರಾಯ. ಏಕೆಂದರೆ: ಅದು ವಾಲಿಗೆ ಶ್ರೀರಾಮನು ಮಾಡಿದ ಶಿಕ್ಷೆಯ ವಿಷಯವೇ ಹೊರತು ಶ್ರೀರಾಮನು ಅವನೊಡನೆ ಮಾಡಿದ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಯುದ್ಧದ ವಿಷಯವಲ್ಲ. ವಾಲಿಯೊಡನೆ ಯುದ್ಧಮಾಡುವುದಾಗಿ ರಾಮನು ಯಾರಿಗೂ ಹೇಳಿಯೂ ಇಲ್ಲ ; ವಾಲಿಯನ್ನು ಅವನು ಯುದ್ಧಕ್ಕೆ ಆಹ್ವಾನಿಸುವುದೂ ಇಲ್ಲ. ವಾಲಿಗೆ ಘೋರವಾದ ದಂಡವನ್ನು ವಿಧಿಸುವುದಾಗಿ ಸಂಕಲ್ಪಮಾಡಿದ್ದನು. ಘೋಷಣೆಮಾಡಿದ್ದನು. ಸಕಾಲದಲ್ಲಿ ಆ ಪ್ರತಿಜ್ಞೆಯನ್ನು ನೆರವೇರಿಸಿದನು.

ಶಿಕ್ಷೆ ವಿಧಿಸುವಾಗ ಹಿಂದಿನಿಂದ ಹೊಡೆಯಬಾರದು. ಮರ ಏರಿದವನನ್ನು ಹೊಡೆಯಬಾರದು. ಓಡುತ್ತಿರುವವನನ್ನು ಹೊಡೆಯಬಾರದು – ಇತ್ಯಾದಿ ಯಾವ ನಿಯಮಗಳನ್ನೂ ಅನುಸರಿಸಬೇಕಾಗಿಲ್ಲ. ತಪ್ಪಿತಸ್ಥನಿಗೆ ಮರಣದಂಡನೆ ಮಾಡುವಾಗ ಅವನೊಡನೆ ಯುದ್ಧಮಾಡಿ ಕೊಲ್ಲಬೇಕೆಂಬ ನಿಯಮವೇನಿಲ್ಲ. ಯಥೋಚಿತವಾಗಿ ಅಸ್ತ್ರ-ಶಸ್ತ್ರಗಳಿಂದ ಅವನನ್ನು ಸಂಹರಿಸಬಹುದು. ಅಂತ್ಯಸಮಯದಲ್ಲಿ ಅಪರಾಧಿಗೆ ಅವನ ತಪ್ಪನ್ನು ಪರಿಚಯ ಮಾಡಿಕೊಟ್ಟು ಸಮಾಧಾನವಾದ ಮನಸ್ಸಿನಿಂದ ಅವನು ಪ್ರಾಣಬಿಡುವಂತೆ ಮಾಡಬೇಕು–ಎಂಬುದು ಮರಣದಂಡನೆಯ ಶಾಸ್ತ್ರವಿಧಿ. ಶ್ರೀರಾಮನು ಆ ಕೆಲಸವನ್ನು ಅತ್ಯಂತಸಮರ್ಪಕವಾಗಿ ನೆರವೇರಿಸಿದ್ದಾನೆ. ಅವನು ವಾಲಿಗೆ ಏಕಬಾಣಪ್ರಯೋಗದಿಂದ ಮರಣದಂಡನೆ ವಿಧಿಸಿದ್ದಾನೆ. ಅವನಿಗೆ ಕುಟುಕು ಜೀವ ಇದ್ದಾಗ ಅವನಿಗೆ ಸಮಾಧಾನದ ಮಾತುಗಳನ್ನು ಹೇಳುತ್ತಾನೆ. ಅವನ ತಪ್ಪನ್ನು ಮನವರಿಕೆಮಾಡಿಕೊಟ್ಟು, ಅವನು ಪಶ್ಚಾತ್ತಾಪದಿಂದಲೂ ಶುದ್ಧನಾಗುವಂತೆ ಮಾಡುತ್ತಾನೆ. ಮರಣದಂಡನೆಯ ಮೂಲಕ ಅವನ ತಪ್ಪಿಗೆ ತಕ್ಕ ಶಿಕ್ಷೆ ಅಧಿಕೃತವಾಗಿ ಇಲ್ಲಿಯೇ ಆಗಿರುವುದರಿಂದ ಅವನಿಗೆ ಸ್ವರ್ಗವುಂಟು.

ರಾಜಭಿರ್ಧೃತದಂಡಾಸ್ತು ಕೃತ್ವಾ ಪಾಪಾನಿ ಮಾನವಾಃ ।
ನಿರ್ಮಲಾಃ ಸ್ವರ್ಗಮಾಯಾಂತಿ ಸನ್ತಃ ಸುಕೃತಿನೋ ಯಥಾ ॥

ಎಂದು ಭರವಸೆ ಕೊಡುತ್ತಾನೆ. ಅವನ ಪ್ರಿಯಪುತ್ರನಾದ ಅಂಗದನನ್ನು ವಾತ್ಸಲ್ಯದಿಂದಲೂ ಗೌರವದಿಂದಲೂ ಕಂಡು ಅವನನ್ನು ಯುವರಾಜನನ್ನಾಗಿ ಮಾಡುವುದಾಗಿ ಪ್ರತಿಜ್ಞೆಮಾಡುತ್ತಾನೆ. ಅಪರಾಧಿಯಾಗಿದ್ದ ವಾಲಿ ಧರ್ಮಪುರುಷನ ಬಾಣಪ್ರಯೋಗದಿಂದಲೂ, ಪಶ್ಚಾತ್ತಾಪ-ಕ್ಷಮಾಯಾಚನೆಗಳಿಂದಲೂ ಶುದ್ಧಾತ್ಮನಾಗಿ ಸ್ವರ್ಗಸ್ಥನಾಗುವಂತೆ ಮಾಡಿದ್ದಾನೆ. ಇದು

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.


ಅತ್ಯಂತ ಆದರ್ಶವಾದ ರೀತಿ-ನೀತಿ ಎಂದು ನಾವು ಭಾವಿಸುತ್ತೇವೆ. ಯುದ್ಧವಾಗಿದ್ದರೆ ಎದುರುಯುದ್ಧವೇ ಅಥವಾ ಮರೆಯ ಯುದ್ಧವೇ ? – ಎಂಬ ಪ್ರಶ್ನೆ. ಇದು ಶಿಕ್ಷೆಯ ಪ್ರಸಂಗವಾದ್ದರಿಂದ ಮೇಲ್ಕಂಡ ಹೇಡಿತನ, ಯುದ್ಧನಿಯಮೋಲ್ಲಂಘನೆ ಇತ್ಯಾದಿ ಆಪಾದನೆಗಳಿಗೆ ಇಲ್ಲಿ ಎಡೆಯೇ ಇಲ್ಲ.

"ವಾಲಿಯು ನಿರಪರಾಧಿಯಾಗಿದ್ದ ತನ್ನ ತಮ್ಮನನ್ನು ಮನ್ನಿಸಲಿಲ್ಲ. ತಾನು ಹಿರಿಯನಾಗಿದ್ದರೂ ಕಿರಿಯನಾಗಿದ್ದ ಸುಗ್ರೀವನಲ್ಲಿ ದೀರ್ಘದ್ವೇಷವನ್ನು ಸಾಧಿಸಿ ಹಿರಿತನದ ಸೂತ್ರವನ್ನು ಹರಿದು ಬಿಸಾಡಿದ. ಭ್ರಾತೃದ್ರೋಹ ಮತ್ತು ಅಗಮ್ಯಾಗಮನಪಾತಕಗಳನ್ನು ಮಾಡಿದ್ದರಿಂದ ಅವನ ಪ್ರಕೃತಿ ತುಂಬಾ ಕೆಟ್ಟುಹೋಗಿದ್ದಿತು. ಸೋದರಮಾತ್ಸರ್ಯದಲ್ಲೇ ಅವನ ಶೌರ್ಯವು ಪರ್ಯವಸಾನಹೊಂದಿತ್ತು. ಹೀಗೆ ಅವನು ತನ್ನ ದೋಷದಿಂದಲೇ ದಂಡ್ಯನಾದ. ಹೇಗಿದ್ದರೂ ಅವನು ನಿಗ್ರಹಕ್ಕೆ ಯೋಗ್ಯನೇ ಆಗಿದ್ದ. ಅವನಿಗೆ ಶ್ರೀರಾಮನು ದಂಡವನ್ನು ವಿಧಿಸುವುದಕ್ಕೆ ಸಾಧನೋಪಾಯವು ಬಾಣವಾದರೇನು ? ಕೃಪಾಣವಾದರೇನು ? ಅವನನ್ನು ಮರೆಯಿಂದ ಹೊಡೆದರೇನು ? ಎದುರಿನಿಂದ ಹೊಡೆದರೇನು ? " ಎಂಬ ಅಭಿಪ್ರಾಯದ ಮಾತುಗಳನ್ನು ಶ್ರೀ ಡಿ. ವಿ. ಜಿ. ಯವರು ತಮ್ಮ ರಾಮಾಯಣ ವಿಮರ್ಶೆಯಲ್ಲಿ ಹೇಳಿದುವುದು ಅತ್ಯಂತಯುಕ್ತವಾಗಿದೆ.

"ಅಂತು ನಿಜದೋಷದಿಂ ವಾಲಿ ತಾನ್ ದಂಡ್ಯನಾದನ್ "
"ಎಂತಾದೊಡಂ ನಿಗ್ರಹಾರ್ಹನವನು,
ದಂಡ್ಯನಲಿ ದಂಡಪಾತಕೆ ಸಾಧನೋಪಾಯ
ಬಾಣವೋ ಕೃಪಾಣವೋ ಅದರಿಂದೇನು ? "

ಶ್ರೀರಾಮನು ಧರ್ಮಿಷ್ಠನೂ ಮತ್ತು ವೀರಕ್ಷತ್ರಿಯನೂ ಆಗಿದ್ದುದರಿಂದ ಅಧರ್ಮಿಷ್ಠರು ಎಲ್ಲಿದ್ದರೂ ಎಲ್ಲಿ ಕಂಡುಬಂದರೂ ಅವರನ್ನು ಶಿಕ್ಷಿಸುವ ಅಧಿಕಾರ ಅವನಿಗಿತ್ತು. ಕೋಸಲರಾಜ್ಯದ ಚಕ್ರವರ್ತಿಯಾಗಿದ್ದ ಭರತನ ಪ್ರತಿನಿಧಿಯಾಗಿಯೂ ಅವನಿಗೆ ಆ ಅಧಿಕಾರವಿತ್ತು. ದರೋಡೆಕಾರರು, ಕಳ್ಳರು, ಕೊಲೆಪಾತಕಿಗಳು ಮುಂತಾದವರನ್ನು ಯಾವುದೇ ಮಾರ್ಗದಲ್ಲಾದರೂ ಹಿಡಿದುಹಾಕಬಹುದು. ಯಾವುದೇ ಮಾರ್ಗದಲ್ಲಾದರೂ ಸಂಹರಿಸಬಹುದು. ಯಾವ ಮಾರ್ಗದಿಂದ ಸಂಹರಿಸಬೇಕೆನ್ನುವುದನ್ನು ದುಷ್ಟನ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಬಲಾಬಲ, ಕಾಲ, ಸನ್ನಿವೇಶಗಳಿಗೆ ತಕ್ಕಂತೆ ಯಥೋಚಿತವಾಗಿ ಮಾಡುವ ಅಧಿಕಾರ ದಂಡಾಧಿಕಾರಿಗೆ (Police) ಇರುತ್ತದೆ. ದುಷ್ಟನನ್ನು ಸಂಹರಿಸಿದ್ದಕ್ಕಾಗಿ ಆ ದಂಡಾಧಿಕಾರಿಯನ್ನು ಅಭಿನಂದಿಸಬೇಕೇ ಹೊರತು ಅವನನ್ನು ಹೀಗೆ ಏಕೆ ಸಂಹರಿಸಿದೆ? ಹಾಗೆ ಏಕೆ ಹೊಡೆದುಹಾಕಲಿಲ್ಲ?–ಎಂದು ಈಗಿನ ಕಾಲದಲ್ಲೂ ಯಾರೂ ಪ್ರಶ್ನೆಮಾಡುವುದಿಲ್ಲ. ಹಾಗೆ ಪ್ರಶ್ನಿಸುವ ಅಧಿಕಾರವೂ ಯಾರಿಗೂ ಇರುವುದಿಲ್ಲ. ಹೀಗಿರುವಾಗ ಧರ್ಮಿಷ್ಠನೂ, ಸಾಧನ-ಸಾಧಕಗಳ ಸ್ವರೂಪ-ಪ್ರಯೋಗಗಳನ್ನು ಬಲ್ಲವನೂ ಆಗಿದ್ದ ಶ್ರೀರಾಮನನ್ನು ಪ್ರಶ್ನಿಸುವ ಅಧಿಕಾರ ಯಾರಿಗಿದೆ? ಅವನ ಮೇಲೆ ಮಾತ್ರ ಈ ಬಗೆಗೆ ಆಕ್ಷೇಪಣೆಯ ಧೂಳನ್ನು ಏಕೆ ಎರಚಬೇಕು?

ಪ್ರಶ್ನೆ :– 21) ವಾಲಿಯನ್ನು ಶ್ರೀರಾಮನು ಮೇಲ್ಕಂಡಂತೆ ಸಂಹಾರ ಮಾಡಿದ್ದಕ್ಕೆ ಮೇಲೆ ಹೇಳಿದ ಕಾರಣಗಳಲ್ಲದೇ ಬೇರೆ ಯಾವುದಾದರೂ ವಿಶೇಷ ಕಾರಣಗಳುಂಟೇ?

ಉತ್ತರ :– ಉಂಟು. ಅದನ್ನು ವಾಲಿಯೂ ಒಪ್ಪುತ್ತಾನೆ. ಅದು ಅಂತಃಕರಣಪ್ರಮಾಣ; ಆತ್ಮಸಾಕ್ಷಿಯ ಪ್ರಮಾಣ. ಅದಕ್ಕೆ ಅನುಸಾರವಾಗಿ ವಾಲಿಯು ಮಹಾಪರಾಧಿಯೆಂದು ನಿರ್ಧರಿಸಿ ಶ್ರೀರಾಮನು ಅವನಿಗೆ ಈ ರೀತಿ ಮರಣದಂಡನೆ ವಿಧಿಸಿದ್ದಾನೆ. ತರ್ಕಬಲದಿಂದ ಅಥವಾ ಶಾಸ್ತ್ರವಾಕ್ಯಗಳ ಬಲದಿಂದ ಯಾವುದನ್ನು ಬೇಕಾದರೂ ಸರಿ ಅಥವಾ ತಪ್ಪು ಎಂದು ವಾದ ಮಾಡಿ ಜಯಗಳಿಸಬಹುದು. ಆದರೆ ಸರಿಯೇ? ತಪ್ಪೆ?–ಎಂಬ ವಿಷಯದಲ್ಲಿ ಸತ್ಪುರುಷರಿಗೆ ಅಂತಃಸಾಕ್ಷಿಯೇ ಪರಮಪ್ರಮಾಣ.

'ಆಚಾರಶ್ಚೈವ ಸಾಧೂನಾಂ ಆತ್ಮನಸ್ತುಷ್ಟಿರೇವ ಚ।'
'ಸತಾಂ ಹಿ ಸಂದೇಹಪದೇಷು ವಸ್ತುಷು ಪ್ರಮಾಣಮಂತಃಕರಣಪ್ರವೃತ್ತಯಃ।'

ಶ್ರೀರಾಮನು ವಾಲಿಯೊಡನೆ ಮಾಡಿದ ಪ್ರತಿವಾದದಲ್ಲಿ ಮತ್ತು ಅದಕ್ಕೆ ವಾಲಿಯು ತೋರಿದ ಪ್ರತಿಕ್ರಿಯೆಯಲ್ಲಿ ಈ ಅಭಿಪ್ರಾಯವನ್ನು ನೋಡುತ್ತೇವೆ. ಎಲ್ಲ ಭೂತಗಳ ಹೃದಯದಲ್ಲಿರುವ ಪರಮಾತ್ಮನಿಗೆ ತಾನೇ ಎಲ್ಲವೂ ಗೊತ್ತಾಗುವುದು? ಸತ್ಪುರುಷರ ಧರ್ಮವು ಅತಿಸೂಕ್ಷ್ಮವಾದುದು. ಹೃದಯದಲ್ಲಿರುವ ಸರ್ವಜ್ಞನಾದ ಆತ್ಮನ ಸಾಕ್ಷಿಯಿಂದಲೇ ಅದನ್ನು ನಿರ್ಣಯಿಸಬೇಕು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



" ಸೂಕ್ಷ್ಮಃ ಪರಮವಿಜ್ಞೇಯಃ ಸತಾಂ ಧರ್ಮಃ ಪ್ಲವಂಗಮ ।
ಹೃದಿಸ್ಥಃ ಸರ್ವಭೂತಾನಾಂ ಆತ್ಮಾ ವೇದ ಚರಾಚರಮ್ ॥ "

'ನೀನು ಹೇಗೆ ಬೇಕಾದರೂ ವಾದಿಸಬಹುದು. ಆದರೆ ನೀನು ಮಾಡಿದುದು ಸರಿಯೋ? ತಪ್ಪೋ? ಎಂಬ ಬಗ್ಗೆ ನಿನ್ನ ಅಂತಃಕರಣ ಏನು ಹೇಳುತ್ತದೆ?'–ಎಂಬ ಅಭಿಪ್ರಾಯದಿಂದ ರಾಮನು ಕೇಳಿದ ಗಂಭೀರವಾದ ವಾಣಿಗೆ ಧರ್ಮಾತ್ಮನಾದ ವಾಲಿ ಆತ್ಮಸಾಕ್ಷಿಯಿಂದ 'ನಾನು ತಪ್ಪಿತಸ್ಥ. ನನ್ನನ್ನು ಕ್ಷಮಿಸಬೇಕು. ನೀನು ಮಾಡಿದ ದಂಡನೆಯಿಂದ ನಾನು ಶುದ್ಧನಾದೆ'–ಎಂಬ ಸತ್ಯವೂ, ಶುದ್ಧವೂ, ಸರಳವೂ ಆದ ಸದುತ್ತರವನ್ನೇ ಕೊಡುತ್ತಾನೆ. ವಾಲಿಯು ವಾಸ್ತವವಾಗಿ ದೇವಾಂಶ ಪುರುಷ, ಧರ್ಮಿಷ್ಠ. ಕೆಲವು ಕಾಲದಿಂದ ಅಹಂಕಾರ ಮತ್ತು ಕಾಮ-ಕ್ರೋಧಗಳೆಂಬ ಅಸುರರು ಅವನ ಮನಸ್ಸನ್ನು ಆಕ್ರಮಿಸಿದ್ದರು. ರಾಮಬಾಣದಿಂದಲೂ, ರಾಮನು ಕೊಟ್ಟ ವಿವೇಕದ ಉತ್ತರದಿಂದಲೂ ಅವನ ಸ್ವಾಭಾವಿಕವಾದ ದೈವತ್ವ ಎಚ್ಚರಗೊಂಡು ಅವನು ಉತ್ತಮಗತಿಯನ್ನೇ ಪಡೆಯುತ್ತಾನೆ. (ನಮ್ಮ ಗೌರವಕ್ಕೆ ಪಾತ್ರನಾಗುತ್ತಾನೆ. ಮಹಾತ್ಮನೆಂದು ಸಂಭಾವಿತನಾಗುತ್ತಾನೆ.)

ಪ್ರಶ್ನೆ :– 22) ಶ್ರೀರಾಮನು ವಾಲಿಯನ್ನು ಸಂಹರಿಸಿದ್ದು ಸರಿಯಿರಬಹುದು. ಮರೆಯಿಂದ ಕೊಂದದ್ದರಲ್ಲಿಯೂ ದೋಷವಿಲ್ಲದೇ ಇರಬಹುದು. ಆದರೆ ಶ್ರೀರಾಮನು ಮಾಡಿದ್ದು ರಾಜನೀತಿಯ ದೃಷ್ಟಿಯಿಂದ ಸರಿಯೇ? ದುರ್ಬಲನಾಗಿದ್ದ ಸುಗ್ರೀವನೊಡನೆ ಸ್ನೇಹಬೆಳೆಸುವುದರ ಬದಲು ಮಹಾಬಲಶಾಲಿಯಾಗಿದ್ದ ವಾಲಿಯೊಡನೆಯೇ ಶ್ರೀರಾಮನು ಸ್ನೇಹಮಾಡಿಕೊಂಡಿದ್ದರೆ ಶ್ರೀರಾಮನ ಉದ್ದೇಶವು ಸುಲಭವಾಗಿ ಈಡೇರುತ್ತಿರಲಿಲ್ಲವೇ? ವಾಲಿಯು ಹೇಳುವಂತೆ ಶ್ರೀರಾಮನು ವಾಲಿಗೆ ಒಂದು ಮಾತು ಹೇಳಿದ್ದರೆ ಆತನು ಒಡನೆಯೇ ರಾವಣನನ್ನು ಹಿಡಿದು ಕಟ್ಟಿಹಾಕಿ ರಾಮನ ಪಾದಕ್ಕೆ ತಂದು ಬೀಳಿಸುತ್ತಿದ್ದ. ಸೀತೆಯನ್ನು ಎಲ್ಲಿದ್ದರೂ ಹುಡುಕಿ ರಾಮನಿಗೆ ತಂದೊಪ್ಪಿಸುತ್ತಿದ್ದ. ಹೀಗಿರುವಾಗ ಅವನು ಅಲ್ಪಬಲನಾದ ಸುಗ್ರೀವನ ಸ್ನೇಹವನ್ನು ಏತಕ್ಕೆ ಕೋರಿದ?

ಉತ್ತರ :– ಸಮಾನದುಃಖ ಉಳ್ಳವರಲ್ಲಿ ಮಾತ್ರವೇ ಸ್ನೇಹವನ್ನು ಮಾಡಿಕೊಳ್ಳಬೇಕು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



'ಸಮಾನದುಃಖಃ ಸಖಾ ಕಾರ್ಯಃ', ಶ್ರೀರಾಮನು ತನ್ನ ಪತ್ನಿಯ ಅಪಹಾರದಿಂದ ವಿಷಣ್ಣನಾಗಿ ಸಹಾಯದ ಅಪೇಕ್ಷೆಯಲ್ಲಿದ್ದ. ಸುಗ್ರೀವನೂ ತನ್ನ ರಾಜ್ಯವನ್ನೂ ಪತ್ನಿಯನ್ನೂ ಕಳೆದುಕೊಂಡು ತನ್ನ ಕಾರ್ಯಸಿದ್ಧಿಗಾಗಿ ಸಹಾಯದ ಅಪೇಕ್ಷೆಯಲ್ಲಿದ್ದ. ಆದ್ದರಿಂದ ಅವರಿಬ್ಬರ ಮೈತ್ರಿಯು ಸಫಲವಾಯಿತು.

ವಾಲಿಯ ಸ್ನೇಹವನ್ನು ರಾಮನು ಮಾಡಿಕೊಂಡಿದ್ದರೆ ಅದು ವಿಷಮವಾದ ಸ್ನೇಹವಾಗುತ್ತಿತ್ತು. ವಾಲಿಗೆ ಯಾವ ದುಃಖವೂ ಇರಲಿಲ್ಲ. ಅವನು ಮಾತಿನ ಚಮತ್ಕಾರದಲ್ಲಿ ರಾಮನಿಗೆ ಸಹಾಯಮಾಡುವುದಾಗಿ ಎಷ್ಟೇ ಭರವಸೆಕೊಟ್ಟರೂ ಆತನು ನಿಜವಾಗಿಯೂ ಸಹಾಯಮಾಡುತ್ತಿದ್ದನೆಂಬುದು ಸಂಶಯವೇ. ಏಕೆಂದರೆ ವಾಲಿಯ ಮೇಲೆ ಶ್ರೀರಾಮನ ಉಪಕಾರದ ಋಣ ಯಾವುದೂ ಇರಲಿಲ್ಲ. ಶ್ರೀರಾಮನ ಯಾವ ಸಹಾಯದ ಆವಶ್ಯಕತೆಯೂ ಇರಲಿಲ್ಲ. ಸುಗ್ರೀವನಾದರೋ ರಾಮನಿಂದ ರಾಜ್ಯಲಾಭದ ಸಹಾಯ ಪಡೆದಿದ್ದರಿಂದ ಅವನ ಮೇಲೆ ಶ್ರೀರಾಮನ ಉಪಕಾರದ ಋಣ ಇತ್ತು. ಕರ್ತವ್ಯರೂಪವಾಗಿ ಅವನು ರಾಮನಿಗೆ ಸಹಾಯಮಾಡಬೇಕಾಗಿತ್ತು. ಸಹಾಯ ಮಾಡದಿದ್ದರೆ ರಾಮನು ತನ್ನನ್ನು ಶಿಕ್ಷಿಸುವನೆಂಬ ಭಯವೂ ಅವನಿಗಿತ್ತು. ವಾಲಿಗೆ ರಾಮನ ಋಣವೂ ಇರಲಿಲ್ಲ. ಭಯವೂ ಇರಲಿಲ್ಲ. ಕೇವಲ ಕರುಣೆಯಿಂದ ಅವನು ರಾಮನಿಗೆ ಸಹಾಯಮಾಡಬೇಕಾಗಿತ್ತು. ಮತ್ತೊಂದು ಮುಖ್ಯವಿಷಯವನ್ನು ಇಲ್ಲಿ ಮರೆಯಬಾರದು. ವಾಲಿಯು ರಾವಣನೊಡನೆ ಈ ಮೊದಲೇ ಅಗ್ನಿಸಾಕ್ಷಿಕವಾಗಿ ಸ್ನೇಹಮಾಡಿಕೊಂಡಿದ್ದ.

ನಮ್ಮಿಬ್ಬರಿಗೂ ಪತ್ನೀ, ಪುತ್ರ, ಪುರ, ರಾಷ್ಟ್ರ, ಭೋಗ, ಉಡಿಗೆ, ತೊಡಿಗೆ–ಎಲ್ಲವೂ ಸಮನಾಗಿರಲಿ.

ದಾರಾಃ ಪುತ್ರಾಃ ಪುರಂ ರಾಷ್ಟ್ರಂ ಭೋಗಾಚ್ಛಾದನಭೋಜನಮ್ ।
ಸರ್ವಮೇವಾವಿಭಕ್ತಂ ನೌ ಭವಿಷ್ಯತಿ ಹರೀಶ್ವರ ॥

(ಉತ್ತರಕಾಂಡ–35–41)

ಇಂತಹ ಗಾಢಮೈತ್ರಿಯನ್ನು ರಾವಣನೊಡನೆ ಹೊಂದಿದ್ದ ವಾಲಿಯು ರಾವಣಶತ್ರುವಾಗಿದ್ದ ಶ್ರೀರಾಮನಿಗೆ ಹೊಸ ಸ್ನೇಹ ಅಥವಾ ಕರುಣೆಯಿಂದ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ನಿಜವಾಗಿಯೂ ಸಹಾಯಮಾಡುತ್ತಿದ್ದನೇ ? ಎಂಬ ಸಂಶಯವೇ ನಮಗೆ ಬರುತ್ತದೆ.

ಇವಲ್ಲದೇ ವಾಲಿ ಮತ್ತು ರಾವಣರಿಬ್ಬರೂ ಪರಸ್ತ್ರೀಲಂಪಟರಾದ ಮಿತ್ರರು. ಅವರು ಒಬ್ಬರನ್ನೊಬ್ಬರು ಆ ವಿಷಯದಲ್ಲಿ ಬಿಟ್ಟುಕೊಡುವ ಸಂಭವ ಕಡಿಮೆ. ಆದ್ದರಿಂದ ವಾಲಿಯೊಡನೆ ಸ್ನೇಹಬೆಳೆಸಲು ಪ್ರಯತ್ನ ಪಟ್ಟಿದ್ದರೆ – ಅದರಿಂದ ಶ್ರೀರಾಮನ ಕಾರ್ಯಸಿದ್ಧಿ ಆಗುತ್ತಿರಲಿಲ್ಲವೆಂದೇ ನಮಗನ್ನಿಸುತ್ತದೆ. ರಾಜನೀತಿಯ ದೃಷ್ಟಿಯಿಂದ ಶ್ರೀರಾಮನು ಸುಗ್ರೀವನ ಜೊತೆಯಲ್ಲಿ ಸ್ನೇಹಬೆಳೆಸಿದ್ದೇ ಸರಿ ಎಂಬುದಕ್ಕೆ ನಾವು ನಮ್ಮ ದೇಶದ ಚರಿತ್ರೆಯಿಂದ ಒಂದು ಪ್ರತ್ಯುದಾಹರಣೆಯನ್ನು ಕೊಡಬಹುದು. ಮರಾಠರಿಗೆ ಟಿಪ್ಪುಸುಲ್ತಾನ್ ಮತ್ತು ಇಂಗ್ಲೀಷರು ಇಬ್ಬರೂ ಶತ್ರುಗಳಾಗಿದ್ದರು. ಆ ಇಬ್ಬರು ಶತ್ರುಗಳಲ್ಲಿ ಇಂಗ್ಲೀಷರು ಹೆಚ್ಚು ಬಲಶಾಲಿಗಳು. ಆಗ ಮರಾಠರಿಗೆ ಇಬ್ಬರು ಶತ್ರುಗಳಲ್ಲಿ ಯಾರ ಸ್ನೇಹ ಮಾಡಿಕೊಂಡು ತಾವು ಏಳಿಗೆ ಹೊಂದೋಣ ಎಂಬ ಸಮಸ್ಯೆ ಉಂಟಾಯಿತು. ಆಗ ಅವರು ಮಹಾಬಲಶಾಲಿಗಳಾಗಿದ್ದ ಇಂಗ್ಲೀಷರ ಸ್ನೇಹವನ್ನೇ ಮಾಡಿಕೊಂಡರು. ಅದರ ಫಲವೇನಾಯಿತೆಂದರೆ: ಮರಾಠರು ಇಂಗ್ಲೀಷರು ಇಬ್ಬರೂ ಸೇರಿ ಟಿಪ್ಪುಸುಲ್ತಾನನನ್ನು ಬಡಿದುಹಾಕಿದರು. ಅನಂತರ ಇಂಗ್ಲೀಷರು ಮರಾಠರನ್ನು ಬಡಿದು ಹಾಕಿದರು. ಇಂಗ್ಲೀಷರಿಗೆ ಮರಾಠರ ಉಪಕಾರದ ಋಣ ಇರಲಿಲ್ಲವಾದ್ದರಿಂದ ಅವರು ಮರಾಠರನ್ನು ಕಡೆಗಣಿಸಿದರು. ಇಲ್ಲಿ ಮರಾಠರು ಅನುಸರಿಸಿದ್ದು ಅವಿವೇಕದ ರಾಜನೀತಿ. ಅವರು ತಮಗಿಂತ ಸ್ವಲ್ಪ ಕಡಿಮೆಬಲದವನಾಗಿದ್ದ ಟಿಪ್ಪುಸುಲ್ತಾನನ ಪಕ್ಷವನ್ನು ಸೇರಿದ್ದರೆ ಅವರಿಬ್ಬರ ಸಂಯುಕ್ತಬಲದಿಂದ ಇಂಗ್ಲೀಷರು ಪರಾಜಿತರಾಗುತ್ತಿದ್ದರು. ಟಿಪ್ಪುಸುಲ್ತಾನನಿಗೆ ಮರಾಠರ ಉಪಕಾರದ ಋಣ ಇರುತ್ತಿದ್ದುದರಿಂದ ಅವನು ಮುಂದೆ ಮರಾಠರಿಗೆ ಸಹಾಯಮಾಡುತ್ತಿದ್ದನು. ಈ ದೃಷ್ಟಾಂತವನ್ನು ಗಮನಿಸಿದಾಗ ಶ್ರೀರಾಮನು ತನ್ನೊಡನೆ ಸಮಾನದುಃಖನಾಗಿ, ವಾಲಿಗಿಂತ ಕಡಿಮೆ ಪರಾಕ್ರಮಶಾಲಿಯಾಗಿದ್ದ ಸುಗ್ರೀವನ ಸ್ನೇಹವನ್ನೇ ಮಾಡಿಕೊಂಡಿದ್ದು ಸರಿಯೆಂದು ನಮಗೆ ಖಚಿತವಾಗುತ್ತದೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಶ್ರೀರಾಮನು ಅಸಹಾಯ ಶೂರ. ಅಸಹಾಯಸಾಹಸಿ. ಅವನಿಗೆ ದುಷ್ಟರ ಸಂಹಾರಕ್ಕೆ ಯಾರ ಸಹಾಯವೂ ಬೇಕಾಗಿರಲಿಲ್ಲ. ಯಾರಾದರೂ ಅವನಿಗೆ ಸಹಾಯಮಾಡಿದರೆ ಅದು ಅವರಿಗೆ ಶ್ರೀರಾಮನಿಗೆ ಸೇವೆಮಾಡಿದ ಪುಣ್ಯಕ್ಕೆ ಕಾರಣವೇ ಹೊರತು ಶ್ರೀರಾಮನಿಗೆ ಅದರ ಆಗತ್ಯ ಇರಲಿಲ್ಲ. ಮಹಾಬಲಿಷ್ಠನಾದ ವಾಲಿಯ ನೆರವೂ ಬೇಕಾಗಿರಲಿಲ್ಲ. ಬಲಿಷ್ಠ ಎಂಬ ಕಾರಣವಿಂದ ಅಧರ್ಮಿಷ್ಠನಾದ ವಾಲಿಯ ಸ್ನೇಹಬೆಳೆಸಿ ಅವನ ಸಹಾಯ ತೆಗೆದುಕೊಂಡಿದ್ದರೆ ಶ್ರೀರಾಮನು ಅಧರ್ಮದ ಪಕ್ಷಪಾತಿಯಾಗುತ್ತಿದ್ದ. ಬಲಶಾಲಿ–ಎಂಬ ಕಾರಣದಿಂದ ಅಧರ್ಮಕ್ಕೆ ಬೆಂಬಲ ನೀಡಿದ ಅಪಕೀರ್ತಿ ಅವನಿಗೆ ಬರುತ್ತಿತ್ತು. ಆದುದರಿಂದ ಅವನು ವಾಲಿಯ ಸ್ನೇಹವನ್ನು ಕೋರ ಲಿಲ್ಲ. ಸುಗ್ರೀವನು ದುರ್ಬಲನೇ ಆಗಿದ್ದರೂ ಅವನು ಧಾರ್ಮಿಕನಾಗಿದ್ದುದ ರಿಂದ ಧರ್ಮಪಕ್ಷಪಾತಿಯಾದ ಶ್ರೀರಾಮ ಅವನಿಗೆ ಸಹಾಯಮಾಡಿದ ಮತ್ತು ಅವನ ಸೇವೆಯನ್ನು ಅಂಗೀಕರಿಸಿದ.

ಆದರೆ ಶ್ರೀರಾಮನಿಗೆ ಸೀತಾನ್ವೇಷಣೆಗಾಗಿ ಸಹಾಯಕರು ಬೇಕಾಗಿದ್ದರು. ಅದಕ್ಕೆ ವಾಲಿಯ ಬಲದ ಆವಶ್ಯಕತೆ ಇರಲಿಲ್ಲ. ಸುಗ್ರೀವನ ಪ್ರಜೆಗಳಾದ ಕಪಿಗಳ ಸಹಾಯವಷ್ಟೇ ಸಾಕಾಗಿತ್ತು. ಈ ಕಾರಣದಿಂದಲೂ ಅವನು ವಾಲಿಯ ಸಹಾಯವನ್ನು ಕೋರದೇ ಸುಗ್ರೀವಾದಿಗಳ ಸೇವೆಯನ್ನು ಅಂಗೀಕರಿಸಿದ.

ಸೇನಾಪರಿಚ್ಛದಸ್ತಸ್ಯ – ಎಂದು ರಾಷ್ಟ್ರಕವಿ ಕಾಳಿದಾಸನು ಹೇಳಿ ರುವಂತೆ ಶ್ರೀರಾಮನಂತಹ ವೀರಾಧಿವೀರನಿಗೆ ಲಂಕಾಮಹಾಯುದ್ಧದಲ್ಲಿ ಕಪಿ ಸೇನೆಯ ಸಹಾಯ ಅಲಂಕಾರವೇ ಹೊರತು ಆವಶ್ಯಸಾಧನವಾಗಿರಲಿಲ್ಲ. ಯುದ್ಧಸಮಯದಲ್ಲಿ ವಿಭೀಷಣ, ಹನುಮಂತ, ಗರುಡ ಮುಂತಾದವರು ಅವನಿಗೆ ನೀಡಿದ ನೆರವೂ ಕೂಡ ಸೇವೆಯ ರೂಪದಲ್ಲೇ ಇದೆ. ರಾವಣನ ಮೂಲಬಲವನ್ನು ಮುಹೂರ್ತಮಾತ್ರದಲ್ಲಿ ಸಂಹಾರಮಾಡಿದ ಅವನಿಗೆ ಶತ್ರು ಸಂಹಾರದಲ್ಲಿ ಯಾರ ನೆರವು ತಾನೇ ಬೇಕಾಗಿತ್ತು ?

ಪ್ರಶ್ನೆ :– (23) ಶ್ರೀರಾಮನು ತನಗೆ ಕೊಟ್ಟ ಉತ್ತರವನ್ನು ಸರಿ ಯೆಂದು ಒಪ್ಪಿ ವಾಲಿ ಶ್ರೀರಾಮನ ಕ್ಷಮೆ ಬೇಡುತ್ತಾನೆ. ತನ್ನ ಆ ಅಂತ್ಯ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಸಮಯದಲ್ಲಿ ರಾಮನೊಡನೆ ಪ್ರತಿವಾದ, ಬಿರುನುಡಿಗಳನ್ನಾಡಿದರೆ ತನ್ನ ಪತ್ನೀ-ಪುತ್ರರಿಗೆ ತೊಂದರೆಯಾದೀತು – ಎಂದು ನೀತಿಯಿಂದ ಅವನು ಶ್ರೀರಾಮನ ಉತ್ತರಕ್ಕೆ ಸಮ್ಮತಿ ಸೂಚಿಸಿದನೇ? ಅಥವಾ ಶ್ರೀರಾಮನ ಮಾತುಗಳು ನ್ಯಾಯಬದ್ಧವಾಗಿವೆ ಎಂದು ಮನವರಿಕೆಯಾಗಿಯೇ ಅವನು ಶ್ರೀರಾಮನಲ್ಲಿ ಕ್ಷಮೆ ಬೇಡಿದನೇ?

ಉತ್ತರ :–' ಶ್ರೀರಾಮನು ಕೊಟ್ಟ ಉತ್ತರವು ಯುಕ್ತಿಯುಕ್ತವಾಗಿದೆ. ಅವನ ವಾದಗಳಲ್ಲಿ ಕಪಟವಿಲ್ಲ, ಪಕ್ಷಸಮರ್ಥನೆಯ ಹಠವಿಲ್ಲ. ವಾಲಿಗೆ ತಾನು ಸುಗ್ರೀವನ ಮತ್ತು ಅವನ ಪತ್ನಿಯ ವಿಷಯದಲ್ಲಿ ಮಹಾಪಚಾರಮಾಡಿದ್ದೇನೆ. ಈಗ ಪಶ್ಚಾತ್ತಾಪದಿಂದ ಮತ್ತು ಶ್ರೀರಾಮನು ಮಾಡಿದ ದಂಡದಿಂದ ತಾನು ಪಾಪರಹಿತನಾಗಿದ್ದೇನೆ'–ಎಂದು ಅವನ ಬುದ್ಧಿಗೆ ಮನವರಿಕೆಯಾಯಿತು ಮತ್ತು ಅಂತರಾತ್ಮಕ್ಕೂ ಒಪ್ಪಿಗೆಯಾಯಿತು. ಆದ್ದರಿಂದ ಅವನು ಶ್ರೀರಾಮನಲ್ಲಿ ಕ್ಷಮೆ ಯಾಚಿಸಿದ–ಎಂಬುದರಲ್ಲಿ ಸಂಶಯವಿಲ್ಲ. ಏಕೆಂದರೆ: ವಾಲಿಯು ಧೀರ, ವೀರ, ಧರ್ಮಿಷ್ಠ. ತನ್ನ ಪಕ್ಷವು ಸರಿ, ರಾಮನದು ತಪ್ಪು ಎಂದೇ ಅವನಿಗೆ ಅನ್ನಿಸಿದ್ದರೆ, ಕೊನೆಯ ಉಸಿರಿನಲ್ಲೂ ಅವನು ಅದನ್ನೇ ಸಾಧಿಸುತ್ತಿದ್ದನು: "ನನ್ನ ಮಿತ್ರಶ್ರೇಷ್ಠನಾದ ರಾವಣನ ಬಳಿಗೆ ಓಡಿಹೋಗಿ ಅವನ ಪಕ್ಷ ಸೇರಿಕೊಂಡು ನನಗೆ ಅನ್ಯಾಯಮಾಡಿರುವ ಶ್ರೀರಾಮ ಮತ್ತು ಸುಗ್ರೀವರನ್ನು ವಿರೋಧಿಸು" – ಎಂದು ಅಂಗದನಿಗೆ ಸಂಕೇತಮಾಡುತ್ತಿದ್ದನು. ಏಕೆಂದರೆ ವಾಲಿಯು ವೀರನಾಗಿದ್ದಂತೆಯೇ ನೀತಿನಿಪುಣನೂ ಆಗಿದ್ದ. ತಾನು ಮಾಡಿದುದು ತಪ್ಪು ಎಂದು ನಿಜವಾಗಿಯೂ ಅನ್ನಿಸಿದ್ದುದರಿಂದಲೇ ಅವನು ರಾಮನ ನಿರ್ಣಯವನ್ನು ಒಪ್ಪಿ ತನ್ನ ತಪ್ಪಿಗೆ ಕ್ಷಮೆ ಬೇಡಿ ಪರಿಶುದ್ಧನಾಗಿ ಸ್ವರ್ಗದ ದಾರಿಯನ್ನು ಹಿಡಿದ ಎಂದು ನಾವು ಸಿದ್ಧಾಂತಮಾಡುತ್ತೇವೆ.

ಪ್ರಶ್ನೆ :– 24) ಶ್ರೀರಾಮನು ವಾಲಿಯ ಸ್ನೇಹ ಮಾಡದೇ ಸುಗ್ರೀವನೊಡನೆಯೇ ಸ್ನೇಹ ಬೆಳೆಸುವುದಕ್ಕೆ ದೈವಿಕವಾದ ಕಾರಣವೂ ಇದೆಯೇ?

ಉತ್ತರ :– ಅಂತಹ ಕಾರಣವೂ ಇದೆಯೆಂದು ನಾವು ನಂಬುತ್ತೇವೆ. ಏಕೆಂದರೆ 1) ದಿವ್ಯರೂಪವನ್ನು ತಳೆದ ಕಬಂಧನು ಶ್ರೀರಾಮನಿಗೆ ಸುಗ್ರೀವ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ನೊಡನೆ ಸ್ನೇಹಮಾಡಿಕೋ ಎಂದು ಹೇಳಿದ್ದನೇ ಹೊರತು ವಾಲಿಯು ಸ್ನೇಹ ಮಾಡಿಕೋ ಎಂದು ಸಲಹೆ ಕೊಟ್ಟಿರಲಿಲ್ಲ.

2) 'ವಾಲಿಯು ದೇವರಾಜನಾದ ಇಂದ್ರಪುತ್ರನಾಗಿದ್ದರೂ ದೇವ ಶತ್ರುನಾದ ರಾವಣನೊಡನೆ ಅಗ್ನಿಸಾಕ್ಷಿಕವಾದ ಸ್ನೇಹಬೆಳೆಸಿದ್ದಾನೆ. ಆದ್ದರಿಂದ ಆತನು ಇನ್ನುಮುಂದೆ ಭೂಮಿಯಲ್ಲಿದ್ದರೆ ದೇವಕಾರ್ಯಕ್ಕೆ ಆತನಿಂದ ಯಾವ ಸಹಾಯವೂ ಆಗುವುದಿಲ್ಲ. ದೇವರಾಜನ ಪುತ್ರನನ್ನು ದೇವಲೋಕಕ್ಕೇ ಕಳುಹಿಸಿಬಿಡೋಣ' ಎಂಬ ಕಾರಣದಿಂದ ಭಗವಂತನಾದ ಶ್ರೀರಾಮನು ಅವನೊಡನೆ ಸ್ನೇಹ ಬೆಳೆಸದೇ ಅವನನ್ನು ನಿಗ್ರಹಿಸಿದನು. ಹಾಗಾದರೆ ಇಂದ್ರನು ವಾಲಿಯ ರೂಪದಲ್ಲಿ ಅವತಾರಮಾಡಿದುದರಿಂದ ದೇವಕಾರ್ಯಕ್ಕೆ ಏನು ಪ್ರಯೋಜನವಾಯಿತು? ಎಂದರೆ ವಾಲಿಯು ಆ ಮೊದಲೇ ದುಂದುಭಿ, ಮಹಿಷ ಮುಂತಾದ ಅನೇಕ ದುಷ್ಟರಾಕ್ಷಸರನ್ನು ಸಂಹಾರಮಾಡಿ ದೇವಕಾರ್ಯವನ್ನು ಸಾಧಿಸಿದ್ದನು. ತನ್ನ ಸುಪುತ್ರನಾದ ಚಿರಂಜೀವಿ ಅಂಗದನನ್ನು ರಾಮನ ಸೇವೆಗೆ ಅರ್ಪಿಸಿದ್ದನು. ಅವನ ಸೇವೆ ಮುಗಿದ ಬಳಿಕ ಅವನು ಸ್ವಧಾಮಕ್ಕೆ ತೆರಳುವಂತೆ ಮಾಡುವುದೇ ಭಗವಂತನ ಉದ್ದೇಶವಾಗಿತ್ತು.

ಹೀಗೆ ಶ್ರೀರಾಮನು ಮಾಡಿದ ವಾಲಿವಧೆಯ ಪ್ರಸಂಗವನ್ನು ನಾನಾ ದೃಷ್ಟಿಗಳಿಂದ ವಿವೇಚಿಸಿದಾಗ ಅದು ಧರ್ಮಸಮ್ಮತ, ನ್ಯಾಯಸಮ್ಮತ, ದೈವಸಮ್ಮತ-ಎಂಬುದೇ ನಮ್ಮ ಸಿದ್ಧಾಂತವಾಗುತ್ತದೆ.

ವಾಲ್ಮೀಕಿಯೇ ಅದನ್ನು ಸ್ಪಷ್ಟವಾಗಿ ಹೇಳುವಾಗ ನಾವು ಏಕೆ ಅದರಲ್ಲಿ ಸಂಶಯಪಡಬೇಕು?

"ನ ದೋಷಂ ರಾಘವೇ ದಧ್ಯೌ ಧರ್ಮೇಽಧಿಗತನಿಶ್ಚಯಃ"

—ಕಿಷ್ಕಿಂಧಾಕಾಂಡ-೪೬-೧೮

ಬೆಂಗಳೂರು
ಫಾಲ್ಗುಣ ಶುದ್ಧ ತ್ರಯೋದಶಿ
1-3-1988

ವರದದೇಶಿಕಾಚಾರ್ಯರಂಗಪ್ರಿಯ
ಅಷ್ಟಾಂಗಯೋಗ ವಿಜ್ಞಾನ ಮಂದಿರಂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

# ಪ್ರಾತಃಸ್ಮರಣ ರಾಮಸ್ತೋತ್ರ

ಪ್ರಾತಸ್ಸ್ಮರಾಮಿ ರಘುನಾಥ ಮುಖಾರವಿಂದಂ
ಮಂದಸ್ಮಿತಂ ಮಧುರಭಾಷಿವಿಶಾಲಫಾಲಮ್ ।
ಕರ್ಣಾವಲಂಬಿಚಲಕುಂಡಲಗಂಡಭಾಗಂ
ಕರ್ಣಾಂತದೀರ್ಘನಯನಂ ನಯನಾಭಿರಾಮಮ್ ॥

ಪ್ರಾತಃಕಾಲದಲ್ಲಿ ಮಧುರಭಾಷಣದಿಂದಲೂ, ಮಂದಹಾಸದಿಂದಲೂ, ವಿಶಾಲವಾದ ಹಣೆಯಿಂದಲೂ, ಕಿವಿಗಳಲ್ಲಿ ಧರಿಸಿದ ಕುಂಡಲಗಳಿಂದ ಹೊಳೆಯುವ ಕಪೋಲಪ್ರದೇಶಗಳಿಂದಲೂ, ಕಿವಿಗಳವರೆಗೆ ಇರುವ ವಿಶಾಲವಾದ ಕಣ್ಣುಗಳಿಂದಲೂ ನಯನಮನೋಹರವಾಗಿ ಪ್ರಕಾಶಿಸುವ ರಘುಪತಿಯ ಮುಖಕಮಲವನ್ನು ಸ್ಮರಣೆಮಾಡುತ್ತೇನೆ.

ಪ್ರಾತರ್ಭಜಾಮಿ ರಘುನಾಥಕರಾರವಿಂದಂ
ರಕ್ಷೋಗಣಾಯ ಭಯದಂ ವರದಂ ನಿಜೇಭ್ಯಃ ।
ಯದ್ರಾಜಸಂಸದಿ ವಿಭಿದ್ಯ ಮಹೇಶಚಾಪಂ
ಸೀತಾಕರಗ್ರಹಣಮಂಗಲ ಮಾಪಸದ್ಯಃ ॥

ರಾಕ್ಷಸರಿಗೆ ಭಯದಾಯಕವಾದ, ಆಶ್ರಿತರಿಗೆ ವರಪ್ರದವಾದ, ರಾಜಾಧಿರಾಜರುಗಳ ಇದಿರಿನಲ್ಲಿ ಶಿವಧನುಸ್ಸನ್ನು ಭೇರಿಸಿದ, ಸೀತೆಯನ್ನು ಪರಿಗ್ರಹಣ ಮಾಡಿದ, ಮಂಗಳಕಗವಾದ ಶ್ರೀರಾಮನ ಕರಕಮಲವನ್ನು ಪ್ರಾತಃಕಾಲದಲ್ಲಿ ಭಜಿಸುತ್ತೇನೆ.

ಪ್ರಾತರ್ನಮಾಮಿ ರಘುನಾಥಪದಾರವಿಂದಂ
ಪದ್ಮಾಂಕುಶಾದಿಶುಭರೇಖಶುಭಾವಹಂ ಮೇ ।
ಯೋಗೀಂದ್ರಮಾನಸಮಧುವ್ರತಸೇವ್ಯಮಾನಂ
ಶಾಪಾಪಹಂ ಸಪದಿ ಗೌತಮಧರ್ಮಪತ್ನ್ಯಾಃ ॥

ಪದ್ಮ, ಅಂಕುಶ ಮುಂತಾದ ಶುಭರೇಖೆಗಳಿಂದ ಕೂಡಿದ, ಮಂಗಳದಾಯಕವಾದ, ಯೋಗಿಗಳ ಮನಸ್ಸೆಂಬ ಭ್ರಮರಗಳಿಂದ ಸೇವಿಸಿಕೊಳ್ಳುವ, ಗೌತಮನ ಧರ್ಮಪತ್ನಿಯಾದ ಅಹಲ್ಯೆಯ ಶಾಪವನ್ನು ಕ್ಷಣಮಾತ್ರದಲ್ಲಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.
ವಿಮೋಚನೆಮಾಡಿದ ಶ್ರೀರಾಮಚಂದ್ರನ ಪಾದಾರವಿಂದಗಳಿಗೆ ಪ್ರಾತಃಕಾಲ ದಲ್ಲಿ ನಮಸ್ಕರಿಸುತ್ತೇನೆ.

ಪ್ರಾತರ್ವದಾಮಿ ವಚಸಾ ರಘುನಾಥನಾಮ
ವಾಗ್ದೋಷಹಾರಿ ಸಕಲಂ ಕಲುಷನ್ನಿಹಂತ್ಯ ।
ಯತ್ಪಾರ್ವತೀ ಸ್ವಪತಿನಾ ಸಹಭೋಕ್ತುಕಾಮಾ
ಪ್ರೀತ್ಯಾ ಸಹಸ್ರಹರಿನಾಮಸಮಂ ಜಜಾಪ ॥

ನನ್ನ ಮಾತಿನಿಂದ ಇತರರಿಗೆ ಖೇದವಾಗಿ, ಅದರಿಂದ ಉಂಟಾಗಬಹುದಾದ ಪಾಪಗಳನ್ನು ನಿವಾರಣೆಮಾಡುವ, ಸಕಲ ಕರ್ಮೇಂದ್ರಿಯ-ಜ್ಞಾನೇಂದ್ರಿಯಗಳಿಂದ ಸಂಭವಿಸಬಹುದಾದ ಸಕಲಪಾಪಗಳನ್ನೂ ನಿವೃತ್ತಿಗೊಳಿಸುವ, ಲೋಕಮಾತೆಯಾದ ಪಾರ್ವತಿಯು ತನ್ನ ಪತಿಯೊಡನೆ ಪ್ರೀತಿಯಿಂದ ಸದಾ ಜಪಿಸಿ ರಸಾಸ್ವಾದನೆ ಮಾಡುತ್ತಿರುವ, ಸಹಸ್ರಹರಿನಾಮಕ್ಕೆ ಸಮನಾದ ರಾಮನಾಮವನ್ನು ಪ್ರಾತಃಕಾಲದಲ್ಲಿ ಪಠಿಸುತ್ತೇನೆ.

ಪ್ರಾತಃಶ್ರಯೇ ಶ್ರುತಿನುತಾಂ ರಘುನಾಥಮೂರ್ತಿಂ
ನೀಲಾಂಬುದೋತ್ಪಲಸಿತೇತರರತ್ನನೀಲಾಮ್ ।
ಆಮುಕ್ತಮೌಕ್ತಿಕವಿಶೇಷವಿಭೂಷಣಾಢ್ಯಾಂ
ಧ್ಯೇಯಾಂ ಸಮಸ್ತಮುನಿಭಿರ್ನಿಜಭೃತ್ಯಮುಖ್ಯೈಃ ॥

ವೇದಗಳಲ್ಲಿ ಸ್ತುತ್ಯನಾದವನೂ, ರಘುಶ್ರೇಷ್ಠನೂ, ಶ್ರೇಷ್ಠವಾದ ಇಂದ್ರನೀಲಮಣಿಯ ಕಾಂತಿಯಂತೆ ನೀಲಮೇಘಶ್ಯಾಮನೂ, ವಿಶೇಷವಾದ ಚಿತ್ರ-ವಿಚಿತ್ರ ಆಭರಣಗಳನ್ನು ಧರಿಸಿರುವವನೂ, ಸಮಸ್ತ ಋಷಿಗಳಿಂದಲೂ ಆಶ್ರಿತರಿಂದಲೂ ಸ್ತುತಿಸಿಕೊಳ್ಳುವವನೂ ಆದ ಶ್ರೀರಾಮಚಂದ್ರಮೂರ್ತಿಯನ್ನು ಪ್ರಾತಃಕಾಲದಲ್ಲಿ ಶರಣು ಹೊಂದುತ್ತೇನೆ.

ಯಃ ಶ್ಲೋಕಪಂಚಕಮಿದಂ ನಿಯತಃ ಪಠೇದ್ಯಃ
ನಿತ್ಯಂ ಪ್ರಭಾತಸಮಯೇ ಪುರುಷಃ ಪ್ರಬುದ್ಧಃ ।
ಶ್ರೀರಾಮ ಕಿಂಕರಜನೇಷು ಸ ಏವ ಮುಖ್ಯೋ
ಭೂತ್ವಾ ಪ್ರಯಾತಿ ಹರಿಲೋಕಮನನ್ಯಲಭ್ಯಮ್ ॥

ಯಾವ ಈ ಐದು ಶ್ಲೋಕಗಳನ್ನು ಯಾರು ಕ್ರಮವಾಗಿ ನಿತ್ಯವೂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.
ಪ್ರಾತಃಕಾಲದಲ್ಲಿ ಪಠನಮಾಡುವರೋ-ಅಂತಹ ಬುದ್ಧಿಶಾಲಿಗಳಾದ ಪುರುಷರು, ಶ್ರೀರಾಮಭಕ್ತರಲ್ಲಿ ಅಗ್ರಗಣ್ಯರಾಗಿ, ಇತರರಿಗೆ ಲಭಿಸಲು ಅಸಾಧ್ಯವಾದ ವೈಕುಂಠಲೋಕವನ್ನು ಹೊಂದುತ್ತಾರೆ.

——

## ಶ್ರೀ ಹನುಮದ್ವಿರಚಿತ ಶ್ರೀ ಸೀತಾರಾಮಸ್ತೋತ್ರ

ಅಯೋಧ್ಯಾಪುರನೇತಾರಂ ಮಿಥಿಲಾಪುರನಾಯಕೀಮ್ ।
ರಾಘವಾಣಾಮಲಂಕಾರಂ ವೈದೇಹೀ ನಾಮಲಂಕ್ರಿಯಾಮ್ ॥

ರಘೂಣಾಂ ಕುಲದೀಪಂ ಚ ನಿಮೀನಾಂ ಕುಲದೀಪಿಕಾಮ್ ।
ಸೂರ್ಯವಂಶಸಮುದ್ಭೂತಂ ಸೋಮವಂಶಸಮುದ್ಭವಾಮ್ ॥

ಪುತ್ರಂ ದಶರಥಸ್ಯಾಪಿ ಪುತ್ರೀಂ ಜನಕಭೂಪತೇಃ ।
ವಸಿಷ್ಠಾನುಮತಾಚಾರಂ ಶತಾನಂದಮತಾನುಗಾಮ್ ॥

ಕೌಸಲ್ಯಾಗರ್ಭಸಂಭೂತಂ ಭೂಮಿಗರ್ಭೋದಿತಾಂ ಸ್ವಯಮ್ ।
ಪುಂಡರೀಕವಿಶಾಲಾಕ್ಷಂ ಸ್ಫುರದಿಂದೀವರೇಕ್ಷಣಾಮ್ ॥

ಮತ್ತಮಾತಂಗಗಮನಂ ಮತ್ತಸಾರಸಗಾಮಿನೀಮ್ ।
ಚಂದನಾರ್ದ್ರಭುಜಾಮಧ್ಯಂ ಕುಂಕುಮಾಕ್ತಭುಜಾಂತರಾಮ್ ॥

ಚಾಪಾಲಂಕೃತ ಹಸ್ತಾಬ್ಜಂ ಪದ್ಮಾಲಂಕೃತಪಾಣಿಕಾಮ್ ।
ಸರ್ವಲೋಕವಿಧಾತಾರಂ ಸರ್ವಲೋಕವಿಧಾಯಿನೀಮ್ ॥

ಲೋಕಾಭಿರಾಮಂ ಶ್ರೀರಾಮಂ ಅಭಿರಾಮಾಂ ಚ ಮೈಥಿಲೀಮ್ ।
ದಿವ್ಯಸಿಂಹಾಸನರೂಢಂ ದಿವ್ಯಸ್ರಗ್ವಸ್ತ್ರಭೂಷಣಾಮ್ ॥

ಅನುಕ್ಷಣಂ ಕಟಾಕ್ಷಾಭ್ಯಾಂ ಅನ್ಯೋನ್ಯೇಕ್ಷಣಕಾಂಕ್ಷಿಣೌ ।
ಅನ್ಯೋನ್ಯಸದೃಶಾವೇತೌ ತ್ರೈಲೋಕ್ಯಗೃಹದಂಪತೀ ॥

ಇಮೌ ಯುವಾಂ ಪ್ರಣಮ್ಯಾಹಂ ಭಜಾಮ್ಯತಿಕೃತಾರ್ಥತಾಂ ।
ಅನಯಾ ಸ್ತೌತಿ ಯಸ್ಸ್ತುತ್ಯಾ ರಾಮಂ ಸೀತಾಂಚ ಭಕ್ತಿತಃ ॥

——

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.





# ಪಞ್ಚಮಃ ಸಂಪುಟಃ

# ಶ್ರೀಮದ್ವಾಲ್ಮೀಕಿರಾಮಾಯಣೇ-ಅರಣ್ಯಕಾಣ್ಡೇ

## ಅಷ್ಟಪಞ್ಚಾಶಃ ಸರ್ಗಃ

ತಪಃಸ್ವಾಧ್ಯಾಯನಿರತಂ ತಪಸ್ವೀ ವಾಗ್ವಿದಾಂ ವರಮ್ ।
ನಾರದಂ ಪರಿಪಪ್ರಚ್ಛ ವಾಲ್ಮೀಕಿರ್ಮುನಿಪುಂಗವಮ್ ॥

ಸ ದೃಷ್ಟ್ವಾ ಲಕ್ಷ್ಮಣಂ ದೀನಂ ಶೂನ್ಯಂ ದಶರಥಾತ್ಮಜಃ ।
ಪರ್ಯಪೃಚ್ಛತ ಧರ್ಮಾತ್ಮಾ ವೈದೇಹೀಮಾಗತಂ ವಿನಾ ॥೧॥

ಪ್ರಸ್ಥಿತಂ ದಣ್ಡಕಾರಣ್ಯಂ ಯಾ ಮಾಮನುಜಗಾಮ ಹ ।
ಕ್ವ ಸಾ ಲಕ್ಷ್ಮಣ ವೈದೇಹೀ ಯಾಂ ಹಿತ್ವಾ ತ್ವಮಿಹಾಗತಃ ॥೨॥

ರಾಜ್ಯಭ್ರಷ್ಟಸ್ಯ ದೀನಸ್ಯ ದಣ್ಡಕಾನ್ಪರಿಧಾವತಃ ।
ಕ್ವ ಸಾ ದುಃಖಸಹಾಯಾ ಮೇ ವೈದೇಹೀ ತನುಮಧ್ಯಮಾ ॥೩॥

ಯಾಂ ವಿನಾ ನೋತ್ಸಹೇ ವೀರ ಮುಹೂರ್ತಮಪಿ ಜೀವಿತುಮ್ ।
ಕ್ವ ಸಾ ಪ್ರಾಣಸಹಾಯಾ ಮೇ ಸೀತಾ ಸುರಸುತೋಪಮಾ ॥೪॥

ಪತಿತ್ವಮಮರಾಣಾಂ ಹಿ ಪೃಥಿವ್ಯಾಶ್ಚಾಪಿ ಲಕ್ಷ್ಮಣ ।
ವಿನಾ ತಾಂ ತಪನೀಯಾಭಾಂ ನೇಚ್ಛೇಯಂ ಜನಕಾತ್ಮಜಾಮ್ ॥೫॥

ಕಚ್ಚಿಜ್ಜೀವತಿ ವೈದೇಹೀ ಪ್ರಾಣೈಃ ಪ್ರಿಯತರಾ ಮಮ ।
ಕಚ್ಚಿತ್ಪ್ರವ್ರಾಜನಂ ವೀರ ನ ಮೇ ಮಿಥ್ಯಾ ಭವಿಷ್ಯತಿ ॥೬॥

ಸೀತಾನಿಮಿತ್ತಂ ಸೌಮಿತ್ರೇ ಮೃತೇ ಮಯಿ ಗತೇ ತ್ವಯಿ ।
ಕಚ್ಚಿತ್ಸಕಾಮಾ ಕೈಕೇಯೀ ಸುಖಿತಾ ಸಾ ಭವಿಷ್ಯತಿ ॥೭॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.

ಸಪುತ್ರರಾಜ್ಯಾಂ ಸಿದ್ಧಾರ್ಥಾಂ ಮೃತಪುತ್ರಾ ತಪಸ್ವಿನೀ ।
ಉಪಸ್ಥಾಸ್ಯತಿ ಕೌಸಲ್ಯಾ ಕಚ್ಚಿನ್ನ ಸೌಮ್ಯ ನ ಕೇಕಯೀಮ್ ॥೮॥

ಯದಿ ಜೀವತಿ ವೈದೇಹೀ ಗಮಿಷ್ಯಾಮ್ಯಾಶ್ರಮಂ ಪುನಃ ।
ಸುವೃತ್ತಾ ಯದಿ ವೃತ್ತಾ ಸಾ ಪ್ರಾಣಾಂಸ್ತ್ಯಕ್ಷ್ಯಾಮಿ ಲಕ್ಷ್ಮಣ ॥೯॥

ಯದಿ ಮಾಮಾಶ್ರಮಗತಂ ವೈದೇಹೀ ನಾಭಿಭಾಷತೇ ।
ಪುನಃ ಪ್ರಹಸಿತಾ ಸೀತಾ ವಿನಶಿಷ್ಯಾಮಿ ಲಕ್ಷ್ಮಣ ॥೧೦॥

ಬ್ರೂಹಿ ಲಕ್ಷ್ಮಣ ವೈದೇಹೀ ಯದಿ ಜೀವತಿ ವಾ ನ ವಾ ।
ತ್ವಯಿ ಪ್ರಮತ್ತೇ ರಕ್ಷೋಭಿರ್ಭಕ್ಷಿತಾ ವಾ ತಪಸ್ವಿನೀ ॥೧೧॥

ಸುಕುಮಾರೀ ಚ ಬಾಲಾ ಚ ನಿತ್ಯಂ ಚಾದುಃಖದರ್ಶಿನೀ ।
ಮದ್ವಿಯೋಗೇನ ವೈದೇಹೀ ವ್ಯಕ್ತಂ ಶೋಚತಿ ದುರ್ಮನಾಃ ॥೧೨॥

ಸರ್ವಥಾ ರಕ್ಷಸಾ ತೇನ ಜಿಹ್ಮೇನ ಸುದುರಾತ್ಮನಾ ।
ವದತಾ ಲಕ್ಷ್ಮಣೇತ್ಯುಚ್ಚೈಸ್ತವಾಪಿ ಜನಿತಂ ಭಯಮ್ ॥೧೩॥

ಶ್ರುತಸ್ತು ಶಙ್ಕೇ ವೈದೇಹ್ಯಾ ಸ ಸ್ವರಃ ಸದೃಶೋ ಮಮ ।
ತ್ರಸ್ತಯಾ ಪ್ರೇಷಿತಸ್ತ್ವಂ ಚ ದ್ರಷ್ಟುಂ ಮಾಂ ಶೀಘ್ರಮಾಗತಃ ॥

ಸರ್ವಥಾ ತು ಕೃತಂ ಕಷ್ಟಂ ಸೀತಾಮುತ್ಸೃಜತಾ ವನೇ ।
ಪ್ರತಿಕರ್ತುಂ ನೃಶಂಸಾನಾಂ ರಕ್ಷಸಾಂ ದತ್ತಮನ್ತರಮ್ ॥೧೫॥

ದುಃಖಿತಾಃ ಖರಘಾತೇನ ರಾಕ್ಷಸಾಃ ಪಿಶಿತಾಶನಾಃ ।
ತೈಃ ಸೀತಾ ನಿಹತಾ ಘೋರೈರ್ಭವಿಷ್ಯತಿ ನ ಸಂಶಯಃ ॥೧೬॥

ಅಹೋಽಸ್ಮಿನ್ವ್ಯಸನೇ ಮಗ್ನಃ ಸರ್ವಥಾ ರಿಪುನಾಶನ ।
ಕಿಂ ನ್ವಿದಾನೀಂ ಕರಿಷ್ಯಾಮಿ ಶಙ್ಕೇ ಪ್ರಾಪ್ತವ್ಯಮೀದೃಶಮ್ ॥

ಇತಿ ಸೀತಾಂ ವರಾರೋಹಾಂ ಚಿನ್ತಯನ್ನೇವ ರಾಘವಃ ।
ಆಜಗಾಮ ಜನಸ್ಥಾನಂ ತ್ವರಯಾ ಸಹಲಕ್ಷ್ಮಣಃ ॥೧೮॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ವಿಗರ್ಹಮಾಣೋಽನುಜಮಾರ್ತರೂಪಂ
ಕ್ಷುಧಾ ಶ್ರಮಾಚ್ಚೈವ ಪಿಪಾಸಯಾ ಚ ।
ವಿನಿಃಶ್ವಸನ್ ಶುಷ್ಕಮುಖೋ ವಿವರ್ಣಃ
ಪ್ರತಿಶ್ರಯಂ ಪ್ರಾಪ್ಯ ಸಮೀಕ್ಷ್ಯ ಶೂನ್ಯಮ್ ॥೧೯॥

ಸ್ವಮಾಶ್ರಮಂ ಸಂ ಪ್ರವಿಗಾಹ್ಯ ವೀರೋ
ವಿಹಾರದೇಶಾನನುಸೃತ್ಯ ಕಾಂಶ್ಚಿತ್ ।
ಏತತ್ತದಿತ್ಯೇವ ನಿವಾಸಭೂಮೌ
ಪ್ರಹೃಷ್ಟರೋಮಾ ವ್ಯಥಿತೋ ಬಭೂವ ॥೨೦॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯೇ ಆದಿಕಾವ್ಯೇ
ಅರಣ್ಯಕಾಣ್ಡೇ ಅಷ್ಟಪಞ್ಚಾಶಃ ಸರ್ಗಃ

—

## ಏಕೋನಷಷ್ಟಿತಮಃ ಸರ್ಗಃ

ಅಥಾಶ್ರಮಾದುಪಾವೃತ್ತಮನ್ತರಾ ರಘುನನ್ದನಃ ।
ಪರಿಪಪ್ರಚ್ಛ ಸೌಮಿತ್ರಿಂ ರಾಮೋ ದುಃಖಾದಿದಂ ವಚಃ ॥೧॥

ತಮುವಾಚ ಕಿಮರ್ಥಂ ತ್ವಮಾಗತೋಽಪಾಸ್ಯ ಮೈಥಿಲೀಮ್ ।
ಯದಾ ಸಾ ತವ ವಿಶ್ವಾಸಾದ್ವನೇ ವಿರಹಿತಾ ಮಯಾ ॥೨॥

ದೃಷ್ಟ್ವೈವಾಭ್ಯಾಗತಂ ತ್ವಾಂ ಮೇ ಮೈಥಿಲೀಂ ತ್ಯಜ್ಯ ಲಕ್ಷ್ಮಣ ।
ಶಙ್ಕಮಾನಂ ಮಹತ್ಪಾಪಂ ಯತ್ಸತ್ಯಂ ವ್ಯಥಿತಂ ಮನಃ ॥೩॥

ಸ್ಫುರತೇ ನಯನಂ ಸವ್ಯಂ ಬಾಹುಶ್ಚ ಹೃದಯಂ ಚ ಮೇ ।
ದೃಷ್ಟ್ವಾ ಲಕ್ಷ್ಮಣ ದೂರೇ ತ್ವಾಂ ಸೀತಾವಿರಹಿತಂ ಪಥಿ ॥೪॥

ಏವಮುಕ್ತಸ್ತು ಸೌಮಿತ್ರಿರ್ಲಕ್ಷ್ಮಣಃ ಶುಭಲಕ್ಷಣಃ ।
ಭೂಯೋ ದುಃಖಸಮಾವಿಷ್ಟೋ ದುಃಖಿತಂ ರಾಮಮಬ್ರವೀತ್ ॥

ನ ಸ್ವಯಂ ಕಾಮಕಾರೇಣ ತಾಂ ತ್ಯಕ್ತ್ವಾಹಮಿಹಾಗತಃ ।
ಪ್ರಚೋದಿತಸ್ತಯೈವೋಗ್ರೈಸ್ತ್ವತ್ಸಕಾಶಮಿಹಾಗತಃ ॥೬॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.

ಆರ್ಯೇಣೇವ ಪರಾಕ್ರುಷ್ಟಂ ಹಾ ಸೀತೇ ಲಕ್ಷ್ಮಣೇತಿ ಚ ।
ಪರಿತ್ರಾಹೀತಿ ಯದ್ವಾಕ್ಯಂ ಮೈಥಿಲ್ಯಾಸ್ತಚ್ಛ್ರುತಿಂ ಗತಮ್ ॥೭॥

ಸಾ ತಮಾರ್ತಸ್ವರಂ ಶ್ರುತ್ವಾ ತವ ಸ್ನೇಹೇನ ಮೈಥಿಲೀ ।
ಗಚ್ಛ ಗಚ್ಛೇತಿ ಮಾಮಾಹ ರುದತೀ ಭಯವಿಹ್ವಲಾ ॥೮॥

ಪ್ರಚೋದ್ಯಮಾನೇನ ಮಯಾ ಗಚ್ಛೇತಿ ಬಹುಶಸ್ತಯಾ ।
ಪ್ರತ್ಯುಕ್ತಾ ಮೈಥಿಲೀ ವಾಕ್ಯಮಿದಂ ತ್ವತ್ಪ್ರತ್ಯಯಾನ್ವಿತಮ್ ॥೯॥
ನ ತತ್ಪಶ್ಯಾಮ್ಯಹಂ ರಕ್ಷೋ ಯದಸ್ಯ ಭಯಮಾವಹೇತ್ ।
ನಿರ್ವೃತಾ ಭವ ನಾಸ್ತ್ಯೇತತ್ಕೇನಾಪ್ಯೇವಮುದಾಹೃತಮ್ ॥೧೦॥

ವಿಗರ್ಹಿತಂ ಚ ನೀಚಂ ಚ ಕಥಮಾರ್ಯೋಽಭಿಧಾಸ್ಯತಿ ।
ತ್ರಾಹೀತಿ ವಚನಂ ಸೀತೇ ಯಸ್ತ್ರಾಯೇತ್ತ್ರಿದಶಾನಪಿ ॥೧೧॥

ಕಿಂನಿಮಿತ್ತಂ ತು ಕೇನಾಪಿ ಭ್ರಾತುರಾಲಮ್ಬ್ಯ ಮೇ ಸ್ವರಮ್ ।
ವಿಸ್ವರಂ ವ್ಯಾಹೃತಂ ವಾಕ್ಯಂ ಲಕ್ಷ್ಮಣ ತ್ರಾಹಿ ಮಾಮಿತಿ ॥೧೨॥

ರಾಕ್ಷಸೇನೇರಿತಂ ವಾಕ್ಯಂ ತ್ರಾಸಾತ್ತ್ರಾಹೀತಿ ಶೋಭನೇ ।
ನ ಭವತ್ಯಾ ವ್ಯಥಾ ಕಾರ್ಯಾ ಕುನಾರೀಜನಸೇವಿತಾ ॥೧೩॥

ಅಲಂ ವೈಕ್ಲವ್ಯಮಾಲಮ್ಬ್ಯ ಸ್ವಸ್ಥಾ ಭವ ನಿರುತ್ಸುಕಾ ।
ನ ಸೋಽಸ್ತಿ ತ್ರಿಷು ಲೋಕೇಷು ಪುಮಾನ್ಯೋ ರಾಘವಂ ರಣೇ ॥

ಜಾತೋ ವಾ ಜಾಯಮಾನೋ ವಾ
ಸಂಯುಗೇ ಯಃ ಪರಾಜಯೇತ್ ।
ಅಜೇಯೋ ರಾಘವೋ ಯುದ್ಧೇ
ದೇವೈಃ ಶಕ್ರಪುರೋಗಮೈಃ ॥೧೪॥

ಏವಮುಕ್ತಾ ತು ವೈದೇಹೀ ಪರಿಮೋಹಿತಚೇತನಾ ।
ಉವಾಚಾಶ್ರೂಣಿ ಮುಞ್ಚನ್ತೀ ದಾರುಣಂ ಮಾಮಿದಂ ವಚಃ ॥೧೫॥

ಭಾವೋ ಮಯಿ ತವಾತ್ಯರ್ಥಂ ಪಾಪ ಏವ ನಿವೇಶಿತಃ ।
ವಿನಷ್ಟೇ ಭ್ರಾತರಿ ಪ್ರಾಪ್ತುಂ ನ ಚ ತ್ವಂ ಮಾಮವಾಪ್ಸ್ಯಸೇ ॥೧೬॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.


ಸಂಕೇತಾದ್ಭರತೇನ ತ್ವಂ ರಾಮಂ ಸಮನುಗಚ್ಛಸಿ ।
ಕ್ರೋಶನ್ತಂ ಹಿ ಯಥಾತ್ಯರ್ಥಂ ನೈವಮಭ್ಯವಪದ್ಯಸೇ ॥೧೮॥

ರಿಪುಃ ಪ್ರಚ್ಛನ್ನಚಾರೀ ತ್ವಂ ಮದರ್ಥಮನುಗಚ್ಛಸಿ ।
ರಾಘವಸ್ಯಾನ್ತರಪ್ರೇಪ್ಸುಸ್ತಥೈನಂ ನಾಭಿಪದ್ಯಸೇ ॥೧೯॥

ಏವಮುಕ್ತೋ ಹಿ ವೈದೇಹ್ಯಾ ಸಂರಬ್ಧೋ ರಕ್ತಲೋಚನಃ ।
ಕ್ರೋಧಾತ್ಪ್ರಸ್ಫುರಮಾಣೋಷ್ಠ ಆಶ್ರಮಾದಭಿನಿರ್ಗತಃ ॥೨೦॥

ಏವಂ ಬ್ರುವಾಣಂ ಸೌಮಿತ್ರಿಂ ರಾಮಃ ಸಂತಾಪಮೋಹಿತಃ ।
ಅಬ್ರವೀದ್ದುಷ್ಕೃತಂ ಸೌಮ್ಯ ತಾಂ ವಿನಾ ಯತ್ತ್ವಮಾಗತಃ ॥೨೧॥

ಜಾನನ್ನಪಿ ಸಮರ್ಥಂ ಮಾಂ ರಕ್ಷಸಾಂ ವಿನಿವಾರಣೇ ।
ಅನೇನ ಕ್ರೋಧವಾಕ್ಯೇನ ಮೈಥಿಲ್ಯಾ ನಿಃಸೃತೋ ಭವಾನ್ ॥೨೨॥

ನ ಹಿ ತೇ ಪರಿತುಷ್ಯಾಮಿ ತ್ಯಕ್ತ್ವಾ ಯದ್ಯಾಸಿ ಮೈಥಿಲೀಮ್ ।
ಕ್ರುದ್ಧಾಯಾಃ ಪರುಷಂ ಶ್ರುತ್ವಾ ಸ್ತ್ರಿಯಾ ಯತ್ತ್ವಮಿಹಾಗತಃ ॥

ಸರ್ವಥಾ ತ್ವಪನೀತಂ ತೇ ಸೀತಯಾ ಯತ್ಪ್ರಚೋದಿತಃ ।
ಕ್ರೋಧಸ್ಯ ವಶಮಾಪನ್ನಃ ನಾಕರೋಃ ಶಾಸನಂ ಮಮ ॥೨೪॥

ಅಸೌ ಹಿ ರಾಕ್ಷಸಃ ಶೇತೇ ಶರೇಣಾಭಿಹತೋ ಮಯಾ ।
ಮೃಗರೂಪೇಣ ಯೇನಾಹಮಾಶ್ರಮಾದಪವಾಹಿತಃ ॥೨೫॥

ವಿಕೃಷ್ಯ ಚಾಪಂ ಪರಿಧಾಯ ಸಾಯಕಂ
ಸಲೀಲಬಾಣೇನ ಚ ತಾಡಿತೋ ಮಯಾ ।
ಮಾರ್ಗೀಂ ತನುಂ ತ್ಯಜ್ಯ ಸ ವಿಕ್ಲವಸ್ವರೋ
ಬಭೂವ ಕೇಯೂರಧರಃ ಸ ರಾಕ್ಷಸಃ ॥೨೬॥

ಶರಾಹತೇನೈವ ತದಾರ್ತಯಾ ಗಿರಾ
ಸ್ವರಂ ಸಮಾಲಮ್ಬ್ಯ ಸುದೂರಸಂಶ್ರವಮ್ ।

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಉದಾಹೃತಂ ತದ್ವಚನಂ ಸುದಾರುಣಂ
ತ್ವಮಾಗತೋ ಯೇನ ವಿಹಾಯ ಮೈಥಿಲೀಮ್ ॥೨೭॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯೇ ಆದಿಕಾವ್ಯೇ.
ಅರಣ್ಯಕಾಣ್ಡೇ ಏಕೋನಷಷ್ಟಿತಮಃ ಸರ್ಗಃ

——

## ಷಷ್ಟಿತಮಃ ಸರ್ಗಃ

ಭೃಶಮಾವ್ರಜಮಾನಸ್ಯ ತಸ್ಯಾಧೋವಾಮಲೋಚನಮ್ ।
ಪ್ರಾಸ್ಫುರಚ್ಚಾಸ್ಖಲದ್ರಾಮೋ ವೇಪಥುಶ್ಚಾಪ್ಯಜಾಯತ ॥೧॥

ಉಪಾಲಕ್ಷ್ಯ ನಿಮಿತ್ತಾನಿ ಸೋಽಶುಭಾನಿ ಮುಹುರ್ಮುಹುಃ ।
ಅಪಿ ಕ್ಷೇಮಂ ನು ಸೀತಾಯಾ ಇತಿ ವೈ ವ್ಯಾಜಹಾರ ಚ ॥೨॥

ತ್ವರಮಾಣೋ ಜಗಾಮಾಥ ಸೀತಾದರ್ಶನಲಾಲಸಃ ।
ಶೂನ್ಯಮಾವಸಥಂ ದೃಷ್ಟ್ವಾ ಬಭೂವೋದ್ವಿಗ್ನಮಾನಸಃ ॥೩॥

ಉದ್ಭ್ರಮನ್ನಿವ ವೇಗೇನ ವಿಕ್ಷಿಪನ್ರಘುನನ್ದನಃ ।
ತತ್ರ ತತ್ರೋಟಜಸ್ಥಾನಮಭಿವೀಕ್ಷ್ಯ ಸಮನ್ತತಃ ॥೪॥

ದದರ್ಶ ಪರ್ಣಶಾಲಾಂ ಚ ಸೀತಯಾ ರಹಿತಾಂ ತದಾ ।
ಶ್ರಿಯಾ ವಿರಹಿತಾಂ ಧ್ವಸ್ತಾಂ ಹೇಮನ್ತೇ ಪದ್ಮಿನೀಮಿವ ॥೫॥

ರುದನ್ತಮಿವ ವೃಕ್ಷೈಶ್ಚ ಮ್ಲಾನಪುಷ್ಪಮೃಗದ್ವಿಜಮ್ ।
ಶ್ರಿಯಾ ವಿಹೀನಂ ವಿಧ್ವಸ್ತಂ ಸಂತ್ಯಕ್ತ ವನದೇವತಮ್ ॥೬॥

ವಿಪ್ರಕೀರ್ಣಾಜಿನಕುಶಂ ವಿಪ್ರವಿದ್ಧಬೃಸೀಕಟಮ್ ।
ದೃಷ್ಟ್ವಾ ಶೂನ್ಯಂ ನಿಜಸ್ಥಾನಂ ವಿಲಲಾಪ ಪುನಃ ಪುನಃ ॥೭॥

ಹೃತಾ ಮೃತಾ ವಾ ನಷ್ಟಾ ವಾ ಭಕ್ಷಿತಾ ವಾ ಭವಿಷ್ಯತಿ ।
ನಿಲೀನಾಪ್ಯಥವಾ ಭೀರುರಥ ವಾ ವನಮಾಶ್ರಿತಾ ॥೮॥

ಗತಾ ವಿಚೇತುಂ ಪುಷ್ಪಾಣಿ ಫಲಾನ್ಯಪಿ ಚ ವಾ ಪುನಃ ।
ಅಥ ವಾ ಪದ್ಮಿನೀಂ ಯಾತಾ ಜಲಾರ್ಥಂ ವಾ ನದೀಂ ಗತಾ ॥೯॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri


ಯತ್ನಾನ್ಮೃಗಯಮಾಣಸ್ತು ನಾಸಸಾದ ವನೇ ಪ್ರಿಯಾಮ್ ।
ಶೋಕರಕ್ತೇಕ್ಷಣಃ ಶ್ರೀಮಾನುನ್ಮತ್ತ ಇವ ಲಕ್ಷ್ಯತೇ ॥೧೦॥

ವೃಕ್ಷಾದ್ವೃಕ್ಷಂ ಪ್ರಧಾವನ್ಸ ಗಿರೀಂಶ್ಚಾಪಿ ನದಾನ್ನದೀಮ್ ।
ಬಭ್ರಾಮ ವಿಲಪನ್ರಾಮಃ ಶೋಕಪಙ್ಕಾರ್ಣವಾಪ್ಲುತಃ ॥೧೧॥

ಅಪಿ ಕಚ್ಚಿತ್ತ್ವಯಾ ದೃಷ್ಟಾ ಸಾ ಕದಮ್ಬಪ್ರಿಯಾ ಪ್ರಿಯಾ ।
ಕದಮ್ಬ ಯದಿ ಜಾನೀಷೇ ಶಂಸ ಸೀತಾಂ ಶುಭಾನನಾಮ್ ॥೧೨॥

ಸ್ನಿಗ್ಧಪಲ್ಲವಸಂಕಾಶಾ ಪೀತಕೌಶೇಯವಾಸಿನೀ ।
ಶಂಸಸ್ವ ಯದಿ ವಾ ದೃಷ್ಟಾ ಬಿಲ್ವ ಬಿಲ್ವೋಪಮಸ್ತನೀ ॥೧೩॥

ಅಥ ವಾರ್ಜುನ ಶಂಸ ತ್ವಂ ಪ್ರಿಯಾಂ ತಾಮರ್ಜುನಪ್ರಿಯಾಮ್ ।
ಜನಕಸ್ಯ ಸುತಾ ಭೀರುಃ ಯದಿ ಜೀವತಿ ವಾ ನ ವಾ ॥೧೪॥

ಕಕುಭಃ ಕಕುಭೋರೂಂ ತಾಂ ವ್ಯಕ್ತಂ ಜಾನಾತಿ ಮೈಥಿಲೀಮ್ ।
ಯಥಾ ಪಲ್ಲವಪುಷ್ಪಾಢ್ಯೋ ಭಾತಿ ಹ್ಯೇಷ ವನಸ್ಪತಿಃ ॥೧೫॥

ಭ್ರಮರೈರುಪಗೀತಶ್ಚ ಯಥಾ ದ್ರುಮವರೋ ಹ್ಯಯಮ್ ।
ಏಷ ವ್ಯಕ್ತಂ ವಿಜಾನಾತಿ ತಿಲಕಸ್ತಿಲಕಪ್ರಿಯಾಮ್ ॥೧೬॥

ಅಶೋಕ ಶೋಕಾಪನುದ ಶೋಕೋಪಹತಚೇತಸಮ್ ।
ತ್ವನ್ನಾಮಾನಂ ಕುರು ಕ್ಷಿಪ್ರಂ ಪ್ರಿಯಾಸಂದರ್ಶನೇನ ಮಾಮ್ ॥

ಯದಿ ತಾಲ ತ್ವಯಾ ದೃಷ್ಟಾ ಪಕ್ವತಾಲಫಲಸ್ತನೀ ।
ಕಥಯಸ್ವ ವರಾರೋಹಾಂ ಕಾರುಣ್ಯಂ ಯದಿ ತೇ ಮಯಿ ॥೧೮॥

ಯದಿ ದೃಷ್ಟಾ ತ್ವಯಾ ಸೀತಾ ಜಮ್ಬು ಜಾಮ್ಬೂನದಪ್ರಭಾ ।
ಪ್ರಿಯಾಂ ಯದಿ ವಿಜಾನೀಷೇ ನಿಃಶಙ್ಕಂ ಕಥಯಸ್ವ ಮೇ ॥೧೯॥

ಅಹೋ ತ್ವಂ ಕರ್ಣಿಕಾರಾದ್ಯ ಸುಪುಷ್ಪೈಃ ಶೋಭಸೇ ಭೃಶಮ್ ।
ಕರ್ಣಿಕಾರಪ್ರಿಯಾಂ ಸಾಧ್ವೀಂ ಶಂಸ ದೃಷ್ಟಾ ಪ್ರಿಯಾ ಯದಿ ॥೨೦॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಚೂತನೀಪಮಹಾಸಾಲಾನ್ಪನಸಾನ್ಕುರವಾನ್ಧವಾನ್ ।
ದಾಡಿಮಾನಸನಾನ್ಗತ್ವಾ ದೃಷ್ಟ್ವಾ ರಾಮೋ ಮಹಾಯಶಾಃ ॥೨೧॥

ವಕುಲಾನಥ ಪುನ್ನಾಗಾಂಶ್ಚನ್ದನಾನ್ಕೇತಕಾಂಸ್ತಥಾ ।
ಪೃಚ್ಛನ್ರಾಮೋ ವನೇ ಭ್ರಾನ್ತ ಉನ್ಮತ್ತ ಇವ ಲಕ್ಷ್ಯತೇ ॥೨೨॥

ಅಥ ವಾ ಮೃಗಶಾಬಾಕ್ಷೀಂ ಮೃಗ ಜಾನಾಸಿ ಮೈಥಿಲೀಮ್ ।
ಮೃಗವಿಪ್ರೇಕ್ಷಣೀ ಕಾನ್ತಾ ಮೃಗೀಭಿಃ ಸಹಿತಾ ಭವೇತ್ ॥೨೩॥

ಗಜ ಸಾ ಗಜನಾಸೋರುರ್ಯದಿ ದೃಷ್ಟಾ ತ್ವಯಾ ಭವೇತ್ ।
ತಾಂ ಮನ್ಯೇ ವಿದಿತಾಂ ತುಭ್ಯಮಾಖ್ಯಾಹಿ ವರವಾರಣ ॥೨೪॥

ಶಾರ್ದೂಲ ಯದಿ ಸಾ ದೃಷ್ಟಾ ಪ್ರಿಯಾ ಚನ್ದ್ರನಿಭಾನನಾ ।
ಮೈಥಿಲೀ ಮಮ ವಿಸ್ರಬ್ಧಂ ಕಥಯಸ್ವ ನ ತೇ ಭಯಮ್ ॥೨೫॥

ಕಿಂ ಧಾವಸಿ ಪ್ರಿಯೇ ದೂರಂ ದೃಷ್ಟಾಸಿ ಕಮಲೇಕ್ಷಣೇ ।
ವೃಕ್ಷೈರಾಚ್ಛಾದ್ಯ ಚಾತ್ಮಾನಂ ಕಿಂ ಮಾಂ ನ ಪ್ರತಿಭಾಷಸೇ ॥೨೬॥

ತಿಷ್ಠ ತಿಷ್ಠ ವರಾರೋಹೇ ನ ತೇಽಸ್ತಿ ಕರುಣಾ ಮಯಿ ।
ನಾತ್ಯರ್ಥಂ ಹಾಸ್ಯಶೀಲಾಸಿ ಕಿಮರ್ಥಂ ಮಾಮುಪೇಕ್ಷಸೇ ॥೨೭॥

ಪೀತಕೌಶೇಯಕೇನಾಸಿ ಸೂಚಿತಾ ವರವರ್ಣಿನಿ ।
ಧಾವನ್ತ್ಯಪಿ ಮಯಾ ದೃಷ್ಟಾ ತಿಷ್ಠ ಯದ್ಯಸ್ತಿ ಸೌಹೃದಮ್ ॥೨೮॥

ನೈವ ಸಾ ನೂನಮಥ ವಾ ಹಿಂಸಿತಾ ಚಾರುಹಾಸಿನೀ ।
ಕೃಚ್ಛ್ರಂ ಪ್ರಾಪ್ತಂ ನ ಮಾಂ ನೂನಂ ಯಥೋಪೇಕ್ಷಿತುಮರ್ಹತಿ॥

ವ್ಯಕ್ತಂ ಸಾ ಭಕ್ಷಿತಾ ಬಾಲಾ ರಾಕ್ಷಸೈಃ ಪಿಶಿತಾಶನೈಃ ।
ವಿಭಜ್ಯಾಙ್ಗಾನಿ ಸರ್ವಾಣಿ ಮಯಾ ವಿರಹಿತಾ ಪ್ರಿಯಾ ॥೩೦॥

ನೂನಂ ತಚ್ಛುಭದನ್ತೋಷ್ಠಂ ಸುನಾಸಂ ಚಾರುಕುಣ್ಡಲಮ್ ।
ಪೂರ್ಣಚನ್ದ್ರಮಿವ ಗ್ರಸ್ತಂ ಮುಖಂ ನಿಷ್ಪ್ರಭತಾಂ
ಗತಮ್ ॥೩೧॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

ಸಾ ಹಿ ಚನ್ದನವರ್ಣಾಭಾ ಗ್ರೀವಾ ಗ್ರೈವೇಯಶೋಭಿತಾ ।
ಕೋಮಲಾ ವಿಲಪನ್ತ್ಯಾಸ್ತು ಕಾನ್ತಾಯಾ ಭಕ್ಷಿತಾ ಶುಭಾ ॥೩೨॥

ನೂನಂ ವಿಕ್ಷಿಪ್ಯಮಾಣೌ ತೌ ಬಾಹೂ ಪಲ್ಲವಕೋಮಲೌ ।
ಭಕ್ಷಿತೌ ವೇಪಮಾನಾಗ್ರೌ ಸಹಸ್ತಾಭರಣಾಙ್ಗದೌ ॥೩೩॥

ಮಯಾ ವಿರಹಿತಾ ಬಾಲಾ ರಕ್ಷಸಾಂ ಭಕ್ಷಣಾಯ ವೈ ।
ಸಾರ್ಥೇನೇವ ಪರಿತ್ಯಕ್ತಾ ಭಕ್ಷಿತಾ ಬಹುಬಾನ್ಧವಾ ॥೩೪॥

ಹಾ ಲಕ್ಷ್ಮಣ ಮಹಾಬಾಹೋ ಪಶ್ಯಸಿ ತ್ವಂ ಪ್ರಿಯಾಂ ಕ್ವಚಿತ್ ।
ಹಾ ಪ್ರಿಯೇ ಕ್ವ ಗತಾ ಭದ್ರೇ ಹಾ ಸೀತೇತಿ ಪುನಃ ಪುನಃ ॥೩೫॥

ಇತ್ಯೇವಂ ವಿಲಪನ್ರಾಮಃ ಪರಿಧಾವನ್ವನಾದ್ವನಮ್ ।
ಕ್ವಚಿದುದ್ಭ್ರಮತೇ ವೇಗಾತ್ಕ್ವಚಿದ್ವಿಭ್ರಮತೇ ಬಲಾತ್ ।
ಕ್ವಚಿನ್ಮತ್ತ ಇವಾಭಾತಿ ಕಾನ್ತಾನ್ವೇಷಣತತ್ಪರಃ ॥೩೬॥

ಸ ವನಾನಿ ನದೀಃ ಶೈಲಾನ್ಗಿರಿಪ್ರಸ್ರವಣಾನಿ ಚ ।
ಕಾನನಾನಿ ಚ ವೇಗೇನ ಭ್ರಮತ್ಯಪರಿಸಂಸ್ಥಿತಃ ॥೩೭॥

ತಥಾ ಸ ಗತ್ವಾ ವಿಪುಲಂ ಮಹದ್ವನಂ
ಪರೀತ್ಯ ಸರ್ವಂ ತ್ವಥ ಮೈಥಿಲೀಂ ಪ್ರತಿ
ಅನಿಷ್ಠಿತಾಶಃ ಸ ಚಕಾರ ಮಾರ್ಗಣೇ
ಪುನಃ ಪ್ರಿಯಾಯಾಃ ಪರಮಂ ಪರಿಶ್ರಮಮ್ ॥೩೮॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯೇ ಆದಿಕಾವ್ಯೇ
ಅರಣ್ಯಕಾಣ್ಡೇ ಷಷ್ಟಿತಮಃ ಸರ್ಗಃ

---

## ಏಕಷಷ್ಟಿತಮಃ ಸರ್ಗಃ

ದೃಷ್ಟ್ವಾಶ್ರಮಪದಂ ಶೂನ್ಯಂ ರಾಮೋ ದಶರಥಾತ್ಮಜಃ ।
ರಹಿತಾಂ ಪರ್ಣಶಾಲಾಂ ಚ ವಿಧ್ವಸ್ತಾನ್ಯಾಸನಾನಿ ಚ ॥೧॥

ಅದೃಷ್ಟ್ವಾ ತತ್ರ ವೈದೇಹೀಂ ಸುನಿರೀಕ್ಷ್ಯ ಚ ಸರ್ವಶಃ ।
ಉವಾಚ ರಾಮಃ ಪ್ರಾಕ್ರುಶ್ಯ ಪ್ರಗೃಹ್ಯ ರುಚಿರೌ ಭುಜೌ ॥೨॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಕ್ವ ನು ಲಕ್ಷ್ಮಣ ವೈದೇಹೀ ಕಂ ವಾ ದೇಶಮಿತೋ ಗತಾ ।
ಕೇನಾಹೃತಾ ವಾ ಸೌಮಿತ್ರೇ ಭಕ್ಷಿತಾ ಕೇನ ವಾ ಪ್ರಿಯಾ ॥೩॥

ವೃಕ್ಷೇಣಾವಾರ್ಯ ಯದಿ ಮಾಂ ಸೀತೇ ಹಸಿತುಮಿಚ್ಛಸಿ ।
ಅಲಂ ತೇ ಹಸಿತೇನಾದ್ಯ ಮಾಂ ಭಜಸ್ವ ಸುದುಃಖಿತಮ್ ॥೪॥

ಯೈಃ ಪರಿಕ್ರೀಡಸೇ ಸೀತೇ ವಿಶ್ವಸ್ತೈರ್ಮೃಗಪೋತಕೈಃ ।
ಏತೇ ಹೀನಾಸ್ತ್ವಯಾ ಸೌನ್ಯೇ ಧ್ಯಾಯನ್ತ್ಯಸ್ರಾವಿಲೇಕ್ಷಣಾಃ ॥೫॥

ಸೀತಯಾ ರಹಿತೋಽಹಂ ವೈ ಸ ಹಿ ಜೀವಾಮಿ ಲಕ್ಷ್ಮಣ ।
ಮೃತಂ ಶೋಕೇನ ಮಹತಾ ಸೀತಾಹರಣಜೇಸ ಮಾಮ್ ।
ಪರಲೋಕೇ ಮಹಾರಾಜೋ ನೂನಂ ದ್ರಕ್ಷ್ಯತಿ ಮೇ ಪಿತಾ ॥೬॥

ಕಥಂ ಪ್ರತಿಜ್ಞಾಂ ಸಂಶ್ರುತ್ಯ ಮಯಾ ತ್ವಮಭಿಯೋಜಿತಃ ।
ಅಪೂರಯಿತ್ವಾ ತಂ ಕಾಲಂ ಮತ್ಸಕಾಶಮಿಹಾಗತಃ ॥೭॥

ಕಾಮವೃತ್ತಮನಾರ್ಯಂ ಮಾಂ ಮೃಷಾವಾದಿನಮೇವ ಚ ।
ಧಿಕ್ತ್ವಾಮಿತಿ ಪರೇ ಲೋಕೇ ವ್ಯಕ್ತಂ ವಕ್ಷ್ಯತಿ ಮೇ ಪಿತಾ ॥೮॥

ವಿವಶಂ ಶೋಕಸಂತಪ್ತಂ ದೀನಂ ಭಗ್ನಮನೋರಥಮ್ ।
ಮಾಮಿಹೋತ್ಸೃಜ್ಯ ಕರುಣಂ ಕೀರ್ತಿರ್ನರಮಿವಾನೃಜುಮ್ ॥೯॥

ಕ್ವ ಗಚ್ಛಸಿ ವರಾರೋಹೇ ಮಾಂ ನೋತ್ಸೃಜ ಸುಮಧ್ಯಮೇ ।
ತ್ವಯಾ ವಿರಹಿತಶ್ಚಾಹಂ ತ್ಯಕ್ಷ್ಯೇ ಜೀವಿತಮಾತ್ಮನಃ ॥೧೦॥

ಇತೀವ ವಿಲಪನ್ರಾಮಃ ಸೀತಾದರ್ಶನಲಾಲಸಃ ।
ನ ದದರ್ಶ ಸುದುಃಖಾರ್ತೋ ರಾಘವೋ ಜನಕಾತ್ಮಜಾಮ್ ॥೧೧॥

ಅನಾಸಾದಯಮಾನಂ ತಂ ಸೀತಾಂ ಶೋಕಪರಾಯಣಮ್ ।
ಪಙ್ಕಮಾಸಾದ್ಯ ವಿಪುಲಂ ಸೀದನ್ತಮಿವ ಕುಞ್ಜರಮ್ ।
ಲಕ್ಷ್ಮಣೋ ರಾಮಮತ್ಯರ್ಥಮುವಾಚ ಹಿತಕಾಮ್ಯಯಾ ॥೧೨॥

ಮಾ ವಿಷಾದಂ ಮಹಾಬಾಹೋ ಕುರು ಯತ್ನಂ ಮಯಾ ಸಹ ।
ಇದಂ ಚ ಹಿ ವನಂ ವೀರ ಬಹುಕನ್ದರಶೋಭಿತಮ್ ॥೧೩॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.


ಪ್ರಿಯಕಾನನಸಂಚಾರಾ ವನೋನ್ಮತ್ತಾ ಚ ಮೈಥಿಲೀ ।
ಸಾ ವನಂ ವಾ ಪ್ರವಿಷ್ಟಾ ಸ್ಯಾನ್ನಲಿನೀಂ ವಾ ಸುಪುಷ್ಪಿತಾಮ್ ॥

ಸರಿತಂ ವಾಪಿ ಸಂಪ್ರಾಪ್ತಾ ಮೀನವಂಜುಲಸೇವಿತಾಮ್ ।
ಸ್ನಾತುಕಾಮಾ ನಿಲೀನಾ ಸ್ಯಾದ್ಹಾಸಕಾಮಾ ವನೇ ಕ್ವಚಿತ್ ।
ವಿತ್ರಾಸಯಿತುಕಾಮಾ ವಾ ಲೀನಾ ಸ್ಯಾತ್ಕಾನನೇ ಕ್ವಚಿತ್ ॥೧೫॥

ಜಿಜ್ಞಾಸಮಾನಾ ವೈದೇಹೀ ತ್ವಾಂ ಮಾಂ ಚ ಪುರುಷರ್ಷಭ ।
ತಸ್ಯಾ ಹ್ಯನ್ವೇಷಣೇ ಶ್ರೀಮನ್ಕ್ಷಿಪ್ರಮೇವ ಯತಾವಹೈ ॥೧೬॥

ವನಂ ಸರ್ವಂ ವಿಚಿನುವೋ ಯತ್ರ ಸಾ ಜನಕಾತ್ಮಜಾ ।
ಮನ್ಯಸೇ ಯದಿ ಕಾಕುತ್ಸ್ಥ ಮಾ ಸ್ಮ ಶೋಕೇ ಮನಃ ಕೃಥಾಃ॥೧೭॥

ಏವಮುಕ್ತಸ್ತು ಸೌಹಾರ್ದಾಲ್ಲಕ್ಷ್ಮಣೇನ ಸಮಾಹಿತಃ ।
ಸಹ ಸೌಮಿತ್ರಿಣಾ ರಾಮೋ ವಿಚೇತುಮುಪಚಕ್ರಮೇ ॥೧೮॥

ತೌ ವನಾನಿ ಗಿರೀಂಶ್ಚೈವ ಸರಿತಶ್ಚ ಸರಾಂಸಿ ಚ ।
ನಿಖಿಲೇನ ವಿಚಿನ್ವಾನೌ ಸೀತಾಂ ದಶರಥಾತ್ಮಜೌ ॥೧೯॥

ತಸ್ಯ ಶೈಲಸ್ಯ ಸಾನೂನಿ ಗುಹಾಶ್ಚ ಶಿಖರಾಣಿ ಚ ।
ನಿಖಿಲೇನ ವಿಚಿನ್ವಾನೌ ನೈವ ತಾಮಭಿಜಗ್ಮತುಃ ॥೨೦॥

ವಿಚಿತ್ಯ ಸರ್ವತಃ ಶೈಲಂ ರಾಮೋ ಲಕ್ಷ್ಮಣಮಬ್ರವೀತ್ ।
ನೇಹ ಪಶ್ಯಾಮಿ ಸೌಮಿತ್ರೇ ವೈದೇಹೀಂ ಪರ್ವತೇ ಶುಭಾಮ್ ॥

ತತೋ ದುಃಖಾಭಿಸಂತಪ್ತೋ ಲಕ್ಷ್ಮಣೋ ವಾಕ್ಯಮಬ್ರವೀತ್ ।
ವಿಚರನ್ದಂಡಕಾರಣ್ಯಂ ಭ್ರಾತರಂ ದೀಪ್ತತೇಜಸಮ್ ॥೨೨॥

ಪ್ರಾಪ್ಸ್ಯಸಿ ತ್ವಂ ಮಹಾಪ್ರಾಜ್ಞ ಮೈಥಿಲೀಂ ಜನಕಾತ್ಮಜಾಮ್ ।
ಯಥಾ ವಿಷ್ಣುರ್ಮಹಾಬಾಹುರ್ಬಲಿಂ ಬದ್ಧ್ವಾ
ಮಹೀಮಿಮಾಮ್॥೨೩॥

ಏವಮುಕ್ತಸ್ತು ಸೌಹಾರ್ದಾಲ್ಲಕ್ಷ್ಮಣೇನ ಸ ರಾಘವಃ ।
ಉವಾಚ ದೀನಯಾ ವಾಚಾ ದುಃಖಾಭಿಹತಚೇತನಃ ॥೨೪॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ವನಂ ಸರ್ವಂ ಸುವಿಚಿತಂ ಪದ್ಮಿನ್ಯಃ ಫುಲ್ಲಪಙ್ಕಜಾಃ ।
ಗಿರಿಶ್ಚಾಯಂ ಮಹಾಪ್ರಾಜ್ಞ ಬಹುಕಂದರನಿರ್ಝರಃ ।
ನ ಹಿ ಪಶ್ಯಾಮಿ ವೈದೇಹೀಂ ಪ್ರಾಣೇಭ್ಯೋಽಪಿ ಗರೀಯಸೀಮ್ ॥

ಏವಂ ಸ ವಿಲಪನ್ರಾಮಃ ಸೀತಾಹರಣಕರ್ಶಿತಃ ।
ದೀನಃ ಶೋಕಸಮಾವಿಷ್ಟೋ ಮುಹೂರ್ತಂ ವಿಹ್ವಲೋಽಭವತ್ ॥

ಸ ವಿಹ್ವಲಿತಸರ್ವಾಙ್ಗೋ ಗತಬುದ್ಧಿರ್ವಿಚೇತನಃ ।
ವಿಷಸಾದಾತುರೋ ದೀನೋ ನಿಃಶ್ವಸ್ಯಾಶೀತಮಾಯತಮ್ ॥೨೭॥

ಬಹುಲಂ ಸ ತು ನಿಃಶ್ವಸ್ಯ ರಾಮೋ ರಾಜೀವಲೋಚನಃ ।
ಹಾ ಪ್ರಿಯೇತಿ ವಿಚುಕ್ರೋಶ ಬಹುಶೋ ಬಾಷ್ಪಗದ್ಗದಃ ॥೨೮॥

ತಂ ತತಃ ಸಾನ್ತ್ವಯಾಮಾಸ ಲಕ್ಷ್ಮಣಃ ಪ್ರಿಯಬಾನ್ಧವಃ ।
ಬಹುಪ್ರಕಾರಂ ಧರ್ಮಜ್ಞಃ ಪ್ರಶ್ರಿತಃ ಪ್ರಶ್ರಿತಾಞ್ಜಲಿಃ ॥೨೯॥

ಅನಾದೃತ್ಯ ತು ತದ್ವಾಕ್ಯಂ ಲಕ್ಷ್ಮಣೋಷ್ಠಪುಟಾಚ್ಚ್ಯುತಮ್ ।
ಅಪಶ್ಯಂಸ್ತಾಂ ಪ್ರಿಯಾಂ ಸೀತಾಂ ಪ್ರಾಕ್ರೋಶತ್ಸ ಪುನಃ ಪುನಃ ॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯೇ ಆದಿಕಾವ್ಯೇ
ಅರಣ್ಯಕಾಣ್ಡೇ ಏಕಷಷ್ಟಿತಮಃ ಸರ್ಗಃ

---

## ದ್ವಿಷಷ್ಟಿತಮಃ ಸರ್ಗಃ

ಸೀತಾಮಪಶ್ಯನ್ಧರ್ಮಾತ್ಮಾ ಶೋಕೋಪಹತಚೇತನಃ ।
ವಿಲಲಾಪ ಮಹಾಬಾಹೂ ರಾಮಃ ಕಮಲಲೋಚನಃ ॥೧॥

ಪಶ್ಯನ್ನಿವ ಸ ತಾಂ ಸೀತಾಮಪಶ್ಯನ್ಮನ್ಮಥಾರ್ದಿತಃ ।
ಉವಾಚ ರಾಘವೋ ವಾಕ್ಯಂ ವಿಲಾಪಾಶ್ರಯದುರ್ವಚಮ್ ॥೨॥

ತ್ವಮಶೋಕಸ್ಯ ಶಾಖಾಭಿಃ ಪುಷ್ಪಪ್ರಿಯತಯಾ ಪ್ರಿಯೇ ।
ಆವೃಣೋಷಿ ಶರೀರಂ ತೇ ಮಮ ಶೋಕವಿವರ್ಧನೀ ॥೩॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಕದಲೀಕಾಣ್ಡಸದೃಶೌ ಕದಲ್ಯಾ ಸಂವೃತಾವುಭೌ ।
ಊರೂ ಪಶ್ಯಾಮಿ ತೇ ದೇವಿ ನಾಸಿ ಶಕ್ತಾ ನಿಗೂಹಿತುಮ್ ॥೪॥

ಕರ್ಣಿಕಾರವನಂ ಭದ್ರೇ ಹಸನ್ತೀ ದೇವಿ ಸೇವಸೇ ।
ಅಲಂ ತೇ ಪರಿಹಾಸೇನ ಮಮ ಬಾಧಾವಹೇನ ವೈ ॥೫॥

ಪರಿಹಾಸೇನ ಕಿಂ ಸೀತೇ ಪರಿಶ್ರಾನ್ತಸ್ಯ ಮೇ ಪ್ರಿಯೇ ।
ಅಯಂ ಸ ಪರಿಹಾಸೋಽಪಿ ಸಾಧು ದೇವಿ ನ ರೋಚತೇ ॥೬॥

ವಿಶೇಷೇಣಾಶ್ರಮಸ್ಥಾನೇ ಹಾಸೋಽಯಂ ನ ಪ್ರಶಸ್ಯತೇ ।
ಅವಗಚ್ಛಾಮಿ ತೇ ಶೀಲಂ ಪರಿಹಾಸಪ್ರಿಯಂ ಪ್ರಿಯೇ ॥೭॥

ಆಗಚ್ಛ ತ್ವಂ ವಿಶಾಲಾಕ್ಷಿ ಶೂನ್ಯೋಽಯಮುಟಜಸ್ತವ ।
ಸುವ್ಯಕ್ತಂ ರಾಕ್ಷಸೈಃ ಸೀತಾ ಭಕ್ಷಿತಾ ವಾ ಹೃತಾಪಿ ವಾ ॥೮॥

ನ ಹಿ ಸಾ ವಿಲಪನ್ತಂ ಮಾಮುಪಸಂಪ್ರೈತಿ ಲಕ್ಷ್ಮಣ ।
ಏತಾನಿ ಮೃಗಯೂಥಾನಿ ಸಾಶ್ರುನೇತ್ರಾಣಿ ಲಕ್ಷ್ಮಣ ।
ಶಂಸನ್ತೀವ ಹಿ ವೈದೇಹೀಂ ಭಕ್ಷಿತಾಂ ರಜನೀಚರೈಃ ॥೯॥

ಹಾ ಮಮಾರ್ಯೇ ಕ್ವ ಯಾತಾಸಿ ಹಾ ಸಾಧ್ವಿ ವರವರ್ಣಿನಿ ।
ಹಾ ಸಕಾಮಾ ತ್ವಯಾ ದೇವೀ ಕೈಕೇಯೀ ಸಾ ಭವಿಷ್ಯತಿ ॥೧೦॥

ಸೀತಯಾ ಸಹ ನಿರ್ಯಾತೋ ವಿನಾ ಸೀತಾಮುಪಾಗತಃ ।
ಕಥಂ ನಾಮ ಪ್ರವೇಕ್ಷ್ಯಾಮಿ ಶೂನ್ಯಮನ್ತಃಪುರಂ ಪುನಃ ॥೧೧॥

ನಿರ್ವೀರ್ಯ ಇತಿ ಲೋಕೋ ಮಾಂ ನಿರ್ದಯಶ್ಚೇತಿ ವಕ್ಷ್ಯತಿ ।
ಕಾತರತ್ವಂ ಪ್ರಕಾಶಂ ಹಿ ಸೀತಾಪನಯನೇನ ಮೇ ॥೧೨॥

ನಿವೃತ್ತವನವಾಸಶ್ಚ ಜನಕಂ ಮಿಥಿಲಾಧಿಪಮ್ ।
ಕುಶಲಂ ಪರಿಪೃಚ್ಛನ್ತಂ ಕಥಂ ಶಕ್ಷ್ಯೇ ನಿರೀಕ್ಷಿತುಮ್ ॥೧೩॥

ವಿದೇಹರಾಜೋ ನೂನಂ ಮಾಂ ದೃಷ್ಟ್ವಾ ವಿರಹಿತಂ ತ್ವಯಾ ।
ದುಹಿತೃಸ್ನೇಹಸಂತಪ್ತೋ ಮೋಹಸ್ಯ ವಶಮೇಷ್ಯತಿ ॥೧೪॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.

ಅಥ ವಾ ನ ಗಮಿಷ್ಯಾಮಿ ಪುರೀಂ ಭರತಪಾಲಿತಾಮ್ ।
ಸ್ವರ್ಗೋಽಪಿ ಸೀತಯಾ ಹೀನಃ ಶೂನ್ಯ ಏವ ಮತೋ ಮಮ ॥೧೫॥

ಮಾಮಿಹೋತ್ಸೃಜ್ಯ ಹಿ ವನೇ ಗಚ್ಛಾಯೋಧ್ಯಾಂ ಪುರೀಂ ಶುಭಾಮ್ ।
ನ ತ್ವಹಂ ತಾಂ ವಿನಾ ಸೀತಾಂ ಜೀವೇಯಂ ಹಿ ಕಥಂಚನ ॥೧೬॥

ಗಾಢಮಾಶ್ಲಿಷ್ಯ ಭರತೋ ವಾಚ್ಯೋ ಮದ್ವಚನಾತ್ತ್ವಯಾ ।
ಅನುಜ್ಞಾತೋಽಸಿ ರಾಮೇಣ ಪಾಲಯೇತಿ ವಸುಂಧರಾಮ್ ॥೧೭॥

ಅಮ್ಬಾ ಚ ಮಮ ಕೈಕೇಯೀ ಸುಮಿತ್ರಾ ಚ ತ್ವಯಾ ವಿಭೋ ।
ಕೌಸಲ್ಯಾ ಚ ಯಥಾನ್ಯಾಯಮಭಿವಾದ್ಯಾ ಮಮಾಜ್ಞಯಾ ।
ರಕ್ಷಣೀಯಾ ಪ್ರಯತ್ನೇನ ಭವತಾ ಸೂಕ್ತಕಾರಿಣಾ ॥೧೮॥

ಸೀತಾಯಾಶ್ಚ ವಿನಾಶೋಽಯಂ ಮಮ ಚಾಮಿತ್ರಸೂದನ ।
ವಿಸ್ತರೇಣ ಜನನ್ಯಾ ಮೇ ವಿನಿವೇದ್ಯಸ್ತ್ವಯಾ ಭವೇತ್ ॥೧೯॥

ಇತಿ ವಿಲಪತಿ ರಾಘವೇ ತು ದೀನೇ
ವನಮುಪಗಮ್ಯ ತಯಾ ವಿನಾ ಸುಕೇಶ್ಯಾ ।
ಭಯವಿಕಲಮುಖಸ್ತು ಲಕ್ಷ್ಮಣೋಽಪಿ
ವ್ಯಥಿತಮನಾ ಭೃಶಮಾತುರೋ ಬಭೂವ ॥೨೦॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯೇ ಆದಿಕಾವ್ಯೇ
ಅರಣ್ಯಕಾಣ್ಡೇ ದ್ವಿಷಷ್ಟಿತಮಃ ಸರ್ಗಃ

---

## ತ್ರಿಷಷ್ಟಿತಮಃ ಸರ್ಗಃ

ಸ ರಾಜಪುತ್ರಃ ಪ್ರಿಯಾಯಾ ವಿಹೀನಃ
ಕಾಮೇನ ಶೋಕೇನ ಚ ಪೀಡ್ಯಮಾನಃ ।
ವಿಷಾದಯನ್ಭ್ರಾತರಮಾರ್ತರೂಪೋ
ಭೂಯೋ ವಿಷಾದಂ ಪ್ರವಿವೇಶ ತೀವ್ರಮ್ ॥೧॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಸ ಲಕ್ಷ್ಮಣಂ ಶೋಕವಶಾಭಿಪನ್ನಂ
ಶೋಕೇ ನಿಮಗ್ನೋ ವಿಪುಲೇ ತು ರಾಮಃ ।
ಉವಾಚ ವಾಕ್ಯಂ ವ್ಯಸನಾನುರೂಪ-
ಮುಷ್ಣಂ ವಿನಿಃಶ್ವಸ್ಯ ರುದನ್ಸಶೋಕಮ್ ॥೨॥

ನ ಮದ್ವಿಧೋ ದುಷ್ಕೃತಕರ್ಮಕಾರೀ
ಮನ್ಯೇ ದ್ವಿತೀಯೋಽಸ್ತಿ ವಸುಂಧರಾಯಾಮ್ ।
ಶೋಕೇನ ಶೋಕೋ ಹಿ ಪರಮ್ಪರಾಯಾ
ಮಾಮೇತಿ ಭಿನ್ದನ್ಹೃದಯಂ ಮನಶ್ಚ ॥೩॥

ಪೂರ್ವಂ ಮಯಾ ನೂನಮಭೀಪ್ಸಿತಾನಿ
ಪಾಪಾನಿ ಕರ್ಮಾಣ್ಯಸಕೃತ್ಕೃತಾನಿ ।
ತತ್ರಾಯಮದ್ಯಾಪತಿತೋ ವಿಪಾಕೋ
ದುಃಖೇನ ದುಃಖಂ ಯದಹಂ ವಿಶಾಮಿ ॥೪॥

ರಾಜ್ಯಪ್ರಣಾಶಃ ಸ್ವಜನೈರ್ವಿಯೋಗಃ
ಪಿತುರ್ವಿನಾಶೋ ಜನನೀವಿಯೋಗಃ ।
ಸರ್ವಾಣಿ ಮೇ ಲಕ್ಷ್ಮಣ ಶೋಕವೇಗ-
ಮಾಪೂರಯನ್ತಿ ಪ್ರವಿಚಿನ್ತಿತಾನಿ ॥೫॥

ಸರ್ವಂ ತು ದುಃಖಂ ಮಮ ಲಕ್ಷ್ಮಣೇದಂ
ಶಾನ್ತಂ ಶರೀರೇ ವನಮೇತ್ಯ ಶೂನ್ಯಮ್ ।
ಸೀತಾವಿಯೋಗಾತ್ಪುನರಪ್ಯುದೀರ್ಣಂ
ಕಾಷ್ಠೈರಿವಾಗ್ನಿಃ ಸಹಸಾ ಪ್ರದೀಪ್ತಃ ॥೬॥

ಸಾ ನೂನಮಾರ್ಯಾ ಮಮ ರಾಕ್ಷಸೇನ
ಬಲಾದ್ಧೃತಾ ಖಂ ಸಮುಪೇತ್ಯ ಭೀರುಃ ।
ಅಪಸ್ವರಂ ಸಸ್ವರವಿಪ್ರಲಾಪಾ
ಭಯೇನ ವಿಕ್ರನ್ದಿತವತ್ಯಭೀಕ್ಷ್ಣಮ್ ॥೭॥

ತೌ ಲೋಹಿತಸ್ಯ ಪ್ರಿಯದರ್ಶನಸ್ಯ
ಸದೋಚಿತಾವುತ್ತಮಚನ್ದನಸ್ಯ ।

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ವೃತ್ತೌ ಸ್ತನೌ ಶೋಣಿತಪಙ್ಕದಿಗ್ಧೌ
ನೂನಂ ಪ್ರಿಯಾಯಾ ಮಮ ನಾಭಿಭಾತಃ ॥೮॥

ತತ್ ಶ್ಲಕ್ಷ್ಣಸುವ್ಯಕ್ತಮೃದುಪ್ರಲಾಪಂ
ತಸ್ಯಾ ಮುಖಂ ಕುಞ್ಚಿತಕೇಶಭಾರಮ್ ।
ರಕ್ಷೋವಶಂ ನೂನಮುಪಾಗತಾಯಾ
ನ ಭ್ರಾಜತೇ ರಾಹುಮುಖೇ ಯಥೇನ್ದುಃ ॥೯॥

ತಾಂ ಹಾರಪಾಶಸ್ಯ ಸದೋಚಿತಾಯಾ
ಗ್ರೀವಾಂ ಪ್ರಿಯಾಯಾ ಮಮ ಸುವ್ರತಾಯಾಃ ।
ರಕ್ಷಾಂಸಿ ನೂನಂ ಪರಿಪೀತವನ್ತಿ
ವಿಭಿದ್ಯ ಶೂನ್ಯೇ ರುಧಿರಾಶನಾನಿ ॥೧೦॥

ಮಯಾ ವಿಹೀನಾ ವಿಜನೇ ವನೇ ಯಾ
ರಕ್ಷೋಭಿರಾಹೃತ್ಯ ವಿಕೃಷ್ಯಮಾಣಾ ।
ನೂನಂ ವಿನಾದಂ ಕುರರೀವ ದೀನಾ
ಸಾ ಮುಕ್ತವತ್ಯಾಯತಕಾನ್ತನೇತ್ರಾ ॥೧೧॥

ಅಸ್ಮಿನ್ಮಯಾ ಸಾರ್ಧಮುದಾರಶೀಲಾ
ಶಿಲಾತಲೇ ಪೂರ್ವಮುಪೋಪವಿಷ್ಟಾ ।
ಕಾನ್ತಸ್ಮಿತಾ ಲಕ್ಷ್ಮಣ ಜಾತಹಾಸಾ
ತ್ವಾಮಾಹ ಸೀತಾ ಬಹುವಾಕ್ಯಜಾತಮ್ ॥೧೨॥

ಗೋದಾವರೀಯಂ ಸರಿತಾಂ ವರಿಷ್ಠಾ
ಪ್ರಿಯಾ ಪ್ರಿಯಾಯಾ ಮಮ ನಿತ್ಯಕಾಲಮ್ ।
ಅಪ್ಯತ್ರ ಗಚ್ಛೇದಿತಿ ಚಿನ್ತಯಾಮಿ
ನೈಕಾಕಿನೀ ಯಾತಿ ಹಿ ಸಾ ಕದಾಚಿತ್ ॥೧೩॥

ಪದ್ಮಾನನಾ ಪದ್ಮವಿಶಲಾನೇತ್ರಾ
ಪದ್ಮಾನಿ ವಾನೇತುಮಭಿಪ್ರಯಾತಾ ।

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತದಪ್ಯಯುಕ್ತಂ ನ ಹಿ ಸಾ ಕದಾಚಿ-
ನ್ಮಯಾ ವಿನಾ ಗಚ್ಛತಿ ಪಙ್ಕಜಾನಿ ॥೧೪॥

ಕಾಮಂ ತ್ವಿದಂ ಪುಷ್ಪಿತವೃಕ್ಷಷಣ್ಡಂ
ನಾನಾವಿಧೈಃ ಪಕ್ಷಿಗಣೈರುಪೇತಮ್ ।
ವನಂ ಪ್ರಯಾತಾ ನು ತದಪ್ಯಯುಕ್ತ-
ಮೇಕಾಕಿನೀ ಸಾತಿಬಿಭೇತಿ ಭೀರುಃ ॥೧೫॥

ಆದಿತ್ಯ ಭೋ ಲೋಕಕೃತಾಕೃತಜ್ಞ
ಲೋಕಸ್ಯ ಸತ್ಯಾನೃತಕರ್ಮಸಾಕ್ಷಿನ್ ।
ಮಮ ಪ್ರಿಯಾ ಸಾ ಕ್ವ ಗತಾ ಹೃತಾ ವಾ
ಶಂಸಸ್ವ ಮೇ ಶೋಕವಶಸ್ಯ ಸತ್ಯಮ್ ॥೧೬॥

ಲೋಕೇಷು ಸರ್ವೇಷು ಚ ನಾಸ್ತಿ ಕಿಂಚಿ-
ದ್ಯತ್ತೇನ ನಿತ್ಯಂ ವಿದಿತಂ ಭವೇತ್ತತ್ ।
ಶಂಸಸ್ವ ವಾಯೋ ಕುಲಶಾಲಿನೀಂ ತಾಂ
ಮೃತಾ ಹೃತಾ ವಾ ಪಥಿ ವರ್ತತೇ ವಾ ॥೧೭॥

ಇತೀವ ತಂ ಶೋಕವಿಧೇಯದೇಹಂ
ರಾಮಂ ವಿಸಂಜ್ಞಂ ವಿಲಪನ್ತಮೇವಮ್ ।
ಉವಾಚ ಸೌಮಿತ್ರಿರದೀನಸತ್ತ್ವೋ
ನ್ಯಾಯ್ಯೇ ಸ್ಥಿತಃ ಕಾಲಯುತಂ ಚ ವಾಕ್ಯಮ್ ॥೧೮॥

ಶೋಕಂ ವಿಮುಞ್ಚಾರ್ಯ ಧೃತಿಂ ಭಜಸ್ವ
ಸೋತ್ಸಾಹತಾ ಚಾಸ್ತು ವಿಮಾರ್ಗಣೇಽಸ್ಯಾಃ ।
ಉತ್ಸಾಹವನ್ತೋ ಹಿ ನರಾ ನ ಲೋಕೇ
ಸೀದನ್ತಿ ಕರ್ಮಸ್ವತಿದುಷ್ಕರೇಷು ॥೧೯॥

ಇತೀವ ಸೌಮಿತ್ರಿಮುದಗ್ರಪೌರುಷಂ
ಬ್ರುವನ್ತಮಾರ್ತೋ ರಘುವಂಶವರ್ಧನಃ ।



CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.

ನ ಚಿನ್ತಯಾಮಾಸ ಧೃತಿಂ ವಿಮುಕ್ತವಾ-
ನ್ಸ್ವನಶ್ಚ ದುಃಖಂ ಮಹದಭ್ಯುಪಾಗಮತ್ ॥೨೦॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯೇ ಆದಿಕಾವ್ಯೇ
ಅರಣ್ಯಕಾಣ್ಡೇ ತ್ರಿಷಷ್ಟಿತಮಃ ಸರ್ಗಃ

—

## ಚತುಃಷಷ್ಟಿತಮಃ ಸರ್ಗಃ

ಸ ದೀನೋ ದೀನಯಾ ವಾಚಾ ಲಕ್ಷ್ಮಣಂ ವಾಕ್ಯಮಬ್ರವೀತ್ ।
ಶೀಘ್ರಂ ಲಕ್ಷ್ಮಣ ಜಾನೀಹಿ ಗತ್ವಾ ಗೋದಾವರೀಂ ನದೀಮ್ ।
ಅಪಿ ಗೋದಾವರೀಂ ಸೀತಾ ಪದ್ಮಾನ್ಯಾನಯಿತುಂ ಗತಾ ॥೧॥

ಏವಮುಕ್ತಸ್ತು ರಾಮೇಣ ಲಕ್ಷ್ಮಣಃ ಪರವೀರಹಾ ।
ನದೀಂ ಗೋದಾವರೀಂ ರಮ್ಯಾಂ ಜಗಾಮ ಲಘುವಿಕ್ರಮಃ ॥೨॥

ತಾಂ ಲಕ್ಷ್ಮಣಸ್ತೀರ್ಥವತೀಂ ವಿಚಿತ್ವಾ ರಾಮಮಬ್ರವೀತ್ ॥೩॥

ನೈನಾಂ ಪಶ್ಯಾಮಿ ತೀರ್ಥೇಷು ಕ್ರೋಶತೋ ನ ಶೃಣೋತಿ ಮೇ ।
ಕಂ ನು ಸಾ ದೇಶಮಾಪನ್ನಾ ವೈದೇಹೀ ಕ್ಲೇಶನಾಶಿನೀ ।
ನ ಹಿ ತಂ ವೇದ್ಮಿ ವೈ ರಾಮ ಯತ್ರ ಸಾ ತನುಮಧ್ಯಮಾ ॥೪॥

ಲಕ್ಷ್ಮಣಸ್ಯ ವಚಃ ಶ್ರುತ್ವಾ ದೀನಃ ಸಂತಾಪಮೋಹಿತಃ ।
ರಾಮಃ ಸಮಭಿಚಕ್ರಾಮ ಸ್ವಯಂ ಗೋದಾವರೀಂ ನದೀಮ್ ॥೫॥

ಸ ತಾಮುಪಸ್ಥಿತೋ ರಾಮಃ ಕ್ವ ಸೀತೇತ್ಯೇವಮಬ್ರವೀತ್ ॥೬॥

ಭೂತಾನಿ ರಾಕ್ಷಸೇನ್ದ್ರೇಣ ವಧಾರ್ಹೇಣ ಹೃತಾಮಿತಿ ।
ಸ ತಾಂ ಶಶಂಸೂ ರಾಮಾಯ ತಥಾ ಗೋದಾವರೀ ನದೀ ॥೭॥

ತತಃ ಪ್ರಚೋದಿತಾ ಭೂತೈಃ ಶಂಸಾಸ್ಮೈತಾಂ ಪ್ರಿಯಾಮಿತಿ ।
ನ ತು ಸಾಭ್ಯವದತ್ಸೀತಾಂ ಪೃಷ್ಟಾ ರಾಮೇಣ ಶೋಚತಾ ॥೮॥

ರಾವಣಸ್ಯ ಚ ತದ್ರೂಪಂ ಕರ್ಮಾಣಿ ಚ ದುರಾತ್ಮನಃ ।
ಧ್ಯಾತ್ವಾ ಭಯಾತ್ತು ವೈದೇಹೀಂ ಸಾ ನದೀ ನ ಶಶಂಸ ತಾಮ್ ॥೯॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ನಿರಾಶಸ್ತು ತಯಾ ನದ್ಯಾ ಸೀತಾಯಾ ದರ್ಶನೇ ಕೃತಃ ।
ಉವಾಚ ರಾಮಃ ಸೌಮಿತ್ರಿಂ ಸೀತಾದರ್ಶನಕರ್ಶಿತಃ ॥೧೦॥

ಏಷಾ ಗೋದಾವರೀ ಸೌಮ್ಯ ಕಿಂಚಿನ್ನ ಪ್ರತಿಭಾಷತೇ ।
ಕಿಂ ನು ಲಕ್ಷ್ಮಣ ವಕ್ಷ್ಯಾಮಿ ಸಮೇತ್ಯ ಜನಕಂ ವಚಃ ।
ಮಾತರಂ ಚೈವ ವೈದೇಹ್ಯಾ ವಿನಾ ತಾಮಹಮಪ್ರಿಯಮ್ ॥೧೧॥

ಯಾ ಮೇ ರಾಜ್ಯವಿಹೀನಸ್ಯ ವನೇ ವನ್ಯೇನ ಜೀವತಃ ।
ಸರ್ವಂ ವ್ಯಪನಯಚ್ಛೋಕಂ ವೈದೇಹೀ ಕ್ವ ನು ಸಾ ಗತಾ ॥೧೨॥

ಜ್ಞಾತಿವರ್ಗವಿಹೀನಸ್ಯ ವೈದೇಹಿಮಪ್ಯಪಶ್ಯತಃ ।
ಮನ್ಯೇ ದೀರ್ಘಾ ಭವಿಷ್ಯನ್ತಿ ರಾತ್ರಯೋ ಮಮ ಜಾಗ್ರತಃ ॥೧೩॥

ಮನ್ದಾಕಿನೀಂ ಜನಸ್ಥಾನಮಿಮಂ ಪ್ರಸ್ರವಣಂ ಗಿರಿಮ್ ।
ಸರ್ವಾಣ್ಯನುಚರಿಷ್ಯಾಮಿ ಯದಿ ಸೀತಾ ಹಿ ದೃಶ್ಯತೇ ॥೧೪॥

ಏತೇ ಮೃಗಾ ಮಹಾವೀರ್ಯಾ ಮಾಮೀಕ್ಷನ್ತೇ
ಮುಹುರ್ಮುಹುಃ ।
ವಕ್ತುಕಾಮಾ ಇವ ಹಿ ಮೇ ಇಙ್ಗಿತಾನ್ಯುಪಲಕ್ಷಯೇ ॥೧೫॥

ತಾಂಸ್ತು ದೃಷ್ಟ್ವಾ ನರವ್ಯಾಘ್ರೋ ರಾಘವಃ ಪ್ರತ್ಯುವಾಚ ಹ ।
ಕ್ವ ಸೀತೇತಿ ನಿರೀಕ್ಷನ್ವೈ ಬಾಷ್ಪಸಂರುದ್ಧಯಾ ದೃಶಾ ॥೧೬॥

ಏವಮುಕ್ತಾ ನರೇನ್ದ್ರೇಣ ತೇ ಮೃಗಾಃ ಸಹಸೋತ್ಥಿತಾಃ ।
ದಕ್ಷಿಣಾಭಿಮುಖಾಃ ಸರ್ವೇ ದರ್ಶಯನ್ತೋ ನಭಃಸ್ಥಲಮ್ ॥೧೭॥

ಮೈಥಿಲೀ ಹ್ರಿಯಮಾಣಾ ಸಾ ದಿಶಂ ಯಾಮನ್ವಪದ್ಯತ ।
ತೇನ ಮಾರ್ಗೇಣ ಧಾವನ್ತೋ ನಿರೀಕ್ಷನ್ತೇ ನರಾಧಿಪಮ್ ॥೧೮॥

ಯೇನ ಮಾರ್ಗಂ ಚ ಭೂಮಿಂ ಚ ನಿರೀಕ್ಷನ್ತೇ ಸ್ಮ ತೇ ಮೃಗಾಃ ।
ಪುನಶ್ಚ ಮಾರ್ಗಮಿಚ್ಛನ್ತಿ ಲಕ್ಷ್ಮಣೇನೋಪಲಕ್ಷಿತಾಃ ॥೧೯॥
ತೇಷಾಂ ವಚನಸರ್ವಸ್ವಂ ಲಕ್ಷಯಾಮಾಸ ಚೇಙ್ಗಿತಮ್ ।
ಉವಾಚ ಲಕ್ಷ್ಮಣೋ ಧೀಮಾನ್ ಜ್ಯೇಷ್ಠಂ ಭ್ರಾತರಮಾರ್ತವತ್ ॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

ಕ್ವ ಸೀತೇತಿ ತ್ವಯಾ ಪೃಷ್ಟಾ ಯಥೇಮೇ ಸಹಸೋತ್ಥಿತಾಃ ।
ದರ್ಶಯನ್ತಿ ಕ್ಷಿತಿಂ ಚೈವ ದಕ್ಷಿಣಾಂ ಚ ದಿಶಂ ಮೃಗಾಃ ॥೨೧॥

ಸಾಧು ಗಚ್ಛಾವಹೇ ದೇವ ದಿಶಮೇತಾಂ ಚ ನೈರ್ಋತಿಮ್ ।
ಯದಿ ಸ್ಯಾದಾಗಮಃ ಕಶ್ಚಿದಾರ್ಯಾ ವಾ ಸಾಥ ಲಕ್ಷ್ಯತೇ ॥೨೨॥

ಬಾಢಮಿತ್ಯೇವ ಕಾಕುತ್ಸ್ಥಃ ಪ್ರಸ್ಥಿತೋ ದಕ್ಷಿಣಾಂ ದಿಶಮ್ ।
ಲಕ್ಷ್ಮಣಾನುಗತಃ ಶ್ರೀಮಾನ್ವೀಕ್ಷಮಾಣೋ ವಸುಂಧರಾಮ್ ॥೨೩॥

ಏವಂ ಸಂಭಾಷಮಾಣೌ ತಾವನ್ಯೋಽನ್ಯಂ ಭ್ರಾತರಾವುಭೌ ।
ವಸುಂಧರಾಯಾಂ ಪತಿತಂ ಪುಷ್ಪಮಾರ್ಗಮಪಶ್ಯತಾಮ್ ॥೨೪॥

ತಾಂ ಪುಷ್ಪವೃಷ್ಟಿಂ ಪತಿತಾಂ ದೃಷ್ಟ್ವಾ ರಾಮೋ ಮಹೀತಲೇ ।
ಉವಾಚ ಲಕ್ಷ್ಮಣಂ ವೀರೋ ದುಃಖಿತೋ ದುಃಖಿತಂ ವಚಃ ॥೨೫॥

ಅಭಿಜಾನಾಮಿ ಪುಷ್ಪಾಣಿ ತಾನೀಮಾನೀಹ ಲಕ್ಷ್ಮಣ ।
ಅಪಿನದ್ಧಾನಿ ವೈದೇಹ್ಯಾ ಮಯಾ ದತ್ತಾನಿ ಕಾನನೇ ॥೨೬॥

ಮನ್ಯೇ ಸೂರ್ಯಶ್ಚ ವಾಯುಶ್ಚ ಮೇದಿನೀ ಚ ಯಶಸ್ವಿನೀ ।
ಅಭಿರಕ್ಷನ್ತಿ ಪುಷ್ಪಾಣಿ ಪ್ರಕುರ್ವನ್ತೋ ಮಮ ಪ್ರಿಯಮ್ ॥೨೭॥

ಏವಮುಕ್ತ್ವಾ ಮಹಾಬಾಹುರ್ಲಕ್ಷ್ಮಣಂ ಪುರುಷರ್ಷಭಮ್ ।
ಉವಾಚ ರಾಮೋ ಧರ್ಮಾತ್ಮಾ ಗಿರಿಂ ಪ್ರಸ್ರವಣಾಕುಲಮ್ ॥೨೮॥

ಕಚ್ಚಿತ್ಕ್ಷಿತಿಭೃತಾಂ ನಾಥ ದೃಷ್ಟಾ ಸರ್ವಾಙ್ಗಸುನ್ದರೀ ।
ರಾಮಾ ರಮ್ಯೇ ವನೋದ್ದೇಶೇ ಮಯಾ ವಿರಹಿತಾ ತ್ವಯಾ ॥೨೯॥

ಕ್ರುದ್ಧೋಽಬ್ರವೀದ್ಗಿರಿಂ ತತ್ರ ಸಿಂಹಃ ಕ್ಷುದ್ರಮೃಗಂ ಯಥಾ ॥೩೦॥

ತಾಂ ಹೇಮವರ್ಣಾಂ ಹೇಮಾಭಾಂ ಸೀತಾಂ ದರ್ಶಯ ಪರ್ವತ ।
ಯಾವತ್ಸಾನೂನಿ ಸರ್ವಾಣಿ ನ ತೇ ವಿಧ್ವಂಸಯಾಮ್ಯಹಮ್ ॥೩೧॥

ಏವಮುಕ್ತಸ್ತು ರಾಮೇಣ ಪರ್ವತೋ ಮೈಥಿಲೀಂ ಪ್ರತಿ ।
ಶಂಸನ್ನಿವ ತತಃ ಸೀತಾಂ ನಾದರ್ಶಯತ ರಾಘವೇ ॥೩೨॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ತತೋ ದಾಶರಥೀ ರಾಮ ಉವಾಚ ಚ ಶಿಲೋಚ್ಚಯಮ್ ।
ಮಮ ಬಾಣಾಗ್ನಿನಿರ್ದಗ್ಧೋ ಭಸ್ಮೀಭೂತೋ ಭವಿಷ್ಯಸಿ ।
ಅಸೇವ್ಯಃ ಸತತಂ ಚೈವ ನಿಸ್ತೃಣದ್ರುಮಪಲ್ಲವಃ ॥೩೩॥

ಇಮಾಂ ವಾ ಸರಿತಂ ಚಾದ್ಯ ಶೋಷಯಿಷ್ಯಾಮಿ ಲಕ್ಷ್ಮಣ ।
ಯದಿ ನಾಖ್ಯಾತಿ ಮೇ ಸೀತಾಮಾರ್ಯಾಂ ಚನ್ದ್ರನಿಭಾನನಾಮ್ ॥

ಏವಂ ಪ್ರರುಷಿತೋ ರಾಮೋ ದಿಧಕ್ಷನ್ನಿವ ಚಕ್ಷುಷಾ ।
ದದರ್ಶ ಭೂಮೌ ನಿಷ್ಕ್ರಾನ್ತಂ ರಾಕ್ಷಸಸ್ಯ ಪದಂ ಮಹತ್ ॥೩೫॥

ತ್ರಸ್ತಾಯಾ ರಾಮಕಾಂಕ್ಷಿಣ್ಯಾಃ ಪ್ರಧಾವನ್ತ್ಯಾ ಇತಸ್ತತಃ ।
ರಾಕ್ಷಸೇನಾನುವೃತ್ತಾಯಾ ವೈದೇಹ್ಯಾಶ್ಚ ಪದಾನ್ಯಥ ॥೩೬॥

ಸ ಸಮೀಕ್ಷ್ಯ ಪರಿಕ್ರಾನ್ತಂ ಸೀತಾಯಾ ರಾಕ್ಷಸಸ್ಯ ಚ ।
ಭಗ್ನಂ ಧನುಶ್ಚ ತೂಣೀ ಚ ವಿಕೀರ್ಣಂ ಬಹುಧಾ ರಥಮ್ ।
ಸಂಭ್ರಾನ್ತಹೃದಯೋ ರಾಮಃ ಶಶಂಸ ಭ್ರಾತರಂ ಪ್ರಿಯಮ್॥೩೭॥

ಪಶ್ಯ ಲಕ್ಷ್ಮಣ ವೈದೇಹ್ಯಾಃ ಶೀರ್ಣಾಃ ಕನಕಬಿನ್ದವಃ ।
ಭೂಷಣಾನಾಂ ಹಿ ಸೌಮಿತ್ರೇ ಮಾಲ್ಯಾನಿ ವಿವಿಧಾನಿ ಚ ॥೩೮॥

ತಪ್ತಬಿನ್ದುನಿಕಾಶೈಶ್ಚ ಚಿತ್ರೈಃ ಕ್ಷತಜಬಿನ್ದುಭಿಃ ।
ಆವೃತಂ ಪಶ್ಯ ಸೌಮಿತ್ರೇ ಸರ್ವತೋ ಧರಣೀತಲಮ್ ॥೩೯॥

ಮನ್ಯೇ ಲಕ್ಷ್ಮಣ ವೈದೇಹೀ ರಾಕ್ಷಸೈಃ ಕಾಮರೂಪಿಭಿಃ ।
ಭಿತ್ತ್ವಾ ಭಿತ್ತ್ವಾ ವಿಭಕ್ತಾ ವಾ ಭಕ್ಷಿತಾ ವಾ ಭವಿಷ್ಯತಿ ॥೪೦॥

ತಸ್ಯಾ ನಿಮಿತ್ತಂ ಸೀತಾಯಾ ದ್ವಯೋರ್ವಿವದಮಾನಯೋಃ ।
ಬಭೂವ ಯುದ್ಧಂ ಸೌಮಿತ್ರೇ ಘೋರಂ ರಾಕ್ಷಸಯೋರಿಹ ॥೪೧॥

ಮುಕ್ತಾಮಣಿಚಿತಂ ಚೇದಂ ತಪನೀಯವಿಭೂಷಿತಮ್ ।
ಧರಣ್ಯಾಂ ಪತಿತಂ ಸೌಮ್ಯ ಕಸ್ಯ ಭಗ್ನಂ ಮಹದ್ಧನುಃ ॥೪೨॥

ರಾಕ್ಷಸಾನಾಮಿದಂ ವತ್ಸ ಸುರಾಣಾಮಥ ವಾಪಿ ವಾ ।

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

ತರುಣಾದಿತ್ಯಸಂಕಾಶಂ ವೈಡೂರ್ಯಗುಲಿಕಾಚಿತಮ್ ।
ವಿಶೀರ್ಣಂ ಪತಿತಂ ಭೂಮೌ ಕವಚಂ ಕಸ್ಯ ಕಾಞ್ಚನಮ್ ॥೪೩॥

ಛತ್ರಂ ಶತಶಲಾಕಂ ಚ ದಿವ್ಯಮಾಲ್ಯೋಪಶೋಭಿತಮ್ ।
ಭಗ್ನದಣ್ಡಮಿದಂ ಸೌಮ್ಯ ಭೂಮೌ ಕಸ್ಯ ನಿಪಾತಿತಮ್ ॥೪೪॥

ಕಾಞ್ಚನೋರಶ್ಛದಾಶ್ಚೇಮೇ ಪಿಶಾಚವದನಾಃ ಖರಾಃ ।
ಭೀಮರೂಪಾ ಮಹಾಕಾಯಾಃ ಕಸ್ಯ ವಾ ನಿಹತಾ ರಣೇ ॥೪೫॥

ದೀಪ್ತಪಾವಕಸಂಕಾಶೋ ದ್ಯುತಿಮಾನ್ಸಮರಧ್ವಜಃ ।
ಅಪವಿದ್ಧಶ್ಚ ಭಗ್ನಶ್ಚ ಕಸ್ಯ ಸಾಂಗ್ರಾಮಿಕೋ ರಥಃ ॥೪೬॥

ರಥಾಕ್ಷಮಾತ್ರಾ ವಿಶಿಖಾಸ್ತಪನೀಯವಿಭೂಷಣಾಃ ।
ಕಸ್ಯೇಮೇಽಭಿಹತಾ ಬಾಣಾಃ ಪ್ರಕೀರ್ಣಾ ಘೋರದರ್ಶನಾಃ ॥೪೭॥

ಶರಾವರೌ ಶರೈಃ ಪೂರ್ಣೌ ವಿಧ್ವಸ್ತೌ ಪಶ್ಯ ಲಕ್ಷ್ಮಣ ॥೪೮॥

ಪ್ರತೋದಾಭೀಷುಹಸ್ತೋಽಯಂ ಕಸ್ಯ ವಾ ಸಾರಥಿರ್ಹತಃ ॥೪೯॥

ಕಸ್ಯೇಮೌ ಪುರುಷವ್ಯಾಘ್ರ ಶಯಾತೇ ನಿಹತೌ ಯುಧಿ ।
ಚಾಮರಗ್ರಾಹಿಣೌ ಸೌಮ್ಯ ಸೋಷ್ಣೀಷಮಣಿಕುಣ್ಡಲೌ ॥೫೦॥

ಪದವೀ ಪುರುಷಸ್ಯೈಷಾ ವ್ಯಕ್ತಂ ಕಸ್ಯಾಪಿ ರಕ್ಷಸಃ ।
ವೈರಂ ಶತಗುಣಂ ಪಶ್ಯ ಮಮೇದಂ ಜೀವಿತಾನ್ತಕಮ್ ॥೫೧॥

ಸುಘೋರಹೃದಯೈಃ ಸೌಮ್ಯ ರಾಕ್ಷಸೈಃ ಕಾಮರೂಪಿಭಿಃ ।
ಹೃತಾ ಮೃತಾ ವಾ ವೈದೇಹೀ ಭಕ್ಷಿತಾ ವಾ ತಪಸ್ವಿನೀ ॥೫೨॥

ನ ಧರ್ಮಸ್ತ್ರಾಯತೇ ಸೀತಾಂ ಹ್ರಿಯಮಾಣಾಂ ಮಹಾವನೇ ॥೫೩॥

ಭಕ್ಷಿತಾಯಾಂ ಹಿ ವೈದೇಹ್ಯಾಂ ಹೃತಾಯಾಮಪಿ ಲಕ್ಷ್ಮಣ ।
ಕೇ ಹಿ ಲೋಕೇ ಪ್ರಿಯಂ ಕರ್ತುಂ ಶಕ್ತಾಃ ಸೌಮ್ಯ ಮಮೇಶ್ವರಾಃ॥

ಕರ್ತಾರಮಪಿ ಲೋಕಾನಾಂ ಶೂರಂ ಕರುಣವೇದಿನಮ್ ।
ಅಜ್ಞಾನಾದವಮನ್ಯೇರನ್ಸರ್ವಭೂತಾನಿ ಲಕ್ಷ್ಮಣ ॥೫೫॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.


ಮೃದುಂ ಲೋಕಹಿತೇ ಯುಕ್ತಂ ದಾನ್ತಂ ಕರುಣವೇದಿನಮ್ ।
ನಿರ್ವೀರ್ಯ ಇತಿ ಮನ್ಯನ್ತೇ ನೂನಂ ಮಾಂ ತ್ರಿದಶೇಶ್ವರಾಃ ‖೫೬‖

ಮಾಂ ಪ್ರಾಪ್ಯ ಹಿ ಗುಣೋ ದೋಷಃ ಸಂವೃತ್ತಃ ಪಶ್ಯ ಲಕ್ಷ್ಮಣ ।
ಅದ್ಯೈವ ಸರ್ವಭೂತಾನಾಂ ರಕ್ಷಸಾಮಭವಾಯ ಚ ‖೫೭‖

ಸಂಹೃತ್ಯೈವ ಶಶಿಜ್ಯೋತ್ಸ್ನಾಂ ಮಹಾನ್ಸೂರ್ಯ ಇವೋದಿತಃ ।
ಸಂಹೃತ್ಯೈವ ಗುಣಾನ್ಸರ್ವಾನ್ಮಮ ತೇಜಃ ಪ್ರಕಾಶತೇ ‖೫೮‖

ನೈವ ಯಕ್ಷಾ ನ ಗನ್ಧರ್ವಾ ನ ಪಿಶಾಚಾ ನ ರಾಕ್ಷಸಾಃ ।
ಕಿಂನರಾ ವಾ ಮನುಷ್ಯಾ ವಾ ಸುಖಂ ಪ್ರಾಪ್ಸ್ಯನ್ತಿ ಲಕ್ಷ್ಮಣ ‖೫೯‖

ಮಮಾಸ್ತ್ರಬಾಣಸಂಪೂರ್ಣಮಾಕಾಶಂ ಪಶ್ಯ ಲಕ್ಷ್ಮಣ ।
ಅಸಂಪಾತಂ ಕರಿಷ್ಯಾಮಿ ಹ್ಯದ್ಯ ತ್ರೈಲೋಕ್ಯಚಾರಿಣಾಮ್ ‖೬೦‖

ಸಂನಿರುದ್ಧಗ್ರಹಗಣಮಾವಾರಿತನಿಶಾಕರಮ್ ।
ವಿಪ್ರಣಷ್ಟಾನಲಮರುದ್ಭಾಸ್ಕರದ್ಯುತಿಸಂವೃತಮ್ ‖೬೧‖

ವಿನಿರ್ಮಥಿತಶೈಲಾಗ್ರಂ ಶುಷ್ಯಮಾಣಜಲಾಶಯಮ್ ।
ಧ್ವಸ್ತದ್ರುಮಲತಾಗುಲ್ಮಂ ವಿಪ್ರಣಾಶಿತಸಾಗರಮ್ ‖೬೨‖

ತ್ರೈಲೋಕ್ಯಂ ತು ಕರಿಷ್ಯಾಮಿ ಸಂಯುಕ್ತಂ ಕಾಲಧರ್ಮಣಾ ।
ನ ತಾಂ ಕುಶಲಿನೀಂ ಸೀತಾಂ ಪ್ರದಾಸ್ಯನ್ತಿ ಯದೀಶ್ವರಾಃ ‖೬೩‖

ಅಸ್ಮಿನ್ಮುಹೂರ್ತೇ ಸೌಮಿತ್ರೇ ಮಮ ದ್ರಕ್ಷ್ಯನ್ತಿ ವಿಕ್ರಮಮ್ ।
ನಾಕಾಶಮುತ್ಪತಿಷ್ಯನ್ತಿ ಸರ್ವಭೂತಾನಿ ಲಕ್ಷ್ಮಣ ‖೬೪‖

ಮಮ ಚಾಪಗುಣೋನ್ಮುಕ್ತೈರ್ಬಾಣಜಾಲೈರ್ನಿರನ್ತರಮ್ ।
ಅರ್ದಿತಂ ಮಮ ನಾರಾಚೈರ್ಧ್ವಸ್ತಭ್ರಾನ್ತಮೃಗದ್ವಿಜಮ್ ‖೬೫‖

ಸಮಾಕುಲಮಮರ್ಯಾದಂ ಜಗತ್ಪಶ್ಯಾದ್ಯ ಲಕ್ಷ್ಮಣ ।
ಆಕರ್ಣಪೂರ್ಣೈರಿಷುಭಿರ್ಜೀವಲೋಕಂ ದುರಾಸದೈಃ ‖೬೬‖

ಕರಿಷ್ಯೇ ಮೈಥಿಲೀಹೇತೋರಪಿಶಾಚಮರಾಕ್ಷಸಮ್ ‖೬೭‖

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri

ನೈವಂ ಲಕ್ಷ್ಮಣ ವಕ್ತವ್ಯೋ ನಾಯಂ ಪರುಷಮರ್ಹತಿ ।
ಹರೀಣಾಮೀಶ್ವರಃ ಶ್ರೋತುಂ ತವ ವಕ್ತ್ರಾದ್ವಿಶೇಷತಃ ॥ ೨ ॥

ನೈವಾಕೃತಜ್ಞಃ ಸುಗ್ರೀವೋ ನ ಶಠೋ ನಾಪಿ ದಾರುಣಃ ।
ನೈವಾನೃತಕಥೋ ವೀರ ನ ಜಿಹ್ಮಶ್ಚ ಕಪೀಶ್ವರಃ ॥ ೩ ॥

ಉಪಕಾರಂ ಕೃತಂ ವೀರೋ ನಾಪ್ಯಯಂ ವಿಸ್ಮೃತಃ ಕಪಿಃ ।
ರಾಮೇಣ ವೀರ ಸುಗ್ರೀವೋ ಯದನ್ಯೈರ್ದುಷ್ಕರಂ ರಣೇ ॥ ೪ ॥

ರಾಮಪ್ರಸಾದಾತ್ಕೀರ್ತಿಂ ಚ ಕಪಿರಾಜ್ಯಂ ಚ ಶಾಶ್ವತಮ್ ।
ಪ್ರಾಪ್ತವಾನಿಹ ಸುಗ್ರೀವೋ ರುಮಾಂ ಮಾಂ ಚ ಪರಂತಪ ॥ ೫ ॥

ಸುದುಃಖಂ ಶಯಿತಃ ಪೂರ್ವಂ ಪ್ರಾಪ್ಯೇದಂ ಸುಖಮುತ್ತಮಮ್ ।
ಪ್ರಾಪ್ತಕಾಲಂ ನ ಜಾನೀತೇ ವಿಶ್ವಾಮಿತ್ರೋ ಯಥಾ ಮುನಿಃ ॥ ೬ ॥

ಘೃತಾಚ್ಯಾಂ ಕಿಲ ಸಂಸಕ್ತೋ ದಶ ವರ್ಷಾಣಿ ಲಕ್ಷ್ಮಣ ।
ಅಹೋಽಮನ್ಯತ ಧರ್ಮಾತ್ಮಾ ವಿಶ್ವಾಮಿತ್ರೋ ಮಹಾಮುನಿಃ ॥ ೭ ॥

ಸ ಹಿ ಪ್ರಾಪ್ತಂ ನ ಜಾನೀತೇ ಕಾಲಂ ಕಾಲವಿದಾಂ ವರಃ ।
ವಿಶ್ವಾಮಿತ್ರೋ ಮಹಾತೇಜಾಃ ಕಿಂ ಪುನರ್ಯಃ ಪೃಥಗ್ಜನಃ ॥ ೮ ॥

ದೇಹಧರ್ಮಂ ಗತಸ್ಯಾಸ್ಯ ಪರಿಶ್ರಾನ್ತಸ್ಯ ಲಕ್ಷ್ಮಣ ।
ಅವಿತೃಪ್ತಸ್ಯ ಕಾಮೇಷು ಕಾಮಂ ಕ್ಷನ್ತುಮಿಹಾರ್ಹಸಿ ॥ ೯ ॥

ನ ಚ ರೋಷವಶಂ ತಾತ ಗನ್ತುಮರ್ಹಸಿ ಲಕ್ಷ್ಮಣ ।
ನಿಶ್ಚಯಾರ್ಥಮವಿಜ್ಞಾಯ ಸಹಸಾ ಪ್ರಾಕೃತೋ ಯಥಾ ॥ ೧೦ ॥

ಸತ್ತ್ವಯುಕ್ತಾ ಹಿ ಪುರುಷಾಸ್ತ್ವದ್ವಿಧಾಃ ಪುರುಷರ್ಷಭ ।
ಅವಿಮೃಶ್ಯ ನ ರೋಷಸ್ಯ ಸಹಸಾ ಯಾನ್ತಿ ವಶ್ಯತಾಮ್ ॥ ೧೧ ॥

ಪ್ರಸಾದಯೇ ತ್ವಾಂ ಧರ್ಮಜ್ಞ ಸುಗ್ರೀವಾರ್ಥೇ ಸಮಾಹಿತಾ ।
ಮಹಾನ್ರೋಷಸಮುತ್ಪನ್ನಃ ಸಂರಮ್ಭಸ್ತ್ಯಜ್ಯತಾಮಯಮ್ ॥ ೧೨ ॥


CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ರುಮಾಂ ಮಾಂ ಕಪಿರಾಜ್ಯಂ ಚ ಧನಧಾನ್ಯವಸೂನಿ ಚ ।
ರಾಮಪ್ರಿಯಾರ್ಥಂ ಸುಗ್ರೀವಸ್ತ್ಯಜೇದಿತಿ ಮತಿರ್ಮಮ ॥೧೩॥

ಸಮಾನೇಷ್ಯತಿ ಸುಗ್ರೀವಃ ಸೀತಯಾ ಸಹ ರಾಘವಮ್ ।
ಶಶಾಙ್ಕಮಿವ ರೋಹಿಣ್ಯಾ ನಿಹತ್ವಾ ರಾವಣಂ ರಣೇ ॥೧೪॥

ಶತಕೋಟಿಸಹಸ್ರಾಣಿ ಲಙ್ಕಾಯಾಂ ಕಿಲ ರಾಕ್ಷಸಾಃ ।
ಅಯುತಾನಿ ಚ ಷಟ್ತ್ರಿಂಶತ್ಸಹಸ್ರಾಣಿ ಶತಾನಿ ಚ ॥೧೫॥

ಅಹತ್ವಾ ತಾಂಶ್ಚ ದುರ್ಧರ್ಷಾನ್ರಾಕ್ಷಸಾನ್ಕಾಮರೂಪಿಣಃ ।
ನ ಶಕ್ಯೋ ರಾವಣೋ ಹನ್ತುಂ ಯೇನ ಸಾ ಮೈಥಿಲೀ ಹೃತಾ ॥೧೬॥

ತೇ ನ ಶಕ್ಯಾ ರಣೇ ಹನ್ತುಮಸಹಾಯೇನ ಲಕ್ಷ್ಮಣ ।
ರಾವಣಃ ಕ್ರೂರಕರ್ಮಾ ಚ ಸುಗ್ರೀವೇಣ ವಿಶೇಷತಃ ॥೧೭॥

ಏವಮಾಖ್ಯಾತವಾನ್ವಾಲೀ ಸ ಹ್ಯಭಿಜ್ಞೋ ಹರೀಶ್ವರಃ ।
ಆಗಮಸ್ತು ನ ಮೇ ವ್ಯಕ್ತಃ ಶ್ರವಣಾತ್ತದ್ಬ್ರವೀಮ್ಯಹಮ್ ॥

ತ್ವತ್ಸಹಾಯನಿಮಿತ್ತಂ ವೈ ಪ್ರೇಷಿತಾ ಹರಿಪುಂಗವಾಃ ।
ಆನೇತುಂ ವಾನರಾನ್ಯುದ್ಧೇ ಸುಬಹೂನ್ಹರಿಯೂಥಪಾನ್ ॥೧೯॥

ತಾಂಶ್ಚ ಪ್ರತೀಕ್ಷಮಾಣೋಽಯಂ ವಿಕ್ರಾನ್ತಾನ್ಸುಮಹಾಬಲಾನ್ ।
ರಾಘವಸ್ಯಾರ್ಥಸಿದ್ಧ್ಯರ್ಥಂ ನ ನಿರ್ಯಾತಿ ಹರೀಶ್ವರಃ ॥೨೦॥

ಕೃತಾ ಸುಸಂಸ್ಥಾ ಸೌಮಿತ್ರೇ ಸುಗ್ರೀವೇಣ ಪುರಾ ಯಥಾ ।
ಅದ್ಯ ತೈರ್ವಾನರೈಃ ಸರ್ವೈರಾಗನ್ತವ್ಯಂ ಮಹಾಬಲೈಃ ॥೨೧॥

ಋಕ್ಷಕೋಟಿಸಹಸ್ರಾಣಿ ಗೋಲಾಙ್ಗೂಲಶತಾನಿ ಚ ।
ಅದ್ಯ ತ್ವಾಮುಪಯಾಸ್ಯನ್ತಿ ಜಹಿ ಕೋಪಮರಿಂದಮ ।
ಕೋಟ್ಯೋಽನೇಕಾಸ್ತು ಕಾಕುತ್ಸ್ಥ ಕಪೀನಾಂ ದೀಪ್ತತೇಜಸಾಮ್॥

ತವ ಹಿ ಮುಖಮಿದಂ ನಿರೀಕ್ಷ್ಯ ಕೋಪಾ-
ತ್ಕ್ಷತಜನಿಭೇ ನಯನೇ ನಿರೀಕ್ಷಮಾಣಾಃ ।

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

ಹರಿವರವನಿತಾ ನ ಯಾನ್ತಿ ಶಾನ್ತಿಂ
ಪ್ರಥಮಭಯಸ್ಯ ಹಿ ಶಙ್ಕಿತಾಃ ಸ್ಮ ಸರ್ವಾಃ ॥೨೩॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯೇ ಆದಿಕಾವ್ಯೇ
ಕಿಷ್ಕಿನ್ಧಾಕಾಣ್ಡೇ ಪಞ್ಚತ್ರಿಂಶಃ ಸರ್ಗಃ

---

## ಷಟ್ತ್ರಿಂಶಃ ಸರ್ಗಃ

ಇತ್ಯುಕ್ತಸ್ತಾರಯಾ ವಾಕ್ಯಂ ಪ್ರಶ್ರಿತಂ ಧರ್ಮಸಂಹಿತಮ್ ।
ಮೃದುಸ್ವಭಾವಃ ಸೌಮಿತ್ರಿಃ ಪ್ರತಿಜಗ್ರಾಹ ತದ್ವಚಃ ॥೧॥

ತಸ್ಮಿನ್ಪ್ರತಿಗೃಹೀತೇ ತು ವಾಕ್ಯೇ ಹರಿಗಣೇಶ್ವರಃ ।
ಲಕ್ಷ್ಮಣಾತ್ಸುಮಹತ್ತ್ರಾಸಂ ವಸ್ತ್ರಂ ಕ್ಲಿನ್ನಮಿವಾತ್ಯಜತ್ ॥೨॥

ತತಃ ಕಣ್ಠಗತಂ ಮಾಲ್ಯಂ ಚಿತ್ರಂ ಬಹುಗುಣಂ ಮಹತ್ ।
ಚಿಚ್ಛೇದ ವಿಮದಶ್ಚಾಸೀತ್ಸುಗ್ರೀವೋ ವಾನರೇಶ್ವರಃ ॥೩॥

ಸ ಲಕ್ಷ್ಮಣಂ ಭೀಮಬಲಂ ಸರ್ವವಾನರಸತ್ತಮಃ ।
ಅಬ್ರವೀತ್ಪ್ರಶ್ರಿತಂ ವಾಕ್ಯಂ ಸುಗ್ರೀವಃ ಸಂಪ್ರಹರ್ಷಯನ್ ॥೪॥

ಪ್ರಣಷ್ಟಾ ಶ್ರೀಶ್ಚ ಕೀರ್ತಿಶ್ಚ ಕಪಿರಾಜ್ಯಂ ಚ ಶಾಶ್ವತಮ್ ।
ರಾಮಪ್ರಸಾದಾತ್ಸೌಮಿತ್ರೇ ಪುನಃ ಪ್ರಾಪ್ತಮಿದಂ ಮಯಾ ॥೫॥

ಕಃ ಶಕ್ತಸ್ತಸ್ಯ ದೇವಸ್ಯ ವಿಖ್ಯಾತಸ್ಯ ಸ್ವಕರ್ಮಣಾ ।
ತಾದೃಶಂ ವಿಕ್ರಮಂ ವೀರ ಪ್ರತಿಕರ್ತುಮರಿಂದಮ ॥೬॥

ಸೀತಾಂ ಪ್ರಾಪ್ಸ್ಯತಿ ಧರ್ಮಾತ್ಮಾ ವಧಿಷ್ಯತಿ ಚ ರಾವಣಮ್ ।
ಸಹಾಯಮಾತ್ರೇಣ ಮಯಾ ರಾಘವಃ ಸ್ವೇನ ತೇಜಸಾ ॥೭॥

ಸಹಾಯಕೃತ್ಯಂ ಕಿಂ ತಸ್ಯ ಯೇನ ಸಪ್ತ ಮಹಾದ್ರುಮಾಃ ।
ಶೈಲಶ್ಚ ವಸುಧಾ ಚೈವ ಬಾಣೇನೈಕೇನ ದಾರಿತಾಃ ॥೮॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

ಧನುರ್ವಿಸ್ಫಾರಯಾಣಸ್ಯ ಯಸ್ಯ ಶಬ್ದೇನ ಲಕ್ಷ್ಮಣ ।
ಸಶೈಲಾ ಕಮ್ಪಿತಾ ಭೂಮಿಃ ಸಹಾಯೈಃ ಕಿಂ ನು ತಸ್ಯ ವೈ ॥೯॥

ಅನುಯಾತ್ರಾಂ ನರೇನ್ದ್ರಸ್ಯ ಕರಿಷ್ಯೇಽಹಂ ನರರ್ಷಭ ।
ಗಚ್ಛತೋ ರಾವಣಂ ಹನ್ತುಂ ವೈರಿಣಂ ಸಪುರಃಸರಮ್ ॥೧೦॥

ಯದಿ ಕಿಂಚಿದತಿಕ್ರಾನ್ತಂ ವಿಶ್ವಾಸಾತ್ಪ್ರಣಯೇನ ವಾ ।
ಪ್ರೇಷ್ಯಸ್ಯ ಕ್ಷಮಿತವ್ಯಂ ಮೇ ನ ಕಶ್ಚಿನ್ನಾಪರಾಧ್ಯತಿ ॥೧೧॥

ಇತಿ ತಸ್ಯ ಬ್ರುವಾಣಸ್ಯ ಸುಗ್ರೀವಸ್ಯ ಮಹಾತ್ಮನಃ ।
ಅಭವಲ್ಲಕ್ಷ್ಮಣಃ ಪ್ರೀತಃ ಪ್ರೇಮ್ಣಾ ಚೈನಮುವಾಚ ಹ ॥೧೨॥

ಸರ್ವಥಾ ಹಿ ಮಮ ಭ್ರಾತಾ ಸನಾಥೋ ವಾನರೇಶ್ವರ ।
ತ್ವಯಾ ನಾಥೇನ ಸುಗ್ರೀವ ಪ್ರಶ್ರಿತೇನ ವಿಶೇಷತಃ ॥೧೩॥

ಯಸ್ತೇ ಪ್ರಭಾವಃ ಸುಗ್ರೀವ ಯಚ್ಚ ತೇ ಶೌಚಮಾರ್ಜವಮ್ ।
ಅರ್ಹಸ್ತ್ವಂ ಕಪಿರಾಜ್ಯಸ್ಯ ಶ್ರಿಯಂ ಭೋಕ್ತುಮನುತ್ತಮಾಮ್ ॥

ಸಹಾಯೇನ ಚ ಸುಗ್ರೀವ ತ್ವಯಾ ರಾಮಃ ಪ್ರತಾಪವಾನ್ ।
ವಧಿಷ್ಯತಿ ರಣೇ ಶತ್ರೂನಚಿರಾನ್ನಾತ್ರ ಸಂಶಯಃ ॥೧೫॥

ಧರ್ಮಜ್ಞಸ್ಯ ಕೃತಜ್ಞಸ್ಯ ಸಂಗ್ರಾಮೇಷ್ವನಿವರ್ತಿನಃ ।
ಉಪಪನ್ನಂ ಚ ಯುಕ್ತಂ ಚ ಸುಗ್ರೀವ ತವ ಭಾಷಿತಮ್ ॥೧೬॥

ದೋಷಜ್ಞಃ ಸತಿ ಸಾಮರ್ಥ್ಯೇ ಕೋಽನ್ಯೋ ಭಾಷಿತುಮರ್ಹತಿ ।
ವರ್ಜಯಿತ್ವಾ ಮಮ ಜ್ಯೇಷ್ಠಂ ತ್ವಾಂ ಚ ವಾನರಸತ್ತಮ ॥೧೭॥

ಸದೃಶಶ್ಚಾಸಿ ರಾಮಸ್ಯ ವಿಕ್ರಮೇಣ ಬಲೇನ ಚ ।
ಸಹಾಯೋ ದೈವತೈರ್ದತ್ತಶ್ಚಿರಾಯ ಹರಿಪುಂಗವ ॥೧೮॥

ಕಿಂ ತು ಶೀಘ್ರಮಿತೋ ವೀರ ನಿಷ್ಕ್ರಮ ತ್ವಂ ಮಯಾ ಸಹ ।
ಸಾನ್ತ್ವಯಸ್ವ ವಯಸ್ಯಂ ತ್ವಂ ಭಾರ್ಯಾಹರಣಕರ್ಶಿತಮ್ ॥೧೯॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಯಚ್ಚ ಶೋಕಾಭಿಭೂತಸ್ಯ ಶ್ರುತ್ವಾ ರಾಮಸ್ಯ ಭಾಷಿತಮ್ ।
ಮಯಾ ತ್ವಂ ಪರುಷಾಣ್ಯುಕ್ತಸ್ತಚ್ಚ ತ್ವಂ ಕ್ಷನ್ತುಮರ್ಹಸಿ ॥೨೦॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯೇ ಆದಿಕಾವ್ಯೇ
ಕಿಷ್ಕಿನ್ಧಾಕಾಣ್ಡೇ ಷಟ್ತ್ರಿಂಶಃ ಸರ್ಗಃ

——

## ಸಪ್ತತ್ರಿಂಶಃ ಸರ್ಗಃ

ಏವಮುಕ್ತಸ್ತು ಸುಗ್ರೀವೋ ಲಕ್ಷ್ಮಣೇನ ಮಹಾತ್ಮನಾ ।
ಹನುಮನ್ತಂ ಸ್ಥಿತಂ ಪಾರ್ಶ್ವೇ ಸಚಿವಂ ತ್ವಿದಮಬ್ರವೀತ್ ॥೧॥

ಮಹೇನ್ದ್ರಹಿಮವದ್ವಿನ್ಧ್ಯಕೈಲಾಸಶಿಖರೇಷು ಚ ।
ಮನ್ದರೇ ಪಾಣ್ಡುಶಿಖರೇ ಪಞ್ಚಶೈಲೇಷು ಯೇ ಸ್ಥಿತಾಃ ॥೨॥

ತರುಣಾದಿತ್ಯವರ್ಣೇಷು ಭ್ರಾಜಮಾನೇಷು ಸರ್ವತಃ ।
ಪರ್ವತೇಷು ಸಮುದ್ರಾನ್ತೇ ಪಶ್ಚಿಮಾಯಾಂ ತು ಯೇ ದಿಶಿ ॥೩॥

ಆದಿತ್ಯಭವನೇ ಚೈವ ಗಿರೌ ಸಂಧ್ಯಾಭ್ರಸಂನಿಭೇ ।
ಪದ್ಮತಾಲವನಂ ಭೀಮಂ ಸಂಶ್ರಿತಾ ಹರಿಪುಂಗವಾಃ ॥೪॥

ಅಞ್ಜನಾಮ್ಬುದಸಂಕಾಶಾಃ ಕುಞ್ಜರೇನ್ದ್ರಮಹೌಜಸಃ ।
ಅಞ್ಜನೇ ಪರ್ವತೇ ಚೈವ ಯೇ ವಸನ್ತಿ ಪ್ಲವಂಗಮಾಃ ॥೫॥

ಮನಃಶೈಲಗುಹಾವಾಸಾ ವಾನರಾಃ ಕನಕಪ್ರಭಾಃ ।
ಮೇರುಪಾರ್ಶ್ವಗತಾಶ್ಚೈವ ಯೇ ಚ ಧೂಮ್ರಗಿರೌ ಸ್ಥಿತಾಃ ॥೬॥

ತರುಣಾದಿತ್ಯವರ್ಣಾಶ್ಚ ಪರ್ವತೇ ಯೇ ಮಹಾರುಣೇ ।
ಪಿಬನ್ತೋ ಮಧು ಮೈರೇಯಂ ಭೀಮವೇಗಾಃ ಪ್ಲವಂಗಮಾಃ ॥೭॥

ವನೇಷು ಚ ಸುರಮ್ಯೇಷು ಸುಗನ್ಧಿಷು ಮಹತ್ಸು ಚ ।
ತಾಪಸಾನಾಂ ಚ ರಮ್ಯೇಷು ವನಾನ್ತೇಷು ಸಮನ್ತತಃ ॥೮॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.


ತಾಂಸ್ತಾಂಸ್ತ್ವಮಾನಯ ಕ್ಷಿಪ್ರಂ ಪೃಥಿವ್ಯಾಂ ಸರ್ವವಾನರಾನ್ ।
ಸಾಮದಾನಾದಿಭಿಃ ಕಲ್ಪೈರಾಶು ಪ್ರೇಷಯ ವಾನರಾನ್ ॥೯॥

ಪ್ರೇಷಿತಾಃ ಪ್ರಥಮಂ ಯೇ ಚ ಮಯಾ ದೂತಾ ಮಹಾಜವಾಃ ।
ತ್ವರಣಾರ್ಥಂ ತು ಭೂಯಸ್ತ್ವಂ ಹರೀನ್ಸಂಪ್ರೇಷಯಾಪರಾನ್ ॥

ಯೇ ಪ್ರಸಕ್ತಾಶ್ಚ ಕಾಮೇಷು ದೀರ್ಘಸೂತ್ರಾಶ್ಚ ವಾನರಾಃ ।
ಇಹಾನಯಸ್ವ ತಾನ್ಸರ್ವಾನ್ ಶೀಘ್ರಂ ತು ಮಮ ಶಾಸನಾತ್ ॥

ಅಹೋಭಿರ್ದಶಭಿರ್ಯೇ ಹಿ ನಾಗಚ್ಛನ್ತಿ ಮಮಾಜ್ಞಯಾ ।
ಹನ್ತವ್ಯಾಸ್ತೇ ದುರಾತ್ಮಾನೋ ರಾಜಶಾಸನದೂಷಕಾಃ ॥೧೨॥

ಶತಾನ್ಯಥ ಸಹಸ್ರಾಣಾಂ ಕೋಟ್ಯಶ್ಚ ಮಮ ಶಾಸನಾತ್ ।
ಪ್ರಯಾನ್ತು ಕಪಿಸಿಂಹಾನಾಂ ದಿಶೋ ಮಮ ಮತೇ ಸ್ಥಿತಾಃ ॥೧೩॥

ಮೇರುಮನ್ದರಸಂಕಾಶಾ ಶ್ಛಾದಯನ್ತ ಇವಾಮ್ಬರಮ್ ।
ಘೋರರೂಪಾಃ ಕಪಿಶ್ರೇಷ್ಠಾ ಯಾನ್ತು ಮಚ್ಛಾಸನಾದಿತಃ ॥೧೪॥

ತೇ ಗತಿಜ್ಞಾ ಗತಿಂ ಗತ್ವಾ ಪೃಥಿವ್ಯಾಂ ಸರ್ವವಾನರಾಃ ।
ಆನಯನ್ತು ಹರೀನ್ಸರ್ವಾಂಸ್ತ್ವರಿತಾಃ ಶಾಸನಾನ್ಮಮ ॥೧೫॥

ತಸ್ಯ ವಾನರರಾಜಸ್ಯ ಶ್ರುತ್ವಾ ವಾಯುಸುತೋ ವಚಃ ।
ದಿಕ್ಷು ಸರ್ವಾಸು ವಿಕ್ರಾನ್ತಾನ್ಪ್ರೇಷಯಾಮಾಸ ವಾನರಾನ್ ॥೧೬॥

ತೇ ಪದಂ ವಿಷ್ಣುವಿಕ್ರಾನ್ತಂ ಪತತ್ರಿಜ್ಯೋತಿರಧ್ವಗಾಃ ।
ಪ್ರಯಾತಾಃ ಪ್ರಹಿತಾ ರಾಜ್ಞಾ ಹರಯಸ್ತು ಕ್ಷಣೇನ ವೈ ॥೧೭॥

ತೇ ಸಮುದ್ರೇಷು ಗಿರಿಷು ವನೇಷು ಚ ಸರಃಸು ಚ ।
ವಾನರಾ ವಾನರಾನ್ಸರ್ವಾನ್ರಾಮಹೇತೋರಚೋದಯನ್ ॥೧೮॥

ಮೃತ್ಯುಕಾಲೋಪಮಸ್ಯಾಜ್ಞಾಂ ರಾಜರಾಜಸ್ಯ ವಾನರಾಃ ।
ಸುಗ್ರೀವಸ್ಯಾಯಯುಃ ಶ್ರುತ್ವಾ ಸುಗ್ರೀವಭಯದರ್ಶಿನಃ ॥೧೯॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ತತಸ್ತೇಽಞ್ಜನಸಂಕಾಶಾ ಗಿರೇಸ್ತಸ್ಮಾನ್ಮಹಾಜವಾಃ ।
ತಿಸ್ರಃ ಕೋಟ್ಯಃ ಪ್ಲವಂಗಾನಾಂ ನಿರ್ಯಯುರ್ಯತ್ರ ರಾಘವಃ ॥

ಅಸ್ತಂ ಗಚ್ಛತಿ ಯತ್ರಾರ್ಕಸ್ತಸ್ಮಿನ್ಗಿರಿವರೇ ಸ್ಥಿತಾಃ ।
ತಪ್ತಹೇಮಮಹಾಭಾಸಸ್ತಸ್ಮಾತ್ಕೋಟ್ಯೋ ದಶ ಚ್ಯುತಾಃ ॥೨೦॥

ಕೈಲಾಸಶಿಖರೇಭ್ಯಶ್ಚ ಸಿಂಹಕೇಸರವರ್ಚಸಾಮ್ ।
ತತಃ ಕೋಟಿಸಹಸ್ರಾಣಿ ವಾನರಾಣಾಮುಪಾಗಮನ್ ॥೨೨॥

ಫಲಮೂಲೇನ ಜೀವನ್ತೋ ಹಿಮವನ್ತಮುಪಾಶ್ರಿತಾಃ ।
ತೇಷಾಂ ಕೋಟಿಸಹಸ್ರಾಣಾಂ ಸಹಸ್ರಂ ಸಮವರ್ತತ ॥೨೩॥

ಅಙ್ಗಾರಕಸಮಾನಾನಾಂ ಭೀಮಾನಾಂ ಭೀಮಕರ್ಮಣಾಮ್ ।
ವಿನ್ಧ್ಯಾದ್ವಾನರಕೋಟೀನಾಂ ಸಹಸ್ರಾಣ್ಯಪತನ್ದ್ರುತಮ್ ॥೨೪॥

ಕ್ಷೀರೋದವೇಲಾನಿಲಯಾಸ್ತಮಾಲವನವಾಸಿನಃ ।
ನಾರಿಕೇಲಾಶನಾಶ್ಚೈವ ತೇಷಾಂ ಸಂಖ್ಯಾ ನ ವಿದ್ಯತೇ ॥೨೫॥

ವನೇಭ್ಯೋ ಗಹ್ವರೇಭ್ಯಶ್ಚ ಸರಿದ್ಭ್ಯಶ್ಚ ಮಹಾಜವಾಃ ।
ಆಗಚ್ಛದ್ವಾನರೀ ಸೇನಾ ಪಿಬನ್ತೀವ ದಿವಾಕರಮ್ ॥೨೬॥

ಯೇ ತು ತ್ವರಯಿತುಂ ಯಾತಾ ವಾನರಾಃ ಸರ್ವವಾನರಾನ್ ।
ತೇ ವೀರಾ ಹಿಮವಚ್ಛೈಲೇ ದದೃಶುಸ್ತಂ ಮಹಾದ್ರುಮಮ್॥೨೭॥

ತಸ್ಮಿನ್ಗಿರಿವರೇ ಪುಣ್ಯೇ ಯಜ್ಞೋ ಮಾಹೇಶ್ವರಃ ಪುರಾ ।
ಸರ್ವದೇವಮನಸ್ತೋಷೋ ಬಭೂವ ಸುಮನೋರಮಃ ॥೨೮॥

ಅನ್ನನಿಷ್ಯನ್ದಜಾತಾನಿ ಮೂಲಾನಿ ಚ ಫಲಾನಿ ಚ ।
ಅಮೃತಾಸ್ವಾದಕಲ್ಪಾನಿ ದದೃಶುಸ್ತತ್ರ ವಾನರಾಃ ॥೨೯॥

ತದನ್ನಸಂಭವಂ ದಿವ್ಯಂ ಫಲಂ ಮೂಲಂ ಮನೋಹರಮ್ ।
ಯಃ ಕಶ್ಚಿತ್ಸಕೃದಶ್ನಾತಿ ಮಾಸಂ ಭವತಿ ತರ್ಪಿತಃ ॥೩೦॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.



ತಾನಿ ಮೂಲಾನಿ ದಿವ್ಯಾನಿ ಫಲಾನಿ ಚ ಫಲಾಶನಾಃ ।
ಔಷಧಾನಿ ಚ ದಿವ್ಯಾನಿ ಜಗೃಹುರ್ಹರಿಪುಂಗವಾಃ ॥೩೧॥

ತಸ್ಮಾಚ್ಚ ಯಜ್ಞಾಯತನಾತ್ಪುಷ್ಪಾಣಿ ಸುರಭೀಣಿ ಚ ।
ಆನಿನ್ಯುರ್ವಾನರಾ ಗತ್ವಾ ಸುಗ್ರೀವಪ್ರಿಯಕಾರಣಾತ್ ।೩೨॥

ತೇ ತು ಸರ್ವೇ ಹರಿವರಾಃ ಪೃಥಿವ್ಯಾಂ ಸರ್ವವಾನರಾನ್ ।
ಸಂಚೋದಯಿತ್ವಾ ತ್ವರಿತಾ ಯೂಥಾನಾಂ ಜಗ್ಮುರಗ್ರತಃ ॥೩೩॥

ತೇ ತು ತೇನ ಮುಹೂರ್ತೇನ ಯೂಥಪಾಃ ಶೀಘ್ರಚಾರಿಣಃ ।
ಕಿಷ್ಕಿನ್ಧಾಂ ತ್ವರಯಾ ಪ್ರಾಪ್ತಾಃ ಸುಗ್ರೀವೋ ಯತ್ರ ವಾನರಃ ॥

ತೇ ಗೃಹೀತ್ವೌಷಧೀಃ ಸರ್ವಾಃ ಫಲಂ ಮೂಲಂ ಚ ವಾನರಾಃ ।
ತಂ ಪ್ರತಿಗ್ರಾಹಯಾಮಾಸುರ್ವಚನಂ ಚೇದಮಬ್ರುವನ್ ॥೩೫॥

ಸರ್ವೇ ಪರಿಗತಾಃ ಶೈಲಾಃ ಸರಿತಶ್ಚ ವನಾನಿ ಚ ।
ಪೃಥಿವ್ಯಾಂ ವಾನರಾಃ ಸರ್ವೇ ಶಾಸನಾದುಪಯಾನ್ತಿ ತೇ ॥೩೬॥

ಏವಂ ಶ್ರುತ್ವಾ ತತೋ ಹೃಷ್ಟಃ ಸುಗ್ರೀವಃ ಪ್ಲವಗಾಧಿಪಃ ।
ಪ್ರತಿಜಗ್ರಾಹ ಚ ಪ್ರೀತಸ್ತೇಷಾಂ ಸರ್ವಮುಪಾಯನಮ್ ॥೩೭॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯೇ ಆದಿಕಾವ್ಯೇ
ಕಿಷ್ಕಿನ್ಧಾಕಾಣ್ಡೇ ಸಪ್ತತ್ರಿಂಶಃ ಸರ್ಗಃ

———

## ಅಷ್ಟಾತ್ರಿಂಶಃ ಸರ್ಗಃ

ಪ್ರತಿಗೃಹ್ಯ ಚ ತತ್ಸರ್ವಮುಪಾಯನಮುಪಾಹೃತಮ್ ।
ವಾನರಾನ್ಸಾನ್ತ್ವಯಿತ್ವಾ ಚ ಸರ್ವಾನೇವ ವ್ಯಸರ್ಜಯತ್ ॥೧॥

ವಿಸರ್ಜಯಿತ್ವಾ ಸ ಹರೀನ್ ಶೂರಾಂಸ್ತಾನ್ಕೃತಕರ್ಮಣಃ ।
ಮೇನೇ ಕೃತಾರ್ಥಮಾತ್ಮಾನಂ ರಾಘವಂ ಚ ಮಹಾಬಲಮ್ ॥೨॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಸ ಲಕ್ಷ್ಮಣೋ ಭೀಮಬಲಂ ಸರ್ವವಾನರಸತ್ತಮಮ್ ।
ಅಬ್ರವೀತ್ಪ್ರಶ್ರಿತಂ ವಾಕ್ಯಂ ಸುಗ್ರೀವಂ ಸಂಪ್ರಹರ್ಷಯನ್ ॥೩॥

ಕಿಷ್ಕಿನ್ಧಾಯಾ ವಿನಿಷ್ಕ್ರಾಮ ಯದಿ ತೇ ಸೌಮ್ಯ ರೋಚತೇ ।
ತಸ್ಯ ತದ್ವಚನಂ ಶ್ರುತ್ವಾ ಲಕ್ಷ್ಮಣಸ್ಯ ಸುಭಾಷಿತಮ್ ॥೪॥

ಸುಗ್ರೀವಃ ಪರಮಪ್ರೀತೋ ವಾಕ್ಯಮೇತದುವಾಚ ಹ ।
ಏವಂ ಭವತು ಗಚ್ಛಾವಃ ಸ್ಥೇಯಂ ತ್ವಚ್ಛಾಸನೇ ಮಯಾ ॥೫॥

ತಮೇವಮುಕ್ತ್ವಾ ಸುಗ್ರೀವೋ ಲಕ್ಷ್ಮಣಂ ಶುಭಲಕ್ಷಣಮ್ ।
ವಿಸರ್ಜಯಾಮಾಸ ತದಾ ತಾರಾಮನ್ಯಾಶ್ಚ ಯೋಷಿತಃ ॥೬॥

ಏತೇತ್ಯುಚ್ಚೈರ್ಹರಿವರಾನ್ಸುಗ್ರೀವಃ ಸಮುದಾಹರತ್ ।
ತಸ್ಯ ತದ್ವಚನಂ ಶ್ರುತ್ವಾ ಹರಯಃ ಶೀಘ್ರಮಾಯಯುಃ ॥೭॥

ಬದ್ಧಾಞ್ಜಲಿಪುಟಾಃ ಸರ್ವೇ ಯೇ ಸ್ಯುಃ ಸ್ತ್ರೀದರ್ಶನಕ್ಷಮಾಃ ।
ತಾನುವಾಚ ತತಃ ಪ್ರಾಪ್ತಾನ್ರಾಜಾರ್ಕಸದೃಶಪ್ರಭಃ ॥೮॥

ಉಪಸ್ಥಾಪಯತ ಕ್ಷಿಪ್ರಂ ಶಿಬಿಕಾಂ ಮಮ ವಾನರಾಃ ।
ಶ್ರುತ್ವಾ ತು ವಚನಂ ತಸ್ಯ ಹರಯಃ ಶೀಘ್ರವಿಕ್ರಮಾಃ ॥೯॥

ಸಮುಪಸ್ಥಾಪಯಾಮಾಸುಃ ಶಿಬಿಕಾಂ ಪ್ರಿಯದರ್ಶನಾಮ್ ।
ತಾಮುಪಸ್ಥಾಪಿತಾಂ ದೃಷ್ಟ್ವಾ ಶಿಬಿಕಾಂ ವಾನರಾಧಿಪಃ ॥೧೦॥

ಲಕ್ಷ್ಮಣಾರುಹ್ಯತಾಂ ಶೀಘ್ರಮಿತಿ ಸೌಮಿತ್ರಿಮಬ್ರವೀತ್ ।
ಇತ್ಯುಕ್ತ್ವಾ ಕಾಞ್ಚನಂ ಯಾನಂ ಸುಗ್ರೀವಃ ಸೂರ್ಯಸಂನಿಭಮ್ ।
ಬೃಹದ್ಭಿರ್ಹರಿಭಿರ್ಯುಕ್ತಮಾರುರೋಹ ಸಲಕ್ಷ್ಮಣಃ ॥೧೧॥

ಪಾಣ್ಡುರೇಣಾತಪತ್ರೇಣ ಧ್ರಿಯಮಾಣೇನ ಮೂರ್ಧನಿ ।
ಶುಕ್ಲೈಶ್ಚ ವಾಲವ್ಯಜನೈರ್ಧೂಯಮಾನೈಃ ಸಮನ್ತತಃ ॥೧೨॥

ಶಙ್ಖಭೇರೀನಿನಾದೈಶ್ಚ ವನ್ದಿಭಿಶ್ಚಾಭಿನನ್ದಿತಃ ।
ನಿರ್ಯಯೌ ಪ್ರಾಪ್ಯ ಸುಗ್ರೀವೋ ರಾಜ್ಯಶ್ರಿಯ-
ಮನುತ್ತಮಾಮ್ ॥೧೩॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸ ವಾನರಶತೈಸ್ತೀಕ್ಷ್ಣೈರ್ಬಹುಭಿಃ ಶಸ್ತ್ರಪಾಣಿಭಿಃ ।
ಪರಿಕೀರ್ಣೋ ಯಯೌ ತತ್ರ ಯತ್ರ ರಾಮೋ ವ್ಯವಸ್ಥಿತಃ ॥೧೪॥

ಸ ತಂ ದೇಶಮನುಪ್ರಾಪ್ಯ ಶ್ರೇಷ್ಠಂ ರಾಮನಿಷೇವಿತಮ್ ।
ಅವಾತರನ್ಮಹಾತೇಜಾಃ ಶಿಬಿಕಾಯಾಃ ಸಲಕ್ಷ್ಮಣಃ ॥೧೫॥

ಆಸಾದ್ಯ ಚ ತತೋ ರಾಮಂ ಕೃತಾಞ್ಜಲಿಪುಟೋಽಭವತ್ ।
ಕೃತಾಞ್ಜಲೌ ಸ್ಥಿತೇ ತಸ್ಮಿನ್ವಾನರಾಶ್ಚಾಭವಂಸ್ತಥಾ ॥೧೬॥

ತಟಾಕಮಿವ ತದ್ದೃಷ್ಟ್ವಾ ರಾಮಃ ಕುಡ್ಮಲಪಙ್ಕಜಮ್ ।
ವಾನರಾಣಾಂ ಮಹತ್ಸೈನ್ಯಂ ಸುಗ್ರೀವೇ ಪ್ರೀತಿಮಾನಭೂತ್ ॥

ಪಾದಯೋಃ ಪತಿತಂ ಮೂರ್ಧ್ನಾ ತಮುತ್ಥಾಪ್ಯ ಹರೀಶ್ವರಮ್ ।
ಪ್ರೇಮ್ಣಾ ಚ ಬಹುಮಾನಾಚ್ಚ ರಾಘವಃ ಪರಿಷಸ್ವಜೇ ।
ಪರಿಷ್ವಜ್ಯ ಚ ಧರ್ಮಾತ್ಮಾ ನಿಷೀದೇತಿ ತತೋಽಬ್ರವೀತ್ ॥೧೮॥

ನಿಷಣ್ಣಂ ತಂ ತತೋ ದೃಷ್ಟ್ವಾ ಕ್ಷಿತೌ ರಾಮೋಽಬ್ರವೀದ್ವಚಃ ॥

ಧರ್ಮಮರ್ಥಂ ಚ ಕಾಮಂ ಚ ಕಾಲೇ ಯಸ್ತು ನಿಷೇವತೇ ।
ವಿಭಜ್ಯ ಸತತಂ ವೀರ ಸ ರಾಜಾ ಹರಿಸತ್ತಮ ॥೨೦॥

ಹಿತ್ವಾ ಧರ್ಮಂ ತಥಾರ್ಥಂ ಚ ಕಾಮಂ ಯಸ್ತು ನಿಷೇವತೇ ।
ಸ ವೃಕ್ಷಾಗ್ರೇ ಯಥಾ ಸುಪ್ತಃ ಪತಿತಃ ಪ್ರತಿಬುಧ್ಯತೇ ॥೨೦॥

ಅಮಿತ್ರಾಣಾಂ ವಧೇ ಯುಕ್ತೋ ಮಿತ್ರಾಣಾಂ ಸಂಗ್ರಹೇ ರತಃ ।
ತ್ರಿವರ್ಗಫಲಭೋಕ್ತಾ ತು ರಾಜಾ ಧರ್ಮೇಣ ಯುಜ್ಯತೇ ॥೨೨॥

ಉದ್ಯೋಗಸಮಯಸ್ತ್ವೇಷ ಪ್ರಾಪ್ತಃ ಶತ್ರುನಿಷೂದನ ।
ಸಂಚಿನ್ತ್ಯತಾಂ ಹಿ ಪಿಙ್ಗೇಶ ಹರಿಭಿಃ ಸಹ ಮನ್ತ್ರಿಭಿಃ ॥೨೩॥

ಏವಮುಕ್ತಸ್ತು ಸುಗ್ರೀವೋ ರಾಮಂ ವಚನಮಬ್ರವೀತ್ ॥೨೪॥

ಪ್ರಣಷ್ಟಾ ಶ್ರೀಶ್ಚ ಕೀರ್ತಿಶ್ಚ ಕಪಿರಾಜ್ಯಂ ಚ ಶಾಶ್ವತಮ್ ।
ತ್ವತ್ಪ್ರಸಾದಾನ್ಮಹಾಬಾಹೋ ಪುನಃ ಪ್ರಾಪ್ತಮಿದಂ ಮಯಾ ॥೨೫॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತವ ದೇವ ಪ್ರಸಾದಾಚ್ಚ ಭ್ರಾತುಶ್ಚ ಜಯತಾಂ ವರ ।
ಕೃತಂ ನ ಪ್ರತಿಕುರ್ಯಾದ್ಯಃ ಪುರುಷಾಣಾಂ ಸ ದೂಷಕಃ ॥೨೬॥

ಏತೇ ವಾನರಮುಖ್ಯಾಶ್ಚ ಶತಶಃ ಶತ್ರುಸೂದನ ।
ಪ್ರಾಪ್ತಾಶ್ಚಾದಾಯ ಬಲಿನಃ ಪೃಥಿವ್ಯಾಂ ಸರ್ವವಾನರಾನ್ ॥೨೭॥

ಋಕ್ಷಾಶ್ಚ ವಾನರಾಃ ಶೂರಾ ಗೋಲಾಙ್ಗೂಲಾಶ್ಚ ರಾಘವ ।
ಕಾನ್ತಾರವನದುರ್ಗಾಣಾಮಭಿಜ್ಞಾ ಘೋರದರ್ಶನಾಃ ॥೨೮॥

ದೇವಗನ್ಧರ್ವಪುತ್ರಾಶ್ಚ ವಾನರಾಃ ಕಾಮರೂಪಿಣಃ ।
ಸ್ವೈಃ ಸ್ವೈಃ ಪರಿವೃತಾಃ ಸೈನ್ಯೈರ್ವರ್ತನ್ತೇ ಪಥಿ ರಾಘವ ॥೨೯॥

ಶತೈಃ ಶತಸಹಸ್ರೈಶ್ಚ ಕೋಟಿಭಿಶ್ಚ ಪ್ಲವಂಗಮಾಃ ।
ಅಯುತೈಶ್ಚಾವೃತಾ ವೀರಾಃ ಶಙ್ಕುಭಿಶ್ಚ ಪರಂತಪ ॥೩೦॥

ಅರ್ಬುದೈರರ್ಬುದಶತೈರ್ಮಧ್ಯೈಶ್ಚಾನ್ತೈಶ್ಚ ವಾನರಾಃ ।
ಸಮುದ್ರೈಶ್ಚ ಪರಾರ್ಧೈಶ್ಚ ಹರಯೋ ಹರಿಯೂಥಪಾಃ ॥೩೧॥

ಆಗಮಿಷ್ಯನ್ತಿ ತೇ ರಾಜನ್ಮಹೇನ್ದ್ರಸಮವಿಕ್ರಮಾಃ ।
ಮೇರುಮನ್ದರಸಂಕಾಶಾ ಮೇರುವಿನ್ಧ್ಯಕೃತಾಲಯಾಃ ॥೩೨॥

ತೇ ತ್ವಾಮಭಿಗಮಿಷ್ಯನ್ತಿ ರಾಕ್ಷಸಂ ಯೇ ಸಬಾಂಧವಮ್ ।
ನಿಹತ್ಯ ರಾವಣಂ ಯುದ್ಧೇ ಹ್ಯಾನಯಿಷ್ಯನ್ತಿ ಮೈಥಿಲೀಮ್ ॥೩೩॥

ತತಸ್ತಮುದ್ಯೋಗಮವೇಕ್ಷ್ಯ ವೀರ್ಯವಾ-
ನ್ಹರಿಪ್ರವೀರಸ್ಯ ನಿದೇಶವರ್ತಿನಃ ।
ಬಭೂವ ಹರ್ಷಾದ್ವಸುಧಾಧಿಪಾತ್ಮಜಃ
ಪ್ರಬುದ್ಧನೀಲೋತ್ಪಲತುಲ್ಯದರ್ಶನಃ ॥೩೪॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯೇ ಆದಿಕಾವ್ಯೇ
ಕಿಷ್ಕಿನ್ಧಾಕಾಣ್ಡೇ ಅಷ್ಟಾತ್ರಿಂಶಃ ಸರ್ಗಃ

—

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

## ಏಕೋನಚತ್ವಾರಿಂಶಃ ಸರ್ಗಃ

ಇತಿ ಬ್ರುವಾಣಂ ಸುಗ್ರೀವಂ ರಾಮೋ ಧರ್ಮಭೃತಾಂ ವರಃ ।
ಬಾಹುಭ್ಯಾಂ ಸಂಪರಿಷ್ವಜ್ಯ ಪ್ರತ್ಯುವಾಚ ಕೃತಾಞ್ಜಲಿಮ್ ॥೧॥

ಯದಿನ್ದ್ರೋ ವರ್ಷತೇ ವರ್ಷಂ ನ ತಚ್ಚಿತ್ರಂ ಭವೇತ್ಕ್ವಚಿತ್ ।
ಆದಿತ್ಯೋ ವಾ ಸಹಸ್ರಾಂಶುಃ ಕುರ್ಯಾದ್ವಿತಿಮಿರಂ ನಭಃ ॥೨॥

ಚನ್ದ್ರಮಾ ರಜನೀಂ ಕುರ್ಯಾತ್ಪೃಥಿವೀಂ ಸೌಮ್ಯ ನಿರ್ಮಲಾಮ್।
ತ್ವದ್ವಿಧೋ ವಾಪಿ ಮಿತ್ರಾಣಾಂ ಪ್ರತಿಕುರ್ಯಾತ್ಪರಂತಪ ॥೩॥

ಏವಂ ತ್ವಯಿ ಸ ತಚ್ಚಿತ್ರಂ ಭವೇದ್ಯತ್ಸೌಮ್ಯ ಶೋಭನಮ್ ।
ಜಾನಾಮ್ಯಹಂ ತ್ವಾಂ ಸುಗ್ರೀವ ಸತತಂ ಪ್ರಿಯವಾದಿನಮ್ ॥೪॥

ತ್ವತ್ಸನಾಥಃ ಸಖೇ ಸಂಖ್ಯೇ ಜೇತಾಸ್ಮಿ ಸಕಲಾನರೀನ್ ।
ತ್ವಮೇವ ಮೇ ಸುಹೃನ್ಮಿತ್ರಂ ಸಾಹಾಯ್ಯಂ ಕರ್ತುಮರ್ಹಸಿ ॥೫॥

ಜಹಾರಾತ್ಮವಿನಾಶಾಯ ಮೈಥಿಲೀಂ ರಾಕ್ಷಸಾಧಮಃ ।
ವಞ್ಚಯಿತ್ವಾ ತು ಪೌಲೋಮೀಮನುಹ್ಲಾದೋ ಯಥಾ
ಶಚೀಮ್॥೬॥

ನ ಚಿರಾತ್ತಂ ಹನಿಷ್ಯಾಮಿ ರಾವಣಂ ನಿಶಿತೈಃ ಶರೈಃ ।
ಪೌಲೋಮ್ಯಾಃ ಪಿತರಂ ದೃಪ್ತಂ ಶತಕ್ರತುರಿವಾಹವೇ ॥೭॥

ಏತಸ್ಮಿನ್ನನ್ತರೇ ಚೈವ ರಜಃ ಸಮಭಿವರ್ತತ ।
ಉಷ್ಣಾಂ ತೀವ್ರಾಂ ಸಹಸ್ರಾಂಶೋಶ್ಛಾದಯದ್ಗಗನೇ ಪ್ರಭಾಮ್॥

ದಿಶಃ ಪರ್ಯಾಕುಲಾಶ್ಚಾಸನ್ರಜಸಾ ತೇನ ಮೂರ್ಛಿತಾಃ ।
ಚಚಾಲ ಚ ಮಹೀ ಸರ್ವಾ ಸಶೈಲವನಕಾನನಾ ॥೯॥

ತತೋ ನಗೇನ್ದ್ರಸಂಕಾಶೈಸ್ತೀಕ್ಷ್ಣದಂಷ್ಟ್ರೈರ್ಮಹಾಬಲೈಃ ।
ಕೃತ್ಸ್ನಾ ಸಂಛಾದಿತಾ ಭೂಮಿರಸಂಖ್ಯೇಯೈಃ ಪ್ಲವಂಗಮೈಃ॥೧೦॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.


ನಿಮೇಷಾನ್ತರಮಾತ್ರೇಣ ತತಸ್ತೈರ್ಹರಿಯೂಥಪೈಃ ।
ಕೋಟೀಶತಪರೀವಾರೈಃ ಕಾಮರೂಪಿಭಿರಾವೃತಾ ॥೧೧॥

ನಾದೇಯೈಃ ಪಾರ್ವತೀಯೈಶ್ಚ ಸಾಮುದ್ರೈಶ್ಚ ಮಹಾಬಲೈಃ ।
ಹರಿಭಿರ್ಮೇಘನಿರ್ಹ್ರಾದೈರನ್ಯೈಶ್ಚ ವನವಾಸಿಭಿಃ ।೧೨॥

ತರುಣಾದಿತ್ಯವರ್ಣೈಶ್ಚ ಶಶಿಗೌರೈಶ್ಚ ವಾನರೈಃ ।
ಪದ್ಮಕೇಸರವರ್ಣೈಶ್ಚ ಶ್ವೇತೈರ್ಮೇರುಕೃತಾಲಯೈಃ ॥೧೩॥

ಕೋಟೀಸಹಸ್ರೈರ್ದಶಭಿಃ ಶ್ರೀಮಾನ್ಪರಿವೃತಸ್ತದಾ ।
ವೀರಃ ಶತಬಲಿರ್ನಾಮ ವಾನರಃ ಪ್ರತ್ಯದೃಶ್ಯತ ॥೧೪॥

ತತಃ ಕಾಞ್ಚನಶೈಲಾಭಸ್ತಾರಾಯಾ ವೀರ್ಯವಾನ್ಪಿತಾ ।
ಅನೇಕೈರ್ಬಹುಸಾಹಸ್ರೈಃ ಕೋಟಿಭಿಃ ಪ್ರತ್ಯದೃಶ್ಯತ ॥೧೫॥

ತಥಾಪರೇಣ ಕೋಟೀನಾಂ ಸಹಸ್ರೇಣ ಸಮನ್ವಿತಃ ।
ಪಿತಾ ರುಮಾಯಾಃ ಸಮ್ಪ್ರಾಪ್ತಃ ಸುಗ್ರೀವಶ್ವಶುರೋ ವಿಭುಃ ॥

ಪದ್ಮಕೇಸರಸಂಕಾಶಸ್ತರುಣಾರ್ಕನಿಭಾನನಃ ।
ಬುದ್ಧಿಮಾನ್ವಾನರಶ್ರೇಷ್ಠಃ ಸರ್ವವಾನರಸತ್ತಮಃ ॥೧೭॥

ಅನೇಕೈರ್ಬಹುಸಾಹಸ್ರೈರ್ವಾನರಾಣಾಂ ಸಮನ್ವಿತಃ ।
ಪಿತಾ ಹನುಮತಃ ಶ್ರೀಮಾನ್ಕೇಸರೀ ಪ್ರತ್ಯದೃಶ್ಯತ ॥೧೮॥

ಗೋಲಾಙ್ಗೂಲಮಹಾರಾಜೋ ಗವಾಕ್ಷೋ ಭೀಮವಿಕ್ರಮಃ ।
ವೃತಃ ಕೋಟಿಸಹಸ್ರೇಣ ವಾನರಾಣಾಮದೃಶ್ಯತ ॥೧೯॥

ಋಕ್ಷಾಣಾಂ ಭೀಮವೇಗಾನಾಂ ಧೂಮ್ರಃ ಶತ್ರುನಿಬರ್ಹಣಃ ।
ವೃತಃ ಕೋಟಿಸಹಸ್ರಾಭ್ಯಾಂ ದ್ವಾಭ್ಯಾಂ ಸಮಭಿವರ್ತತ ॥೨೦॥

ಮಹಾಚಲನಿಭೈರ್ಘೋರೈಃ ಪನಸೋ ನಾಮ ಯೂಥಪಃ ।
ಆಜಗಾಮ ಮಹಾವೀರ್ಯಸ್ತಿಸೃಭಿಃ ಕೋಟಿಭಿರ್ವೃತಃ ॥೨೧॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ನೀಲಾಞ್ಜನಚಯಾಕಾರೋ ನೀಲೋ ನಾಮಾಥ ಯೂಥಪಃ ।
ಅದೃಶ್ಯತ ಮಹಾಕಾಯಃ ಕೋಟಿಭಿರ್ದಶಭಿರ್ವೃತಃ ॥೨೨॥

ತತಃ ಕಾಞ್ಚನಶೈಲಾಭೋ ಗವಯೋ ನಾಮ ಯೂಥಪಃ ।
ಆಜಗಾಮ ಮಹಾವೀರ್ಯಃ ಕೋಟಿಭಿಃ ಪಞ್ಚಭಿರ್ವೃತಃ ॥೨೩॥

ದರೀಮುಖಶ್ಚ ಬಲವಾನ್ಯೂಥಪೋಽಭ್ಯಾಯಯೌ ತದಾ ।
ವೃತಃ ಕೋಟಿಸಹಸ್ರೇಣ ಸುಗ್ರೀವಂ ಸಮುಪಸ್ಥಿತಃ ॥೨೪॥

ಮೈನ್ದಶ್ಚ ದ್ವಿವಿದಶ್ಚೋಭಾವಶ್ವಿಪುತ್ರೌ ಮಹಾಬಲೌ ।
ಕೋಟಿಕೋಟಿಸಹಸ್ರೇಣ ವಾನರಾಣಾಮದೃಶ್ಯತಾಮ್ ॥೨೫॥

ಗಜಶ್ಚ ಬಲವಾನ್ವೀರಸ್ತಿಸೃಭಿಃ ಕೋಟಿಭಿರ್ವೃತಃ ।
ಆಜಗಾಮ ಮಹಾತೇಜಾಃ ಸುಗ್ರೀವಸ್ಯ ಸಮೀಪತಃ ॥೨೬॥

ಋಕ್ಷರಾಜೋ ಮಹಾತೇಜಾ ಜಾಮ್ಬವಾನ್ನಾಮ ನಾಮತಃ ।
ಕೋಟಿಭಿರ್ದಶಭಿಃ ಪ್ರಾಪ್ತಃ ಸುಗ್ರೀವಸ್ಯ ವಶೇ ಸ್ಥಿತಃ ॥೨೭॥

ರುಮಣ್ವಾನ್ನಾಮ ತೇಜಸ್ವೀ ವಿಕ್ರಾನ್ತೋ ವಾನರೇಶ್ವರಮ್ ।
ಆಯಯೌ ಬಲವಾಂಸ್ತೂರ್ಣಂ ಕೋಟೀಶತಸಮಾವೃತಃ ॥೨೮॥

ತತಃ ಕೋಟಿಸಹಸ್ರಾಣಾಂ ಸಹಸ್ರೇಣ ಶತೇನ ಚ ।
ಪೃಷ್ಠತೋಽನುಗತಃ ಪ್ರಾಪ್ತೋ ಹರಿಭಿರ್ಗನ್ಧಮಾದನಃ ॥೨೯॥

ತತಃ ಪದ್ಮಸಹಸ್ರೇಣ ವೃತಃ ಶಙ್ಕುಶತೇನ ಚ ।
ಯುವರಾಜೋಽಙ್ಗದಃ ಪ್ರಾಪ್ತಃ ಪಿತೃತುಲ್ಯಪರಾಕ್ರಮಃ ॥೩೦॥

ತತಸ್ತಾರೋ ದ್ಯುತಿಸ್ತಾರೋ ಹರಿಭಿರ್ಭೀಮಪರಾಕ್ರಮಃ ।
ಪಞ್ಚಭಿರ್ಹರಿಕೋಟೀಭಿರ್ದೂರತಃ ಪ್ರತ್ಯದೃಶ್ಯತ ॥೩೧॥

ಇನ್ದ್ರಜಾನುಃ ಕಪಿರ್ವೀರೋ ಯೂಥಪಃ ಪ್ರತ್ಯದೃಶ್ಯತ ।
ಏಕಾದಶಾನಾಂ ಕೋಟೀನಾಮೀಶ್ವರಸ್ತೈಶ್ಚ ಸಂವೃತಃ ॥೩೨॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ತತೋ ರಮ್ಭಸ್ತ್ವನುಪ್ರಾಪ್ತಸ್ತರುಣಾದಿತ್ಯಸಂನಿಭಃ ।
ಆಯುತೇನಾವೃತಶ್ಚೈವ ಸಹಸ್ರೇಣ ಶತೇನ ಚ ॥೩೩॥

ತತೋ ಯೂಥಪತಿರ್ವೀರೋ ದುರ್ಮುಖೋ ನಾಮ ವಾನರಃ ।
ಪ್ರತ್ಯದೃಶ್ಯತ ಕೋಟಿಭ್ಯಾಂ ದ್ವಾಭ್ಯಾಂ ಪರಿವೃತೋ ಬಲೀ ॥೩೪॥

ಕೈಲಾಸಶಿಖರಾಕಾರೈರ್ವಾನರೈರ್ಭೀಮವಿಕ್ರಮೈಃ ।
ವೃತಃ ಕೋಟಿಸಹಸ್ರೇಣ ಹನುಮಾನ್ಪ್ರತ್ಯದೃಶ್ಯತ ॥೩೫॥

ನಲಶ್ಚಾಪಿ ಮಹಾವೀರ್ಯಃ ಸಂವೃತೋ ದ್ರುಮವಾಸಿಭಿಃ ।
ಕೋಟೀಶತೇನ ಸಂಪ್ರಾಪ್ತಃ ಸಹಸ್ರೇಣ ಶತೇನ ಚ ॥೩೬॥

ತತೋ ದಧಿಮುಖಃ ಶ್ರೀಮಾನ್ಕೋಟಿಭಿರ್ದಶಭಿರ್ವೃತಃ ।
ಸಂಪ್ರಾಪ್ತೋಽಭಿಮತಸ್ತಸ್ಯ ಸುಗ್ರೀವಸ್ಯ ಮಹಾತ್ಮನಃ ॥೩೭॥

ಶರಭಃ ಕುಮುದೋ ವಹ್ನಿರ್ವಾನರೋ ರಂಹ ಏವ ಚ ।
ಏತೇ ಚಾನ್ಯೇ ಚ ಬಹವೋ ವಾನರಾಃ ಕಾಮರೂಪಿಣಃ ॥೩೮॥

ಆವೃತ್ಯ ಪೃಥಿವೀಂ ಸರ್ವಾಂ ಪರ್ವತಾಂಶ್ಚ ವನಾನಿ ಚ ।
ಯೂಥಪಾಃ ಸಮನುಪ್ರಾಪ್ತಾಸ್ತೇಷಾಂ ಸಂಖ್ಯಾ ನ ವಿದ್ಯತೇ ॥೩೯॥

ಆಗತಾಶ್ಚ ವಿಶಿಷ್ಟಾಶ್ಚ ಪೃಥಿವ್ಯಾಂ ಸರ್ವವಾನರಾಃ ।
ಆಪ್ಲವನ್ತಃ ಪ್ಲವನ್ತಶ್ಚ ಗರ್ಜನ್ತಶ್ಚ ಪ್ಲವಂಗಮಾಃ ।
ಅಭ್ಯವರ್ತನ್ತ ಸುಗ್ರೀವಂ ಸೂರ್ಯಮಭ್ರಗಣಾ ಇವ ॥೪೦॥

ಕುರ್ವಾಣಾ ಬಹುಶಬ್ದಾಂಶ್ಚ ಪ್ರಹೃಷ್ಟಾ ಬಾಹುಶಾಲಿನಃ ।
ಶಿರೋಭಿರ್ವಾನರೇನ್ದ್ರಾಯ ಸುಗ್ರೀವಾಯ ನ್ಯವೇದಯನ್ ॥೪೧॥

ಅಪರೇ ವಾನರಶ್ರೇಷ್ಠಾಃ ಸಂಗಮ್ಯ ಚ ಯಥೋಚಿತಮ್ ।
ಸುಗ್ರೀವೇಣ ಸಮಾಗಮ್ಯ ಸ್ಥಿತಾಃ ಪ್ರಾಞ್ಜಲಯಸ್ತದಾ ॥೪೨॥

ಸುಗ್ರೀವಸ್ತ್ವರಿತೋ ರಾಮೇ ಸರ್ವಾಂಸ್ತಾನ್ವಾನರರ್ಷಭಾನ್ ।
ನಿವೇದಯಿತ್ವಾ ಧರ್ಮಜ್ಞಃ ಸ್ಥಿತಃ ಪ್ರಾಞ್ಜಲಿರಬ್ರವೀತ್ ॥೪೩॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಯಥಾಸುಖಂ ಪರ್ವತನಿರ್ಝರೇಷು
ವನೇಷು ಸರ್ವೇಷು ಚ ವಾನರೇನ್ದ್ರಃ ।
ನಿವೇಶಯಿತ್ವಾ ವಿಧಿವದ್ಬಲಾನಿ
ಬಲಂ ಬಲಜ್ಞಃ ಪ್ರತಿಪತ್ತುಮೀಷ್ಟೇ ॥೪೪॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯೇ ಆದಿಕಾವ್ಯೇ
ಕಿಷ್ಕಿನ್ಧಾಕಾಣ್ಡೇ ಏಕೋನಚತ್ವಾರಿಂಶಃ ಸರ್ಗಃ

———

## ಚತ್ವಾರಿಂಶಃ ಸರ್ಗಃ

ಅಥ ರಾಜಾ ಸಮೃದ್ಧಾರ್ಥಃ ಸುಗ್ರೀವಃ ಪ್ಲವಗೇಶ್ವರಃ ।
ಉವಾಚ ನರಶಾರ್ದೂಲಂ ರಾಮಂ ಪರಬಲಾರ್ದನಮ್ ॥೧॥

ಶ್ರೀಕೃಷ್ಣಾರ್ಪಣಮಸ್ತು
ಶ್ರೀಸದ್ಗುರುಚರಣಾರವಿನ್ದಾರ್ಪಣಮಸ್ತು
ಓಂ ತತ್ಸತ್



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಶ್ರೀಮಹಾಗಣಪತಯೇ ನಮಃ   ಶ್ರೀಮಹಾಸರಸ್ವತ್ಯೈ ನಮಃ   ಶ್ರೀಸದ್ಗುರವೇ ನಮಃ



ತಪಃಸ್ವಾಧ್ಯಾಯನಿರತಂ ತಪಸ್ವೀ ವಾಗ್ವಿದಾಂ ವರಮ್ ।
ನಾರದಂ ಪರಿಪಪ್ರಚ್ಛ ವಾಲ್ಮೀಕಿರ್ಮುನಿಪುಙ್ಗವಮ್ ॥

# ಶ್ರೀಮದ್ವಾಲ್ಮೀಕಿರಾಮಾಯಣ-ಐದನೆಯ ಸಂಪುಟ
# ಅರಣ್ಯಕಾಂಡ - ೨ನೆಯ ಭಾಗ



## ಲಕ್ಷ್ಮಣನೊಬ್ಬನೇ ಬರುತ್ತಿರುವುದನ್ನು ಕಂಡ ಶ್ರೀರಾಮನು ಸೀತೆಯು ಜೀವಿಸಿರುವ ಬಗೆಗೆ ಸಂದೇಹವನ್ನು ವ್ಯಕ್ತಪಡಿಸುತ್ತಾ ಆಶ್ರಮಕ್ಕೆ ಬಂದುದು : ಅಲ್ಲಿ ಸೀತೆಯನ್ನು ಕಾಣದೇ ಬಹಳವಾಗಿ ದುಃಖಿಸಿದುದು

ಸ ದೃಷ್ಟ್ವಾ ಲಕ್ಷ್ಮಣಂ ದೀನಂ ಶೂನ್ಯಂ ದಶರಥಾತ್ಮಜಃ ।
ಪರ್ಯಪೃಚ್ಛತ ಧರ್ಮಾತ್ಮಾ ವೈದೇಹೀಮಾಗತಂ ವಿನಾ ॥೧॥

ಧರ್ಮಾತ್ಮನಾದ ದಾಶರಥಿಯು, ವೈದೇಹಿಯನ್ನು ಬಿಟ್ಟು ಏಕಾಕಿಯಾಗಿ ಬರುತ್ತಿರುವ, ದೀನನಾಗಿಯೂ ಸಂತೋಷಶೂನ್ಯನಾಗಿಯೂ ಇದ್ದ ಲಕ್ಷ್ಮಣನನ್ನು ಪ್ರಶ್ನಿಸಿದನು :

" ಲಕ್ಷ್ಮಣ ! ದಂಡಕಾರಣ್ಯಕ್ಕೆ ಹೊರಟ ನನ್ನನ್ನು ಯಾವಳು ಅನುಸರಿಸಿ ಬಂದಳೋ ಮತ್ತು ಯಾವಳನ್ನು ನೀನು ಒಬ್ಬಳನ್ನೇ ಬಿಟ್ಟು ಬಂದಿರುವೆಯೋ – ಆ ವೈದೇಹಿಯು ಈಗ ಎಲ್ಲಿದ್ದಾಳೆ ? ರಾಜ್ಯಭ್ರಷ್ಟನಾಗಿ ದೀನನಾಗಿ ಈ ದಂಡಕಾರಣ್ಯದಲ್ಲಿ ಸುತ್ತಾಡುತ್ತಿರುವ ನನಗೆ ದುಃಖಸಮಯದಲ್ಲಿ ಕೃಶವಾದ ನಡುವಿನಿಂದ ಕೂಡಿದ್ದ ಅವಳು ಸಹಾಯಕಳಾಗಿದ್ದಳು. ಆ ನನ್ನ ವೈದೇಹಿಯೆಲ್ಲಿ ? ಲಕ್ಷ್ಮಣ ! ಅವಳಿಲ್ಲದೇ ನಾನು ಮುಹೂರ್ತಕಾಲವಾದರೂ ಜೀವಿಸಿರಲು ಬಯಸುವುದಿಲ್ಲ. ದೇವಕನ್ಯೆಗೆ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಅನುರೂಪಳಾಗಿರುವ ಅವಳು ಎಂತಹ ದಾರುಣವಾದ ಕಷ್ಟದಲ್ಲಿಯೂ ನಾನು ಬದುಕಿ ಉಳಿಯಲು ಸಹಾಯಕಳಾಗಿದ್ದಳು. ಸೌಮಿತ್ರೇ! ಅವಳೆಲ್ಲಿ ಹೋದಳು? ಪುಟಕ್ಕೆ ಹಾಕಿದ ಚಿನ್ನದ ಕಾಂತಿಯಿಂದ ಕೂಡಿರುವ, ಜಾನಕಿಯನ್ನು ಬಿಟ್ಟು ನಾನು ದೇವಲೋಕದ ಅಥವಾ ಮನುಷ್ಯಲೋಕದ ಒಡೆತನವನ್ನೂ ಬಯಸುವುದಿಲ್ಲ. ತಮ್ಮ! ನನ್ನ ಪ್ರಾಣಗಳಿಗಿಂತಲೂ ಪ್ರಿಯಕರಳಾದ ವೈದೇಹಿಯಿನ್ನೂ ಬದುಕಿರಬಹುದಲ್ಲವೇ? ನನ್ನ ಈ ಪ್ರತಿಜ್ಞಾತವಾದ ಅರಣ್ಯವಾಸವು ವ್ಯರ್ಥವಾಗುವುದಿಲ್ಲ ತಾನೇ?*

ಸೀತಾನಿಮಿತ್ತಂ ಸೌಮಿತ್ರೇ ಮೃತೇ ಮಯಿ ಗತೇ ತ್ವಯಿ ।
ಕಚ್ಚಿತ್ಸಕಾಮಾ ಕೈಕೇಯೀ ಸುಖಿತಾ ಸಾ ಭವಿಷ್ಯತಿ ॥೭॥

ಸೌಮಿತ್ರೇ! ಸೀತೆಯ ವಿರಹದಿಂದ ನಾನು ಸತ್ತುಹೋಗುತ್ತೇನೆ. ನೀನೊಬ್ಬನೇ ಅಯೋಧ್ಯೆಗೆ ಹೋಗುವೆ. ಆಗ ನನ್ನ ಮರಣವಾರ್ತೆಯನ್ನು ನಿನ್ನಿಂದ ಕೇಳುವ ಕೈಕೇಯಿಯು – ತನ್ನ ಮನೋರಥವು ಪೂರೈಸಿತೆಂದು– ಸಂತೋಷಪಡಬಹುದಲ್ಲವೇ? 1

ಸಪುತ್ರರಾಜ್ಯಾಂ ಸಿದ್ಧಾರ್ಥಾಂ ಮೃತಪುತ್ರಾ ತಪಸ್ವಿನೀ ।
ಉಪಸ್ಥಾಸ್ಯತಿ ಕೌಸಲ್ಯಾ ಕಚ್ಚಿನ್ಮಾಂ ಸೌಮ್ಯ ನ ಕೇಕಯೀಮ್ ॥೮॥

* ಮೇ ಪ್ರವ್ರಾಜನಂ ನ ಮಿಥ್ಯಾ ಭವಿಷ್ಯತಿ ಕಚ್ಚಿತ್? ಅರಣ್ಯವಾಸವು ವ್ಯರ್ಥವಾಗುವುದೆಂದರೇನು? ಇದಕ್ಕೆ ವ್ಯಾಖ್ಯಾನಕಾರರ ಅಭಿಪ್ರಾಯಗಳು ಹೀಗಿವೆ: (1) ವನಪ್ರವ್ರಾಜನವ್ರತಧಾರಣಂ ತು ಸೀತಾಜೀವನೇ ಮಮ ಜೀವನಾತ್ ನ ಮಿಥ್ಯಾ ಭವಿಷ್ಯತಿ। ತದಭಾವೇ ಮಿಥ್ಯೈವ ಮಮ ಮರಣೇ ತದ್ಧಾನಿಃ–ಸೀತೆಯೂ ಜೀವಿಸಿದ್ದಲ್ಲಿ ನಾನೂ ಜೀವಿಸಿರುವೆನು. (ಆಗ ಅರಣ್ಯವಾಸವ್ರತವು ಪೂರ್ಣವಾಗುವುದು.) ಅವಳಿಲ್ಲದಿದ್ದರೆ ನನ್ನ ಮರಣವೂ ನಿಶ್ಚಯ. ನನ್ನ ಮರಣದೊಡನೆ ವನವಾಸವ್ರತವೂ

1 ಕೈಕೇಯಿಯು ವಿನಾಶಾರ್ಥವಾಗಿಯೇ ತನ್ನನ್ನು ಕಾಡಿಗಟ್ಟಿದಳೆಂಬ ವಿಷಯವು ಶ್ರೀರಾಮನಿಗೆ ಸ್ಪಷ್ಟವಾಗಿ ಹೋಗಿದ್ದಿತು. ಆದರೆ ಈ ವಿಷಯವನ್ನು ಸಾಮಾನ್ಯವಾಗಿ ಯಾವಾಗಲೂ ಬಹಿರಂಗಪಡಿಸುತ್ತಿರಲಿಲ್ಲ. ಸುಪ್ತಪ್ರಮತ್ತಕುಪಿತಾನಾಂ ಭಾವಜ್ಞಾನಂ ದೃಷ್ಟಂ ಎಂಬ ನ್ಯಾಯದಂತೆ–ಮಲಗಿರುವಾಗ, ಕುಡಿದು ಮತ್ತರಾಗಿರುವಾಗ ಮತ್ತು ಕೋಪಬಂದಾಗ ಮನುಷ್ಯರ ಅಂತರಂಗದಲ್ಲಿರುವ ಭಾವನೆಯು ಹೊರಹೊಮ್ಮುತ್ತದೆ. ಶ್ರೀರಾಮನು ಈ ಸಂದರ್ಭದಲ್ಲಿ ತನ್ನ ಅಂತರಂಗದ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾನೆ–ಎಂಬುದು ಒಬ್ಬ ವ್ಯಾಖ್ಯಾನಕಾರರ ವಿವರಣೆಯಾಗಿದೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸೌಮ್ಯನೇ ! ಮಗನಿಂದಲೂ – ಅನಿರ್ಬಾಧಿತವಾದ ರಾಜ್ಯದಿಂದಲೂ ಸಿದ್ಧಾರ್ಥಳಾದ ಕೈಕೇಯಿಯನ್ನು ಮಗನನ್ನು ಕಳೆದುಕೊಂಡ ದಯನೀಯಳಾದ ಕೌಸಲ್ಯೆಯು ಉಪಚರಿಸಿಕೊಂಡು ಜೀವಿಸಿರಲಾರಳಲ್ಲವೇ ?

ಲಕ್ಷ್ಮಣ ! ವೈದೇಹಿಯು ಜೀವಿಸಿದ್ದರೆ ನಾನು ಆಶ್ರಮಕ್ಕೆ ಹಿಂದಿರುಗುತ್ತೇನೆ. ಸಚ್ಚರಿತ್ರಳಾದ ಅವಳೇನಾದರೂ ಮರಣಹೊಂದಿದ್ದರೆ ನಾನೂ ಪ್ರಾಣತ್ಯಾಗಮಾಡುತ್ತೇನೆ. ಇದು ನಿಶ್ಚಯ. ಆಶ್ರಮಕ್ಕೆ ಹೋಗಲಿರುವ ನನ್ನೊಡನೆ ಹಿಂದಿನಂತೆ ಸೀತೆಯು ನಗು-ನಗುತ್ತಾ ಮಾತನಾಡದಿದ್ದರೆ ನಾನು ಖಂಡಿತವಾಗಿಯೂ ಜೀವಿಸಿರುವುದಿಲ್ಲ. ವೈದೇಹಿಯು ಜೀವಿಸಿರುವಳೇ ? ಅಥವಾ ಇಲ್ಲವೇ ?– ಎಂಬುದನ್ನು ಹೇಳು, ತಮ್ಮ ! ನೀನು ಅಜಾಗರೂಕನಾಗಿದ್ದಾಗ ರಾಕ್ಷಸರೇನಾದರೂ ತಪಸ್ವಿನಿಯಾದ ಅವಳನ್ನು ತಿಂದೇಹಾಕಿಬಿಟ್ಟರೇ ?

ಸೀತೆಯು ಸುಕುಮಾರಿಯು; ಯುವತಿಯು; ಯಾವಾಗಲೂ ದುಃಖವನ್ನು ಅನುಭವಿಸಿದವಳೇ ಅಲ್ಲ. ಅಂತಹವಳಿಂದು ನನ್ನ ವಿಯೋಗದ ಕಾರಣದಿಂದಾಗಿ ಮನಸ್ಸನ್ನು ಕೆಡಿಸಿಕೊಂಡು ದುಃಖಪಡುತ್ತಿರುವುದು ನಿಜ. ಕಪಟಿಯಾದ ದುರಾತ್ಮನಾದ ಆ ರಾಕ್ಷಸನು–'ಹಾ ಲಕ್ಷ್ಮಣ !'– ಎಂದು ಕೂಗಿದುದನ್ನು ಕೇಳಿ ನಿನಗೂ ಭಯವುಂಟಾಗಿರುವುದು ಸಹಜವಾಗಿಯೇ

---

ಪರಿಸಮಾಪ್ತಿಹೊಂದುತ್ತದೆ. (ಸಂಪೂರ್ಣವಾಗುವುದಿಲ್ಲ.) (2) ಪ್ರವ್ರಾಜನಂ ಪ್ರವ್ರಾಜನಸಂಬನ್ಧಿ ವ್ರತಂ ನಗರಪ್ರವೇಶಾಭಾವಾದಿ ಮಿಥ್ಯಾ ಅಸತ್ಯಂ ಕಚ್ಚಿನ್ನ ಭವಿಷ್ಯತಿ? ಪ್ರವ್ರಾಜನವೆಂದರೆ ಇವರ ಅಭಿಪ್ರಾಯದಲ್ಲಿ ನಗರಪ್ರವೇಶಮಾಡದಿರುವುದು ಮುಂತಾದುವುಗಳು. ಒಂದು ವೇಳೆ ಸೀತೆಯನ್ನು ಅಪಹರಿಸಿಕೊಂಡು ಹೋಗಿ ನಗರಮಧ್ಯದಲ್ಲಿರಿಸಿದ್ದರೆ ಅವಳನ್ನು ಬಿಡಿಸಲು ನಗರಪ್ರವೇಶಮಾಡಬೇಕಾಗುತ್ತದೆ. ಆ ಸಮಯದಲ್ಲಿ ಪ್ರವ್ರಾಜನವ್ರತವು ಸುಳ್ಳಾಗುತ್ತದೆ. ಅಥವಾ ವ್ರತಭಂಗವಾಗುತ್ತದೆ. ರಾವಣನು ಸೀತೆಯನ್ನು ನಗರದ ಹೊರಗಿನ ಅಶೋಕವನದಲ್ಲಿಟ್ಟುದರಿಂದ ಅಂತಹ ವ್ರತಭಂಗಕ್ಕೂ ಅವಕಾಶವಾಗಲಿಲ್ಲ–ಎಂದೊಬ್ಬರು ವಿವರಿಸಿದ್ದಾರೆ. "ಸೀತೆಯಿಲ್ಲದಿದ್ದರೆ ನಾನು ಉಳಿಯಲಾರೆನು. ಆದುದರಿಂದ ಪ್ರವ್ರಾಜನಂ ಎಂದರೆ ಹದಿನಾಲ್ಕು ವರ್ಷಗಳ ವನವಾಸವೂ ಸುಳ್ಳಾಗಿಹೋಗುತ್ತದೆ ಅಥವಾ ವ್ಯರ್ಥವಾಗಿ ಹೋಗುತ್ತದೆ"– ಎಂಬ ಅರ್ಥವೇ ಈ ಸಂದರ್ಭಕ್ಕೆ ಸಮಂಜಸವಾಗಿರುವುದೆಂದು ನಮ್ಮ ಅಭಿಪ್ರಾಯವಾಗಿದೆ. ಮುಂದಿನ ಶ್ಲೋಕದಲ್ಲಿಯೂ ಶ್ರೀರಾಮನು ಈ ಅಭಿಪ್ರಾಯವನ್ನೇ ವ್ಯಕ್ತಪಡಿಸುತ್ತಾನೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಇದೆ. ನನ್ನ ಧ್ವನಿಯಂತೆಯೇ ಇದ್ದ ಆ ಕೂಗನ್ನು ವೈದೇಹಿಯೂ ಕೇಳಿರಬಹುದೆಂದು ಭಾವಿಸುತ್ತೇನೆ. ಆ ಧ್ವನಿಯನ್ನು ಕೇಳಿದ ಅವಳು ಧ್ವನಿಯು ನನ್ನದೆಂದೇ ಭಾವಿಸಿ ಬಹಳವಾಗಿ ಭಯಗೊಂಡು ನಿನ್ನನ್ನು ಕಳುಹಿಸಿರಬೇಕು. ನನ್ನನ್ನು ನೋಡುವ ಸಲುವಾಗಿಯೇ ನೀನೂ ಬೇಗ-ಬೇಗ ಇಲ್ಲಿಗೆ ಬಂದಿರಬಹುದು. ಅಲ್ಲವೇ ? ಲಕ್ಷ್ಮಣ ! ಆದರೆ ಘೋರಾರಣ್ಯದಲ್ಲಿ ಸೀತೆಯೊಬ್ಬಳನ್ನೇ ಬಿಟ್ಟು ಬಂದ ನೀನು ನಿಶ್ಚಯವಾಗಿಯೂ ಕಷ್ಟದಾಯಕವಾದ ಕಾರ್ಯವನ್ನೇ ಮಾಡಿದೆ. ನಮ್ಮ ಮೇಲೆ ಸೇಡುತೀರಿಸಿಕೊಳ್ಳಲು ಕ್ರೂರಿಗಳಾದ ರಾಕ್ಷಸರಿಗೆ ಅವಕಾಶಮಾಡಿಕೊಟ್ಟಂತಾಯಿತು. ಮಾಂಸಾಹಾರಿಗಳಾದ ರಾಕ್ಷಸರು ತಮ್ಮ ನಾಯಕನಾದ ಖರನ ವಿನಾಶದಿಂದ ಬಹಳ ದುಃಖಿತರಾಗಿದ್ದರು. ಅವರೇ ಈಗ ಈ ದುಷ್ಟಯೋಜನೆಯನ್ನು ಸಿದ್ಧಗೊಳಿಸಿ ನಮ್ಮಿಬ್ಬರಿಂದಲೂ ಸೀತೆಯು ಬೇರೆಯಾಗಿ ಉಳಿಯುವಂತೆ ಮಾಡಿ ಅವಳನ್ನು ಕೊಂದುಹಾಕಿದ್ದಾರೆ. ಇದರಲ್ಲಿ ಸಂದೇಹವೇ ಇಲ್ಲ. ಶತ್ರುಸೂದನನೇ ! ಇದನ್ನು ನೆನೆದೇ ನಾನು ಸೀತಾವಿರಹದುಃಖದಲ್ಲಿ ಮುಳುಗಿ ಹೋಗಿದ್ದೇನೆ. ಇಂತಹ ಕೆಟ್ಟ ಸ್ಥಿತಿಯನ್ನು ನಾನು ಹೊಂದಲೇಬೇಕೆಂಬುದು ವಿಧಿಯ ನಿಯಮವಾಗಿತ್ತೆಂದು ಭಾವಿಸುತ್ತೇನೆ. ಆದರೆ ನಾನೀಗ ಏನು ಮಾಡಲಿ ? "

ಇವೇ ಮುಂತಾಗಿ ಹೇಳಿಕೊಂಡು ಶ್ರೀರಾಮನು ಸುಕುಮಾರಿಯಾದ ಸೀತಾದೇವಿಯನ್ನೇ ಚಿಂತಿಸುತ್ತಾ ಲಕ್ಷ್ಮಣನೊಡನೆ ಶೀಘ್ರವಾಗಿ ಜನಸ್ಥಾನಕ್ಕೆ ಆಗಮಿಸಿದನು.

ಆ ಸಮಯದಲ್ಲಿ ಲಕ್ಷ್ಮಣನ ಸ್ಥಿತಿಯು ಬಹಳ ಶೋಚನೀಯವಾಗಿದ್ದಿತು. ಆ ಸ್ಥಿತಿಯಲ್ಲಿದ್ದ ಅವನನ್ನು ರಾಮನು ನಿಂದಿಸುತ್ತಲೇ ಇದ್ದನು. ಆ ಸಮಯದಲ್ಲಿ ಶ್ರೀರಾಮನು ಹಸಿವು-ಬಾಯಾರಿಕೆಗಳಿಂದಲೂ ಬಳಲಿದ್ದನು. ಸೀತೆಯನ್ನೇ ನೆನೆಯುತ್ತಾ ಬಾರಿ-ಬಾರಿಗೂ ನಿಟ್ಟುಸಿರುಬಿಡುತ್ತಿದ್ದನು. ಅವನ ಮುಖವು ಬಾಡಿದ್ದಿತು. ವಿಷಣ್ಣನಾಗಿದ್ದ ಶ್ರೀರಾಮನು ಲಕ್ಷ್ಮಣನೊಡನೆ ಆಶ್ರಮದ ಬಳಿಗೆ ಬಂದನು. ಅಲ್ಲಿ ಸೀತೆಯಿಲ್ಲದುದನ್ನು ಕಂಡು ಶ್ರೀರಾಮನ ಮನಸ್ಸು ಕುಸಿದುಹೋಯಿತು. ಆಶ್ರಮದೊಳಕ್ಕೂ ಹೋದನು. ಅಲ್ಲಿಯೂ ಸೀತೆಯಿರಲಿಲ್ಲ. ತಾವಿಬ್ಬರೂ ವಿಹಾರಾರ್ಥವಾಗಿ ಹೋಗುತ್ತಿದ್ದ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಸ್ಥಳಗಳಿಗೆ ಧಾವಿಸಿದನು. ಅಲ್ಲಿ ತಾನು ಹಿಂದೆ ಸೀತೆಯೊಡನೆ ವಿಹರಿಸುತ್ತಿದ್ದುದನ್ನು ನೆನೆದೊಡನೆಯೇ ಶ್ರೀರಾಮನಿಗೆ ಮೈನವಿರೇಳುತ್ತಿದ್ದಿತು. ಮರುಕ್ಷಣದಲ್ಲಿಯೇ ಅಲ್ಲಿ ಎಲ್ಲಿಯೂ ಸೀತೆಯನ್ನು ಕಾಣದೇ ಆಕೆಯ ವಿರಹದಿಂದಾಗಿ ಬಹಳವಾಗಿ ದುಃಖಿಸುತ್ತಿದ್ದನು.

೫೮ನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ                ೫೯ನೆಯ ಸರ್ಗ

## ಲಕ್ಷ್ಮಣನು ಸೀತೆಯೊಬ್ಬಳನ್ನೇ ಬಿಟ್ಟು ಬಂದುದಕ್ಕೆ ರಾಮನ ನಿಂದನೆ

ಅಥಾಶ್ರಮಾದುಪಾವೃತ್ತಮನ್ತರಾ ರಘುನನ್ದನಃ ।
ಪರಿಪಪ್ರಚ್ಛ ಸೌಮಿತ್ರಿಂ ರಾಮೋ ದುಃಖಾದಿದಂ ವಚಃ ॥೧॥

(ಆಶ್ರಮಕ್ಕೆ ಹೋಗುವ ಮೊದಲು ರಾಮನು ಲಕ್ಷ್ಮಣನನ್ನು ಸಂಧಿಸಿದ ನಂತರದ ಸಂಭಾಷಣೆಯನ್ನು ಈ ಸರ್ಗದಲ್ಲಿ ಪುನಃ ವಿಸ್ತಾರವಾಗಿ ಹೇಳಿದೆ.)

ಮಾಯಾಮೃಗವನ್ನು ಸಂಹರಿಸಿ ಆಶ್ರಮಕ್ಕೆ ಹಿಂದಿರುಗುತ್ತಿದ್ದ ಶ್ರೀರಾಮನು ನಡುಹಾದಿಯಲ್ಲಿ ಆಶ್ರಮದ ಕಡೆಯಿಂದ ಬರುತ್ತಿದ್ದ ಲಕ್ಷ್ಮಣನನ್ನು ನೋಡಿ ಅತಿದುಃಖದಿಂದ ಪ್ರಶ್ನಿಸಿದನು :

"ಲಕ್ಷ್ಮಣ! ನೀನು ಸೀತೆಯ ರಕ್ಷಕನಾಗಿರುವೆಯೆಂಬ ವಿಶ್ವಾಸದಿಂದಲೇ ನಾನವಳನ್ನು ನಿನ್ನ ರಕ್ಷಣೆಗೊಪ್ಪಿಸಿ ಹೊರಟುಹೋದೆನು. ಹೀಗಿರುವಾಗ ಅವಳೊಬ್ಬಳನ್ನೇ ಬಿಟ್ಟು ಆಶ್ರಮದಿಂದ ನೀನು ಬಂದುದೇಕೆ? ಮೈಥಿಲಿಯನ್ನು ಪರಿತ್ಯಜಿಸಿ ಬಂದಿರುವ ನಿನ್ನನ್ನು ನೋಡಿದೊಡನೆಯೇ ಮಹತ್ತರವಾದ ಅನಿಷ್ಟವೇ ಸಂಭವಿಸಿರಬಹುದೆಂಬ ಸಂದೇಹದಿಂದ ನನ್ನ ಮನಸ್ಸು ಬಹಳವಾಗಿ ಕಳವಳಗೊಳ್ಳುತ್ತಿದೆ. ಅವಳಿಗೆ ಅನಿಷ್ಟವು ಒದಗಿರುವುದು ಸತ್ಯವೇ ಇರಬಹುದು. ಸೀತೆಯನ್ನು ಬಿಟ್ಟು ನೀನೊಬ್ಬನೇ ಅರಣ್ಯದ ಹಾದಿಯಲ್ಲಿ ಬರುತ್ತಿರುವುದನ್ನು ದೂರದಿಂದ ಕಂಡಾಗಲೇ ನನ್ನ ಎಡಗಣ್ಣು ಮಿಡಿಯಲು ಪ್ರಾರಂಭಿಸಿತು. ಎಡಭುಜವೂ ಅದುರತೊಡಗಿತು. ಎದೆಯೂ ಢವಢವನೆ ಹೊಡೆದುಕೊಳ್ಳಲು ಪ್ರಾರಂಭಿಸಿತು."

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಶ್ರೀರಾಮನು ಹೀಗೆ ಹೇಳಲು ಶುಭಲಕ್ಷಣನಾದ ಲಕ್ಷ್ಮಣನಿಗೆ ಅತ್ಯಂತದುಃಖವಾಯಿತು. ಅವನು ದುಃಖಿತನಾಗಿದ್ದ ರಾಮನಿಗೆ ಹೇಳಿದನು :

"ಅಣ್ಣ ! ನಾನು ಸ್ವಂತ ಇಚ್ಛೆಯಿಂದ ಸೀತೆಯನ್ನು ಬಿಟ್ಟು ಇಲ್ಲಿಗೆ ಬರಲಿಲ್ಲ. ಕರ್ಣಕಠೋರವಾದ ಮಾತುಗಳಿಂದ ಸೀತೆಯೇ ನನ್ನನ್ನು ನಿನ್ನ ಬಳಿಗೆ ಹೋಗುವಂತೆ ಪ್ರಚೋದಿಸಿದಳು. ಆದುದರಿಂದ ನಾನು ನಿನ್ನನ್ನರಸಿ ಬಂದೆನು. 'ಹಾ ಸೀತೇ ಲಕ್ಷ್ಮಣ ಪರಿತ್ರಾಹಿ' 'ಲಕ್ಷ್ಮಣ ! ಕಾಪಾಡು, ಕಾಪಾಡು'–ಎಂದು ಆರ್ಯನಾದ ನೀನೇ ಗಟ್ಟಿಯಾಗಿ ಕೂಗಿ ಕೊಂಡಂತೆ ಕೇಳಿಬಂದ ಧ್ವನಿಯು ಸೀತೆಯ ಕಿವಿಗಳಲ್ಲಿಯೂ ಬಿದ್ದಿತು. ಅಂತಹ ಹೃದಯವಿದ್ರಾವಕವಾದ ಆರ್ತಸ್ವರವನ್ನು ಕೇಳಿ, ನಿನ್ನ ಮೇಲಿನ ಗಾಢವಾದ ಪ್ರೀತಿಯ ಕಾರಣದಿಂದಾಗಿ ವೈದೇಹಿಯು ಭಯದಿಂದ ಕಂಗೆಟ್ಟಳು. ಗಟ್ಟಿಯಾಗಿ ಅಳುತ್ತಾ ನಿನ್ನ ರಕ್ಷಣೆಗೆ ಬೇಗನೆ ಹೋಗುವಂತೆ ನನ್ನನ್ನು ಒತ್ತಾಯಿಸಿದಳು. ಅವಳು ಹಲವು ಬಾರಿ ನನ್ನನ್ನು ನಿನ್ನ ರಕ್ಷಣೆಗೆ ಹೋಗಲು ಒತ್ತಾಯಿಸಿದರೂ ಒಡನೆಯೇ ಅವಳನ್ನು ಬಿಟ್ಟು ಹೊರಡಲಿಲ್ಲ. ನಿನ್ನ ಪರಾಕ್ರಮದಲ್ಲಿ ವಿಶ್ವಾಸಹುಟ್ಟಿಸುವ ಸಲುವಾಗಿ ನಾನು ಈ ಮಾತು ಗಳನ್ನು ಹೇಳಿದೆನು :

ನ ತತ್ಪಶ್ಯಾಮ್ಯಹಂ ರಕ್ಷೋ ಯದಸ್ಯ ಭಯಮಾವಹೇತ್ ।
ನಿರ್ವೃತಾ ಭವ ನಾಸ್ತ್ಯೇತತ್ಕೇನಾಪ್ಯೇವಮುದಾಹೃತಮ್ ॥೧೦॥

ಆರ್ಯೇ ! ನಮ್ಮಣ್ಣನಾದ ರಾಮನಿಗೆ ಭಯವನ್ನುಂಟುಮಾಡುವಷ್ಟು ಸಾಮರ್ಥ್ಯವಿರುವ ರಾಕ್ಷಸನನ್ನು ನಾನಿನ್ನುವರೆಗೂ ಕಂಡಿಲ್ಲ. ಆದುದರಿಂದ ನೀನು ಕೇಳಿದ ಆರ್ತನಾದವು ಅವನದಲ್ಲ. ಯಾವನೋ ರಾಕ್ಷಸನು ನಮ್ಮಣ್ಣನ ಧ್ವನಿಯನ್ನು ಅನುಕರಣೆಮಾಡಿ ಹೀಗೆ ಕೂಗಿಕೊಂಡಿದ್ದಾನೆ. ಆದುದರಿಂದ ನೀನು ಭಯವನ್ನು ತ್ಯಜಿಸು. ನೆಮ್ಮದಿಯಿಂದಿರು.

ವಿಗರ್ಹಿತಂ ಚ ನೀಚಂ ಚ ಕಥಮಾರ್ಯೋಽಭಿಧಾಸ್ಯತಿ ।
ತ್ರಾಹೀತಿ ವಚನಂ ಸೀತೇ ಯಸ್ತ್ರಾಯೇತ್ತ್ರಿದಶಾನಪಿ ॥೧೧॥

ದೇವತೆಗಳನ್ನಾದರೂ ರಕ್ಷಿಸಲು ಸಮರ್ಥನಾಗಿರುವ ಆರ್ಯನಾದ ನಮ್ಮಣ್ಣನು ನಿಂದ್ಯವೂ–ತುಚ್ಛವೂ ಆದ–'ತ್ರಾಹಿ'–ಎಂಬ ಶಬ್ದವನ್ನು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಹೇಗೆ ಉಚ್ಚರಿಸುವನು? ಅವನ ಬಾಯಿಂದ ಇಂತಹ ಮಾತು ಬಂದಿತೆಂಬು ದನ್ನು ನಂಬಲಾದರೂ ಸಾಧ್ಯವಿದೆಯೇ?

ಯಾವುದೋ ಕಾರಣದಿಂದ ಯಾವನೋ ರಾಕ್ಷಸನು ನಮ್ಮಣ್ಣನ ಧ್ವನಿ ಯನ್ನೇ ಅನುಕರಿಸಿ-'ಲಕ್ಷ್ಮಣ! ತ್ರಾಹಿ ಮಾಂ' 'ಲಕ್ಷ್ಮಣ! ನನ್ನನ್ನು ಕಾಪಾಡು'-ಎಂದು ಗೋಳಿನ ಧ್ವನಿಯಲ್ಲಿ ಹೇಳಿದ್ದಾನೆ.

ಶೋಭನಳೇ! ಇದು ರಾಕ್ಷಸನೇ ಹೇಳಿರುವ ಮಾತು. ಭಯದಿಂದಲೋ ಆಯಾಸದಿಂದಲೋ-'ತ್ರಾಹಿ'-ಎಂದು ಕೂಗಿಕೊಂಡಿದ್ದಾನೆ. ಇದರಿಂದ ನೀನು ಅಧೀರಳಾಗಬೇಡ; ವ್ಯಥೆಪಡಬೇಡ. ಅಲ್ಪಸ್ವಭಾವದವರಾದ ಸ್ತ್ರೀಯರು ಮಾತ್ರವೇ ಇಂತಹ ಭಯಕ್ಕೆ ತಮ್ಮ ಮನಸ್ಸಿನಲ್ಲಿ ಅವಕಾಶ ಮಾಡಿಕೊಳ್ಳುತ್ತಾರೆ. ನಿನ್ನಂತಹ ವೀರರಮಣಿಯರು ಹೀಗೆಂದೂ ಭಯ ಪಡಬಾರದು. ದೇವಿ! ವ್ಯಾಕುಲಗೊಳ್ಳಬೇಡ. ಸ್ವಸ್ಥಳಾಗಿರು. ನಿಶ್ಚಿಂತ ಳಾಗಿರು.

ನ ಸೋಽಸ್ತಿ ತ್ರಿಷು ಲೋಕೇಷು ಪುಮಾನ್ಯೋ ರಾಘವಂ ರಣೇ।
ಜಾತೋ ವಾ ಜಾಯಮಾನೋ ವಾ ಸಂಯುಗೇ ಯಃ
ಪರಾಜಯೇತ್।
ಅಜೇಯೋ ರಾಘವೋ ಯುದ್ಧೇ ದೇವೈಃ ಶಕ್ರಪುರೋಗಮೈಃ॥

ಸ್ವರ್ಗ, ಮರ್ತ್ಯ, ಪಾತಾಲ-ಈ ಮೂರು ಲೋಕಗಳಲ್ಲಿ ರಾಘವನನ್ನು ಯುದ್ಧದಲ್ಲಿ ಪರಾಜಯಗೊಳಿಸುವ ಸಾಮರ್ಥ್ಯದಿಂದ ಕೂಡಿರುವ ಮನುಷ್ಯನು ಇದುವರೆಗೆ ಹುಟ್ಟಿಲ್ಲ; ಮುಂದೆ ಹುಟ್ಟುವುದೂ ಇಲ್ಲ. ಯುದ್ಧದಲ್ಲಿ ಇಂದ್ರಪ್ರಮುಖರಾದ ದೇವತೆಗಳೂ ಶ್ರೀರಾಮನನ್ನು ಜಯಿಸಲಾರರು."

ಅಣ್ಣ! ನಾನು ವೈದೇಹಿಗೆ ಇಷ್ಟೆಲ್ಲಾ ಧೈರ್ಯ ಹೇಳಿ ಸಮಾಧಾನ ಗೊಳಿಸಲು ಯತ್ನಿಸಿದರೂ ಕಲುಷಿತವಾದ ಬುದ್ಧಿಯಿಂದ ಕೂಡಿದ್ದ ಅವಳು ಕಣ್ಣೀರಿಡುತ್ತಾ ಅತಿದಾರುಣವಾದ ಮತ್ತು ಎದೆಯನ್ನೇ ಸೀಳುವಂತಹ ಈ ಮಾತುಗಳನ್ನು ಹೇಳಿದಳು:

ಭಾವೋ ಮಯಿ ತವಾತ್ಯರ್ಥಂ ಪಾಪ ಏವ ನಿವೇಶಿತಃ।
ವಿನಷ್ಟೇ ಭ್ರಾತರಿ ಪ್ರಾಪ್ತುಂ ನ ಚ ತ್ವಂ ಮಾಮವಾಪ್ಸ್ಯಸಿ ॥೧೭॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಸಂಕೇತಾದ್ಭರತೇನ ತ್ವಂ ರಾಮಂ ಸಮನುಗಚ್ಛಸಿ ।
ಕ್ರೋಶನ್ತಂ ಹಿ ಯಥಾತ್ಯರ್ಥಂ ನೈವಮಭ್ಯವಪದ್ಯಸೇ ॥೧೮॥

ರಿಪುಃ ಪ್ರಚ್ಛನ್ನಚಾರೀ ತ್ವಂ ಮದರ್ಥಮನುಗಚ್ಛಸಿ ।
ರಾಘವಸ್ಯಾನ್ತರಪ್ರೇಪ್ಸುಸ್ತಥೈನಂ ನಾಭಿಪದ್ಯಸೇ ॥೧೯॥

"ಲಕ್ಷ್ಮಣ ! ನೀನು ನನ್ನ ವಿಷಯದಲ್ಲಿ ಪಾಪಕರವಾದ ದುರ್ಭಾವನೆಯನ್ನೇ ಇಟ್ಟುಕೊಂಡಿರುವೆ. ನಿಮ್ಮಣ್ಣನು ವಿನಾಶಹೊಂದಿದನಂತರ ನನ್ನನ್ನು ಪಡೆದುಕೊಳ್ಳುವ ಆಶಯವು ನಿನಗಿದೆ. ಆದರೆ ನನ್ನನ್ನು ಮಾತ್ರ ನೀನು ಪಡೆದುಕೊಳ್ಳಲಾರೆ. ರಾಮನನ್ನು ವಿನಾಶಗೊಳಿಸಲೆಂದೇ ಭರತನೊಡನೆ ಸಂಧಾನಮಾಡಿಕೊಂಡು ನೀನು ರಾಮನ ಜೊತೆಯಲ್ಲಿ ಅರಣ್ಯಕ್ಕೆ ಬಂದಿರುವೆ. ರಾಮನ ಅವಸಾನವನ್ನೇ ನೀನು ಬಯಸಿರುವೆ. ಆದುದರಿಂದಲೇ – 'ಲಕ್ಷ್ಮಣ ! ತ್ರಾಹಿ ತ್ರಾಹಿ' – ಎಂದು ಅವನು ಕಿರುಚಿಕೊಳ್ಳುತ್ತಿದ್ದರೂ ಅವನ ರಕ್ಷಣೆಗೆ ನೀನು ಹೋಗುತ್ತಿಲ್ಲ. ನಿಶ್ಚಯವಾಗಿಯೂ ನೀನು ರಾಮನಿಗೆ–ವೇಷಮರೆಸಿಕೊಂಡು ವರ್ತಿಸುವ–ಶತ್ರುವೇ ಆಗಿರುವೆ. ನನ್ನನ್ನು ಪಡೆಯುವ ಸಲುವಾಗಿಯೇ ನೀನು ಇದುವರೆಗೂ ಅವನನ್ನು ಅನುಸರಿಸಿ ಬಂದಿರುವೆ. ಆದರೆ ನನ್ನನ್ನು ಪಡೆದುಕೊಳ್ಳಲು ನಿನಗೆ ಖಂಡಿತವಾಗಿಯೂ ಸಾಧ್ಯವಾಗುವುದಿಲ್ಲ."

ಅಣ್ಣ ! ಸೀತಾದೇವಿಯ ಇಂತಹ ಕರ್ಣಕಠೋರವಾದ ಮಾತುಗಳನ್ನು ಕೇಳಿದೊಡನೆಯೇ ನನಗೆ ಕೋಪವು ಉಕ್ಕೇರಿ ಬಂದಿತು. ಕಣ್ಣುಗಳು ಕೆಂಪೇರಿದುವು. ತುಟಿಗಳು ಅದುರತೊಡಗಿದುವು. ಅವಳ ಬಳಿಯಲ್ಲಿ ಹೆಚ್ಚು ಹೊತ್ತು ನಿಲ್ಲಲು ಸಾಧ್ಯವಾಗದೇ ಒಡನೆಯೇ ನಾನು ಆಶ್ರಮದಿಂದ ಹೊರಬಿದ್ದೆನು."

ಲಕ್ಷ್ಮಣನು ಹೀಗೆ ಹೇಳಲು ಸಂತಾಪದಿಂದ ವಿಮೋಹಿತನಾಗಿದ್ದ ಶ್ರೀರಾಮನು ಲಕ್ಷ್ಮಣನನ್ನು ತೆಗಳುತ್ತಲೇ ಹೇಳಿದನು :

"ದುಷ್ಕೃತಂ ಸೌಮ್ಯ ತಾಂ ವಿನಾ ಯತ್ತ್ವಮಾಗತಃ–ಸೌಮ್ಯನೇ ! ಅವಳನ್ನು ಬಿಟ್ಟು ನೀನಿಲ್ಲಿಗೆ ಬಂದು ದೊಡ್ಡ ಅಕಾರ್ಯವನ್ನೇ ಮಾಡಿರುವೆ.

ಜಾನನ್ನಪಿ ಸಮರ್ಥಂ ಮಾಂ ರಕ್ಷಸಾಂ ವಿನಿವಾರಣೇ ।
ಅನೇನ ಕ್ರೋಧವಾಕ್ಯೇನ ಮೈಥಿಲ್ಯಾ ನಿಃಸೃತೋ ಭವಾನ್ ॥೨೨॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ರಾಕ್ಷಸರನ್ನು ತೊಡೆದುಹಾಕುವುದರಲ್ಲಿ ನಾನು ಸಮರ್ಥನೆಂದು ತಿಳಿದಿದ್ದೂ ಕೂಡ ಸೀತೆಯಾಡಿದ ನಿಷ್ಠುರವಾದ ಮಾತುಗಳಿಂದ ಪ್ರೇರಿತನಾಗಿ ನೀನವಳನ್ನು ಬಿಟ್ಟುಬಂದಿರುವೆ.

ನ ಹಿ ತೇ ಪರಿತುಷ್ಯಾಮಿ ತ್ಯಕ್ತ್ವಾ ಯದ್ಯಾಸಿ ಮೈಥಿಲೀಮ್ ।
ಕ್ರುದ್ಧಾಯಾಃ ಪರುಷಂ ಶ್ರುತ್ವಾ ಸ್ತ್ರಿಯಾ ಯತ್ತ್ವಮಿಹಾಗತಃ ॥

ನಿನ್ನ ಈ ನಡವಳಿಕೆಯಿಂದ ನನಗೆ ತೃಪ್ತಿಯುಂಟಾಗಲಿಲ್ಲ. ಕೋಪಗೊಂಡ ಹೆಂಗಸಿನ ಕಠೋರವಾದ ಮಾತುಗಳನ್ನು ಕೇಳಿದ ಮಾತ್ರದಿಂದಲೇ ನೀನು ನಿನ್ನ ಕರ್ತವ್ಯವನ್ನು ಮರೆತು ಅವಳನ್ನು ಆಶ್ರಮದಲ್ಲಿಯೇ ಪರಿತ್ಯಜಿಸಿ ಹೊರಟುಬಂದಿರುವುದು ನನಗೆ ಸ್ವಲ್ಪವೂ ಇಷ್ಟವಾಗಲಿಲ್ಲ.

ಸರ್ವಥಾ ತ್ವಪನೀತಂ ತೇ ಸೀತಯಾ ಯತ್ಪ್ರಚೋದಿತಃ ।
ಕ್ರೋಧಸ್ಯ ವಶಮಾಪನ್ನಃ ನಾಕರೋಃ ಶಾಸನಂ ಮಮ ॥೨೪॥

ಲಕ್ಷ್ಮಣ! ನೀನು ಬಹಳ ದುಡುಕಿಬಿಟ್ಟೆ. ಸೀತೆಯ ನಿಷ್ಠುರವಾದ ವಾಕ್ಯಗಳಿಂದ ಪ್ರಚೋದಿತನಾದ ನೀನೂ ಕೋಪಕ್ಕೆ ವಶನಾಗಿಬಿಟ್ಟೆ. ಇದರಿಂದಲೇ ನೀನು ನನ್ನ ಆಜ್ಞೆಯನ್ನು ಪರಿಪಾಲಿಸಲಿಲ್ಲ.

ಮೃಗರೂಪಿಯಾಗಿದ್ದ ಯಾವ ರಾಕ್ಷಸನು ನನ್ನನ್ನು ಆಶ್ರಮದಿಂದ ಹೊರಬರುವಂತೆ ಮಾಡಿದನೋ–ಆ ರಾಕ್ಷಸನೇ ನನ್ನ ಬಾಣಗಳಿಂದ ಪ್ರಹೃತನಾಗಿ ಅಸುನೀಗಿ ಕೆಳಗೆ ಬಿದ್ದಿದ್ದಾನೆ.

ಲಕ್ಷ್ಮಣ! ಧನುಸ್ಸನ್ನು ಸೆಳೆದು ವಿಲಾಸಕ್ಕಾಗಿ ಬಳಸುವ ಬಾಣವನ್ನೇ ಅನುಸಂಧಾನಮಾಡಿ ಮೃಗರೂಪನಾಗಿದ್ದ ಆ ರಾಕ್ಷಸನನ್ನು ಪ್ರಹರಿಸಿದೆನು. ಒಡನೆಯೇ ಅವನು ಮೃಗರೂಪವನ್ನು ಬಿಟ್ಟು ಭುಜಕೀರ್ತಿಗಳನ್ನು ಧರಿಸಿದ ರಾಕ್ಷಸನಾಗಿ ಪರಿವರ್ತನೆಹೊಂದಿ ಗಟ್ಟಿಯಾಗಿ ಕಿರುಚಿಕೊಂಡನು. ಬಾಣವು ತಗುಲಿದ ಮಾತ್ರದಿಂದಲೇ ಆ ರಾಕ್ಷಸನು ನನ್ನ ಧ್ವನಿಯನ್ನೇ ಅನುಕರಿಸುತ್ತಾ ಬಹಳ ದೂರದವರೆಗೆ ಸ್ಪಷ್ಟವಾಗಿ ಕೇಳಿಸುವ ರೀತಿಯಲ್ಲಿ–' ಹಾ ಸೀತೇ! ಹಾ ಲಕ್ಷ್ಮಣ! ತ್ರಾಹಿ-ತ್ರಾಹಿ' – ಎಂದು ಸುದಾರುಣವಾಗಿ ಕೂಗಿದನು. ಅದರ ಪರಿಣಾಮವಾಗಿಯೇ ನೀನು ಸೀತೆಯನ್ನು ಬಿಟ್ಟು ಇಲ್ಲಿಗೆ ಬಂದಿರುವೆ."

೫೯ನೆಯ ಸರ್ಗವು ಮುಗಿಯಿತು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


## ಶ್ರೀರಾಮನ ವಿಲಾಪ: ಸೀತೆಯ ವಿಷಯವಾಗಿ ಮರ-ಗಿಡ-ಬಳ್ಳಿಗಳನ್ನು ಪ್ರಶ್ನಿಸಿದುದು: ಎಲ್ಲೆಡೆಗಳಲ್ಲೂ ಹುಡುಕಿದುದು

ಭೃಶಮಾವ್ರಜಮಾನಸ್ಯ ತಸ್ಯಾಧೋವಾಮಲೋಚನಮ್ ।
ಪ್ರಾಸ್ಫುರಚ್ಚಾಸ್ಖಲದ್ರಾಮೋ ವೇಪಥುಶ್ಚಾಪ್ಯಜಾಯತ ॥೧॥

ಆತುರದಿಂದ ಆಶ್ರಮದ ಕಡೆಗೆ ಬರುತ್ತಿದ್ದ ಶ್ರೀರಾಮನ ಎಡಗಣ್ಣಿನ ಕೆಳರೆಪ್ಪೆಯು ಅದುರಿತು. ನಡೆ ತತ್ತರಿಸಿತು. ಮೈನಡುಕವುಂಟಾಯಿತು.[1] ಬಾರಿ-ಬಾರಿಗೂ ಕೆಟ್ಟ ಶಕುನಗಳೇ ಆಗುತ್ತಿರುವುದನ್ನು ಗಮನಿಸಿದ ಶ್ರೀರಾಮನು-'ಅಪಿ ಕ್ಷೇಮಂ ನು ಸೀತಾಯಾಃ? – ಸೀತೆಯು ನಿಶ್ಚಯವಾಗಿಯೂ ಕ್ಷೇಮದಿಂದಿರುವಳೇ?'–ಎಂದು ತನ್ನಲ್ಲಿಯೇ ಹೇಳಿಕೊಂಡನು. ಸೀತೆಯನ್ನು ಕಾಣಬೇಕೆಂಬ ಲಾಲಸೆಯಿಂದ ಶ್ರೀರಾಮನು ಅವಸರದಿಂದ ಆಶ್ರಮವನ್ನು ಪ್ರವೇಶಿಸಿದನು. ಸೀತೆಯು ಅಲ್ಲಿರಲಿಲ್ಲ. ಶೂನ್ಯವಾಗಿದ್ದ ಆಶ್ರಮವನ್ನು ಕಂಡ ಶ್ರೀರಾಮನ ಮನಸ್ಸು ಉದ್ವಿಗ್ನವಾಯಿತು. ಸೀತೆಯನ್ನು ಕಾಣದ ಶ್ರೀರಾಮನು ಅಲ್ಲಿಂದಿಲ್ಲಿಗೂ ಇಲ್ಲಿಂದಲ್ಲಿಗೂ ವೇಗವಾಗಿ ಓಡಾಡುತ್ತಿದ್ದನು. ಅವನ ಆಗಿನ ಓಟದ ವೇಗವನ್ನು ನೋಡಿದರೆ ಒಂದು ಕಡೆಯಿಂದ ಮತ್ತೊಂದು ಕಡೆಗೆ ಹಾರಿಕೊಂಡೇ ಹೋಗುತ್ತಿರುವಂತೆ ಕಾಣುತ್ತಿದ್ದನು. ಹೀಗವನು ಆಶ್ರಮದ ಸುತ್ತಲೂ ನಾಲ್ಕಾರು ಬಾರಿ ಓಡಾಡಿ ಸೀತೆಯನ್ನು ಹುಡುಕಿದನು. ಪರ್ಣಶಾಲೆಯಲ್ಲಿ ಸೀತೆಯಿಲ್ಲದಿರುವುದು ಖಚಿತವಾಯಿತು. ಸೀತೆಯಿಲ್ಲದಿದ್ದ ಆ ಪರ್ಣಶಾಲೆಯು ಹಿಮಗಾಲದಲ್ಲಿ ಉದುರಿದ ಎಸಳುಗಳುಳ್ಳ ಕಮಲದ ದಂಟುಗಳಿಂದ ಕೂಡಿರುವ ಸರೋವರದಂತೆ ಕಾಂತಿಹೀನವಾಗಿ ಕಾಣುತ್ತಿದ್ದಿತು. ಸೀತೆಯಿಂದ ರಹಿತವಾಗಿದ್ದ ಆ ಆಶ್ರಮಭೂಮಿಯು ವೃಕ್ಷಗಳ ಮೂಲಕವಾಗಿ ಅಳುತ್ತಿರುವುದೋ ಎಂಬಂತೆ ಕಾಣುತ್ತಿದ್ದಿತು.* ಗಿಡಗಳಲ್ಲಿದ್ದ ಹೂವುಗಳೆಲ್ಲವೂ ಬಾಡಿಹೋಗಿದ್ದುವು.

---

1 ಗಂಡಸರಿಗೆ ಎಡಗಣ್ಣಿನ ಕೆಳರೆಪ್ಪೆಯು ಅದುರುವುದು ಅನಿಷ್ಟಪ್ರದವೆಂದು ಲಕ್ಷಣಶಾಸ್ತ್ರವು ಹೇಳುತ್ತದೆ. ಅಧೋ ವಾಮದೃಶಃ ಸ್ಫೂರ್ತಾ ಬಹ್ವನಿಷ್ಟೋ ಭವೇತ್ಪುಮಾನ್.

* ವೃಕ್ಷೈಶ್ಚ ರುದನ್ತಮಿವ–ವೃಕ್ಷಗಳ ಮೂಲಕವಾಗಿ ಅಳುತ್ತಿರುವುದೋ ಎಂಬಂತೆ ಕಾಣುತ್ತಿದ್ದ. ವೃಕ್ಷಗಳ ಮೂಲಕ ಅಳುವುದೆಂದರೆ ಸೀತಾದೇವಿಯ ಅಪಹರಣವನ್ನು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಅಲ್ಲಿದ್ದ ಮೃಗ-ಪಕ್ಷಿಗಳ ಮುಖಗಳೂ ಬಾಡಿಹೋಗಿದ್ದುವು. ಸೀತೆಯೊಡನೆ ವನದೇವತೆಗಳೂ ಆ ಪ್ರದೇಶವನ್ನು ತ್ಯಜಿಸಿಹೋಗಿದ್ದರು. ಕೃಷ್ಣಾಜಿನ, ದರ್ಭೆ, ಆಸನ—ಮುಂತಾದ ವಸ್ತುಗಳೆಲ್ಲವೂ ಅಸ್ತವ್ಯಸ್ತವಾಗಿ ಬಿದ್ದಿದ್ದುವು.*



ಇಂತಹ ಅವಸ್ಥೆಯಲ್ಲಿದ್ದ ಸೀತೆಯಿಂದ ಶೂನ್ಯವಾಗಿದ್ದ ಪರ್ಣಶಾಲೆಯನ್ನು ನೋಡಿ ಶ್ರೀರಾಮನು ಬಾರಿ-ಬಾರಿಗೂ ಬಿಕ್ಕಿ-ಬಿಕ್ಕಿ ಅಳುತ್ತಿದ್ದನು.

---

ಕಂಡಿದ್ದ ವೃಕ್ಷಗಳ ಮೇಲೆ ಕುಳಿತಿದ್ದ ಪಕ್ಷಿಗಳು ರೋದನಮಾಡುತ್ತಿದ್ದುವು ಅಥವಾ ವೃಕ್ಷಗಳಿಂದ ಬರುತ್ತಿದ್ದ ' ಸೊಯ್ ' ಎಂಬ ಧ್ವನಿಯ ಮೂಲಕವಾಗಿ ಅಶ್ರುಮವು ರೋದನ ಮಾಡುತ್ತಿದ್ದಿತು—ಎಂದು ಭಾವಾರ್ಥವನ್ನು ಹೇಳಬಹುದಾಗಿದೆ.

* ರಾವಣಸಂನ್ಯಾಸಿನೇ ದತ್ತತ್ವೇನ ವಿಪ್ರಕೀರ್ಣಾಃ ಆಯುಧಾಸ್ಥಾನಸ್ಥಿತಾಃ ಅಜಿನ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಹೃತಾ ಮೃತಾ ವಾ ನಷ್ಟಾ ವಾ ಭಕ್ಷಿತಾ ವಾ ಭವಿಷ್ಯತಿ ।
ನಿಲೀನಾಪ್ಯಥವಾ ಭೀರುರಥ ವಾ ವನಮಾಶ್ರಿತಾ ॥೮॥
ಗತಾ ವಿಚೇತುಂ ಪುಷ್ಪಾಣಿ ಫಲಾನ್ಯಪಿ ಚ ವಾ ಪುನಃ ।
ಅಥ ವಾ ಪದ್ಮಿನೀಂ ಯಾತಾ ಜಲಾರ್ಥಂ ವಾ ನದೀಂ ಗತಾ ॥೯॥

ರಾಮನು ಚಿಂತಿಸತೊಡಗಿದನು : ' ನನ್ನ ಪ್ರೇಯಸಿಯನ್ನು ಯಾರಾದರೂ ದುಷ್ಟರು ಅಪಹರಿಸಿಕೊಂಡು ಹೋಗಿರಬಹುದೇ ? ಅಥವಾ ಸತ್ತೇ ಹೋಗಿರಬಹುದೇ ? ದಾರಿಗಾಣದೇ ಎಲ್ಲಿಗಾದರೂ ಹೋಗಿಬಿಟ್ಟಿರಬಹುದೇ ? ಹಾಗೆ ಹೋಗುತ್ತಿರುವಾಗ ರಾಕ್ಷಸರೋ, ಕಾಡುಮೃಗಗಳೋ ಅವಳನ್ನು ಭಕ್ಷಿಸಿಬಿಟ್ಟಿರಬಹುದೇ ? ನನ್ನನ್ನು ಮರುಳುಗೊಳಿಸಲು ಎಲ್ಲಿಯಾದರೂ ಅವಿತುಕೊಂಡಿರಬಹುದೇ ? ಹೂವು-ಹಣ್ಣುಗಳನ್ನು ತರಲು ಅರಣ್ಯಕ್ಕಾದರೂ ಹೋಗಿರಬಹುದೇ ? ನೀರುತರಲು ಸರೋವರಕ್ಕಾದರೂ ಹೋಗಿರಬಹುದೇ ? ಸ್ನಾನಮಾಡಲು ನದಿಗೇನಾದರೂ ಹೋಗಿರುವಳೇ ?'–ಹೀಗೆಲ್ಲಾ ಯೋಚಿಸಿ ಎಲ್ಲ ಕಡೆಗಳಲ್ಲಿಯೂ ಶ್ರೀರಾಮನು ಸೀತೆಯನ್ನು ಹುಡುಕಿದನು. ಎಷ್ಟೇ ಪ್ರಯತ್ನಪಟ್ಟು ಹುಡುಕಿದರೂ ಪ್ರೇಯಸಿಯನ್ನು ಕಾಣಲಿಲ್ಲ. ಅತ್ತು-ಅತ್ತು ಅವನ ಕಣ್ಣುಗಳು ಕೆಂಪಾಗಿದ್ದುವು. ' ಸೀತೇ ! ಪ್ರೇಯಸಿ ! ವೈದೇಹಿ ! ಜನಕನಂದಿನಿ ! ಎಲ್ಲಿರುವೆ ? ಮಾತನಾಡು '–ಇವೇ ಮುಂತಾಗಿ ಕೂಗಿಕೊಂಡು ತಿರುಗಾಡುತ್ತಿದ್ದ ಶ್ರೀರಾಮನು ಹುಚ್ಚನಂತೆಯೇ ಕಾಣುತ್ತಿದ್ದನು. ' ಸೀತೇ ! ಸೀತೇ ! '–ಎಂದು ಕೂಗುತ್ತಾ ಮರಗಳ ಹಿಂದೆ ಅಡಗಿರುವಳೋ ಎಂಬ ಭ್ರಮೆಯಿಂದ ಒಂದು ಮರದಿಂದ ಮತ್ತೊಂದು ಮರದ ಕಡೆಗೆ ಓಡಿಹೋಗುತ್ತಿದ್ದನು. ಒಂದು ಬೆಟ್ಟದಿಂದ ಮತ್ತೊಂದು ಬೆಟ್ಟದ ಕಡೆಗೆ ಧಾವಿಸುತ್ತಿದ್ದನು. ಒಂದು ನದಿಯ ತೀರದಿಂದ ಮತ್ತೊಂದು ನದಿಯ ತೀರಕ್ಕೆ ಓಡಿಹೋಗುತ್ತಿದ್ದನು. ಶೋಕವೆಂಬ ಕೆಸರಿನ ಸಮುದ್ರದಲ್ಲಿ ಹೂತುಹೋಗಿದ್ದ ರಾಮನು ಗಟ್ಟಿಯಾಗಿ ಅಳುತ್ತಾ ಸುತ್ತಾಡುತ್ತಿದ್ದನು.

---

ಕುಶಾಃ – ರಾವಣಸಂನ್ಯಾಸಿಯು ಬಂದಿದ್ದಾಗ ಅವನ ಆತಿಥ್ಯಕ್ಕಾಗಿ ಸೀತಾದೇವಿಯು ಕುಶಾಜಿನಾಸನಾದಿಗಳೆಲ್ಲವನ್ನೂ ಸಿದ್ಧಪಡಿಸಿದ್ದಳು. ಅವುಗಳನ್ನು ಯಥಾಸ್ಥಾನದಲ್ಲಿಡಲು ಸೀತಾದೇವಿಗೆ ಅವಕಾಶವಾಗಲಿಲ್ಲ. ಆದುದರಿಂದ ಅವೆಲ್ಲವೂ ಚದುರಿಬಿದ್ದಿರುವಂತೆ ಕಾಣುತ್ತಿದ್ದುವು–ಎಂಬುದು ವ್ಯಾಖ್ಯಾನಕಾರರ ಅಭಿಪ್ರಾಯ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸೀತೆಯನ್ನು ಕಾಣದೇ ಹುಚ್ಚನಂತೆಯೇ ಆಗಿದ್ದ ಶ್ರೀರಾಮನು ಸೀತೆಯ ವಿಷಯವಾಗಿ ಮರ-ಗಿಡ-ಬಳ್ಳಿಗಳನ್ನು ಪ್ರಶ್ನಿಸತೊಡಗಿದನು.

" ಕದಂಬವೃಕ್ಷವೇ ! ನನ್ನ ಸೀತೆಗೆ ನಿನ್ನ ಪುಷ್ಪಗಳೆಂದರೆ ಬಹಳ ಆಸೆ. ಹೂಗಳ ಆಸೆಯಿಂದಾಗಿ ಅವಳು ನಿನ್ನ ಬಳಿಗೆ ಬಂದಿದ್ದರೂ ಬಂದಿರ ಬಹುದು. ಈಗ ಅವಳೆಲ್ಲಿರುವಳೆಂಬುದು ನಿನಗೇನಾದರೂ ತಿಳಿದಿದ್ದರೆ ಮಂಗಳಮುಖಿಯಾದ ಆ ನನ್ನ ಪ್ರೇಯಸಿಯು ಎಲ್ಲಿರುವಳೆಂಬುದನ್ನು ಹೇಳು."

ಸೀತೆಯು ಎಲ್ಲಿರುವಳೆಂಬ ಸುಳಿವೇನೂ ಸಿಕ್ಕಲಿಲ್ಲ. ಮತ್ತೊಂದು ವೃಕ್ಷದ ಬಳಿಗೆ ಓಡಿದನು. ಅದು ಬಿಲ್ವವೃಕ್ಷವಾಗಿತ್ತು. ಅದನ್ನೂ ಪ್ರಶ್ನಿಸಿದನು :

" ಬಿಲ್ವನೇ ! ಸುಂದರವಾದ ಚಿಗುರಿನಂತೆ ಸುಕೋಮಲೆಯಾಗಿರುವ, ಹೊಂಬಣ್ಣದ ರೇಷ್ಮೆಯ ವಸ್ತ್ರವನ್ನುಟ್ಟಿದ್ದ ನನ್ನ ಪ್ರೇಯಸಿಯನ್ನು ನೀನೇನಾದರೂ ಕಂಡೆಯಾ ? ಕಂಡಿದ್ದರೆ ಹೇಳು. ನಿನ್ನ ಕಾಯಿಗಳಷ್ಟೇ ಗಾತ್ರದ ಸ್ತನಗಳು ಅವಳಿಗಿದ್ದುದರಿಂದ ಅವಳನ್ನು ನೀನು ಕಂಡಿರಲೇಬೇಕು."*

ರಾಮನು ಬಿಲ್ವವೃಕ್ಷದ ಬಳಿಯಲ್ಲಿ ಕ್ಷಣಕಾಲ ನಿಂತಿದ್ದು ಅರ್ಜುನ ವೃಕ್ಷದ ಬಳಿಗೆ ಓಡಿದನು.

" ಅರ್ಜುನವೃಕ್ಷವೇ ! ನೀನಾದರೂ ನನ್ನ ಪ್ರಿಯೆಯು ಎಲ್ಲಿರುವಳೆಂಬುದನ್ನು ಹೇಳು. ಅವಳಿಗೆ ನಿನ್ನನ್ನು ಕಂಡರೆ ಬಹಳ ಪ್ರೀತಿ. ಜನಕನ ಮಗಳಾದ, ಭಯಪಡುವ ಸ್ವಭಾವವುಳ್ಳ ಆ ನನ್ನ ಸೀತೆಯು ಬದುಕಿರುವಳೋ ಇಲ್ಲವೋ ?–ಎಂಬುದನ್ನಾದರೂ ಹೇಳಿಬಿಡು. ಲಕ್ಷ್ಮಣ ! ಈ ಅರ್ಜುನ ವೃಕ್ಷವು ಚಿಗುರುಗಳಿಂದಲೂ, ಹೂಗಳಿಂದಲೂ ಸಮೃದ್ಧವಾಗಿದ್ದು ಪ್ರಕಾಶಮಾನವಾಗಿ ಕಾಣುತ್ತಿದೆ. ಇದರ ರೆಂಬೆಯಂತೆಯೇ ತೊಡೆಗಳನ್ನು ಹೊಂದಿರುವ ಸೀತಾದೇವಿಯ ವಿಷಯವನ್ನು ಇದು ಚೆನ್ನಾಗಿ ತಿಳಿದು

---

* ಬಿಲ್ವೋಪಮಸ್ತನೀ – ಎಂದು ಹೇಳಿರುವುದರಿಂದ ಸೀತೆಯು ಪದ್ಮಿನೀಜಾತಿಯ ಸ್ತ್ರೀಯೆಂಬುದು ವ್ಯಕ್ತವಾಗುತ್ತದೆ. ರತಿರಹಸ್ಯದಲ್ಲಿ ಪದ್ಮಿನೀಜಾತಿಯ ಸ್ತ್ರೀಯರ ಲಕ್ಷಣವನ್ನು ಹೀಗೆ ಹೇಳಿದ್ದಾರೆ : " ಸ್ತನಯುಗಮಪಿ ಯಸ್ಯಾಃ ಶ್ರೀಫಲಶ್ರೀವಿಡಂಬಿ."

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಕೊಂಡಿದೆ." ಅರ್ಜುನವೃಕ್ಷವು ಉತ್ತರಿಸಲಿಲ್ಲ. ತಿಲಕವೃಕ್ಷದ ಬಳಿಗೆ ಶ್ರೀರಾಮನು ಓಡಿದನು. "ಲಕ್ಷ್ಮಣ! ದುಂಬಿಗಳ ಮಧುರನಿನಾದದಿಂದ ನಿನಾದಿತವಾಗಿರುವ ಈ ತಿಲಕವೃಕ್ಷವು ಎಲ್ಲ ವೃಕ್ಷಗಳಿಗಿಂತಲೂ ಶ್ರೇಷ್ಠ ವಾದುದು. ಈ ವೃಕ್ಷವನ್ನು ಕಂಡರೆ ಸೀತೆಗೆ ಹೆಚ್ಚುಪ್ರೀತಿ. ಅದುದರಿಂದ ಇದು ಸೀತೆಯು ಎಲ್ಲಿರುವಳೆಂಬುದನ್ನು ಸ್ಪಷ್ಟವಾಗಿ ತಿಳಿದುಕೊಂಡಿದೆ. ತಿಲಕವೃಕ್ಷವೇ! ನನ್ನ ಸೀತೆಯು ಎಲ್ಲಿರುವಳೆಂಬುದನ್ನು ನೀನಾದರೂ ಹೇಳು." ಉತ್ತರವಿಲ್ಲ. ಉತ್ತರವನ್ನು ನಿರೀಕ್ಷಿಸುವ ಸ್ಥಿತಿಯಲ್ಲೂ ಶ್ರೀರಾಮ ನಿರಲಿಲ್ಲ. ಅಶೋಕವೃಕ್ಷದ ಕಡೆಗೆ ಓಡಿದನು.

ಅಶೋಕ ಶೋಕಾಪನುದ ಶೋಕೋಪಹತಚೇತಸಮ್ ।
ತ್ವನ್ನಾಮಾನಂ ಕುರು ಕ್ಷಿಪ್ರಂ ಪ್ರಿಯಾಸಂದರ್ಶನೇನ ಮಾಮ್ ॥

"ದರ್ಶನಮಾತ್ರದಿಂದಲೇ ಎಲ್ಲರ ಶೋಕವನ್ನೂ ಹೋಗಲಾಡಿಸುವ ಸಾಮರ್ಥ್ಯವುಳ್ಳ ಅಶೋಕವೃಕ್ಷವೇ! ಸೀತಾವಿರಹಶೋಕದಿಂದ ಬುದ್ಧಿಗೆಟ್ಟು ಹುಚ್ಚನಂತೆ ತಿರುಗುತ್ತಿರುವ ನನಗೆ ನನ್ನ ಪ್ರಿಯತಮೆಯಾದ ಸೀತಾದೇವಿ ಯನ್ನು ತೋರಿಸಿ ನನಗೆ ಅಶೋಕ (ಶೋಕರಹಿತ) ಎಂಬ ನಿನ್ನ ಹೆಸರು ಬರುವಂತೆ ಮಾಡು."

ಅಶೋಕವೃಕ್ಷವೂ ಸೀತಾವೃತ್ತಾಂತವನ್ನು ಹೇಳಲಿಲ್ಲ. ರಾಮನೂ ಅಶೋಕನಾಗಲಿಲ್ಲ. ಬಳಿಕ ತಾಲವೃಕ್ಷದ ಕಡೆಗೆ ಧಾವಿಸಿದನು.

"ತಾಲವೃಕ್ಷವೇ! ಪಕ್ವವಾದ ನಿನ್ನ ಫಲಗಳಂತೆಯೇ ಸ್ತನಗಳನ್ನು ಹೊಂದಿರುವ ಸೀತೆಯನ್ನೇನಾದರೂ ನೀನು ಕಂಡೆಯಾ? ನಿನಗೆ ನನ್ನ ವಿಷಯದಲ್ಲಿ ಕರುಣೆಯಿರುವುದಾದರೆ ಸುಂದರಾಂಗಿಯಾದ ಸೀತೆಯು ಎಲ್ಲಿರು ವಳೆಂಬುದನ್ನು ಬೇಗನೆ ಹೇಳು."

ತಾಲವೃಕ್ಷವೂ ಉತ್ತರಿಸಲಿಲ್ಲ. ನೇರಳೆಯ ಮರದ ಬಳಿಗೆ ಧಾವಿಸಿ ಅದನ್ನು ಪ್ರಶ್ನಿಸಿದನು: "ಜಂಬೂವೃಕ್ಷವೇ! ನನ್ನ ಸೀತೆಯೂ ನಿನ್ನ ಹೆಸರನ್ನೇ ಪಡೆದಿರುವ ಜಾಂಬೂನದದ (ಚಿನ್ನದ) ಕಾಂತಿಯನ್ನು ಹೊಂದಿ ದ್ದಳು. ಅವಳನ್ನು ನೀನಾದರೂ ನೋಡಿದೆಯಾ? ಅವಳ ವಿಷಯವೇನಾದರೂ ನಿನಗೆ ತಿಳಿದಿದ್ದರೆ ಸಂಕೋಚವಿಲ್ಲದೇ ಹೇಳು." ನೇರಳೆಯ ಮರವೂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಉತ್ತರಿಸಲಿಲ್ಲ. ಸಮೀಪದಲ್ಲಿಯೇ ಇದ್ದ ಕರ್ಣಿಕಾರವೃಕ್ಷದ ಕಡೆಗೆ ಶ್ರೀರಾಮನು ಧಾವಿಸಿ ಪ್ರಶ್ನಿಸಿದನು :

"ಕರ್ಣಿಕಾರವೃಕ್ಷವೇ ! ಹೂವುಗಳಿಂದ ಸಮಲಂಕೃತವಾಗಿರುವ ನೀನು ಈ ಸಮಯದಲ್ಲಿ ಅತ್ಯಂತಶೋಭಾಯಮಾನವಾಗಿ ಕಾಣುತ್ತಿರುವೆ. ನಿನ್ನ ಹೂವುಗಳೆಂದರೆ ಸಾಧ್ವಿಯಾದ ಸೀತೆಗೆ ತುಂಬ ಆಸೆ. ನೀನೇನಾದರೂ ಅವಳನ್ನು ಕಂಡಿದ್ದರೆ ಯಾವಾಗ ಕಂಡೆ ? ಅವಳು ಎಲ್ಲಿಗೆ ಹೋದಳು ?–ಎಂಬುದನ್ನು ಹೇಳು."

ಕರ್ಣಿಕಾರವೃಕ್ಷವೂ ಉತ್ತರಿಸಲಿಲ್ಲ. ರಾಮನನ್ನು ಸಮಾಧಾನಗೊಳಿಸಲಿಲ್ಲ. ಮಾವಿನ ಮರದ ಬಳಿಗೆ ಹೋದನು. ಅದನ್ನೂ ಕೇಳಿದನು. ಈಚಲ, ಮತ್ತೀ, ಹಲಸು, ಗೋರಂಟೀ ಕಗ್ಗಲೀ, ಹೊನ್ನೆ, ದಾಳಿಂಬೆ–ಇವೇ ಮುಂತಾದ ಅರಣ್ಯದಲ್ಲಿದ್ದ ಎಲ್ಲ ವೃಕ್ಷಗಳ ಬಳಿಗೂ ಹೋಗಿ ಪ್ರತಿಯೊಂದು ವೃಕ್ಷವನ್ನೂ ಯಶಸ್ವಿಯಾದ ಶ್ರೀರಾಮನು-'ಸೀತೆಯನ್ನು ಕಂಡೆಯಾ ? ಕಂಡಿದ್ದರೆ ಹೇಳು'–ಎಂದು ಅಂಗಲಾಚಿ ಬೇಡಿಕೊಂಡನು. ಯಾವುದೇ ವೃಕ್ಷವೂ ಸೀತೆಯ ಸಮಾಚಾರವನ್ನು ತಿಳಿಸಿ ಶ್ರೀರಾಮನಿಗೆ ಸಮಾಧಾನವನ್ನುಂಟುಮಾಡಲಿಲ್ಲ. ಮಲ್ಲಿಗೆ, ಸುರಗಿ, ಚಂದನ, ಸಂಪಿಗೆ, ಕೇದಿಗೆ–ಇವೇ ಮುಂತಾದ ಪುಷ್ಪವೃಕ್ಷಗಳ ಮತ್ತು ಬಳ್ಳಿಗಳ ಬಳಿಗೆ ಹೋಗಿ ಅವುಗಳನ್ನೂ ಪ್ರಶ್ನಿಸುತ್ತಾ ಹುಚ್ಚನಂತೆಯೇ ಅರಣ್ಯದಲ್ಲಿ ಅಲೆದಾಡುತ್ತಿದ್ದನು. ಮರ-ಗಿಡ-ಬಳ್ಳಿಗಳೊಂದೂ ರಾಮನಿಗೆ ಸೀತೆಯ ವಿಷಯವನ್ನು ಹೇಳಲಿಲ್ಲ. ಮೃಗ-ಪಕ್ಷಿಗಳಾದರೂ ಹೇಳಿಯಾವೆಂದು ಭಾವಿಸಿ ಅಲ್ಲಿಯೇ ಹೋಗುತ್ತಿದ್ದ ಜಿಂಕೆಯನ್ನು ಪ್ರಶ್ನಿಸಿದನು :

"ಚಿಗರೆಯೇ ! ನಿನ್ನ ಮರಿಯ ಕಣ್ಣುಗಳಂತೆಯೇ ಕಣ್ಣುಗಳುಳ್ಳ ಸೀತೆಯು ಎಲ್ಲಿರುವಳೆಂಬುದನ್ನು ನೀನಾದರೂ ತಿಳಿದಿರುವೆಯಲ್ಲವೇ ? ನನ್ನ ಪತ್ನಿಯು ಮೃಗಗಳಂತೆಯೇ ಚಂಚಲದೃಷ್ಟಿಯುಳ್ಳವಳಾಗಿರುವುದರಿಂದ ಹೆಣ್ಣು ಜಿಂಕೆಗಳ ಮಧ್ಯದಲ್ಲಿಯೇ ಸೇರಿಕೊಂಡಿರಬಹುದೇ ?"

ಶ್ರೀರಾಮನು ಹೀಗೆ ಯೋಚಿಸುತ್ತಿರುವಾಗ ಜಿಂಕೆಯು ಓಡಿಹೋಯಿತು. ಮತ್ತೊಂದು ಕಡೆಯಿಂದ ಆನೆಯೊಂದು ಬರುತ್ತಿದ್ದಿತು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಆಮೇಲೆ ರಾಮನು ಪ್ರಶ್ನಿಸಿದನು: "ಗಜರಾಜ! ನನ್ನ ಪತ್ನಿಯ ತೊಡೆಗಳೂ ನಿನ್ನ ಸೊಂಡಿಲಿನಂತೆಯೇ ಇದ್ದುವು. ಆದುದರಿಂದ ಅವಳೆಲ್ಲಿರುವಳೆಂಬುದನ್ನು ನೀನು ತಿಳಿದಿರುವೆಯೆಂದು ಭಾವಿಸಿದ್ದೇನೆ. ಆ ನನ್ನ ಸೀತೆಯನ್ನು ನೀನೇನಾದರೂ ನೋಡಿದ್ದರೆ ನನಗೆ ತಿಳಿಸು."

ಆನೆಯೂ ತನ್ನ ಪಾಡಿಗೆ ತಾನು ಹೊರಟುಹೋಯಿತು. ರಾಮನು ಲಕ್ಷ್ಮಣನೊಡನೆ ಸ್ವಲ್ಪ ಮುಂದೆ ಹೋದನು. ಅಲ್ಲಿ ಹುಲಿಯೊಂದು ಕಾಣಿಸಿತು. ಆಡನ್ನೂ ಶ್ರೀರಾಮನು ಪ್ರಶ್ನಿಸಿದನು:

"ಹುಲಿರಾಯ! ಚಂದ್ರನಂತಹ ಮುಖವನ್ನು ಹೊಂದಿರುವ ಮೈಥಿಲಿಯನ್ನು ನೀನೇನಾದರೂ ಕಂಡೆಯಾ? ನನ್ನ ಮೇಲೆ ವಿಶ್ವಾಸವನ್ನಿಡು. ಭಯಪಡುವ ಕಾರಣವಿಲ್ಲ. ಸ್ಪಷ್ಟವಾಗಿ ಹೇಳು." *

ಉನ್ಮಾದಾವಸ್ಥೆಯಲ್ಲಿದ್ದ ರಾಮನಿಗೆ ಸೀತೆಯೂ ಕಾಣತೊಡಗಿದಳು.[1] ರಾಮನು ಕೂಗಿ ಹೇಳಿದನು:

ಕಿಂ ಧಾವಸಿ ಪ್ರಿಯೇ ದೂರಂ ದೃಷ್ಟಾಸಿ ಕಮಲೇಕ್ಷಣೇ ।
ವೃಕ್ಷೈರಾಚ್ಛಾದ್ಯ ಚಾತ್ಮಾನಂ ಕಿಂ ಮಾಂ ನ ಪ್ರತಿಭಾಷಸೇ ॥ ೨೬ ॥

"ಕಮಲಾಕ್ಷಿ! ಪ್ರಿಯೇ! ನಾನು ನಿನ್ನನ್ನು ಕಂಡುಬಿಟ್ಟೆ. ಮತ್ತೇಕೆ ತಪ್ಪಿಸಿಕೊಂಡು ದೂರಕ್ಕೆ ಓಡಿಹೋಗುತ್ತಿರುವೆ? ಮರಗಳ ಮರೆಯಲ್ಲಿ ಅವಿತಿಟ್ಟುಕೊಂಡಿರುವ ನೀನು ನನ್ನೊಡನೆ ಏಕೆ ಮಾತನಾಡುತ್ತಿಲ್ಲ?

---

* ನ ತೇ ಭಯಂ—ಎಂಬುದನ್ನು ವಿವರಿಸುತ್ತಾ ಒಬ್ಬರು ವ್ಯಾಖ್ಯಾನಕಾರರು: 'ಒಂದು ವೇಳೆ ನೀನು ಸೀತೆಯನ್ನು ತಿಂದುಹಾಕಿದ್ದರೂ ನನ್ನೊಡನೆ ಭಯಪಡದೇ ಹೇಳಬಹುದು. ನಿನಗೆ ತೊಂದರೆಯನ್ನೇನೂ ಮಾಡುವುದಿಲ್ಲ'—ಎಂದೂ, ಮತ್ತೊಬ್ಬರು—' ಈ ಹಿಂದೆ ನಾನು ನೋಡಿದ ಪ್ರಾಣಿಗಳೆಲ್ಲವೂ ನನ್ನನ್ನು ಕಂಡು ಭಯದಿಂದ ಓಡಿಹೋದುವು. ನೀನು ಮಹಾಶೂರನಾದುದರಿಂದ ನಿನಗೆ ಭಯವೆಂಬುದೇ ಇಲ್ಲ.' ನ ತೇ ಭಯಂ= ಶೂರಸ್ಯ ತವ ಭಯಂ ನಾಸ್ತಿ—ಎಂದೂ ವಿವರಣೆ ನೀಡಿದ್ದಾರೆ.

1 ವಿರಹದಲ್ಲಿ ಇದೂ ಒಂದು ಅವಸ್ಥೆ. ಮನಸ್ಸಿಗೆ ಬಹಳವಾಗಿ ಹಚ್ಚಿಕೊಂಡುಬಿಟ್ಟರೆ—ಎಲ್ಲೆಲ್ಲಿಯೂ ನಮ್ಮ ಮನಸ್ಸಿನಲ್ಲಿರುವುದೇ ಪ್ರತ್ಯಕ್ಷದಲ್ಲಿಯೂ ಕಾಣಿಸುತ್ತಿರುತ್ತದೆ. ಇದು ಅಸಂಭವವೇನಲ್ಲ. ದೈವಚಿಂತಕರಿಗೆ, ಕಾಮಿಗಳಿಗೆ, ವಿರಹಿಗಳಿಗೆ ಇದೊಂದು ಪ್ರತ್ಯಕ್ಷಾನುಭವದ ವಿಷಯವಾಗಿದೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri



ತಿಷ್ಠ ತಿಷ್ಠ ವರಾರೋಹೇ ನ ತೇಽಸ್ತಿ ಕರುಣಾ ಮಯಿ ।
ನಾತ್ಯರ್ಥಂ ಹಾಸ್ಯಶೀಲಾಸಿ ಕಿಮರ್ಥಂ ಮಾಮುಪೇಕ್ಷಸೇ ॥೨೭॥

ಸುಂದರಾಂಗಿಯೇ! ನಿಲ್ಲು; ನಿಲ್ಲು, ಓಡಿಹೋಗಬೇಡ. ಅಯ್ಯೋ! ನಾನು ಕೂಗಿಕೊಳ್ಳುತ್ತಿದ್ದರೂ ಓಡುತ್ತಿರುವೆಯಲ್ಲಾ! ನನ್ನ ಮೇಲೆ ನಿನಗೆ ಕರುಣೆಯೆಂಬುದೇ ಇಲ್ಲವೇ? ನೀನು ವಿನೋದಕ್ಕಾಗಿ ಹೀಗೆ ಮಾಡುತ್ತಿರುವೆ ಯೆಂದೂ ಹೇಳುವುದಕ್ಕಾಗುವುದಿಲ್ಲ. ಏಕೆಂದರೆ: ನೀನು ಹೆಚ್ಚು ಹಾಸ್ಯ ಮಾಡುವ ಸ್ವಭಾವದವಳಲ್ಲ. ಯಾವ ಕಾರಣದಿಂದ ನೀನು ನನ್ನ ಕಣ್ಣಿಗೆ ತಪ್ಪಿಸಿಕೊಳ್ಳುತ್ತಾ ನನ್ನನ್ನು ಉಪೇಕ್ಷಿಸುತ್ತಿರುವೆ? ವರವರ್ಣಿನಿಯೇ! ನೀನು ಓಡಿಹೋಗುತ್ತಿದ್ದರೂ ನನಗೆ ನೀನುಟ್ಟಿರುವ ಚಿರಪರಿಚಿತವಾದ ಹೊಂಬಣ್ಣದ ರೇಷ್ಮೆಯ ಸೀರೆಯಿಂದಲೇ ನಿನ್ನ ಗುರುತು ಸಿಕ್ಕಿ ನಿನ್ನನ್ನು ನೋಡಿಬಿಟ್ಟೆನು. ನಿನಗೆ ನನ್ನ ಮೇಲೆ ಪ್ರೀತಿಯಿರುವುದಾದರೆ ಓಡಿಹೋಗ ಬೇಡ. ಅಲ್ಲಿಯೇ ನಿಲ್ಲು."

ಶ್ರೀರಾಮನು ಅದೇ ದಿಕ್ಕನ್ನೇ ದಿಟ್ಟಿಸಿನೋಡುತ್ತಾ ದುಃಖದಿಂದ ಹೇಳಿ ದನು: "ಅಲ್ಲ; ಅಲ್ಲ; ಅವಳಲ್ಲವೇ ಅಲ್ಲ. ದುಃಖಿಸುತ್ತಿರುವ ನನ್ನನ್ನು ನೋಡಿದ್ದರೆ ಅವಳು ನಿಶ್ಚಯವಾಗಿಯೂ ಹೀಗೆ ಉಪೇಕ್ಷಿಸುತ್ತಿರಲಿಲ್ಲ. ಒಂದು ವೇಳೆ ಚಾರುಹಾಸಿನಿಯಾದ ಸೀತೆಯೇನಾದರೂ ರಾಕ್ಷಸರ ಹಿಂಸೆಗೆ ಒಳಗಾಗಿರಬಹುದೇ? ನಿಜ! ಮಾಂಸಾಶಿಗಳಾದ ರಾಕ್ಷಸರು ನನ್ನಿಂದ ಬೇರ್ಪಟ್ಟ, ಪರಮಪ್ರಿಯಳಾದ, ತರುಣಿಯಾದ ಸೀತೆಯ ಎಲ್ಲ ಅವಯವ ಗಳನ್ನೂ ತುಂಡು-ತುಂಡುಗಳನ್ನಾಗಿ ಕತ್ತರಿಸಿ ತಿಂದುಹಾಕಿದ್ದಾರೆ. ನಿಶ್ಚಯ ವಾಗಿಯೂ ಅವಳ ಮುಖವು ಪೂರ್ಣಚಂದ್ರನಂತೆಯೇ ಇದ್ದಿತು. ಶೋಭಾಯ ಮಾನವಾದ ಹಲ್ಲುಗಳ ಸಾಲುಗಳಿಂದಲೂ ಸುಂದರವಾದ ಕೆಂದುಟಿಗಳಿಂದಲೂ ಸಮಲಂಕೃತವಾಗಿದ್ದಿತು. ಸುಂದರವಾದ ಮೂಗಿನಿಂದ ಕೂಡಿದ್ದಿತು. ಸುಂದರ ವಾದ ಕರ್ಣಾಭರಣಗಳಿಂದ ದೇದೀಪ್ಯಮಾನವಾಗಿ ಬೆಳಗುತ್ತಿದ್ದಿತು. ಅಂತಹ ನನ್ನ ಪ್ರೇಯಸಿಯ ಮುಖವು ರಾಕ್ಷಸರಿಂದ ನುಂಗಲ್ಪಟ್ಟು ರಾಹುಗ್ರಸ್ತನಾದ ಪೂರ್ಣಚಂದ್ರಬಿಂಬದಂತೆ ಕಾಂತಿಹೀನವಾಗಿ ಹೋಗಿದೆ. ನನ್ನ ಪ್ರೇಯ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಸಿಯ ಕುತ್ತಿಗೆಯು ಶ್ರೀಗಂಧದ ಬಣ್ಣದಂತೆ ಕಾಂತಿಯಿಂದ ಬೆಳಗುತ್ತಿದ್ದಿತು. ಕಂಠಾಭರಣಗಳಿಂದ ಶೋಭಾಯಮಾನವಾಗಿ ಕಾಣುತ್ತಿದ್ದಿತು. ಸುಕೋಮಲವಾಗಿದ್ದಿತು. ವಿರಹವೇದನೆಯಿಂದ ಅಳುತ್ತಿದ್ದ ನನ್ನ ಕಾಂತೆಯ ಅಂತಹ ಸುಂದರವಾದ ಕುತ್ತಿಗೆಯನ್ನು ರಾಕ್ಷಸರು ತಿಂದುಹಾಕಿದ್ದಾರೆ.

ಆಕೆಯ ತೋಳುಗಳು ಚಿಗುರಿನಂತೆ ಸುಕೋಮಲವಾಗಿದ್ದುವು. ಹಸ್ತಾಭರಣಗಳಿಂದಲೂ ಕೇಯೂರಗಳಿಂದಲೂ ಸಮಲಂಕೃತವಾಗಿದ್ದುವು. ಅಂತಹ ಸುಂದರವಾದ ತೋಳುಗಳನ್ನು ಕ್ರೂರಿಗಳಾದ ರಾಕ್ಷಸರು ಕತ್ತರಿಸಿಹಾಕಿದ್ದಾರೆ. ಕೆಳಕ್ಕೆ ಬಿದ್ದೊಡನೆಯೇ ಆ ತೋಳುಗಳ ಮುಂಭಾಗಗಳು ತರತರನೆ ನಡುಗುತ್ತಿರುತ್ತವೆ. ಭಯಂಕರರಾದ ರಾಕ್ಷಸರು ನನ್ನ ಪತ್ನಿಯ ಸುಂದರವಾದ ಆ ತೋಳುಗಳನ್ನು ನಿಶ್ಚಯವಾಗಿಯೂ ತಿಂದುಹಾಕಿದ್ದಾರೆ. ರಾಕ್ಷಸರು ಭಕ್ಷಣೆಮಾಡಲೆಂದೇ ನಾನವಳನ್ನು ಬಿಟ್ಟು ಹೋದಂತಾಯಿತು. ಅನೇಕ ನೆಂಟರಿಷ್ಟರಿಂದ ಕೂಡಿದ್ದ ಯುವತಿಯೊಬ್ಬಳು ಪ್ರಯಾಣಮಾಡುತ್ತಿರುವಾಗ ಪಥಿಕರ ಸಮೂಹದಿಂದ ಪರಿತ್ಯಜಿಸಲ್ಪಟ್ಟವಳಾಗಿ ವನ್ಯಮೃಗಗಳಿಂದ ಭಕ್ಷಿತಳಾದಂತೆ-ನನ್ನಿಂದ ಪರಿತ್ಯಕ್ತಳಾದ ಸೀತೆಯೂ ರಾಕ್ಷಸರಿಂದ ಭಕ್ಷಿತಳಾಗಿದ್ದಾಳೆ.

ಹಾ ಲಕ್ಷ್ಮಣ ಮಹಾಬಾಹೋ ಪಶ್ಯಸಿ ತ್ವಂ ಪ್ರಿಯಾಂ ಕ್ವಚಿತ್ ।

ಮಹಾಬಾಹುವೇ ! ಲಕ್ಷ್ಮಣ ! ನನ್ನ ಪ್ರೇಯಸಿಯನ್ನು ಎಲ್ಲಾದರೂ ಕಾಣುತ್ತಿರುವೆಯಾ ?

'ಹಾ ಪ್ರಿಯೇ ಕ್ವ ಗತಾ ಭದ್ರೇ ಹಾ ಸೀತೇ ! '

ಹಾ ಪ್ರಿಯೇ ! ಹಾ ಸೀತೇ ! ಹಾ ಭದ್ರೇ ! ನೀನೆಲ್ಲಿಗೆ ಹೊರಟು ಹೋದೆ ? ಅಯ್ಯೋ ! ನಿನ್ನ ವಿರಹವೇದನೆಯನ್ನು ನಾನು ತಾಳಲಾರೆನಲ್ಲಾ ! "-ಎಂದು ಮುಂತಾಗಿ ಶ್ರೀರಾಮನು ಪುನಃ ಪುನಃ ವಿಲಪಿಸುತ್ತಿದ್ದನು. ಸೀತೆಯನ್ನು ಹುಡುಕಿಕೊಂಡು ಒಂದು ಅರಣ್ಯದಿಂದ ಮತ್ತೊಂದು ಅರಣ್ಯಕ್ಕೆ ಹೋಗುತ್ತಿದ್ದನು. ದೂರದಲ್ಲಿ ಪೀತಾಂಬರದ ಬಣ್ಣವನ್ನು ನೋಡಿ ಸೀತೆಯೇ ಸಿಕ್ಕಿಬಿಟ್ಟಳೆಂದು ಭ್ರಾಂತನಾಗುತ್ತಿದ್ದನು. ಕೆಲವೊಮ್ಮೆ ಸೀತೆಯು ತನ್ನ ಸಮೀಪದಲ್ಲೇ ಇರುವಳೆಂಬ ವಿಚಿತ್ರವಾದ ಭ್ರಮೆಯೂ ರಾಮನಿಗೆ ಉಂಟಾ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಗುತ್ತಿದ್ದಿತು. ಮರುಕ್ಷಣದಲ್ಲಿಯೇ ಅಲ್ಲಿ ಸೀತೆಯಿಲ್ಲವೆಂದು ಅರಿವಾಗು ತ್ತಿದ್ದಿತು. ಹೀಗೆ ಸೀತೆಯನ್ನು ಹುಡುಕುವುದರಲ್ಲಿಯೇ ನೆಟ್ಟಮನಸ್ಸಿನಿಂದ ಕೂಡಿದ್ದ ಶ್ರೀರಾಮನು ಕೆಲವೊಮ್ಮೆ ಹುಚ್ಚನಂತೆಯೇ ಕಾಣುತ್ತಿದ್ದನು.

ಆ ಸಮಯದಲ್ಲಿ ಶ್ರೀರಾಮನಿಗೆ ಒಂದೆಡೆಯಲ್ಲಿ ಸ್ವಸ್ಥವಾಗಿ ನಿಲ್ಲಲೂ ಸಾಧ್ಯವಾಗುತ್ತಿರಲಿಲ್ಲ. ಮಹಾರಣ್ಯದಲ್ಲಿ ಅಲೆದಾಡುತ್ತಲೇ ಇದ್ದನು. ನದೀ-ನದ-ತಟಾಕಗಳ ತೀರಗಳಲ್ಲಿಯೂ ಸೀತೆಯನ್ನು ಹುಡುಕುತ್ತಿದ್ದನು. ಬೆಟ್ಟ-ಗುಡ್ಡಗಳ ಮೇಲೇರಿ ಅಲ್ಲಿಯೂ ಸೀತೆಯನ್ನು ಕಾಣದೇ ನಿರಾಶನಾಗಿ ಕೆಳಗಿಳಿಯುತ್ತಿದ್ದನು. ಪರ್ವತ-ಝರಿಗಳ ಬಳಿಯಲ್ಲಿಯೂ ಸೀತೆಯನ್ನು ಹುಡುಕುತ್ತಿದ್ದನು. ಕೆಲವೊಮ್ಮೆ ಕಾಡು-ಮೇಡುಗಳಲ್ಲಿ–'ಹಾ ಸೀತೇ! ಹಾ ಮೈಥಿಲಿ! ಎಲ್ಲಿ ಹೋದೆ?'–ಎಂದು ಕೂಗುತ್ತಾ ವೇಗವಾಗಿ ಓಡಿಹೋಗುತ್ತಿದ್ದನು.

ಹೀಗೆ ಶ್ರೀರಾಮನು ಸೀತೆಯ ಸಲುವಾಗಿ ಆ ಮಹಾರಣ್ಯದಲ್ಲಿ ಬಹಳ ಹೊತ್ತಿನವರೆಗೂ ಅಲೆದಾಡುತ್ತಲೇ ಇದ್ದನು. ಎಷ್ಟು ಹುಡುಕಿದರೂ ಸೀತೆಯು ಸಿಕ್ಕಲಿಲ್ಲ. ಸೀತೆಯನ್ನು ಕಾಣಬೇಕೆಂಬ ಅವನ ಆಸೆಯು ಪೂರ್ಣವಾಗಲೂ ಇಲ್ಲ. ಆದರೂ ತನ್ನ ಪ್ರಯತ್ನವನ್ನು ಕೈಬಿಡಲಿಲ್ಲ. ಪ್ರಿಯತಮೆಯಾದ ಸೀತೆಯನ್ನು ಹುಡುಕುವ ಕಾರ್ಯದಲ್ಲಿ ಇನ್ನೂ ಹೆಚ್ಚಾದ ಪ್ರಯತ್ನದಲ್ಲಿ ತೊಡಗಿದನು.

೬೦ನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ ೬೧ನೆಯ ಸರ್ಗ

## ರಾಮ-ಲಕ್ಷ್ಮಣರಿಂದ ಪುನಃ ಸೀತೆಯ ಅನ್ವೇಷಣೆ : ಶ್ರೀರಾಮನ ವಿಲಾಪ

ದೃಷ್ಟ್ವಾಶ್ರಮಪದಂ ಶೂನ್ಯಂ ರಾಮೋ ದಶರಥಾತ್ಮಜಃ ।
ರಹಿತಾಂ ಪರ್ಣಶಾಲಾಂ ಚ ವಿಧ್ವಸ್ತಾನ್ಯಾಸನಾನಿ ಚ ॥೧॥

ಅದೃಷ್ಟ್ವಾ ತತ್ರ ವೈದೇಹೀಂ ಸುನಿರೀಕ್ಷ್ಯ ಚ ಸರ್ವಶಃ ।
ಉವಾಚ ರಾಮಃ ಪ್ರಾಕ್ರುಶ್ಯ ಪ್ರಗೃಹ್ಯ ರುಚಿರೌ ಭುಜೌ ॥೨॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಅರಣ್ಯದ ಎಲ್ಲ ಕಡೆಗಳಲ್ಲಿಯೂ ಸುತ್ತಾಡಿ ಶ್ರೀರಾಮನು ಲಕ್ಷ್ಮಣ ನೊಡನೆ ಪುನಃ ಆಶ್ರಮಕ್ಕೆ ಬಂದನು. ಆಗಲೂ ಪರ್ಣಶಾಲೆಯು ಶೂನ್ಯ ವಾಗಿದ್ದಿತು. ಸೀತೆಯು ಇರಲಿಲ್ಲ. ಆಸನಗಳೆಲ್ಲವೂ ಅಸ್ತವ್ಯಸ್ತವಾಗಿ ಬಿದ್ದಿದ್ದುವು. ಆಶ್ರಮದ ಎಲ್ಲ ಕಡೆಗಳಲ್ಲಿಯೂ ದಿಟ್ಟಿಸಿ ಹುಡುಕಿದರೂ ಸೀತೆಯು ಕಂಡುಬರಲಿಲ್ಲ. ಶ್ರೀರಾಮನಿಗೆ ದುಃಖವನ್ನು ತಡೆಯಲಾಗಲಿಲ್ಲ. ಲಕ್ಷ್ಮಣನ ಸುಂದರವಾದೆರಡು ಭುಜಗಳನ್ನೂ ಹಿಡಿದುಕೊಂಡು ಕೂಗಿ ಹೇಳಿದನು :

ಕ್ವ ನು ಲಕ್ಷ್ಮಣ ವೈದೇಹೀ ಕಂ ವಾ ದೇಶಮಿತೋ ಗತಾ ।
ಕೇನಾಹೃತಾ ವಾ ಸೌಮಿತ್ರೇ ಭಕ್ಷಿತಾ ಕೇನ ವಾ ಪ್ರಿಯಾ ॥೩॥

"ಲಕ್ಷ್ಮಣ! ವೈದೇಹಿಯೆಲ್ಲಿ? ಬೇಗ ಹೇಳು. ಇಲ್ಲಿಂದವಳು ಯಾವ ದೇಶಕ್ಕೆ ಹೊರಟುಹೋದಳು? ಅವಳನ್ನು ಯಾರು ಅಪಹರಿಸಿಕೊಂಡು ಹೋಗಿರುವರು? ನನ್ನ ಪ್ರೇಯಸಿಯನ್ನು ಯಾರು ಭಕ್ಷಿಸಿದ್ದಾರೆ? ಹೇಳು ಲಕ್ಷ್ಮಣ! ನಾನು ಅವಳನ್ನು ನಿನ್ನ ರಕ್ಷಣೆಯಲ್ಲಿ ಬಿಟ್ಟಿದ್ದೆನಲ್ಲವೇ?"

ಧರ್ಮಭೀರುವಾದ ಲಕ್ಷ್ಮಣನು ಏನೆಂದು ತಾನೇ ಉತ್ತರಿಸಿಯಾನು?

ಶ್ರೀರಾಮನು ಲಕ್ಷ್ಮಣನ ಭುಜಗಳನ್ನು ಬಿಟ್ಟು ಮರ-ಗಿಡಗಳ ಕಡೆಗೆ ತಿರುಗಿ ಹೇಳಿದನು :

"ಸೀತೇ! ವೃಕ್ಷಗಳ ಮರೆಯಲ್ಲಿ ಕುಳಿತು ನನ್ನನ್ನು ಪರಿಹಾಸಮಾಡ ಬೇಕೆಂದಿರುವೆಯಾ? ನಿನ್ನ ವಿನೋದವನ್ನು ಸಾಕುಮಾಡು. ನಿನ್ನನ್ನು ಕಾಣದೇ ನಾನು ಬಹಳ ದುಃಖಿತನಾಗಿದ್ದೇನೆ. ಅತ್ಯಂತದುಃಖದಿಂದಿರುವ ನನ್ನ ಬಳಿಗೆ ಒಡನೆಯೇ ಬಂದು ನನ್ನನ್ನು ಸಮಾಧಾನಗೊಳಿಸು.

ಸೀತೇ! ಸೌಮ್ಯೇ! ನಿನ್ನಲ್ಲಿ ಅಪಾರವಾದ ವಿಶ್ವಾಸವನ್ನಿಟ್ಟಿದ್ದ ಈ ಜಿಂಕೆಮರಿಗಳೊಡನೆ ನೀನು ಆಟವಾಡುತ್ತಿದ್ದೆಯಲ್ಲವೇ? ನೀನಿಲ್ಲದ ಕಾರಣ ಇವುಗಳಿಂದು ಕಣ್ಣೀರು ಸುರಿಸುತ್ತಾ ನಿನ್ನನ್ನೇ ಕುರಿತು ಚಿಂತಿಸುತ್ತಿವೆ."

ಪುನಃ ಶ್ರೀರಾಮನು ಲಕ್ಷ್ಮಣನಿಗೆ ಹೇಳುತ್ತಾನೆ :

"ಲಕ್ಷ್ಮಣ! ಸೀತಾವಿಯೋಗದ ದುಃಖದಿಂದ ಪೀಡಿತನಾಗಿರುವ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ನಾನು ಖಂಡಿತವಾಗಿಯೂ ಬಹಳ ಕಾಲ ಜೀವಿಸಿರುವುದಿಲ್ಲ. ಸೀತಾಪಹರಣದಿಂದ ಉಂಟಾಗಿರುವ ಈ ಮಹಾದುಃಖದಿಂದ ನಾನು ಸತ್ತುಹೋಗುತ್ತೇನೆ. ಪರಲೋಕಕ್ಕೆ ಹೋಗುವ ನನ್ನನ್ನು ನಮ್ಮ ತಂದೆಯು ಖಂಡಿತವಾಗಿಯೂ ನೋಡುತ್ತಾನೆ. ಆಗವನು ನನ್ನನ್ನು ಹೀಗೆ ಪ್ರಶ್ನಿಸಬಹುದು :

ಕಥಂ ಪ್ರತಿಜ್ಞಾಂ ಸಂಶ್ರುತ್ಯ ಮಯಾ ತ್ವಮಭಿಯೋಜಿತಃ ।
ಅಪೂರಯಿತ್ವಾ ತಂ ಕಾಲಂ ಮತ್ಸಕಾಶಮಿಹಾಗತಃ ॥೭॥

"ರಾಮ ! ನಾನು ನಿನ್ನನ್ನು ಹದಿನಾಲ್ಕು ವರ್ಷಗಳ ಕಾಲ ಅರಣ್ಯದಲ್ಲಿದ್ದು ಬರಲು ಹೇಳಿದ್ದೆನು. ನೀನು ಕೂಡ ನನ್ನ ಆಜ್ಞೆಯನ್ನು ನಡೆಸಿಕೊಡುವುದಾಗಿ ಪ್ರತಿಜ್ಞೆಯನ್ನು ಮಾಡಿದ್ದೆ. ಪ್ರತಿಜ್ಞಾತವಾಗಿದ್ದ ಆ ಹದಿನಾಲ್ಕು ವರ್ಷಗಳ ವನವಾಸವನ್ನು ಮುಗಿಸದೇ ನೀನು ನನ್ನ ಬಳಿಗೆ ಏಕೆ ಬಂದೆ ? "

ಲಕ್ಷ್ಮಣ ! ನನ್ನ ಈ ವರ್ತನೆಯಿಂದಾಗಿ ನಮ್ಮ ತಂದೆಯು ನನ್ನನ್ನು– 'ಕಾಮುಕ', 'ಅನಾರ್ಯ', 'ಸುಳ್ಳುಗಾರ'–ಎಂದು ಹೇಳಿ ಪರಲೋಕದಲ್ಲಿಯೂ ಧಿಕ್ಕರಿಸುತ್ತಾನೆ. ಇದರಲ್ಲಿ ಸಂಶಯವೇ ಇಲ್ಲ. ಆದುದರಿಂದ ಪ್ರಾಣಗಳನ್ನು ತೊರೆದರೂ ನನಗೆ ಸುಖವೆಂಬುದೇನೂ ಇಲ್ಲ."

ಕ್ಷಣಕಾಲ ಅತ್ತಿತ್ತ ನೋಡುತ್ತಾ ಶ್ರೀರಾಮನು ಪುನಃ ಸೀತೆಯನ್ನೇ ಸಂಬೋಧಿಸಿ ಹೇಳುತ್ತಾನೆ :

"ಸೀತೇ ! ನಾನೀಗ ಪ್ರಜ್ಞಾಶೂನ್ಯನಾಗಿದ್ದೇನೆ. ವಿರಹದುಃಖದಿಂದ ಪರಿತಪಿಸುತ್ತಿದ್ದೇನೆ. ದೀನನಾಗಿದ್ದೇನೆ. ನನ್ನ ಆಸೆ-ಆಕಾಂಕ್ಷೆಗಳೆಲ್ಲವೂ ಭಗ್ನವಾಗಿ ಹೋಗಿವೆ. ಸುಂದರಾಂಗಿಯೇ ! ಕುಲೀನನಾದ ಮನುಷ್ಯನನ್ನು ಕೀರ್ತಿಯು ತೊರೆದು ಹೋಗುವಂತೆ–ದಯನೀಯನಾದ ನನ್ನನ್ನು ಈ ಅರಣ್ಯದಲ್ಲಿ ತೊರೆದು ನೀನೆಲ್ಲಿಗೆ ಹೋಗಿರುವೆ ? ಸುಂದರವಾದ ನಡುವಿನಿಂದ ಕೂಡಿರುವವಳೇ ! ನನ್ನನ್ನು ಪರಿತ್ಯಜಿಸಬೇಡ. ನೀನಿಲ್ಲದಿದ್ದರೆ ನಾನು ಖಂಡಿತವಾಗಿಯೂ ಪ್ರಾಣಗಳನ್ನು ತೊರೆಯುತ್ತೇನೆ."

ಸೀತೆಯನ್ನು ನೋಡಬೇಕೆಂಬ ಲಾಲಸೆಯಿಂದ ಕೂಡಿದ್ದ ಶ್ರೀರಾಮನು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಹೀಗೆ ಮಹತ್ತರವಾದ ವಿರಹದುಃಖದಿಂದ ಪೀಡಿತನಾಗಿ ಅಳುತ್ತಿದ್ದರೂ ವೈದೇಹಿಯನ್ನು ಕಾಣಲೇ ಇಲ್ಲ.

ಎಷ್ಟೇ ಗೋಳಾಡಿದರೂ ಸೀತೆಯು ಅವನಿಗೆ ಸಿಕ್ಕಲಿಲ್ಲ. ಗಾಢವಾದ ಕೆಸರಿನಲ್ಲಿ ಸಿಕ್ಕಿಕೊಂಡ ಆನೆಯು ನರಳುವಂತೆ – ಶೋಕವೆಂಬ ಕೆಸರಿನಲ್ಲಿ ಸಿಕ್ಕಿಕೊಂಡಿದ್ದ ಶ್ರೀರಾಮನು ನರಳುತ್ತಿದ್ದನು. ಆ ಸಮಯದಲ್ಲಿ ಲಕ್ಷ್ಮಣನು ರಾಮನಿಗೆ ಹಿತವನ್ನುಂಟುಮಾಡುವ ಆಶಯದಿಂದ ಮಹತ್ತರವಾದ ಈ ಮಾತನ್ನು ಹೇಳಿದನು :

" ಮಹಾಬುದ್ಧಿಯುಳ್ಳವನೇ ! ಅಣ್ಣ ! ವಿಷಾದಿಸಬೇಡ. ಸೀತೆಯನ್ನು ಹುಡುಕಲು ನನ್ನೊಡನೆ ನೀನೂ ಪ್ರಯತ್ನಿಸು. ವೀರನೇ ! ಇಲ್ಲಿ ಕಾಣುತ್ತಿರುವ ಅರಣ್ಯವು ದುರ್ಗಮವಾಗಿದ್ದು ಸುಂದರವಾದ ಅನೇಕ ಗುಹೆಗಳಿಂದ ಶೋಭಾಯಮಾನವಾಗಿದೆ. ಆ ಗುಹೆಗಳಲ್ಲಿಯೂ ನಾವು ಸೀತೆಯನ್ನು ಹುಡುಕೋಣ. ಅವಳು ಯಾವಾಗಲೂ ಅರಣ್ಯಸಂಚಾರದಲ್ಲಿ ವಿಶೇಷವಾದ ಆಸಕ್ತಿಯುಳ್ಳವಳಾಗಿದ್ದಳು. ವನಸಿರಿಯನ್ನು ಕಂಡೊಡನೆಯೇ ಅವಳು ಆನಂದದಿಂದ ಉಬ್ಬಿಹೋಗುತ್ತಿದ್ದಳು. ಆದುದರಿಂದ ಅವಳು ಇಲ್ಲಿಯೇ ಅರಣ್ಯಪ್ರದೇಶದಲ್ಲಿ ಎಲ್ಲಿಯೋ ಇರಬಹುದು ಅಥವಾ ಅರಣ್ಯದ ಮಧ್ಯದಲ್ಲಿರುವ ಸರೋವರಕ್ಕಾದರೂ ಹೋಗಿರಬಹುದು . ಅಥವಾ ಮೀನುಗಳಿಂದ ತುಂಬಿರುವ ಮತ್ತು ಹಕ್ಕಿ ಗಿಡಗಳಿಂದ ಶೋಭಾಯಮಾನವಾಗಿ ಕಾಣುತ್ತಿರುವ ನದಿಗಾದರೂ ಸ್ನಾನಮಾಡಲು ಹೋಗಿರಬಹುದು. ಹಾಸ್ಯಮಾಡುವ ಅಪೇಕ್ಷೆಯಿಂದ ಇಲ್ಲಿಯೇ ಅರಣ್ಯದ ಯಾವುದೋ ಭಾಗದಲ್ಲಿ ಅವಿತಿಟ್ಟುಕೊಂಡಿರಬಹುದು. ಅಥವಾ ನಮ್ಮನ್ನು ಹಾಸ್ಯಮಾಡುವ ಆಶಯದಿಂದಲೇ ಈ ಅರಣ್ಯದಲ್ಲಿಯೇ ಎಲ್ಲಿಯಾದರೂ ಅಡಗಿಕೊಂಡಿರಬಹುದು. ತಾನಿಲ್ಲದಿದ್ದಾಗ ನಾನು ಮತ್ತು ನೀನು ಹೇಗೆ ವರ್ತಿಸುವೆ ಎಂಬುದನ್ನು ತಿಳಿಯಲು ನಿಗೂಢವಾದ ಸ್ಥಳದಲ್ಲಿ ಕುಳಿತಿರಬಹುದು. ಅಥವಾ ನಮ್ಮ ಸಾಮರ್ಥ್ಯವೆಷ್ಟೆಂಬುದನ್ನಾದರೂ ಅವಳು ಪರೀಕ್ಷಿಸುತ್ತಿರಬಹುದು. ಆದುದರಿಂದ ಈ ಸಮಯದಲ್ಲಿ ನಾವು ಅಧೀರರಾಗಿ ಕುಳಿತುಕೊಳ್ಳದೇ ಅವಳನ್ನು ಹುಡುಕಲು ಎಲ್ಲ ಪ್ರಯತ್ನಗಳನ್ನು ಮಾಡೋಣ. ನೀನು ಒಪ್ಪುವುದಾದರೆ ಈ ಅರಣ್ಯ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ವೆಲ್ಲವನ್ನೂ ಹುಡುಕಿ ಸೀತೆಯಿರುವ ಸ್ಥಳವನ್ನು ತಿಳಿಯೋಣ. ಆದರೆ, ಅಣ್ಣಾ ! ಶೋಕದಿಂದ ಉದ್ವಿಗ್ನನಾಗಬೇಡ."

ಸುಹೃದ್ಭಾವದಿಂದ ಲಕ್ಷ್ಮಣನು ಹೀಗೆ ಹೇಳಲು ಸ್ವಲ್ಪಸಮಾಧಾನ ವನ್ನು ಹೊಂದಿದ ಶ್ರೀರಾಮನು ಲಕ್ಷ್ಮಣನೊಡನೆ ಸೀತೆಯನ್ನು ಹುಡುಕಲು ಹೊರಟನು.

ದಶರಥನ ಮಕ್ಕಳಾದ ರಾಮ-ಲಕ್ಷ್ಮಣರು ಅರಣ್ಯಗಳಲ್ಲಿಯೂ, ಪರ್ವತ ಗಳಲ್ಲಿಯೂ, ನದಿಗಳ ತೀರಪ್ರದೇಶಗಳಲ್ಲಿಯೂ, ಸರೋವರಗಳ ಸಮೀಪ ದಲ್ಲಿಯೂ, ಪರ್ವತದ ತಪ್ಪಲು ಪ್ರದೇಶಗಳಲ್ಲಿಯೂ, ಬಂಡೆಗಳ ಹಿಂಭಾಗ ಗಳಲ್ಲಿಯೂ, ಗುಹೆಗಳಲ್ಲಿಯೂ, ಶಿಖರಗಳಲ್ಲಿಯೂ ಸತತವಾಗಿ ಸೀತೆಯನ್ನು ಹುಡುಕಿದರು. ಆದರೆ ಎಲ್ಲಿಯೂ ಅವರು ಅವಳನ್ನು ಕಾಣಲಿಲ್ಲ. ಪರ್ವತದ ಸುತ್ತಲೂ ಸುತ್ತಾಡಿದ ನಂತರವೂ ಸೀತೆಯು ಸಿಕ್ಕದಿರಲು ಶ್ರೀರಾಮನು ಲಕ್ಷ್ಮಣನಿಗೆ ಹೇಳಿದನು: "ಸೌಮಿತ್ರೇ! ನೇಹ ಪಶ್ಯಾಮಿ ವೈದೇಹೀಂ – ಇಲ್ಲೆಲ್ಲಿಯೂ ಶುಭಾವಹಳಾದ ವೈದೇಹಿಯು ಕಾಣು ತ್ತಿಲ್ಲ." ಶ್ರೀರಾಮನ ಆ ಮಾತನ್ನು ಕೇಳಿ ಲಕ್ಷ್ಮಣನಿಗೂ ಬಹಳ ದುಃಖ ವಾಯಿತು. ಸೀತೆಯನ್ನು ಪುನಃ ಹುಡುಕುವ ಸಲುವಾಗಿ ದಂಡಕಾರಣ್ಯದಲ್ಲಿ ಸುತ್ತಾಡುತ್ತಿದ್ದಾಗ ಲಕ್ಷ್ಮಣನು ಮಹಾತೇಜಸ್ವಿಯಾದ ಶ್ರೀರಾಮನಿಗೆ ಸಮಾಧಾನವಾಗುವಂತೆ ಪುನಃ ಹೀಗೆ ಹೇಳಿದನು :

ಪ್ರಾಪ್ಸ್ಯಸಿ ತ್ವಂ ಮಹಾಪ್ರಾಜ್ಞ ಮೈಥಿಲೀಂ ಜನಕಾತ್ಮಜಾಮ್ ।
ಯಥಾ ವಿಷ್ಣುರ್ಮಹಾಬಾಹುರ್ಬಲಿಂ ಬದ್ಧ್ವಾ
ಮಹೀಮಿಮಾಮ್ ॥೨೩॥

"ಮಹಾಪ್ರಾಜ್ಞನೇ ! ಮಹಾವಿಷ್ಣುವು ಬಲಿಚಕ್ರವರ್ತಿಯನ್ನು ಬಂಧಿಸಿ ಭೂಮಂಡಲವನ್ನು ಪಡೆದುಕೊಂಡಂತೆ – ನೀನು ಜನಕನ ಮಗಳಾದ ಸೀತೆ ಯನ್ನು ಪುನಃ ಪಡೆದುಕೊಳ್ಳುವೆ."

ಲಕ್ಷ್ಮಣನು ಸುಹೃದ್ಭಾವದಿಂದ ಶ್ರೀರಾಮನಿಗೆ ಹೀಗೆ ಹೇಳಲು ದುಃಖ ದಿಂದ ಕುಗ್ಗಿಹೋದ ಮನಸ್ಸಿನಿಂದ ಕೂಡಿದ್ದ ಶ್ರೀರಾಮನು ದೈನ್ಯದಿಂದ ಕೂಡಿದ್ದ ಈ ಮಾತುಗಳನ್ನು ಹೇಳಿದನು :

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

"ಲಕ್ಷ್ಮಣ! ನೀನು ಸೀತೆಯು ಸಿಕ್ಕುವಳೆಂದು ಪದೇ ಪದೇ ಹೇಳುತ್ತಲೇ ಇರುವೆ. ಈಗ ನಾವು ಅರಣ್ಯದ ಎಲ್ಲ ಕಡೆಗಳಲ್ಲಿಯೂ ಸೀತೆಯನ್ನು ಹುಡುಕಿದೆವು. ಅರಳಿರುವ ತಾವರೆಗಳಿಂದ ತುಂಬಿರುವ ಸರೋವರಗಳ ಸಮೀಪದಲ್ಲಿಯೂ ಹುಡುಕಿದೆವು. ಅನೇಕಗುಹೆಗಳಿಂದಲೂ ಚಿಲುಮೆಗಳಿಂದಲೂ ಕೂಡಿರುವ ಈ ಪರ್ವತದ ಶಿಖರದವರೆಗೂ ಹೋಗಿ ಅಲ್ಲಿಯೂ ನೋಡಿದೆವು. ಆದರೆ–ನ ಹಿ ಪಶ್ಯಾಮಿ ವೈದೇಹೀಂ ಪ್ರಾಣೇಭ್ಯೋಽಪಿ ಗರೀಯಸೀಮ್! ನನ್ನ ಪ್ರಾಣಗಳಿಗಿಂತಲೂ ಹೆಚ್ಚು ಪ್ರಿಯಳಾದ ವೈದೇಹಿಯನ್ನು ಮಾತ್ರ ನಾನು ಕಾಣಲೇ ಇಲ್ಲ."

ಹೀಗೆ ಸೀತಾದೇವಿಯ ವಿಯೋಗದಿಂದ ಸಂಕಟಪಡುತ್ತಿದ್ದ, ದೀನನಾಗಿದ್ದ, ಶೋಕಾಕುಲನಾಗಿದ್ದ ಶ್ರೀರಾಮನು ಮುಹೂರ್ತಕಾಲ ಕಳವಳಗೊಂಡು ಕುಳಿತುಬಿಟ್ಟನು. ಶ್ರೀರಾಮನ ಎಲ್ಲ ಅವಯವಗಳೂ ಸೀತೆಯ ವಿಯೋಗದಿಂದ ಆತಂಕಗೊಂಡಿದ್ದುವು. ಬುದ್ಧಿಯು ಕಂಗೆಟ್ಟಿದ್ದಿತು. ಮೂರ್ಛೆಹೊಂದುವ ಸ್ಥಿತಿಯಲ್ಲಿದ್ದನು. ವಿರಹರೋಗದಿಂದ ಪೀಡಿತನಾಗಿದ್ದನು. ಸುದೀರ್ಘವಾಗಿಯೂ ಬಿಸಿಯಾಗಿಯೂ ನಿಟ್ಟುಸಿರುಬಿಡುತ್ತಾ ಸಂಕಟಪಡುತ್ತಿದ್ದನು. ಕಮಲಾಕ್ಷನಾದ ಶ್ರೀರಾಮನು ಹೀಗೆಯೇ ಬಹಳ ಹೊತ್ತಿನವರೆಗೆ ನಿಟ್ಟುಸಿರು ಬಿಡುತ್ತಿದ್ದು ಕಣ್ಣೀರುಸುರಿಸುತ್ತಾ ಗದ್ಗದಕಂಠದಿಂದ–'ಹಾ ಪ್ರಿಯೇ! ಹಾ ಸೀತೇ! ನನ್ನನ್ನು ಬಿಟ್ಟು ಎಲ್ಲಿ ಹೋದೆ?'–ಎಂದು ಹಲವಾರು ಬಾರಿ ಗಟ್ಟಿಯಾಗಿ ಕೂಗಿಕೊಳ್ಳುತ್ತಿದ್ದನು. ಅಣ್ಣನು ಶೋಕಪಡುತ್ತಿದ್ದುದನ್ನು ಕಂಡು ಲಕ್ಷ್ಮಣನಿಗೂ ಬಹಳ ದುಃಖವಾಯಿತು. ಪ್ರಿಯಬಂಧುವಾದ, ಧರ್ಮಜ್ಞನಾದ, ವಿನಯಶೀಲನಾದ ಲಕ್ಷ್ಮಣನು ತಲೆಬಗ್ಗಿಸಿ ಕೈಮುಗಿಯುತ್ತಾ ಬಹುಪ್ರಕಾರವಾಗಿ ಸಮಾಧಾನಕರವಾದ ಮಾತುಗಳಿಂದ ಶ್ರೀರಾಮನನ್ನು ಸಂತೈಸಿದನು. ಆದರೆ ಲಕ್ಷ್ಮಣನ ಅಂತಹ ಮಾತುಗಳು ಶ್ರೀರಾಮನ ಮೇಲೆ ಯಾವ ವಿಧವಾದ ಪರಿಣಾಮವನ್ನೂ ಉಂಟುಮಾಡಲಿಲ್ಲ. ಅವನ ಮಾತುಗಳಿಗೆ ಕಿವಿಗೊಡದೇ ಸೀತೆಯನ್ನು ಎಲ್ಲಿಯೂ ಕಾಣದಿದ್ದ ಶ್ರೀರಾಮನು 'ಹಾ ಸೀತೇ! ಹಾ ಪ್ರಿಯೇ! ನನ್ನನ್ನು ಬಿಟ್ಟು ಎಲ್ಲಿ ಹೋದೆ?'–ಎಂದು ಪುನಃ ಪುನಃ ವಿಲಪಿಸುತ್ತಲೇ ಇದ್ದನು.

೬೧ನೆಯ ಸರ್ಗವು ಮುಗಿಯಿತು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


## ಶ್ರೀರಾಮನ ವಿಲಾಪ

ಸೀತಾಮಪಶ್ಯನ್ಧರ್ಮಾತ್ಮಾ ಶೋಕೋಪಹತಚೇತನಃ ।
ವಿಲಲಾಪ ಮಹಾಬಾಹೂ ರಾಮಃ ಕಮಲಲೋಚನಃ ॥೧॥

ರಾಜೀವಲೋಚನನಾದ, ಮಹಾಬಾಹುವಾದ, ಧರ್ಮಾತ್ಮನಾದ ಶ್ರೀರಾಮನು ಸೀತೆಯನ್ನು ಕಾಣದೇ ಬುದ್ಧಿಗೆಟ್ಟವನಾಗಿ ಗೋಳಾಡುತ್ತಿದ್ದನು. ಸೀತೆಯ ವಿಯೋಗದಿಂದಾಗಿ ಮನ್ಮಥನಿಂದ ಪೀಡಿಸಲ್ಪಡುತ್ತಿದ್ದ ರಾಮನು ಒಮ್ಮೆ ಸೀತೆಯನ್ನು ಕಣ್ಮುಂದೆ ನೋಡುತ್ತಿರುವಂತೆಯೇ ಭ್ರಮಿಸುತ್ತಿದ್ದನು. ಸತತವಾಗಿ ವಿಲಪಿಸುತ್ತಿದ್ದ ಕಾರಣ ಅವನ ಕಂಠವೂ ಗದ್ಗದವಾಗಿದ್ದಿತು. ಗದ್ಗದಧ್ವನಿಯಿಂದಲೇ ವರ್ಣಿಸಲಸಾಧ್ಯವಾದ ಮಾತುಗಳಿಂದ ಹಲುಬುತ್ತಿದ್ದನು.

ತ್ವಮಶೋಕಸ್ಯ ಶಾಖಾಭಿಃ ಪುಷ್ಪಪ್ರಿಯತಯಾ ಪ್ರಿಯೇ ।
ಆವೃಣೋಷಿ ಶರೀರಂ ತೇ ಮಮ ಶೋಕವಿವರ್ಧನೀ ॥೩॥

"ಪ್ರೇಯಸಿಯೇ! ನಿನಗೆ ಅಶೋಕಪುಷ್ಪಗಳೆಂದರೆ ತುಂಬ ಆಸೆ. ಆದುದರಿಂದಲೇ ನೀನು ಪುಷ್ಪಗಳಿಂದ ಸಮೃದ್ಧವಾಗಿರುವ ಅಶೋಕವೃಕ್ಷದ ರೆಂಬೆಗಳಿಂದ ನಿನ್ನ ಶರೀರವನ್ನು ಮುಚ್ಚಿಕೊಂಡು ಬಿಟ್ಟಿರುವೆ. ಇದರಿಂದಾಗಿ ನೀನು ನನಗೆ ಕಾಣುತ್ತಿಲ್ಲ. ಹೀಗೆ ನೀನು ಮುಚ್ಚಿಟ್ಟುಕೊಂಡು ನನ್ನ ಶೋಕವನ್ನೂ ಹೆಚ್ಚಿಸುತ್ತಿರುವೆ.

ಕದಲೀಕಾಣ್ಡಸದೃಶೌ ಕದಲ್ಯಾ ಸಂವೃತಾವುಭೌ ।
ಊರೂ ಪಶ್ಯಾಮಿ ತೇ ದೇವಿ ನಾಸಿ ಶಕ್ತಾ ನಿಗೂಹಿತುಮ್ ॥೪॥

ನಿನ್ನ ತೊಡೆಗಳು ಬಾಳೆಯಕಂದುಗಳಂತೆಯೇ ಇವೆ. ಬಾಳೆಯ ಗಿಡಗಳ ಮಧ್ಯದಲ್ಲಿ ನೀನು ಬಚ್ಚಿಟ್ಟುಕೊಂಡಿರುವುದರಿಂದ ನಿನ್ನ ತೊಡೆಗಳೂ ಬಾಳೆಯ ಗಿಡಗಳಿಂದ ಸಮಾವೃತವಾಗಿವೆ. ಆದರೂ ಕಂದುಗಳ ಮಧ್ಯದಲ್ಲಿ ನಾನು ನಿನ್ನ ತೊಡೆಗಳನ್ನು ನೋಡುತ್ತಲೇ ಇದ್ದೇನೆ. ನನಗೆ ಕಾಣದಂತೆ ನಿನ್ನ ತೊಡೆಗಳನ್ನು ಮುಚ್ಚಿಕೊಳ್ಳಲು ಖಂಡಿತವಾಗಿಯೂ ನಿನಗೆ ಸಾಧ್ಯವಿಲ್ಲ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ನೀನು ಕಿಲ-ಕಿಲನೆ ನಗುತ್ತಾ ಕೆಂಪುಕಣಿಗಿಲೆಗಿಡಗಳಿರುವ ವನಪ್ರದೇಶ ದಲ್ಲಿ ಆಟವಾಡುತ್ತಿರುವುದನ್ನು ನಾನು ನೋಡುತ್ತಲೇ ಇದ್ದೇನೆ. ಆದರೆ ನಾನೆಷ್ಟು ಕೂಗಿಕೊಂಡರೂ ನೀನು ನನ್ನ ಬಳಿಗೆ ಬಾರದಿರುವುದು ನನ್ನ ಮನಸ್ಸಿಗೆ ಬಾಧೆಯನ್ನುಂಟುಮಾಡಿದೆ. ಈಗಲಾದರೂ ನೀನು ನಗುವುದನ್ನು ನಿಲ್ಲಿಸಿ ನನ್ನ ಬಳಿಗೆ ಓಡಿ ಬಾ. ನಿನಗಾಗಿ ಅರಣ್ಯದಲ್ಲೆಲ್ಲಾ ಅಲೆದಲೆದು ಬಳಲಿರುವ ನನಗೆ ನಿನ್ನ ವಿನೋದದಿಂದ ಈಗೇನಾಗಬೇಕಾಗಿದೆ? ನೀನು ಮಾಡುತ್ತಿರುವುದು ನನ್ನನ್ನು ತಣಿಸಲು ಆ ಹಿಂದಿನ ಪರಿಹಾಸವೇ ಆದರೂ ಇಂದು ನನಗೆ ಆ ನಿನ್ನ ಸರಸವು ರುಚಿಸುತ್ತಿಲ್ಲ. ಪ್ರಿಯಳೇ! ನೀನು ಪರಿಹಾಸಪ್ರಿಯಳೆಂಬುದನ್ನು ನಾನು ತಿಳಿದುಕೊಂಡಿದ್ದೇನೆ. ಆದರೆ ಪವಿತ್ರ ವಾದ ಆಶ್ರಮಭೂಮಿಯಲ್ಲಿ ಪರಿಹಾಸದಲ್ಲಿ ತೊಡಗುವುದು, ಕಿಲ-ಕಿಲನೆ ನಗುವುದು ಪ್ರಶಸ್ತವಾಗಿ ಕಾಣುವುದಿಲ್ಲ. ಆದುದರಿಂದ ಸರಸವಾದ ನಿನ್ನ ಹಾಸ-ಪರಿಹಾಸಗಳನ್ನು ಬಿಟ್ಟು ಆಶ್ರಮಕ್ಕೆ ಬೇಗನೆ ಬಾ. ನೀನಿಲ್ಲದೇ ಇರುವುದರಿಂದ ಇದು ಶೂನ್ಯವಾಗಿ ಕಾಣುತ್ತಿದೆ." ಭ್ರಾಂತಿಯು ನಿರಸನ ವಾದೊಡನೆಯೇ ಸೀತೆಯನ್ನು ಕಾಣದ ರಾಮನಿಗೆ ಶೋಕವು ಇಮ್ಮಡಿ ಯಾಯಿತು. ಪುನಃ ಗೋಳಾಡುತ್ತಾ ಲಕ್ಷ್ಮಣನಿಗೆ ಹೇಳಿದನು :

ಸುವ್ಯಕ್ತಂ ರಾಕ್ಷಸೈಃ ಸೀತಾ ಭಕ್ಷಿತಾ ವಾ ಹೃತಾಪಿ ವಾ ।
ನ ಹಿ ಸಾ ವಿಲಪನ್ತಂ ಮಾಮುಪಸಂಪ್ರೈತಿ ಲಕ್ಷ್ಮಣ ॥೯॥

"ಲಕ್ಷ್ಮಣ! ರಾಕ್ಷಸರು ಸೀತೆಯನ್ನು ಅಪಹರಿಸಿದ್ದಾರೆ ಅಥವಾ ತಿಂದು ಹಾಕಿದ್ದಾರೆ–ಇದು ಸ್ಪಷ್ಟವಾಗಿ ಕಾಣುತ್ತಿದೆ. ಏಕೆಂದರೆ: ನಾನಿಷ್ಟು ಕೂಗಿಕೊಂಡು ಗೋಳಾಡುತ್ತಿದ್ದರೂ ಅವಳು ನನ್ನ ಬಳಿಗೆ ಬರಲೇ ಇಲ್ಲ. ಇತ್ತ ನೋಡು, ಲಕ್ಷ್ಮಣ! ಈ ಜಿಂಕೆಯ ಹಿಂಡುಗಳು ಸೀತಾದೇವಿಯು ರಾಕ್ಷಸರಿಂದ ಭಕ್ಷಿಸಲ್ಪಟ್ಟಳೆಂಬುವನ್ನು ಸೂಚಿಸಲೋ ಎಂಬಂತೆ ಕಣ್ಣೀರು ಸುರಿಸುತ್ತಿವೆ.

ನನ್ನ ಪ್ರೇಯಸಿಯೇ! ಲೋಕಪೂಜ್ಯಳೇ! ಸಾಧ್ವಿಯೇ! ವರ ವರ್ಣಿನಿಯೇ! ಎಲ್ಲಿಗೆ ಹೊರಟುಹೋದೆ? ನಿನ್ನ ವಿಯೋಗದಿಂದ ನಾನೂ ಸಾಯುವೆನು. ನನ್ನ ತಾಯಿಯಾದ ಕೈಕೇಯಿಯ ಮನೋರಥವು ಈಡೇರು ತ್ತದೆ. ಸೀತೆಯೊಡನೆ ಅಯೋಧ್ಯೆಯಿಂದ ಹೊರಟ ನಾನು ಸೀತೆಯಿಂದ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.
ರಹಿತನಾಗಿ ಅಯೋಧ್ಯೆಗೆ ಹೋಗಿ ಶೂನ್ಯವಾಗಿರುವ ಆ ನನ್ನ ಅಂತಃಪುರ ವನ್ನು ಹೇಗೆ ತಾನೇ ಪ್ರವೇಶಿಸಲಿ ?

ಸೀತೆಯನ್ನು ಕಾಡಿನಲ್ಲಿ ಕಳೆದುಕೊಂಡ ನನ್ನನ್ನು ಲೋಕವು ನಿರ್ವೀರ್ಯನೆಂದೇ ತೆಗಳುತ್ತದೆ. ನಿರ್ದಯನೆಂದೂ ಮೂದಲಿಸುತ್ತದೆ. ಸೀತೆಯ ಅಪಹರಣದಿಂದಾಗಿ ನನ್ನ ಅಂಜುಬುರಕತನವೂ ಪ್ರಕಾಶಕ್ಕೆ ಬಂದಂತೆಯೇ ಆಗಿದೆ.

ಅರಣ್ಯವಾಸವನ್ನು ಮುಗಿಸಿ ಅಯೋಧ್ಯೆಗೆ ಹೋದನಂತರ ನನ್ನ ಮಾವನಾದ ಜನಕನು ಅಯೋಧ್ಯೆಗೆ ಬಂದು ಕುಶಲಪ್ರಶ್ನೆಯನ್ನು ಮಾಡುತ್ತಾನೆ. ಆತನ ಮಗಳಾದ ಸೀತೆಯಿಂದ ರಹಿತನಾದ ನಾನು ಅವನ ಮುಖ ವನ್ನು ಹೇಗೆತಾನೇ ನೋಡಲಿ ? ಸೀತೆಯಿಂದ ರಹಿತನಾದ ನನ್ನನ್ನು ನೋಡಿದೊಡನೆಯೇ ಜನಕರಾಜನು ಮಗಳ ವಿನಾಶದ ದುಃಖವನ್ನು ತಾಳಲಾರದೇ ನಿಶ್ಚಯವಾಗಿಯೂ ಮೂರ್ಛಿತನಾಗುತ್ತಾನೆ.

ಈ ಎಲ್ಲ ಕಾರಣಗಳಿಂದ ಭರತನು ಆಳುತ್ತಿರುವ ಅಯೋಧ್ಯೆಗೆ ನಾನು ಪುನಃ ಹೋಗುವುದೇ ಇಲ್ಲ. ಏಕೆಂದರೆ: ಸೀತೆಯಿಂದ ವಿಹೀನನಾಗಿರುವ ನನಗೆ ಸ್ವರ್ಗವೂ ಶೂನ್ಯವಾಗಿ ಕಾಣುತ್ತದೆ. ಹೀಗಿರುವಾಗ ಅಯೋಧ್ಯೆಯ ವಿಷಯದಲ್ಲಿ ಹೇಳಬೇಕಾದ್ದೇನಿದೆ? ಲಕ್ಷ್ಮಣ ! ನೀನು ನನ್ನನ್ನು ಅರಣ್ಯ ದಲ್ಲಿಯೇ ಬಿಟ್ಟು ಶುಭಕರವಾದ ಅಯೋಧ್ಯಾಪಟ್ಟಣಕ್ಕೆ ಹೊರಟುಹೋಗು. ನಾನು ಮಾತ್ರ ಸೀತೆಯಿಲ್ಲದೇ ಯಾವುದೇ ಕಾರಣದಿಂದಲೂ ಜೀವಿಸಿರುವುದಿಲ್ಲ. ನೀನು ಅಯೋಧ್ಯೆಗೆ ಹೋದನಂತರ ಭರತನನ್ನು ಗಾಢವಾಗಿ ಆಲಿಂಗಿಸಿ ಕೊಂಡು ಹೀಗೆ ಹೇಳಬೇಕು :

' ಅನುಜ್ಞಾತೋಽಸಿ ರಾಮೇಣ ವಸುನ್ಧರಾಂ ಪಾಲಯ '— ಮುಂದೆಯೂ ನೀನೇ ಅಯೋಧ್ಯೆಯನ್ನಾಳಿಕೊಂಡಿರಲು ರಾಮನು ಅನುಮತಿ ಸಿದ್ದಾನೆ. ದೀರ್ಘಕಾಲ ಅಯೋಧ್ಯೆಯನ್ನು ಪರಿಪಾಲಿಸು." ಭರತನಿಗೆ ಹೀಗೆ ಹೇಳಿದನಂತರ ನನ್ನ ಆಣತಿಯಂತೆ ನನ್ನ ತಾಯಿಯಾದ ಕೌಸಲ್ಯೆಗೂ, ಕೈಕೇಯೀ-ಸುಮಿತ್ರೆಯರಿಗೂ ನ್ಯಾಯೋಚಿತವಾದ ರೀತಿಯಲ್ಲಿ ಅಭಿವಾದನ ಮಾಡಬೇಕು. ನಿರಂತರವೂ ನನ್ನ ಆಜ್ಞಾಪರಿಪಾಲಕನಾಗಿರುವ ನೀನು ಪ್ರಯತ್ನಪೂರ್ವಕವಾಗಿ ನನ್ನ ತಾಯಿಯಾದ ಕೌಸಲ್ಯೆಯನ್ನು ರಕ್ಷಿಸಬೇಕು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಸೀತೆಯ ವಿನಾಶದ ಈ ಪ್ರಸಂಗವನ್ನೂ ಮತ್ತು ಅವಳ ವಿಯೋಗದಿಂದಾಗಿ ನಾನೂ ವಿನಾಶಹೊಂದಿದೆನೆಂಬುದನ್ನೂ ನನ್ನ ತಾಯಿಗೆ ವಿಸ್ತಾರವಾಗಿ ಹೇಳು."

ಸುಂದರವಾದ ಕೇಶರಾಶಿಯಿಂದ ಕೂಡಿರುವ ಸೀತೆಯೊಡನೆ ರಾಮನು ಅರಣ್ಯಕ್ಕೆ ಬಂದನು. ಅವಳ ಜೊತೆಯಲ್ಲಿಯೇ ಹದಿಮೂರು ವರ್ಷಗಳೂ ಸುಖವಾಗಿದ್ದನು. ಇಂದವಳ ವಿಯೋಗವುಂಟಾಯಿತು. ರಾಮನೀಗ ಅತಿ ದುಃಖಿತನಾಗಿದ್ದಾನೆ. ದೀನನಾಗಿದ್ದಾನೆ. ಸೀತೆಯನ್ನು ನೆನೆದು-ನೆನೆದು ಗಳ-ಗಳನೆ ಅಳುತ್ತಾನೆ. ರಾಮನನ್ನು ನೋಡಿ ಲಕ್ಷ್ಮಣನಿಗೂ ಹೆಚ್ಚು ವ್ಯಥೆಯುಂಟಾಯಿತು. ಅವನ ಮುಖವು ಕಾಂತಿಹೀನವಾಯಿತು. ಆತನಿಗೆ ತುಂಬಾ ಸಂಕಟವಾಯಿತು.

೬೨ನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ ೬೩ನೆಯ ಸರ್ಗ

## ಸೀತೆಗಾಗಿ ಶ್ರೀರಾಮನ ಪರಿತಾಪ

ಸ ರಾಜಪುತ್ರಃ ಪ್ರಿಯಯಾ ವಿಹೀನಃ
ಕಾಮೇನ ಶೋಕೇನ ಚ ಪೀಡ್ಯಮಾನಃ ।
ವಿಷಾದಯನ್ಭ್ರಾತರಮಾರ್ತರೂಪೋ
ಭೂಯೋ ವಿಷಾದಂ ಪ್ರವಿವೇಶ ತೀವ್ರಮ್ ॥೧॥

ಪ್ರಿಯಭಾರ್ಯೆಯಾದ ಸೀತೆಯಿಂದ ವಿಹೀನನಾಗಿದ್ದ ಆ ರಾಜಪುತ್ರನು ಶೋಕ-ಮೋಹಗಳಿಂದ ಸಂಕಟಪಡುತ್ತಿದ್ದನು. ಸಂಕಟವೇ ಮೂರ್ತಿ ಮತ್ತಾಗಿ ರಾಮನ ರೂಪದಲ್ಲಿದ್ದಿತು. ರಾಮನು ಶೋಕಪಡುತ್ತಿರುವುದನ್ನು ಕಂಡು ಲಕ್ಷ್ಮಣನೂ ಶೋಕಪೀಡಿತನಾದನು. ರಾಮನ ಸಂಕಟವು ಪ್ರತಿಕ್ಷಣ ದಲ್ಲಿಯೂ ಹೆಚ್ಚುತ್ತಲೇ ಇದ್ದಿತು. ತೀವ್ರವಾಗಿ ಪರಿತಪಿಸುತ್ತಿದ್ದನು. ಇಂತಹ ವಿಪುಲವಾದ ಶೋಕದಲ್ಲಿ ಮುಳುಗಿಹೋಗಿದ್ದ ಶ್ರೀರಾಮನು ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಾ, ತನ್ನಂತೆಯೇ ದುಃಖಪೀಡಿತನಾಗಿದ್ದ ಲಕ್ಷ್ಮಣನಿಗೆ, ವಿಯೋಗದ ಮಹಾವ್ಯಸನಕ್ಕೆ ಅನುರೂಪವಾದ ಈ ಮಾತು ಗಳನ್ನು ಅಳುತ್ತಳುತ್ತಲೇ ಹೇಳತೊಡಗಿದನು :

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


"ಲಕ್ಷ್ಮಣ! ಈ ಪ್ರಪಂಚದಲ್ಲಿ ನನ್ನಷ್ಟು ಪಾಪಕರ್ಮಗಳನ್ನು ಮಾಡಿರುವವನು ಮತ್ತೊಬ್ಬನಿಲ್ಲವೆಂದೇ ಭಾವಿಸುತ್ತೇನೆ. ಮಹಾದುಷ್ಕರ್ಮಗಳನ್ನು ಮಾಡಿರದಿದ್ದರೆ ಹೀಗೆ ದುಃಖಪರಂಪರೆಗಳು ಒಂದಾದರಮೇಲೊಂದು ಖಂಡಿತವಾಗಿಯೂ ಬರುತ್ತಿರಲಿಲ್ಲ. ನನಗಂತೂ ಈ ದುಃಖಗಳು ಪರಂಪರೆಯಾಗಿ ಬರುತ್ತಲೇ ಇವೆ. ಈ ಶೋಕದಿಂದ ನನ್ನ ಹೃದಯ ಮತ್ತು ಮನಸ್ಸುಗಳು ಸೀಳಿಹೋಗುತ್ತಿವೆ. ನಿಶ್ಚಯವಾಗಿಯೂ ನಾನು ಹಿಂದಿನ ಜನ್ಮದಲ್ಲಿ ಅನೇಕಪಾಪಕರ್ಮಗಳನ್ನು ಮಾಡಲು ಇಚ್ಛಿಸಿದ್ದಿರಬಹುದು; ಹಲವಾರು ಪಾಪಕರ್ಮಗಳನ್ನು ಮಾಡಿಯೂ ಇರಬಹುದು. ಆಗ ಮಾಡಿದ ಪಾಪಕರ್ಮಗಳ ಫಲವನ್ನು ಈಗ ನಾನು ಅನುಭವಿಸುತ್ತಿದ್ದೇನೆ. ಆದುದರಿಂದಲೇ ನಾನೀಗ ಒಂದು ದುಃಖವನ್ನು ಅನುಭವಿಸುತ್ತಿರುವಾಗಲೇ ಮತ್ತೊಂದು ದುಃಖಕ್ಕೆ ಈಡಾಗುತ್ತಿದ್ದೇನೆ. ರಾಜ್ಯದಿಂದ ಭ್ರಷ್ಟನಾದೆನು. ಸ್ವಜನರಿಂದ ದೂರವಾದೆನು. ತಂದೆಯು ತೀರಿಕೊಂಡನು. ತಾಯಿಯೂ ದೂರ ಉಳಿದಳು. ಈ ಎಲ್ಲವನ್ನೂ ನಾನು ಯೋಚಿಸುತ್ತಿದ್ದರೆ ನನ್ನ ಶೋಕದ ವೇಗವನ್ನು ಇವು ಮತ್ತಷ್ಟು ಹೆಚ್ಚಿಸುತ್ತವೆ. ಆದರೆ ಲಕ್ಷ್ಮಣ! ನನ್ನ ಆ ಎಲ್ಲ ದುಃಖಗಳೂ ಮತ್ತು ಕ್ಲೇಶಗಳೂ ಶೂನ್ಯವಾಗಿರುವ ಈ ಅರಣ್ಯಕ್ಕೆ ಬಂದನಂತರ ಶರೀರದಲ್ಲಿಯೇ ಉಡುಗಿಹೋಗಿದ್ದುವು. ಈಗ ಸೀತೆಯ ವಿಯೋಗವಾದೊಡನೆಯೇ–ಒಣಕಟ್ಟಿಗೆಗಳ ಸಂಪರ್ಕದಿಂದ ಅಗ್ನಿಯು ತೀವ್ರವಾಗಿ ಹೊತ್ತಿಕೊಳ್ಳುವಂತೆ–ನನ್ನ ಹೃದಯಾಂತರಾಳದಲ್ಲಿ ಉಡುಗಿದ್ದ ದುಃಖವು ಸೀತಾವಿಯೋಗದುಃಖದ ಸ್ಪರ್ಶದಿಂದಾಗಿ ಉದ್ದೀಪನಗೊಂಡಿದೆ. ಸೌಮಿತ್ರೇ! ಅವಳೆಲ್ಲಿ ಹೋದಳೆಂದು ಭಾವಿಸಲಿ? ಯಾರಿಂದ ಅಪಹೃತಳಾದಳೆಂದು ಭಾವಿಸಲಿ? ಬಲಿಷ್ಠನಾದ ರಾಕ್ಷಸನೊಬ್ಬನು ಲೋಕಪೂಜ್ಯಳಾದ ಭೀರುವಾದ ನನ್ನ ಪ್ರೇಯಸಿಯನ್ನು ಬಲಾತ್ಕಾರದಿಂದ ಸೆಳೆದು ಆಕಾಶಮಾರ್ಗದ ಮೂಲಕವಾಗಿ ಒಯ್ದಿರಬೇಕು. ಆ ಸಮಯದಲ್ಲಿ ಸುಮಧುರವಾದ ಸ್ವರದಲ್ಲಿ ನನ್ನೊಡನೆ ಸರಸವಾಡುತ್ತಿದ್ದ ನನ್ನ ಪ್ರೇಯಸಿಯು ಭಯದ ಕಾರಣದಿಂದ ಅಪಸ್ವರದಲ್ಲಿ ಬಾರಿ-ಬಾರಿಗೂ ರೋದನವನ್ನು ಮಾಡುತ್ತಿದ್ದಿರಬಹುದು.

ಆ ನನ್ನ ಭಾರ್ಯೆಯ ದುಂಡಾದ ಸ್ತನಯುಗ್ಮಗಳು ಪ್ರಿಯವಾಗಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಕಾಣುವ ಕೆಂಪಾದ ಹರಿಚಂದನದ ಲೇಪನಕ್ಕೆ ಸಮುಚಿತವಾಗಿದ್ದುವು. ಆದರೆ ಅವುಗಳೀಗ ದುಷ್ಟರಾಕ್ಷಸನ ಉಗುರುಗಳ ಬಗೆತದಿಂದಾಗಿ ರಕ್ತದ ಕೆಸರಿನಿಂದ ಮುಚ್ಚಿಹೋಗಿರಬಹುದು. ನನ್ನ ಪ್ರೇಯಸಿಯ ಇಂತಹ ದಾರುಣವಾದ ಅವಸ್ಥೆಯನ್ನು ನೆನೆಯುತ್ತಿದ್ದರೂ ನನ್ನ ಶರೀರವು ಬೀಳಲಿಲ್ಲವಲ್ಲಾ! ನಿಶ್ಚಯವಾಗಿಯೂ ಇದು ನನ್ನ ದೌರ್ಭಾಗ್ಯವೇ ಸರಿ.

ಸುಸ್ಪಷ್ಟವಾಗಿಯೂ ಮಧುರವಾಗಿಯೂ ಇರುವ ಮಾತುಗಳನ್ನು ಹೊರಸೂಸುತ್ತಿದ್ದ, ಗುಂಗುರುಕೂದಲುಗಳ ಭಾರದಿಂದ ಸುಶೋಭಿತವಾಗಿದ್ದ ರಾಕ್ಷಸರ ವಶಳಾಗಿರುವ ನನ್ನ ಸೀತೆಯ ಆ ಸುಂದರವಾದ ಮುಖವು–ರಾಹು ಗ್ರಸ್ತನಾದ ಚಂದ್ರಬಿಂಬದಂತೆ ತೇಜೋಹೀನವಾಗಿರುವುದೆಂದು ನನಗೆ ಭಾಸವಾಗುತ್ತಿದೆ.

ಉತ್ತಮವಾದ ವ್ರತಗಳ ಪರಿಪಾಲನೆಯಲ್ಲಿ ಸದಾ ನಿರತಳಾಗಿರುತ್ತಿದ್ದ ನನ್ನ ಪ್ರೇಯಸಿಯ ಕುತ್ತಿಗೆಯು ಮುತ್ತಿನ ಹಾರಗಳಿಂದ ಅಲಂಕರಿಸಲು ಯೋಗ್ಯವಾಗಿದ್ದಿತು. ನಿಶ್ಚಯವಾಗಿಯೂ ನನ್ನ ಪತ್ನಿಯ ಅಂತಹ ಸುಂದರವಾದ ಕುತ್ತಿಗೆಯನ್ನು ನಿರ್ಜನವಾದ ಅರಣ್ಯದಲ್ಲಿ ರಾಕ್ಷಸರು ಕತ್ತರಿಸಿ ಬುಗ್ಗೆಯಂತೆ ಹೊರಬಂದ ರಕ್ತವನ್ನು ಕುಡಿದಿರಬಹುದು. ವಿಶಾಲವಾದ ಮತ್ತು ಸುಂದರವಾದ ಕಣ್ಣುಗಳಿಂದ ಕೂಡಿದ್ದ ಆ ನನ್ನ ಪ್ರೇಯಸಿಯು ನನ್ನಿಂದ ರಹಿತಳಾಗಿ ನಿರ್ಜನವಾದ ಅರಣ್ಯದಲ್ಲಿದ್ದ ಸಮಯದಲ್ಲಿ ರಾಕ್ಷಸರು ಅವಳನ್ನು ಹಿಡಿದು ಸೆಳೆದಾಡಿದ್ದಾರೆ. ದೀನಳಾದ ಸೀತೆಯು ಆಗ ನಿಶ್ಚಯವಾಗಿಯೂ ಹೆಣ್ಣು ಕ್ರೌಂಚಪಕ್ಷಿಯಂತೆ ಕೂಗಿಕೊಂಡಿದ್ದಾಳೆ."

ಹಾಗೆಯೇ ಶ್ರೀರಾಮನು ಲಕ್ಷ್ಮಣನೊಡನೆ ಮುನ್ನಡೆದು ಒಂದು ಬಂಡೆಯ ಬಳಿಗೆ ಬಂದನು. ಒಡನೆಯೇ ಅವನಿಗೆ ಹಿಂದಿನದು ನೆನಪಾಯಿತು. ಲಕ್ಷ್ಮಣನಿಗೆ ಹೇಳಿದನು: "ಲಕ್ಷ್ಮಣ! ಉದಾರಸ್ವಭಾವದವಳಾದ ಸೀತೆಯು ಹಿಂದೆ ನನ್ನೊಡನೆ ಈ ಬಂಡೆಯ ಮೇಲೆ ಕುಳಿತಿದ್ದಳು. ಸುಂದರವಾದ ಕಿರುನಗೆಯುಳ್ಳ ಆ ನನ್ನ ಕಾಂತೆಯು ನಗು-ನಗುತ್ತಾ ನಿನ್ನೊಡನೆಯೂ ಅನೇಕ ಪ್ರಕಾರವಾದ ಮಾತುಗಳನ್ನಾಡಿದಳು. ನೆನಪಿದೆಯೇ? ಲಕ್ಷ್ಮಣ!

ತಮ್ಮ! ಈ ಗೋದಾವರಿಯು ನದಿಗಳಲ್ಲಿಯೇ ಶ್ರೇಷ್ಠವಾದುದು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಇದು ಎಲ್ಲ ಕಾಲಗಳಲ್ಲಿಯೂ ನನ್ನ ಪ್ರಿಯತಮೆಗೆ ಬಹುಪ್ರಿಯವಾಗಿದ್ದಿತು. ಈ ನದಿಯ ತೀರದಲ್ಲಿ ವಿಹರಿಸಲು ಅವಳು ಯಾವಾಗಲೂ ಆಸೆಪಡುತ್ತಿದ್ದಳು. ಇಲ್ಲಿಗೇನಾದರೂ ಬಂದಿರಬಹುದೇ ? ಎಂದು ನಾನೊಮ್ಮೆ ಚಿಂತಿಸುತ್ತೇನೆ. ಆದರೆ ನನಗೆ ತಿಳಿದಿರುವಂತೆ ಅವಳೊಬ್ಬಳೇ ಇಲ್ಲಿಗೆ ಯಾವಾಗಲೂ ಬಂದವಳಲ್ಲ. ಆದುದರಿಂದ ಗೋದಾವರೀತೀರಕ್ಕೂ ಅವಳು ಬಂದಿರಲಾರಳು.

ತಮ್ಮ ! ನನ್ನ ಪ್ರಿಯತಮೆಯ ಮುಖವು ಕಮಲದಂತೆ ಕೋಮಲವಾಗಿದ್ದಿತು. ಕಣ್ಣುಗಳು ಕಮಲದ ಎಲೆಗಳಂತೆ ವಿಶಾಲವಾಗಿದ್ದುವು. ಅವಳೇನಾದರೂ ಕಮಲದ ಹೂವುಗಳನ್ನು ತರಲು ಸರೋವರಕ್ಕೆ ಹೋಗಿರಬಹುದೇ ? ಇಲ್ಲ ; ಹೀಗೆ ಯೋಚಿಸುವುದೂ ಸರಿಯಾಗಿ ಕಾಣುವುದಿಲ್ಲ. ಏಕೆಂದರೆ : ಅವಳು ನನ್ನನ್ನು ಬಿಟ್ಟು ಯಾವಾಗಲೂ ಸರೋವರಕ್ಕೆ ಹೋದವಳೇ ಅಲ್ಲ.

ಹಾಗಾದರೆ ಹಲವಾರು ಬಗೆಗಳ ಪಕ್ಷಿಗಳಿಂದ ಕೂಡಿರುವ, ಹೂಗಳು ತುಂಬಿರುವ ಮರಗಳಿಂದ ಶೋಭಾಯಮಾನವಾಗಿ ಕಾಣುತ್ತಿರುವ ಅರಣ್ಯಕ್ಕಾದರೂ ಹೋಗಿರಬಹುದಲ್ಲವೇ ? ಇಲ್ಲ ; ಹಾಗೆ ಯೋಚಿಸುವುದೂ ಸರಿಯಾಗಿ ಕಾಣುವುದಿಲ್ಲ. ಏಕೆಂದರೆ : ಭೀರುವಾದ ಅವಳು ಒಬ್ಬಳೇ ಎಲ್ಲಿಗೆ ಹೋಗಲೂ ಭಯಪಡುತ್ತಿದ್ದಳು."

ಶ್ರೀರಾಮನು ಸೂರ್ಯನನ್ನು ಅಂಗಲಾಚಿ ಬೇಡಿಕೊಳ್ಳುತ್ತಾನೆ :

ಆದಿತ್ಯ ಭೋ ಲೋಕಕೃತಾಕೃತಜ್ಞ
ಲೋಕಸ್ಯ ಸತ್ಯಾನೃತಕರ್ಮಸಾಕ್ಷಿನ್ ।
ಮಮ ಪ್ರಿಯಾ ಸಾ ಕ್ವ ಗತಾ ಹೃತಾ ವಾ
ಶಂಸಸ್ವ ಮೇ ಶೋಕವಶಸ್ಯ ಸತ್ಯಮ್ ॥೧೬॥

" ಓ ಸೂರ್ಯದೇವನೇ ! ಲೋಕದಲ್ಲಿ ನಡೆಯುವ ಸುಕೃತ-ದುಷ್ಕೃತಗಳನ್ನು ತಿಳಿದಿರತಕ್ಕವನೇ ! ಸತ್ಯಾಸತ್ಯಕರ್ಮಗಳಿಗೆ ( ಪುಣ್ಯ-ಪಾಪಕರ್ಮಗಳಿಗೆ) ಸಾಕ್ಷಿಭೂತನಾಗಿರತಕ್ಕವನೇ ! ನನ್ನ ಪ್ರಿಯತಮೆಯಾದ ಸೀತೆಯು ಎಲ್ಲಿಗೆ ಹೋದಳು ? ಅವಳನ್ನು ಯಾರಾದರೂ ಅಪಹರಿಸಿಕೊಂಡು ಹೋದರೇ ? ಶೋಕಪೀಡಿತನಾಗಿರುವ ನನಗೆ ನಿಜವಾದ ವಿಷಯವನ್ನು ದಯಮಾಡಿ ಹೇಳು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಲೋಕೇಷು ಸರ್ವೇಷು ಚ ನಾಸ್ತಿ ಕಿಂಚಿ-
ದ್ಯತ್ತೇನ ನಿತ್ಯಂ ವಿದಿತಂ ಭವೇತ್ತತ್ ।
ಶಂಸಸ್ವ ವಾಯೋ ಕುಲಶಾಲಿನೀಂ ತಾಂ
ಮೃತಾ ಹೃತಾ ವಾ ಪಥಿ ವರ್ತತೇ ವಾ ॥೧೭॥

ವಾಯುದೇವನೇ! ಎಲ್ಲ ಲೋಕಗಳಲ್ಲಿಯೂ ಅನುದಿನವೂ ನಡೆಯುವ ವಿಷಯಗಳು ನಿನಗೆ ತಿಳಿದಿರುತ್ತವೆ. ನೀನು ಸರ್ವವ್ಯಾಪಿಯಾದುದರಿಂದ ನಿನಗೆ ತಿಳಿಯದಿರುವ ವಿಷಯವೇ ಯಾವುದೂ ಇರುವುದಿಲ್ಲ. ಆದುದರಿಂದ ದಯಮಾಡಿ ಈ ವಿಷಯವನ್ನು ಹೇಳು. ಕುಲೋದ್ಧಾರಕಳಾದ ನನ್ನ ಪ್ರೇಯಸಿಯು ಎಲ್ಲಿ ಹೋಗಿದ್ದಾಳೆ? ಯಾರಾದರೂ ಅವಳನ್ನು ಅಪಹರಿಸಿ ಕೊಂಡು ಹೋಗಿರುವರೇ ?"

ಹೀಗೆ ಮನಬಂದಂತೆ ಮಾತನಾಡಿಕೊಳ್ಳುತ್ತಿದ್ದ, ಶೋಕಾಭಿಭೂತ ವಾದ ಶರೀರದಿಂದ ಕೂಡಿದ್ದ, ಬುದ್ಧಿಗೆಟ್ಟಿದ್ದ, ಗಳ-ಗಳನೆ ಅಳುತ್ತಿದ್ದ ಶ್ರೀರಾಮನನ್ನು ಕುರಿತು ನ್ಯಾಯವಾದ ಮಾರ್ಗದಲ್ಲಿಯೇ ಸುಸ್ಥಿರನಾಗಿದ್ದ ವೀರನಾಗಿದ್ದ ಲಕ್ಷ್ಮಣನು ತತ್ಕಾಲೋಚಿತವಾದ ಈ ಮಾತನ್ನು ಹೇಳಿದನು :

" ಆರ್ಯನೇ ! ಶೋಕವನ್ನು ದೂರಮಾಡು. ಧೈರ್ಯವನ್ನು ತಂದುಕೊ. ಸೀತೆಯನ್ನು ಹುಡುಕುವುದರಲ್ಲಿ ಉತ್ಸಾಹಶಾಲಿಯಾಗು.

ಉತ್ಸಾಹವನ್ತೋ ಹಿ ನರಾ ನ ಲೋಕೇ
ಸೀದನ್ತಿ ಕರ್ಮಸ್ವತಿದುಷ್ಕರೇಷು ॥೧೯॥

ಉತ್ಸಾಹಶಾಲಿಗಳಾದ ಮನುಷ್ಯರು ಅತಿದುಷ್ಕರವಾದ ಕರ್ಮಗಳನ್ನು ಮಾಡುವಾಗಲೂ ವಿಷಾದಕ್ಕೊಳಗಾಗುವುದಿಲ್ಲ."

ದುಃಖಪೀಡಿತನಾಗಿದ್ದ ರಘುವಂಶಶ್ರೇಷ್ಠನಾದ ಶ್ರೀರಾಮನು ಮಹಾ ಪೌರುಷದಿಂದ ಕೂಡಿದ್ದ ಲಕ್ಷ್ಮಣನ ಆ ಮಾತುಗಳನ್ನು ಮನಸ್ಸಿಗೇ ತೆಗೆದು ಕೊಳ್ಳಲಿಲ್ಲ. ಅವನು ಸಂಪೂರ್ಣವಾಗಿ ಧೈರ್ಯಗೆಟ್ಟಿದ್ದನು. ಆದುದರಿಂದ ಪುನಃ ದುಃಖಪೀಡಿತನಾಗಿ ಅಳತೊಡಗಿದನು.

೬೩ನೆಯ ಸರ್ಗವು ಮುಗಿಯಿತು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


### ರಾಮ-ಲಕ್ಷ್ಮಣರಿಂದ ಸೀತೆಯ ಅನ್ವೇಷಣೆ: ಶ್ರೀರಾಮನ ಶೋಕೋದ್ಗಾರ: ಮೃಗಗಳ ಸಂಕೇತದಂತೆ ದಕ್ಷಿಣದಿಕ್ಕಿನೆಡೆಗೆ ಪ್ರಯಾಣ: ಪರ್ವತ ಮತ್ತು ನದಿಗಳ ಮೇಲೆ ರಾಮನ ಕೋಪ: ಕೆಳಗೆ ಬಿದ್ದಿದ್ದ ಸೀತೆಯ ಹೂಗಳನ್ನೂ ಆಭರಣಗಳನ್ನೂ ಕಂಡುದು: ದೇವತೆಗಳ ಮೇಲೆ ಶ್ರೀರಾಮನ ಕೋಪ

ಸ ದೀನೋ ದೀನಯಾ ವಾಚಾ ಲಕ್ಷ್ಮಣಂ ವಾಕ್ಯಮಬ್ರವೀತ್ ।
ಶೀಘ್ರಂ ಲಕ್ಷ್ಮಣ ಜಾನೀಹಿ ಗತ್ವಾ ಗೋದಾವರೀಂ ನದೀಮ್ ।
ಅಪಿ ಗೋದಾವರೀಂ ಸೀತಾ ಪದ್ಮಾನ್ಯಾನಯಿತುಂ ಗತಾ ।೧॥

ಸೀತಾದೇವಿಯ ವಿಯೋಗದಿಂದ ದೀನನಾಗಿದ್ದ ಶ್ರೀರಾಮನು ಲಕ್ಷ್ಮಣನಿಗೆ ದೈನ್ಯಯುಕ್ತವಾದ ಈ ಮಾತನ್ನು ಹೇಳಿದನು:

"ಲಕ್ಷ್ಮಣ! ಈಗಲೇ ನೀನು ಗೋದಾವರೀನದಿಗೆ ಹೋಗಿ ಸೀತೆಯೇನಾದರೂ ಕಮಲಪುಷ್ಪಗಳನ್ನು ತರಲು ಹೋಗಿರುವಳೋ ?– ಎಂಬುದನ್ನು ತಿಳಿದುಕೊಂಡು ಬಾ."

ಶ್ರೀರಾಮನು ಹೀಗೆ ಹೇಳಲು ಶತ್ರುವೀರಹಂತಕನಾದ, ತ್ವರಿತವಾದ ನಡಿಗೆಯುಳ್ಳ ಲಕ್ಷ್ಮಣನು ರಮ್ಯವಾದ ಗೋದಾವರೀನದಿಯ ತೀರಕ್ಕೆ ಹೋದನು. ಅನೇಕತೀರ್ಥಗಳನ್ನೊಳಗೊಂಡಿದ್ದ ಗೋದಾವರೀನದಿಯ ತೀರ ಪ್ರದೇಶಗಳಲ್ಲಿ ಎಷ್ಟು ಹುಡುಕಿದರೂ ಎಲ್ಲಿಯೂ ಸೀತೆಯನ್ನು ಕಾಣದೇ ಹಿಂದಿರುಗಿ ಬಂದು ರಾಮನಿಗೆ ಹೇಳಿದನು:

"ಅಣ್ಣ! ಗೋದಾವರೀನದಿಯ ತೀರ್ಥಗಳಲ್ಲಿ ನಾನವಳನ್ನು ಕಾಣಲಿಲ್ಲ. ಕಣ್ಣಿಗೆ ಕಾಣಿಸದಂತೆ ಎಲ್ಲಿಯಾದರೂ ಇರಬಹುದೆಂದು ಭಾವಿಸಿ ಹಲವಾರು ಬಾರಿ ಆಕೆಯನ್ನು ಕೂಗಿ ಕರೆದೆನು. ಯಾವ ಕಡೆಯಿಂದಲೂ ಯಾವ ಉತ್ತರವೂ ಬರಲಿಲ್ಲ. ಅಲ್ಲಿ ಅವಳು ಇಲ್ಲವೆಂದು ನಿಶ್ಚಯಿಸಿದೆನು. ನಮ್ಮ ಕ್ಲೇಶಗಳನ್ನು ಹೋಗಲಾಡಿಸುವ ಕೃಶೋದರಿಯಾದ ಸೀತಾದೇವಿಯು ಎಲ್ಲಿಗೆ ಹೋಗಿರುವಳೆಂಬುದು ನನಗೆ ತಿಳಿಯಲಾಗಲಿಲ್ಲ."


CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

ಶ್ರೀರಾಮನು ಸೀತಾವಿರಹಸಂತಾಪದಿಂದ ವಿಮೋಹಿತನಾಗಿದ್ದನು. ಅವನಿಗೆ ಏನುಮಾಡಬೇಕೆಂಬುದೇ ತಿಳಿಯುತ್ತಿರಲಿಲ್ಲ. ಲಕ್ಷ್ಮಣನ ನಿರಾಶಾದಾಯಕವಾದ ಆ ಮಾತನ್ನು ಕೇಳಿ ದೀನನಾಗಿ ಸೀತಾದೇವಿಯನ್ನು ಹುಡುಕಲು ತಾನೇ ಗೋದಾವರೀನದಿಯ ತೀರಕ್ಕೆ ಹೋದನು. "ಗೋದಾವರಿ! ಕ್ವ ಸೀತಾ? ಗೋದಾವರೀಮಹಾನದಿಯೇ! ನನ್ನ ಸೀತೆಯೆಲ್ಲಿ ಹೋದಳು?"

ಈ ಹಿಂದೆ ರಾಮನು ಪ್ರಶ್ನಿಸಿದ ಯಾವ ಪ್ರಾಣಿಗಳೂ ವಧಾರ್ಹನಾದ ರಾವಣನು ಸೀತೆಯನ್ನು ಅಪಹರಿಸಿಕೊಂಡು ಹೋದನೆಂಬ ವಾರ್ತೆಯನ್ನು ಶ್ರೀರಾಮನಿಗೆ ಹೇಳಲಿಲ್ಲ. ಅಂತೆಯೇ ಗೋದಾವರಿಯೂ ರಾಮನಿಗೆ ರಾಕ್ಷಸೇಂದ್ರನಾದ ರಾವಣನು ಸೀತೆಯನ್ನು ಅಪಹರಿಸಿಕೊಂಡು ಹೋದನೆಂಬ ವಾರ್ತೆಯನ್ನು ಹೇಳಲಿಲ್ಲ.

ಆ ಸಮಯದಲ್ಲಿ ಸಕಲಪ್ರಾಣಿಗಳೂ ಸೀತೆಯ ಅಪಹರಣದ ವಾರ್ತೆಯನ್ನು ಶ್ರೀರಾಮನಿಗೆ ತಿಳಿಸುವಂತೆ ಗೋದಾವರೀನದಿಯನ್ನು ಪ್ರೇರಿಸಿದುವು. ಹೀಗೆ ಪ್ರಾಣಿಗಳು ಪ್ರಚೋದಿಸಿದರೂ ಶ್ರೀರಾಮನು ಅಳುತ್ತಲುತ್ತಾ ಸೀತೆಯೆಲ್ಲೆಂದು ಪುನಃ ಪುನಃ ಪ್ರಶ್ನಿಸುತ್ತಿದ್ದರೂ ಗೋದಾವರಿಯು, ಸೀತಾದೇವಿಯು ರಾವಣನಿಂದ ಅಪಹೃತಳಾದಳೆಂಬ ವಾರ್ತೆಯನ್ನು ತಿಳಿಸಲೇ ಇಲ್ಲ. ರಾವಣನ ಭಯಂಕರವಾದ ಆ ರೂಪ ಮತ್ತು ದುರಾತ್ಮನಾದ ಆ ರಾಕ್ಷಸನ ಕ್ರೂರಕರ್ಮಗಳು–ಇವೆಲ್ಲವನ್ನೂ ನೆನೆದು ಭಯಗೊಂಡ ಗೋದಾವರಿಯು ಸೀತೆಯ ಅಪಹರಣದ ವಾರ್ತೆಯನ್ನು ಶ್ರೀರಾಮನಿಗೆ ಹೇಳುವ ಧೈರ್ಯಮಾಡಲಿಲ್ಲ. ಹೀಗೆ ಗೋದಾವರಿಯು ಸೀತೆಯನ್ನು ನೋಡಲು ಉತ್ಸುಕನಾಗಿದ್ದ ಶ್ರೀರಾಮನಿಗೆ ನಿರಾಶೆಯನ್ನುಂಟುಮಾಡಿಬಿಟ್ಟಳು. ಸೀತೆಯನ್ನು ಕಾಣದೇ ಸಂಕಟಪಡುತ್ತಿದ್ದ ಶ್ರೀರಾಮನು ಲಕ್ಷ್ಮಣನಿಗೆ ಹೇಳಿದನು:

"ಲಕ್ಷ್ಮಣ! ಈ ಗೋದಾವರೀನದಿಯು ಯಾವುದೊಂದು ಮಾತನ್ನೂ ಆಡುತ್ತಲೇ ಇಲ್ಲ.

ಸೀತಾದೇವಿಯನ್ನು ಬಿಟ್ಟು ನಾನೊಬ್ಬನೇ ಜನಕನ ಬಳಿಗೂ ಮತ್ತು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಸೀತಾದೇವಿಯ ತಾಯಿಯು ಬಳಿಗೂ ಹೋದಾಗ ಅವರು – ಸೀತೆಯೆಲ್ಲಿ? ಎಂದು ಪ್ರಶ್ನಿಸಿದರೆ ಅವರಿಗೆ ಏನೆಂದು ಉತ್ತರಿಸಲಿ?

ಸೌಮ್ಯನೇ! ನಾನು ರಾಜ್ಯಭ್ರಷ್ಟನಾದೆನು. ಕಾಡಿಗೆ ಬಂದು ಇಲ್ಲಿ ಸಿಕ್ಕುವ ಗೆಡ್ಡೆ-ಗೆಣಸುಗಳಿಂದಲೇ ಜೀವನವನ್ನು ನಿರ್ವಹಿಸುತ್ತಿದ್ದೆನು. ಸೀತೆಯು ಯಾವಾಗಲೂ ನನ್ನ ಸನಿಹದಲ್ಲಿರುತ್ತಿದ್ದು ಈ ಎಲ್ಲ ದುಃಖಗಳನ್ನೂ ಮರೆಸಿಬಿಡುತ್ತಿದ್ದಳು. ಅಯ್ಯೋ! ಅವಳೀಗ ಎಲ್ಲಿಗೆ ಹೊರಟುಹೋದಳು? ನಾನೀಗ ಬಂಧುವರ್ಗದವರಿಂದಲೂ ದೂರವಾಗಿದ್ದೇನೆ. ವೈದೇಹಿಯನ್ನೂ ಕಾಣುತ್ತಿಲ್ಲ. ಇದೇ ಚಿಂತೆಯಲ್ಲಿಯೇ ನಾನು ರಾತ್ರಿಯೆಲ್ಲಾ ಎಚ್ಚರಗೊಂಡಿರುತ್ತೇನೆ. ಈ ಯೋಚನೆಯಲ್ಲಿ ನನಗೆ ರಾತ್ರಿಯು ಬಹಳ ದೀರ್ಘವಾಗಿರುವಂತೆ ಕಾಣುತ್ತದೆ. ಸೀತೆಯು ಸಿಕ್ಕುವುದೇ ನಿಜವಾದರೆ ಮಂದಾಕಿನೀ ನದಿಯ ತೀರಪ್ರದೇಶದಲ್ಲಿಯೂ, ಜನಸ್ಥಾನದಲ್ಲಿಯೂ, ಚಿಲುಮೆಗಳಿಂದ ಕೂಡಿರುವ ಈ ಪರ್ವತಪ್ರದೇಶಗಳಲ್ಲಿಯೂ ಎಷ್ಟು ಬೇಕಾದರೂ ಸುತ್ತಾಡುವೆನು.

ಅಲ್ಲಿ ನೋಡು, ಲಕ್ಷ್ಮಣ! ಬಲಿಷ್ಠವಾದ ಆ ಮೃಗಗಳು ನನ್ನನ್ನೇ ಪುನಃ ಪುನಃ ನೋಡುತ್ತಿವೆ. ಅವು ನೋಡುತ್ತಿರುವ ಭಂಗಿಯನ್ನು ಗಮನಿಸಿದರೆ ಅವುಗಳ ಮನಸ್ಸಿನಲ್ಲಿ ಸೀತೆಯ ವಿಷಯವನ್ನು ನನಗೆ ಹೇಳಿಬಿಡಬೇಕೆಂಬ ಆಶಯವು ಇರುವಂತೆ ಭಾಸವಾಗುತ್ತದೆ" – ಎಂದು ಹೇಳಿ ಶ್ರೀರಾಮನು ಮೃಗಗಳ ಬಳಿಗೆ ಹೋದನು. ಅವನ ಕಣ್ಣುಗಳು ನೀರಿನಿಂದ ತುಂಬಿಹೋಗಿದ್ದುವು. ಮೃಗಗಳನ್ನು ದಿಟ್ಟಿಸಿನೋಡುತ್ತಾ ಪುರುಷವ್ಯಾಘ್ರನಾದ ಶ್ರೀರಾಮನು–'ಸೀತೆಯೆಲ್ಲಿ?'–ಎಂದು ಪ್ರಶ್ನಿಸಿ ಅವುಗಳಿಂದ ಉತ್ತರವನ್ನು ನಿರೀಕ್ಷಿಸುತ್ತಾ ನಿಂತಿದ್ದನು.

ನರೇಂದ್ರನಾದ ಶ್ರೀರಾಮನು ಹೀಗೆ ಪ್ರಶ್ನಿಸಿದೊಡನೆಯೇ ಮೃಗಗಳೆಲ್ಲವೂ ಮೇಲೆದ್ದು ದಕ್ಷಿಣದಿಕ್ಕಿನ ಕಡೆಗೆ ಮುಖಮಾಡಿ ಆಕಾಶದ ಕಡೆಗೆ ನೋಡುತ್ತಿದ್ದುವು. ಆಕಾಶದ ಮಾರ್ಗವಾಗಿ ಸೀತಾದೇವಿಯು ದಕ್ಷಿಣದಿಕ್ಕಿನ ಕಡೆಗೆ ಹೋದಳೆಂಬ ಸೂಚನೆಯನ್ನಿತ್ತುವು. ರಾವಣನಿಂದ ಸೆಳೆದೊಯ್ಯಲ್ಪಟ್ಟ ವೈದೇಹಿಯು ಯಾವ ದಿಕ್ಕಿಗೆ ಹೋದಳೋ – ಆ ದಕ್ಷಿಣದಿಕ್ಕಿನಲ್ಲಿಯೇ ಮುನ್ನಡೆಯುತ್ತಾ ಕ್ಷಣ-ಕ್ಷಣಕ್ಕೂ ಹಿಂದಕ್ಕೆ ತಿರುಗಿ ಶ್ರೀರಾಮನನ್ನು

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.



ನಿರೀಕ್ಷಿಸುತ್ತಿದ್ದುವು. ಹೀಗೇಕೆ ಆ ಮೃಗಗಳು ಆಕಾಶದ ಕಡೆಗೆ ನೋಡು ತ್ತಿವೆಯೆಂಬುದನ್ನೂ – ದಕ್ಷಿಣದಿಕ್ಕಿನ ಕಡೆಗೆ ಗರ್ಜನೆಮಾಡುತ್ತಾ ಹೋಗು ತ್ತಿವೆಯೆಂಬುದನ್ನೂ ಲಕ್ಷ್ಮಣನು ಗ್ರಹಿಸಿದನು. ಮಾತಿನ ಸಾರದಂತಿದ್ದ ಆ ಪ್ರಾಣಿಗಳ ಎಲ್ಲ ಮಾತುಗಳನ್ನೂ ಮತ್ತು ಇಂಗಿತಗಳನ್ನೂ ಲಕ್ಷ್ಮಣನು ಅರ್ಥಮಾಡಿಕೊಂಡನು. ಧೀಮಂತನಾದ ಲಕ್ಷ್ಮಣನು ಆರ್ತನಾದವನು ಅಂಗಲಾಚಿ ಬೇಡಿಕೊಳ್ಳುವಂತೆ ಹಿರಿಯಣ್ಣನಿಗೆ ಹೀಗೆ ಹೇಳಿದನು :



"ಅಣ್ಣ ! ನೀನು ಆ ಮೃಗಗಳನ್ನು–' ಕ್ವ ಸೀತಾ ! ಸೀತೆಯೆಲ್ಲಿ ? '– ಎಂದು ಪ್ರಶ್ನಿಸಿದೆ. ಒಡನೆಯೇ ಅವು ಮೇಲೆದ್ದು ದಕ್ಷಿಣದ ಕಡೆಗೆ ನಿಂತು ಭೂಮಿಯನ್ನೂ–ದಕ್ಷಿಣದಿಕ್ಕನ್ನೂ ನಮಗೆ ಸಂಜ್ಞೆಯಮೂಲಕ ತೋರಿಸು

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.


ತ್ತಿವೆ. ಆದುದರಿಂದ ನಾವೀಗ ದಕ್ಷಿಣಕ್ಕೂ ಪಶ್ಚಿಮಕ್ಕೂ ಮಧ್ಯದಲ್ಲಿರುವ ನೈಋತ್ಯದಿಕ್ಕಿನ ಕಡೆಗೆ ಹೋಗೋಣ. ಮೃಗಗಳ ಸೂಚನೆಯಂತೆ ಅತ್ತ ಕಡೆಗೆ ಹೋದರೆ ಆರ್ಯೆಯಾದ ಸೀತೆಯೇನಾದರೂ ಸಿಕ್ಕಬಹುದು." ಲಕ್ಷ್ಮಣನ ಆ ಮಾತಿಗೆ ಶ್ರೀಮಂತನಾದ ಶ್ರೀರಾಮನು-'ಬಾಢಂ ಹಾಗೆಯೇ ಆಗಲಿ'-ಎಂದು ಹೇಳಿ ತನ್ನ ಒಪ್ಪಿಗೆಯನ್ನಿತ್ತು, ಸುತ್ತಲೂ ದೃಷ್ಟಿಯನ್ನು ಹರಿಸುತ್ತಾ ದಕ್ಷಿಣದಿಕ್ಕಿನ ಕಡೆಗೆ ಹೊರಟನು. ಲಕ್ಷ್ಮಣನೂ ಅಣ್ಣನನ್ನು ಹಿಂಬಾಲಿಸಿದನು. ಅಣ್ಣ-ತಮ್ಮಂದಿರಿಬ್ಬರೂ ಹೀಗೆ ಪರಸ್ಪರವಾಗಿ ಮಾತನಾಡಿಕೊಳ್ಳುತ್ತಾ ಹೋಗುತ್ತಿದ್ದಾಗ ನೆಲದ ಮೇಲೆ ಹೂಗಳಿಂದ ಸಮಲಂಕೃತವಾಗಿದ್ದ ಕಿರುದಾರಿಯೊಂದನ್ನು ಕಂಡರು.

ಭೂಮಿಯ ಮೇಲೆ ಪುಷ್ಪವೃಷ್ಟಿಯಾಗಿರುವುದನ್ನು ಕಂಡು ಶ್ರೀರಾಮನು ಬಹಳ ದುಃಖಿತನಾಗಿ ದುಃಖಕರವಾದ ಈ ಮಾತುಗಳನ್ನು ಲಕ್ಷ್ಮಣನೊಡನೆ ಹೇಳಿದನು :

"ಲಕ್ಷ್ಮಣ ! ಇಲ್ಲಿ ಬಿದ್ದಿರುವ ಪುಷ್ಪಗಳು ಯಾವುವೆಂದು ನನಗೆ ಗೊತ್ತಿದೆ. ಇವೇ ಪುಷ್ಪಗಳನ್ನೇ ನಾನು ಅರಣ್ಯದಲ್ಲಿ ವೈದೇಹಿಗೆ ಮುಡಿಯಲು ಕೊಟ್ಟಿದ್ದೆನು. ಅವಳು ಈ ಪುಷ್ಪಗಳನ್ನು ಮುಡಿದುಕೊಂಡಿದ್ದಳು. ನೋಡು, ತಮ್ಮ ! ಈ ಹೂಗಳು ಸ್ವಲ್ಪವಾದರೂ ಬಾಡಿಹೋಗಿಲ್ಲ. ನನಗೆ ಪ್ರೀತಿಯನ್ನುಂಟುಮಾಡುವ ಅಪೇಕ್ಷೆಯಿಂದ ಯಶೋವತಿಯಾದ ಭೂದೇವಿಯೂ, ಸೂರ್ಯನೂ ಮತ್ತು ವಾಯುವೂ ಈ ಕುಸುಮಗಳು ಬಾಡಿಹೋಗದಂತೆ ಮತ್ತು ಹಾಳಾಗಿ ಹೋಗದಂತೆ ರಕ್ಷಿಸುತ್ತಿರುವರೆಂದು ಭಾವಿಸುತ್ತೇನೆ."

ಮಹಾಬಾಹುವಾದ ಧರ್ಮಾತ್ಮನಾದ ಶ್ರೀರಾಮನು ಪುರುಷಶ್ರೇಷ್ಠನಾದ ಲಕ್ಷ್ಮಣನಿಗೆ ಹೀಗೆ ಹೇಳಿ ಹಲವಾರು ಚಿಲುಮೆಗಳಿಂದ ಕೂಡಿದ್ದ ಪ್ರಸ್ರವಣಪರ್ವತವನ್ನು ಪ್ರಶ್ನಿಸಿದನು :

"ಪರ್ವತಗಳಲ್ಲಿ ಶ್ರೇಷ್ಠನಾದವನೇ ! ರಮ್ಯವಾದ ಈ ವನಪ್ರದೇಶದಲ್ಲಿ ಸರ್ವಾಂಗಸುಂದರಿಯಾದ, ಮನೋಭಿರಾಮಳಾದ, ನನ್ನಿಂದ ಬೇರ್ಪಟ್ಟಿರುವ ವೈದೇಹಿಯನ್ನೇನಾದರೂ ನೀನು ಕಂಡೆಯಾ ?"

ಪರ್ವತವು ಮಾತನಾಡಲಿಲ್ಲ. ರಾಮನು ಪರಮಕ್ರುದ್ಧನಾಗಿ-ಸಿಂಹವು

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.

ಕ್ಷುದ್ರಮೃಗವನ್ನು ಗುರುಗುಟ್ಟುತ್ತಾ ಬೆದರಿಸುವಂತೆ-ಪರ್ವತವನ್ನು ಭಯಗೊಳಿಸಿದನು :

ತಾಂ ಹೇಮವರ್ಣಾಂ ಹೇಮಾಭಾಂ ಸೀತಾಂ ದರ್ಶಯ ಪರ್ವತ ।
ಯಾವತ್ಸಾನೂನಿ ಸರ್ವಾಣಿ ನ ತೇ ವಿಧ್ವಂಸಯಾಮ್ಯಹಮ್ ॥ ೩೦॥

"ಪರ್ವತರಾಜನೇ! ಕ್ರುದ್ಧನಾಗಿರುವ ನಾನು ನಿನ್ನಲ್ಲಿರುವ ಸಮಸ್ತವಾದ ತಪ್ಪಲುಗಳನ್ನೂ ನನ್ನ ನಿಶಿತವಾದ ಬಾಣಗಳಿಂದ ಧ್ವಂಸಮಾಡುವ ಮೊದಲೇ ಸುವರ್ಣಾಭರಣಗಳನ್ನು ಅಂಗಾಂಗಗಳಲ್ಲಿಯೂ ಧರಿಸಿರುವ ಚಿನ್ನದ ಬಣ್ಣದ ಸೀತೆಯನ್ನು ತೋರಿಸಿಬಿಡು."

ಶ್ರೀರಾಮನು ಮೈಥಿಲಿಯ ವಿಷಯವಾಗಿ ಹೀಗೆ ಹೇಳಲು ಪರ್ವತವು ಸೀತೆಯು ಲಂಕಾಪಟ್ಟಣದಲ್ಲಿರುವುದನ್ನು ಎತ್ತರದ ಶಿಖರಗಳ ಮೂಲಕವಾಗಿ ತೋರಿಸುತ್ತಿರುವಂತೆ ಕಾಣುತ್ತಿದ್ದಿತೇ ಹೊರತು, ಅವಳನ್ನಲ್ಲಿಗೆ ಕರೆತಂದು ಶ್ರೀರಾಮನಿಗೆ ತೋರಿಸಲು ಸಮರ್ಥವಾಗಲಿಲ್ಲ. ಶ್ರೀರಾಮನು ಪುನಃ ಕುಪಿತನಾಗಿ ಪರ್ವತಕ್ಕೆ ಹೇಳಿದನು :

ಮಮ ಬಾಣಾಗ್ನಿನಿರ್ದಗ್ಧೋ ಭಸ್ಮೀಭೂತೋ ಭವಿಷ್ಯಸಿ ।
ಅಸೇವ್ಯಃ ಸತತಂ ಚೈವ ನಿಸ್ತೃಣದ್ರುಮಪಲ್ಲವಃ ॥ ೩೩॥

"ಅದ್ರಿರಾಜನೇ! ನನ್ನ ಬಾಣಾಗ್ನಿಯಿಂದ ದಹಿಸಲ್ಪಡುವ ನೀನು ಕ್ಷಣಮಾತ್ರದಲ್ಲಿ ಬೂದಿಯ ರಾಶಿಯಾಗುವೆ. ನಿನ್ನಲ್ಲಿ ಈಗಿರುವ ಗರಿಕೆ-ಗಿಡ-ಮರ-ಬಳ್ಳಿಗಳೊಂದೂ ಉಳಿಯುವುದಿಲ್ಲ. ಅನಂತರ ನಿನ್ನನ್ನು ಆಶ್ರಯಿಸಲು ಯಾರೂ ನಿನ್ನ ಬಳಿಗೆ ಬರುವುದಿಲ್ಲ. ನೀನು ನಿಷ್ಪ್ರಯೋಜಕನಾಗಿಬಿಡುವೆ."

ಪುನಃ ಲಕ್ಷ್ಮಣನಿಗೆ ಹೇಳಿದನು :

"ಲಕ್ಷ್ಮಣ! ಚಂದ್ರಮುಖಿಯಾದ, ಪೂಜ್ಯಳಾದ ಸೀತಾದೇವಿಯು ಎಲ್ಲಿರುವಳೆಂಬುದನ್ನು ಈಗಲಾದರೂ ಹೇಳದಿದ್ದರೆ ಈ ನದಿಯನ್ನೂ ನನ್ನ ನಿಶಿತವಾದ ಬಾಣಗಳಿಂದ ಶೋಷಿಸಿಬಿಡುತ್ತೇನೆ." ಹೀಗೆ ಪರಮಕ್ರುದ್ಧನಾಗಿ ಮಾತನಾಡುತ್ತಾ ಕಣ್ಣುಗಳಿಂದಲೇ ಎಲ್ಲವನ್ನೂ ದಹಿಸಿಬಿಡುವನೋ ಎಂಬಂತೆ ಕಾಣುತ್ತಿದ್ದ ಶ್ರೀರಾಮನು ಭೂಮಿಯ ಮೇಲೆ ಉದ್ದಕ್ಕೂ ನಡೆದುಹೋಗಿರುವ ರಾಕ್ಷಸನೊಬ್ಬನ ದೊಡ್ಡ-ದೊಡ್ಡ ಹೆಜ್ಜೆಗಳ ಗುರುತುಗಳನ್ನು ನೋಡಿದನು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಆ ಹೆಜ್ಜೆಗಳ ಹಿಂದೆಯೇ ಸೀತಾದೇವಿಯು ನಡೆದುಹೋದ ಹೆಜ್ಜೆಗಳ ಗುರುತುಗಳೂ ಇದ್ದುವು. ಧನುಸ್ಸು ಮತ್ತು ಬತ್ತಳಿಕೆಗಳು ಮುರಿದು ಬಿದ್ದಿದ್ದುವು. ಒಂದು ರಥವೂ ಭಿನ್ನ-ಭಿನ್ನವಾಗಿ ಅಲ್ಲಿಯೇ ಬಿದ್ದಿದ್ದಿತು. ರಥದ ಬಿಡಿಭಾಗಗಳು ಸುತ್ತಲೂ ಚದುರಿಬಿದ್ದಿದ್ದುವು. ಅದನ್ನು ಕಂಡು ಭ್ರಾಂತನಾದ ಶ್ರೀರಾಮನು ಪ್ರೀತಿಯ ತಮ್ಮನಿಗೆ ಹೇಳಿದನು :

"ಇಲ್ಲಿ ನೋಡು, ಲಕ್ಷ್ಮಣ! ವೈದೇಹಿಯ ಆಭರಣಗಳಿಂದ ಕಳಚಿ ಬಿದ್ದಿರುವ ಚಿನ್ನದ ಗುಂಡುಗಳು ಇಲ್ಲೆಲ್ಲಾ ಹರಡಿಕೊಂಡು ಬಿದ್ದಿವೆ. ಅವಳು ಧರಿಸಿದ್ದ ನಾನಾವಿಧವಾದ ಪುಷ್ಪಮಾಲಿಕೆಗಳೂ ಚೂರು-ಚೂರುಗಳಾಗಿ ಇಲ್ಲಿ ಬಿದ್ದಿವೆ. ಈ ಜಾಗದ ಸುತ್ತಲೂ ರಕ್ತದ ತೊಟ್ಟುಗಳು ಚಿತ್ರಿತವಾದ ಚಿನ್ನದ ಬಿಂದುಗಳಂತೆ ಹರಡಿ ಬಿದ್ದಿವೆ. ಕಾಮರೂಪಿಗಳಾದ ರಾಕ್ಷಸರು ವೈದೇಹಿಯ ತಲೆಯನ್ನೇ ಒಡೆದಿದ್ದಾರೆ ಅಥವಾ ಕತ್ತರಿಸಿದ್ದಾರೆ. ಅಥವಾ ಶರೀರವನ್ನು ತುಂಡು-ತುಂಡುಗಳನ್ನಾಗಿ ಕತ್ತರಿಸಿ ತಿಂದುಹಾಕಿದ್ದಾರೆ. ತಿಲೋತ್ತಮೆಯ ಸಲುವಾಗಿ ಸುಂದೋಪಸುಂದರ ನಡುವೆ ಘೋರವಾದ ಯುದ್ಧವಾಗಿದ್ದಿತು. ಅಂತೆಯೇ ಸೀತಾದೇವಿಯ ಸಲುವಾಗಿ ವಿವಾದದಲ್ಲಿ ತೊಡಗಿದ್ದ ಇಬ್ಬರು ರಾಕ್ಷಸರ ನಡುವೆ ಈ ಪ್ರದೇಶದಲ್ಲಿ ಘೋರವಾದ ಯುದ್ಧವು ನಡೆದಿರಬಹುದು.

ಸೌಮ್ಯನೇ! ಈ ಧನುಸ್ಸನ್ನಾದರೂ ನೋಡು. ಅದು ಮುತ್ತಿನ ಮಣಿಗಳಿಂದ ಸಮಲಂಕೃತವಾಗಿದೆ. ರಮಣೀಯವಾಗಿದೆ. ಆಭರಣಾದಿಗಳಿಂದ ವಿಭೂಷಿತವಾಗಿದೆ. ಮುರಿದುಹೋಗಿ ಭೂಮಿಯಲ್ಲಿ ಬಿದ್ದಿರುವ ಈ ದಿವ್ಯ ಧನುಸ್ಸು ಯಾರದ್ದಾಗಿರಬಹುದು? ಇದು ರಾಕ್ಷಸರದ್ದಾದರೂ ಆಗಿರಬಹುದು; ದೇವತೆಗಳದ್ದಾದರೂ ಆಗಿರಬಹುದು. ಲಕ್ಷ್ಮಣ! ಇತ್ತ ನೋಡು. ಇಲ್ಲೊಂದು ಕವಚವೂ ಬಿದ್ದಿದೆ. ಬಾಲಸೂರ್ಯನಂತೆ ಥಳಥಳಿಸುತ್ತಿದೆ. ವೈಡೂರ್ಯಮಣಿಗಳಿಂದ ಸಮಲಂಕೃತವಾಗಿದೆ. ಚೂರು-ಚೂರುಗಳಾಗಿ ಕತ್ತರಿಸಲ್ಪಟ್ಟು ಈ ಪ್ರದೇಶದಲ್ಲಿ ಬಿದ್ದಿದೆ. ಸುವರ್ಣಮಯವಾದ ಈ ಕವಚವು ಯಾರದ್ದಾಗಿರಬಹುದು?"

ಶ್ರೀರಾಮನು ಸ್ವಲ್ಪ ಮುಂದೆ ಹೋದನು. ಅಲ್ಲೊಂದು ಶ್ವೇತ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಚ್ಛತ್ರವು ಮುರಿದು ಬಿದ್ದಿದ್ದಿತು. ಲಕ್ಷ್ಮಣನಿಗೆ ಹೇಳಿದನು : " ಲಕ್ಷ್ಮಣ! ನೂರು ಕಡ್ಡಿಗಳಿಂದ ಕೂಡಿರುವ ಈ ಶ್ವೇತಚ್ಛತ್ರವು ದಿವ್ಯವಾದ ಮಾಲಿಕೆಗಳಿಂದ ಅಲಂಕರಿಸಲ್ಪಟ್ಟು ಶೋಭಾಯಮಾನವಾಗಿ ಕಾಣುತ್ತಿದೆ. ಆದರೆ ಇದರ ಮಧ್ಯದ ದಂಡವು ಮಾತ್ರ ಮುರಿದುಹೋಗಿದೆ. ಇದಾದರೂ ಯಾರದ್ದಾಗಿರಬಹುದು? ಇಲ್ಲಿ ನೋಡು, ಲಕ್ಷ್ಮಣ! ಇಲ್ಲಿ ಪಿಶಾಚಿಗಳ ಮುಖವಿರುವ ಭಯಂಕರವಾದ ಕತ್ತೆಗಳು ಸತ್ತುಬಿದ್ದಿವೆ. ಅವುಗಳ ಶರೀರಗಳು ವಿಶಾಲವಾಗಿವೆ. ಬೆನ್ನಮೇಲೆ ಸುವರ್ಣಮಯವಾದ ಕವಚಗಳನ್ನು ತೊಡಿಸಿದ್ದಾರೆ. ಭಯಂಕರವಾದ ರೂಪವನ್ನು ಹೊಂದಿರುವ ಇವುಗಳು ಯಾರದ್ದಾಗಿರಬಹುದು?

ಮುರಿದು ಬಿದ್ದಿರುವ ಈ ರಥವಾದರೂ ಯಾರದ್ದಿರಬಹುದು? ಈ ರಥವು ಯಾರಿಂದಲ್ಲೋ ಕೆಳಕ್ಕೆ ದೂಡಲ್ಪಟ್ಟಿದೆ. ನಾಯಕನನ್ನು ಸೂಚಿಸುವ ಸಮರಧ್ವಜವೂ ಪ್ರಕಾಶಮಾನವಾಗಿ ಕಾಣುತ್ತಿದೆ. ಇಂತಹ ಕಾಂತಿಯುಕ್ತವಾದ ಧ್ವಜದಿಂದ ಕೂಡಿರುವ ಈ ರಥವು ಪ್ರದೀಪ್ತವಾದ ಅಗ್ನಿಗೆ ಸಮಾನವಾಗಿದೆ.

ಎಲ್ಲೆಡೆಗಳಲ್ಲಿಯೂ ಹರಡಿ ಬಿದ್ದಿರುವ ಭಯಂಕರವಾದ ಬಾಣಗಳನ್ನು ನೋಡು, ತಮ್ಮ! ಇವು ರಥದ ಅಚ್ಚುಪುರದಷ್ಟು ಉದ್ದವಾಗಿವೆ. ಸುವರ್ಣಭೂಷಿತವಾಗಿವೆ. ಮುರಿದುಬಿದ್ದಿರುವ ಈ ಬಾಣಗಳು ಯಾರದ್ದಾಗಿರಬಹುದು? ಬಾಣಗಳಿಂದ ತುಂಬಿರುವ ಬತ್ತಳಿಕೆಗಳು ವಿಧ್ವಸ್ತವಾಗಿ ಬಿದ್ದಿರುವುದನ್ನು ನೋಡು, ತಮ್ಮ! ಈ ರಥದ ಸಾರಥಿಯು ಚಾವಟಿ ಮತ್ತು ಕಡಿವಾಣಗಳನ್ನು ಹಿಡಿದುಕೊಂಡೇ ಸತ್ತುಬಿದ್ದಿದ್ದಾನೆ. ಇವನು ಯಾರ ಸಾರಥಿಯಾಗಿರಬಹುದು? ಇಲ್ಲಿ ನೋಡು. ಚಾಮರವನ್ನು ಹಿಡಿದುಕೊಂಡೇ ಇಬ್ಬರು ಸತ್ತುಬಿದ್ದಿದ್ದಾರೆ. ಇವರು ಉಷ್ಣೀಶವನ್ನೂ, ಕುಂಡಲಗಳನ್ನೂ ಧರಿಸಿದ್ದಾರೆ. ಇವರಾದರೂ ಯಾರ ಕಡೆಯವರಿರಬಹುದು? ಹೆಜ್ಜೆಯ ಈ ಗುರುತು ಯಾವನೋ ಒಬ್ಬ ರಾಕ್ಷಸನದಿರಬಹುದೆಂಬುದು ಸ್ಪಷ್ಟವಾಗಿ ಕಾಣುತ್ತಿದೆ. ಸೌಮ್ಯನೇ! ಕಾಮರೂಪಿಗಳಾದ ಮತ್ತು ಕಠಿಣಹೃದಯರಾದ ರಾಕ್ಷಸರೊಡನೆ ನನ್ನ ವೈರವು ನೂರುಪಟ್ಟು ಹೆಚ್ಚಾಗಿ ಹೋಗಿದೆ. ಅವರೊಡನೆ ನನ್ನ ವೈರವು ಜೀವಿತದ ಕಡೆಯವರೆಗೂ ತಪ್ಪಿದ್ದೇ ಅಲ್ಲ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri


ಅವರ ಅಂತ್ಯವಾದ ಮೇಲೆಯೇ ನನ್ನಲ್ಲಿರುವ ವೈರತ್ವದ ಭಾವನೆಯು ಉಪಶಮನಗೊಳ್ಳುತ್ತದೆ. ಸೀತಾದೇವಿಯನ್ನು ರಾಕ್ಷಸರು ಅಪಹರಿಸಿದ್ದಾರೆ. ಅಥವಾ ತಿಂದುಹಾಕಿದ್ದಾರೆ; ಇಲ್ಲದಿದ್ದರೆ ಆಕೆಯು ತಾನಾಗಿಯೇ ಪ್ರಾಣತ್ಯಾಗ ಮಾಡಿದ್ದಾಳೆ. ಮಹಾರಣ್ಯದಲ್ಲಿ ರಾಕ್ಷಸಾಧಮರಿಂದ ಸೆಳೆಯಲ್ಪಡುತ್ತಿದ್ದ ಸೀತೆಯನ್ನು ಅವಳ ಯಾವ ಧರ್ಮವೂ ರಕ್ಷಿಸಲಿಲ್ಲ.*

ವೈದೇಹಿಯು ರಾಕ್ಷಸರಿಂದ ಭಕ್ಷಿಸಲ್ಪಡುತ್ತಿರುವಾಗ ಅಥವಾ ಅಪಹರಿಸಲ್ಪಡುತ್ತಿರುವಾಗ ಅವಳನ್ನು ಸಂಕಟದಿಂದ ತಪ್ಪಿಸಲು ಸರ್ವಶಕ್ತರಾದ ದೇವತೆಗಳಲ್ಲಿ ಯಾರು ಮುಂದೆ ಬಂದರು? (ಈ ಸಮಯದಲ್ಲಿ ಸೀತೆಯನ್ನು ಧರ್ಮವೂ ರಕ್ಷಿಸಲಿಲ್ಲ. ದೇವತೆಗಳೂ ರಕ್ಷಿಸಲಿಲ್ಲ.)

ಕರ್ತಾರಮಪಿ ಲೋಕಾನಾಂ ಶೂರಂ ಕರುಣವೇದಿನಮ್ ।
ಅಜ್ಞಾನಾದವಮನ್ಯೇರನ್ಸರ್ವಭೂತಾನಿ ಲಕ್ಷ್ಮಣ ॥೫೫॥

ಲಕ್ಷ್ಮಣ! ಒಬ್ಬನು ಲೋಕಕರ್ತೃವೇ ಆಗಿರಬಹುದು; ಮಹಾಶೂರನೇ ಆಗಿರಬಹುದು. ಆದರೆ ಅವನೇನಾದರೂ ದಯಾರ್ದ್ರಹೃದಯನಾಗಿದ್ದರೆ ಅಂತಹವನನ್ನು ಎಲ್ಲ ಪ್ರಾಣಿಗಳೂ ಅಜ್ಞಾನದ ಕಾರಣದಿಂದಾಗಿ ಬಲಹೀನನೆಂದು ಅವಮಾನಿಸುತ್ತವೆ. (ಯಾರಲ್ಲಿಯೂ ಕರುಣೆಯನ್ನೇ ತೋರಬಾರದು. ದಯಾಪರನನ್ನು ಜನರು ಬಲಹೀನನೆಂದೇ ಭಾವಿಸುತ್ತಾರೆ.)

ಮೃದುಂ ಲೋಕಹಿತೇ ಯುಕ್ತಂ ದಾನ್ತಂ ಕರುಣವೇದಿನಮ್ ।
ನಿರ್ವೀರ್ಯ ಇತಿ ಮನ್ಯನ್ತೇ ನೂನಂ ಮಾಂ ತ್ರಿದಶೇಶ್ವರಾಃ ॥೫೬॥

ಮೃದುಸ್ವಭಾವದವನಾದ, ಯಾವಾಗಲೂ ಲೋಕಹಿತದಲ್ಲಿಯೇ ಅನುರಕ್ತನಾಗಿರುವ, ಜಿತೇಂದ್ರಿಯನಾಗಿರುವ, ಕರುಣೆ-ಎಂದರೆ ಏನೆಂಬುದನ್ನು ಚೆನ್ನಾಗಿ ತಿಳಿದುಕೊಂಡಿರುವ (ದಯಾಪರನಾದ) ನನ್ನನ್ನು ನಿಶ್ಚಯವಾಗಿಯೂ ಇಂದ್ರಾದಿದೇವತೆಗಳು ನಿರ್ವೀರ್ಯನೆಂದೇ ಭಾವಿಸಿಬಿಟ್ಟಿದ್ದಾರೆ.

ಲಕ್ಷ್ಮಣ! ನನ್ನಲ್ಲಿರುವ ಸೌಹಾರ್ದ, ದಯೆ, ಕರುಣೆ – ಮುಂತಾದ ಗುಣಗಳೇ ದೋಷವಾಗಿ ಪರಿಣಮಿಸಿವೆ. ಪ್ರಳಯಕಾಲದಲ್ಲಿ ಸೂರ್ಯನು

* ಧರ್ಮೋ ರಕ್ಷತಿ ರಕ್ಷಿತಃ–ಧರ್ಮರಕ್ಷಕರನ್ನು ಧರ್ಮವು ರಕ್ಷಿಸುತ್ತದೆಯೆಂಬುದು ಸೀತೆಯ ವಿಷಯದಲ್ಲಿ ಸುಳ್ಳಾಗಿಯೇ ಪರಿಣಮಿಸಿತು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.

ಬೆಳದಿಂಗಳನ್ನು ಧ್ವಂಸಮಾಡಿ ತೇಜೋವಿಶಿಷ್ಟನಾಗಿ ಪ್ರಖರವಾದ ಕಿರಣಗಳಿಂದ ಪ್ರಕಾಶಿಸುವಂತೆ–ನಾನೂ ಕೂಡ ಸಕಲಪ್ರಾಣಿಗಳ ಮತ್ತು ರಾಕ್ಷಸರ ಅಂತ್ಯಕ್ಕಾಗಿ ನನ್ನಲ್ಲಿ ಸ್ವಭಾವಸಿದ್ಧವಾಗಿರುವ ಕಾರುಣ್ಯಾದಿ ಗುಣಗಳನ್ನು ಉಪಸಂಹರಿಸಿ ಪ್ರಚಂಡವಾದ ತೇಜಸ್ಸನ್ನು ಹೊಂದುತ್ತೇನೆ. ಅದನ್ನು ನೀನು ಈಗಲೇ ನೋಡುವೆ, ಲಕ್ಷ್ಮಣ!

ನಾನು ಕುಪಿತನಾಗಿ ವಿಶ್ವವನ್ನೇ ಧ್ವಂಸಮಾಡಲು ಹೊರಟೆನೆಂದರೆ ಯಕ್ಷ-ಗಂಧರ್ವ-ಪಿಶಾಚ-ರಾಕ್ಷಸರಾಗಲೀ, ಮನುಷ್ಯ-ಕಿನ್ನರರಾಗಲೀ ಸುಖವಾಗಿರಲು ಸಾಧ್ಯವೇ ಆಗುವುದಿಲ್ಲ. ನನ್ನ ಅಸ್ತ್ರಗಳಿಂದಲೂ ಬಾಣಗಳಿಂದಲೂ ಆಕಾಶವು ತುಂಬಿಹೋಗುವುದನ್ನು ನೀನು ಈಗಲೇ ಕಾಣಲಿರುವೆ. ತ್ರಿಲೋಕಸಂಚಾರಿಗಳಾದ ದೇವತೆಗಳಿಗೆ ಇನ್ನು ಮುಂದೆ ಆಕಾಶಮಾರ್ಗದಲ್ಲಿ ಸಂಚರಿಸಲಾಗದಂತೆ ಮಾಡಿಬಿಡುತ್ತೇನೆ. ಇಷ್ಟು ಮಾತ್ರವಲ್ಲ, ಲಕ್ಷ್ಮಣ! ಲೋಕೇಶ್ವರರು ಕುಶಲಿನಿಯಾದ ಸೀತೆಯನ್ನು ಈಗಲೇ ನನಗೆ ತಂದೊಪ್ಪಿಸದಿದ್ದರೆ ಗ್ರಹಗಳ ಸಮೂಹವನ್ನೇ ಮುಂದಕ್ಕೆ ಚಲಿಸಲಾಗದಂತೆ ಬಂಧಿಸಿಬಿಡುತ್ತೇನೆ. ಚಂದ್ರನನ್ನೇ ಮುಚ್ಚಿಬಿಡುತ್ತೇನೆ. ವಾಯ್ವಗ್ನಿ-ಸೂರ್ಯರ ತೇಜಸ್ಸುಗಳನ್ನು ನಷ್ಟಗೊಳಿಸುತ್ತೇನೆ. ನನ್ನ ಸತತವಾದ ಬಾಣಪ್ರಯೋಗಗಳಿಂದ ಎಲ್ಲ ಕಡೆಗಳಲ್ಲಿಯೂ ಗಾಢಾಂಧಕಾರವು ಕವಿಯುವಂತೆ ಮಾಡುತ್ತೇನೆ. ಪರ್ವತಗಳ ಶಿಖರಗಳನ್ನು ಧ್ವಂಸಮಾಡುತ್ತೇನೆ. ನದಿಗಳಲ್ಲಿ, ಸರೋವರಗಳಲ್ಲಿ ಮತ್ತು ಸಮುದ್ರಗಳಲ್ಲಿರುವ ನೀರನ್ನು ಬತ್ತಿಸಿಬಿಡುತ್ತೇನೆ. ಮರ-ಗಿಡ-ಬಳ್ಳಿಗಳನ್ನೂ ಪೊದೆಗಳನ್ನೂ ಧ್ವಂಸಮಾಡಿಬಿಡುತ್ತೇನೆ. ಮೂರು ಲೋಕಗಳಲ್ಲಿಯೂ ಮಹಾಕಾಲನ ವಿನಾಶದ ಲೀಲೆಯನ್ನು ಆರಂಭಿಸಿಬಿಡುತ್ತೇನೆ. ಈ ಕ್ಷಣದಲ್ಲಿಯೇ ನನ್ನ ಪರಾಕ್ರಮವೆಷ್ಟೆಂಬುದನ್ನು ಮೂರು ಲೋಕಗಳಲ್ಲಿರುವ ಎಲ್ಲರೂ ನೋಡುತ್ತಾರೆ. ನನ್ನ ಬಾಣಗಳಿಂದ ಆಕಾಶವೂ ತುಂಬಿಹೋಗುವುದರಿಂದ ಪ್ರಾಣವುಳಿಸಿಕೊಳ್ಳಲು ಪ್ರಾಣಿಗಳು ಆಕಾಶಕ್ಕೂ ಹಾರಲಾರವು. ನಿರಂತರವಾಗಿ ಧನುಸ್ಸಿನ ನಾಣಿನಿಂದ ಹೊರಬರುವ ಬಾಣಗಳ ಸಮೂಹಗಳಿಂದ ಆಕಾಶವೇ ಮುಚ್ಚಿಹೋಗುತ್ತದೆ. ಮೃಗ-ಪಕ್ಷಿಗಳು ನಾನು ಬಿಡುವ ಬಾಣಗಳಿಂದ ಪೀಡಿತವಾಗಿ ಭ್ರಾಂತಿಗೊಂಡು ವಿನಾಶಹೊಂದುತ್ತವೆ. ಜೀವಲೋಕದಲ್ಲಿರುವ ಯಾವನೊಬ್ಬನಿಂದಲೂ ತಡೆಯುಲು ಸಾಧ್ಯವಾಗದ, ಕಿವಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.


ಯವರೆಗೂ ಶಿಂಜಿನಿಯನ್ನು ಸೆಳೆದುಬಿಡುವ ಬಾಣಗಳಿಂದ ತುಂಬಿಹೋಗುವ ಈ ಜಗತ್ತು ತನ್ನ ಮರ್ಯಾದೆಯನ್ನೇ ಮೀರಿ ವರ್ತಿಸುವುದನ್ನು ನೀನೀಗ ಕಾಣಲಿರುವೆ. ಮೈಥಿಲಿಯ ಸಲುವಾಗಿ ನಾನಿಂದು ಈ ಲೋಕವನ್ನೇ ಪಿಶಾಚರಿಂದಲೂ ರಾಕ್ಷಸರಿಂದಲೂ ರಹಿತವನ್ನಾಗಿ ಮಾಡಿಬಿಡುತ್ತೇನೆ. ರೋಷಾವೇಶದಿಂದಲೂ ಅಸಹನೆಯಿಂದಲೂ ಬಿಡಲ್ಪಡುವ, ಬಹಳ ದೂರಕ್ಕೆ ಹೋಗುವ ನನ್ನ ಬಾಣಗಳ ಬಲವೆಷ್ಟೆಂಬುದನ್ನು ದೇವತೆಗಳಿಂದು ಕಾಣುತ್ತಾರೆ. ನನ್ನ ಕ್ರೋಧದ ದೆಸೆಯಿಂದ ಮೂರು ಲೋಕಗಳೂ ವಿನಾಶಹೊಂದುತ್ತವೆ. ದೇವ-ದೈತೇಯ-ಪಿಶಾಚ-ರಾಕ್ಷಸರಲ್ಲಿ ಒಬ್ಬರೂ ಉಳಿಯುವುದಿಲ್ಲ. ದೇವ-ದಾನವ-ಯಕ್ಷ-ರಾಕ್ಷಸರ ಲೋಕಗಳೆಲ್ಲವೂ ನಾನು ಬಿಡುವ ಬಾಣಗಳ ಸಮೂಹಗಳಿಂದ ಚೂರು-ಚೂರುಗಳಾಗಿ ಕತ್ತರಿಸಲ್ಪಟ್ಟು ಭೂಮಿಯ ಮೇಲೆ ಬೀಳುತ್ತವೆ. ಲಕ್ಷ್ಮಣ ! ಈ ಕ್ಷಣದಲ್ಲಿಯೇ ಲೋಕಪಾಲರು ಅಪಹೃತಳಾಗಿರುವ ನನ್ನ ಸೀತೆಯನ್ನು ನನಗೆ ತಂದೊಪ್ಪಿಸಬೇಕು. ಅವಳೇನಾದರೂ ಸತ್ತುಹೋಗಿದ್ದರೆ ದೇಹವನ್ನಾದರೂ ತಂದೊಪ್ಪಿಸಬೇಕು. ಹಾಗೇನಾದರೂ ತಂದೊಪ್ಪಿಸದಿದ್ದರೆ ಈ ಎಲ್ಲ ಲೋಕಗಳನ್ನೂ ನಾನು ಈ ಕ್ಷಣದಲ್ಲಿಯೇ ನನ್ನ ನಿಶಿತವಾದ ಬಾಣಗಳಿಂದ ಎಲ್ಲೆಗಳೇ ಇಲ್ಲದುವುಗಳನ್ನಾಗಿ ಮಾಡಿಬಿಡುತ್ತೇನೆ. ಸ್ಥಾವರ-ಜಂಗಮಗಳಿಂದ ಕೂಡಿರುವ ಮೂರು ಲೋಕಗಳನ್ನೂ ವಿನಾಶಗೊಳಿಸುತ್ತೇನೆ. ಸೀತೆಯನ್ನು ಕಾಣುವವರೆಗೂ ನಾನು ನಿಶಿತವಾದ ಬಾಣಗಳಿಂದ ಮೂರು ಲೋಕಗಳನ್ನೂ ಸಂತಾಪಗೊಳಿಸುತ್ತಲೇ ಇರುತ್ತೇನೆ."

ಕ್ರೋಧದಿಂದ ಶ್ರೀರಾಮನ ಕಣ್ಣುಗಳು ಕೆಂಪಾಗಿದ್ದುವು. ತುಟಿಗಳು ಅದುರುತ್ತಿದ್ದುವು. ಹೀಗೆ ಹೇಳಿದ ನಂತರ ಶ್ರೀರಾಮನು ನಾರುಮಡಿಯನ್ನೂ ಮತ್ತು ಕೃಷ್ಣಾಜಿನವನ್ನೂ ಬಿಗಿಪಡಿಸಿ ಬಿಚ್ಚಿಹೋಗಿದ್ದ ಜಟೆಯನ್ನು ಗಂಟುಹಾಕಿಕೊಂಡನು. ಹಾಗೆ ಅತ್ಯಂತಕ್ರುದ್ಧನಾಗಿದ್ದ ಧೀಮಂತನಾದ ಶ್ರೀರಾಮನ ಶರೀರವು–ತ್ರಿಪುರಸಂಹಾರಕಾಲದಲ್ಲಿ ಕ್ರುದ್ಧನಾಗಿದ್ದ ರುದ್ರನ ಶರೀರದಂತೆಯೇ–ಪ್ರಖರವಾಗಿ ಬೆಳಗುತ್ತಿದ್ದಿತು.

ಪ್ರಳಯಕಾಲದ ಅಗ್ನಿಯಂತೆ ಕಾಣುತ್ತಿದ್ದ, ಪರಮಕ್ರುದ್ಧನಾಗಿದ್ದ, ಪರಪುರಂಜಯನಾದ, ಶ್ರೀಮಂತನಾದ ಶ್ರೀರಾಮನು ಲಕ್ಷ್ಮಣನಿಂದ ಧನುಸ್ಸನ್ನು ತೆಗೆದುಕೊಂಡು ಮುಷ್ಟಿಯಿಂದ ದೃಢವಾಗಿ ಹಿಡಿದು ಸರ್ಪಗಳಂತೆ

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.


ಸುಘೋರವಾಗಿಯೂ ಪ್ರದೀಪ್ತವಾಗಿಯೂ ಇದ್ದ ಬಾಣವನ್ನು ಬತ್ತಳಿಕೆಯಿಂದ ತೆಗೆದು ಧನುಸ್ಸಿನಲ್ಲಿ ಅನುಸಂಧಾನಮಾಡಿ ಹೇಳಿದನು :

ಯಥಾ ಜರಾ ಯಥಾ ಮೃತ್ಯುರ್ಯಥಾ ಕಾಲೋ ಯಥಾ ವಿಧಿಃ ।
ನಿತ್ಯಂ ನ ಪ್ರತಿಹನ್ಯನ್ತೇ ಸರ್ವಭೂತೇಷು ಲಕ್ಷ್ಮಣ ।
ತಥಾಹಂ ಕ್ರೋಧಸಂಯುಕ್ತೋ ನ ನಿವಾರ್ಯೋಽಸ್ಮಿ ಸರ್ವಥಾ ॥

"ಲಕ್ಷ್ಮಣ! ಮುಪ್ಪು, ಸಾವು, ಕಾಲ ಮತ್ತು ಅದೃಷ್ಟ-ಇವು ಅನುದಿನವೂ ಎಲ್ಲ ಪ್ರಾಣಿಗಳನ್ನೂ ಹಿಂಸಿಸುತ್ತಲೇ ಇರುತ್ತವೆ. ಆದರೆ ಇವುಗಳನ್ನು ತಡೆಯಲು ಯಾರಿಂದಲೂ ಸಾಧ್ಯವಾಗುವುದಿಲ್ಲ. ಅದೇ ರೀತಿಯಲ್ಲಿ ಕ್ರೋಧಾಭಿಭೂತನಾಗಿರುವ ನನ್ನನ್ನು ಕೂಡ ಯಾರೂ ತಡೆಯಲಾರರು. ಈ ವಿಷಯದಲ್ಲಿ ಸಂದೇಹವೇ ಇಲ್ಲ.

ಕಾಲವು ಮೀರಿಹೋಗುವುದರೊಳಗಾಗಿ ಸುಂದರವಾದ ದಂತಪಂಕ್ತಿಗಳನ್ನು ಹೊಂದಿರುವ, ನಿಷ್ಕಳಂಕಳಾದ, ಮಿಥಿಲಾದೇಶದ ರಾಜಕುಮಾರಿಯಾದ ಸೀತಾದೇವಿಯನ್ನು ಲೋಕೇಶ್ವರರು ನನಗೆ ತಂದೊಪ್ಪಿಸದಿದ್ದರೆ ದೇವ-ಗಂಧರ್ವ-ಮನುಷ್ಯ-ಸರ್ಪಗಳಿಂದಲೂ, ಪರ್ವತಗಳಿಂದಲೂ ಕೂಡಿರುವ ಈ ಜಗತ್ತನ್ನೇ ವ್ಯತ್ಯಾಸಗೊಳಿಸಿಬಿಡುತ್ತೇನೆ. ಇದು ಜಗತ್ತೇ ಅಲ್ಲವೋ ಎಂಬಂತೆ ಅಲ್ಲೋಲ-ಕಲ್ಲೋಲಗೊಳಿಸುತ್ತೇನೆ."

೬೪ನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ ೬೫ನೆಯ ಸರ್ಗ

## ಲಕ್ಷ್ಮಣನಿಂದ ಶ್ರೀರಾಮನ ಸಮಾಧಾನ

ತಪ್ಯಮಾನಂ ತಥಾ ರಾಮಂ ಸೀತಾಹರಣಕರ್ಶಿತಮ್ ।
ಲೋಕಾನಾಮಭವೇ ಯುಕ್ತಂ ಸಂವರ್ತಕಮಿವಾನಲಮ್ ॥೧॥

ವೀಕ್ಷಮಾಣಂ ಧನುಃ ಸಜ್ಯಂ ನಿಃಶ್ವಸನ್ತಂ ಪುನಃ ಪುನಃ ।
ದಗ್ಧುಕಾಮಂ ಜಗತ್ಸರ್ವಂ ಯುಗಾನ್ತೇ ಚ ಯಥಾ ಹರಮ್ ॥೨॥

ಅದೃಷ್ಟಪೂರ್ವಂ ಸಂಕ್ರುದ್ಧಂ ದೃಷ್ಟ್ವಾ ರಾಮಂ ತು ಲಕ್ಷ್ಮಣಃ ।
ಅಬ್ರವೀತ್ಪ್ರಾಞ್ಜಲಿರ್ವಾಕ್ಯಂ ಮುಖೇನ ಪರಿಶುಷ್ಯತಾ ॥೩॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.


ಆ ಸಮಯದಲ್ಲಿ ಶ್ರೀರಾಮನು ಪ್ರೇಯಸಿಯಾದ ಸೀತೆಯ ಅಪಹರಣದಿಂದಾಗಿ ಬಹಳವಾಗಿ ಸಂಕಟಪಡುತ್ತಿದ್ದನು. ಕ್ರುದ್ಧನಾಗಿದ್ದನು. ಪ್ರಳಯಕಾಲದ ಅಗ್ನಿಯಂತೆ ಲೋಕಗಳನ್ನು ವಿನಾಶಗೊಳಿಸಲು ಸಿದ್ಧನಾಗಿ ನಿಂತಿದ್ದನು. ನಾಣನ್ನು ಬಿಗಿದು ಕಟ್ಟಿದ್ದ ಧನುಸ್ಸನ್ನು ದಿಟ್ಟಿಸಿನೋಡುತ್ತಾ ಬಾರಿ-ಬಾರಿಗೂ ನಿಟ್ಟುಸಿರುಬಿಡುತ್ತಿದ್ದನು. ಯುಗದ ಕಡೆಯಲ್ಲಿ ಎಲ್ಲ ಜಗತ್ತುಗಳನ್ನೂ ಭಸ್ಮಮಾಡಲು ಅಪೇಕ್ಷಿಸುವ ಪರಮೇಶ್ವರನಂತೆ ಶ್ರೀರಾಮನೂ ಮೂರು ಲೋಕಗಳನ್ನೂ ಸುಟ್ಟುಬಿಡಲು ನಿಶ್ಚಯಿಸಿ ನಿಂತಿದ್ದನು. ಹಿಂದೆ ಯಾವಾಗಲೂ ಶ್ರೀರಾಮನು ಇಷ್ಟು ಕುಪಿತನಾಗಿರಲಿಲ್ಲ. ಇಂತಹ ಪರಿಸ್ಥಿತಿಯಲ್ಲಿದ್ದ ಶ್ರೀರಾಮನನ್ನು ನೋಡಿ ಲಕ್ಷ್ಮಣನ ಮುಖವೂ ಬಾಡಿಹೋಯಿತು. ಅವನು ಕೈಮುಗಿದುಕೊಂಡು ವಿನೀತನಾಗಿ ಹೇಳಿದನು :

ಪುರಾ ಭೂತ್ವಾ ಮೃದುರ್ದಾನ್ತಃ ಸರ್ವಭೂತಹಿತೇ ರತಃ ।
ನ ಕ್ರೋಧವಶಮಾಪನ್ನಃ ಪ್ರಕೃತಿಂ ಹಾತುಮರ್ಹಸಿ ।೪॥

"ಅಣ್ಣ ! ಈ ಹಿಂದೆ ನೀನು ಬಹಳ ಮೃದುಸ್ವಭಾವದವನಾಗಿದ್ದೆ. ಜಿತೇಂದ್ರಿಯನಾಗಿದ್ದೆ. ಕೋಪಕ್ಕೆ ಆಶ್ರಯವನ್ನು ಕೊಡುತ್ತಿರಲಿಲ್ಲ. ಎಲ್ಲ ಪ್ರಾಣಿಗಳ ಹಿತದಲ್ಲಿಯೇ ನಿರತನಾಗಿರುತ್ತಿದ್ದೆ. ಇದು ನಿನ್ನ ಸ್ವಭಾವಗುಣನಾಗಿದ್ದಿತು. ಈ ಸಮಯದಲ್ಲಿ ನೀನು ಕ್ರೋಧಕ್ಕೆ ವಶನಾಗಿ ನಿನ್ನ ಸಹಜವಾದ ಸ್ವಭಾವವನ್ನು ಪರಿತ್ಯಜಿಸುವುದು ಯುಕ್ತವಲ್ಲ.

ಚನ್ದ್ರೇ ಲಕ್ಷ್ಮೀಃ ಪ್ರಭಾ ಸೂರ್ಯೇ ಗತಿರ್ವಾಯೌ ಭುವಿ ಕ್ಷಮಾ ।
ಏತಚ್ಚ ನಿಯತಂ ಸರ್ವಂ ತ್ವಯಿ ಚಾನುತ್ತಮಂ ಯಶಃ ।೫॥

ಚಂದ್ರನಲ್ಲಿ ಕಾಂತಿಯೂ, ಸೂರ್ಯನಲ್ಲಿ ಪ್ರಭೆಯೂ, ವಾಯುವಿನಲ್ಲಿ ಸಂಚಾರವೂ, ಭೂಮಿಯಲ್ಲಿ ಕ್ಷಮೆಯೂ ನಿಯತವಾಗಿರುತ್ತವೆ. ಹಾಗೆಯೇ ನಿನ್ನಲ್ಲಿ ಈ ನಾಲ್ಕರ ಜೊತೆಗೆ ಯಶಸ್ಸೂ ನಿಯತವಾಗಿದೆ. ಮೃದುಸ್ವಭಾವದವನೆಂದೂ, ಜಿತೇಂದ್ರಿಯನೆಂದೂ, ಪ್ರಾಣಿಗಳ ಹಿತದಲ್ಲಿಯೇ ನಿರತನಾಗಿರತಕ್ಕವನೆಂದೂ ನೀನು ಶಾಶ್ವತವಾದ ಯಶಸ್ಸನ್ನು ಗಳಿಸಿರುವೆ.

ಆದುದರಿಂದ ನೀನು ನಿನ್ನ ಸ್ವಭಾವವನ್ನು ಪರಿತ್ಯಜಿಸುವುದು ಯುಕ್ತ

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.

ವಾಗಿ ಕಾಣುವುದಿಲ್ಲ. ಒಬ್ಬನು ಮಾಡಿರುವ ಅಪರಾಧಕ್ಕಾಗಿ ಲೋಕಗಳನ್ನೇ ನಾಶಗೊಳಿಸಲು ಬಯಸಬೇಡ.

ಭಗ್ನವಾಗಿ ಹೋಗಿರುವ ಈ ಯುದ್ಧರಥವು ಯಾರದೆಂಬುದು ನನಗೂ ತಿಳಿಯುತ್ತಿಲ್ಲ. ಈ ರಥವನ್ನು ಮುರಿದುಹಾಕಿದವರು ಯಾರು? ಯಾರ ಸಲುವಾಗಿ ಮುರಿದುಹಾಕಿದರು?–ಎಂಬುದನ್ನು ನಾವು ತಿಳಿಯಬೇಕಾಗಿದೆ. ಈ ಪ್ರದೇಶದಲ್ಲಿ ಗೊರಸುಗಳ ಮತ್ತು ರಥಚಕ್ರಗಳ ಗುರುತುಗಳು ಅಚ್ಚಳಿಯದಂತಿವೆ. ರಕ್ತದ ತೊಟ್ಟುಗಳಿಂದಲೂ ಈ ಪ್ರದೇಶವು ನೆನೆದುಹೋಗಿದೆ. ಈ ಸ್ಥಳದಲ್ಲಿ ಭಯಂಕರವಾದ ಯುದ್ಧವು ನಡೆದಿರುವುದೇನೋ ನಿಜ. ಆದರೆ ಇಲ್ಲಿ ಒಂದೇ ರಥವು ಓಡಾಡಿರುವಂತೆ ಕಾಣುತ್ತಿದೆ. ಎರಡು ರಥಗಳು ಓಡಾಡಿರುವ ಚಿಹ್ನೆಯಿಲ್ಲ. ಆದುದರಿಂದ ಈ ಯುದ್ಧವು ಒಬ್ಬನದೇ ಆಗಿರಬಹುದು. ಇಬ್ಬರು ಎರಡು ರಥಗಳಲ್ಲಿ ಕುಳಿತು ಪರಸ್ಪರವಾಗಿ ಯುದ್ಧಮಾಡಿರುವ ಕುರುಹುಗಳು ನಮಗಿಲ್ಲಿ ಕಾಣುವುದಿಲ್ಲ. ಮಹಾಸೈನ್ಯವೊಂದು ಸಂಚಾರಮಾಡಿರುವ ಹೆಜ್ಜೆಗಳ ಗುರುತುಗಳನ್ನೂ ನಾವಿಲ್ಲಿ ಕಾಣುತ್ತಿಲ್ಲ. ಆದುದರಿಂದ ಸೀತೆಯನ್ನು ಅಪಹರಿಸಿಕೊಂಡು ಹೋಗಲು ಬಂದಿದ್ದವನು ಒಬ್ಬನೇ ಎಂದು ನಮಗೆ ಇದರಿಂದ ಸ್ಪಷ್ಟವಾಗುತ್ತದೆ. ಒಬ್ಬನು ಮಾಡಿದ ಅಪರಾಧಕ್ಕಾಗಿ ನೀನು ಲೋಕವನ್ನೇ ವಿನಾಶಗೊಳಿಸುವುದು ನಿನಗೆ ಉಚಿತವಾಗಿ ಕಾಣುವುದಿಲ್ಲ. ರಘುವಂಶದ ರಾಜರು ಯಾವಾಗಲೂ ಅಪರಾಧಕ್ಕೆ ತಕ್ಕುದಾದ ಶಿಕ್ಷೆಯನ್ನು ಕೊಡತಕ್ಕವರೆಂದು ಪ್ರಸಿದ್ಧರಾಗಿದ್ದಾರೆ. ಅವರೆಲ್ಲರೂ ಮೃದುಸ್ವಭಾವದವರಾಗಿದ್ದರು. ಸರ್ವದಾ ಶಾಂತಚಿತ್ತರಾಗಿರುತ್ತಿದ್ದರು. ಕೋಪಕ್ಕೆ ಆಶ್ರಯವನ್ನು ಕೊಡುತ್ತಿರಲಿಲ್ಲ. ಅದೇ ರೀತಿಯಲ್ಲಿ ನೀನು ಕೂಡ ಮೃದುಸ್ವಭಾವದವನಾಗಿದ್ದು ಎಲ್ಲ ಕಾಲಗಳಲ್ಲಿಯೂ ಪ್ರಾಣಿಗಳಿಗೆ ಶರಣ್ಯನೂ ಶ್ರೇಷ್ಠವಾದ ಆಶ್ರಯನೂ ಆಗಿರುವೆ.

ಅಣ್ಣ! ಒಬ್ಬನ ಭಾರ್ಯೆಯು ವಿನಾಶಹೊಂದುವುದನ್ನು ಯಾವನು ತಾನೇ–'ಸಾಧು'–ಎನ್ನುತ್ತಾನೆ? ಯಜ್ಞದೀಕ್ಷಿತನಾಗಿರತಕ್ಕವನಿಗೆ ಅಪ್ರಿಯವಾದ ಕಾರ್ಯವನ್ನು ಮಾಡಲು ಸತ್ಪುರುಷರಿಗೆ ಸಾಧ್ಯವಾಗದಂತೆ–ಉದಾರಶೀಲನಾದ ನಿನಗೆ ಅಪ್ರಿಯವಾಗುವ ಕಾರ್ಯವನ್ನು ಮಾಡಲು ನದ-ನದೀ-ಸಮುದ್ರ-ಪರ್ವತಗಳಾಗಲೀ, ದೇವ-ಗಂಧರ್ವ-ದಾನವರಾಗಲೀ ಖಂಡಿತ

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.


ವಾಗಿಯೂ ಸಮರ್ಥರಲ್ಲ. ನಿನಗೆ ಯಾರೂ ಕೇಡನ್ನು ಬಯಸರು. ಆದುದರಿಂದ ನಿರಪರಾಧಿಗಳ ವಿಷಯದಲ್ಲಿ ನಿನ್ನ ಕೋಪವನ್ನು ದೂರಮಾಡು. ನನ್ನ ಸಹಾಯವನ್ನೂ ಮತ್ತು ಮಹರ್ಷಿಗಳ ಸಹಾಯವನ್ನೂ ಪಡೆದು ಸೀತೆಯನ್ನು ಕದ್ದಿರುವವನನ್ನು ಹುಡುಕಲು ಪ್ರಯತ್ನಿಸುವುದು ಸಮಯೋಚಿತವಾಗಿ ಕಾಣುತ್ತದೆ. ನಾವು ಏಕಾಗ್ರಚಿತ್ತರಾಗಿ ಸಮುದ್ರವನ್ನು ಹೊಕ್ಕು ಅಲ್ಲಿಯೂ ಸೀತೆಯನ್ನು ಹುಡುಕೋಣ. ಪರ್ವತಗಳಲ್ಲಿಯೂ, ಅಲ್ಲಿನ ಗುಹೆಗಳಲ್ಲಿಯೂ, ಅರಣ್ಯಗಳಲ್ಲಿಯೂ, ಸರೋವರಗಳ ಸಮೀಪದಲ್ಲಿಯೂ ಸುತ್ತಾಡಿ ಸೀತೆಯನ್ನು ಹುಡುಕೋಣ. ದೇವ-ಗಂಧರ್ವಲೋಕಗಳಿಗೆ ಹೋಗಿ ಅಲ್ಲಿಯೂ ಕದ್ದವನನ್ನು ಹುಡುಕೋಣ. ಅಲ್ಲೆಲ್ಲಾ ಹುಡುಕಿದ ನಂತರವೂ ಸಿಕ್ಕದಿದ್ದರೆ–ಸಾಮೋಪಾಯದಿಂದ ಲೋಕನಾಯಕರು ನಿನ್ನ ಪತ್ನಿಯನ್ನು ನಿನಗೆ ತಂದೊಪ್ಪಿಸದಿದ್ದರೆ – ಅನಂತರ ನೀನು ವಿಶ್ವವಿನಾಶಕ್ಕೆ ಕಾಲವು ಸನ್ನಿಹಿತವಾಗಿರುವುದೆಂಬುದನ್ನು ನಿಶ್ಚಯಿಸಿ, ದಂಡೋಪಾಯವನ್ನು ಕೈಗೊಳ್ಳಬಹುದಾಗಿದೆ.

ನರೇಂದ್ರನೇ! ಸೌಶೀಲ್ಯದಿಂದಲೂ, ಮೃದುವಾದ ಮಾತಿನಿಂದಲೂ, ವಿನಯದಿಂದಲೂ, ಸುಪ್ರಯುಕ್ತವಾದ ನೀತಿಯಿಂದಲೂ ಸೀತಾದೇವಿಯನ್ನು ಪಡೆಯಲು ಸಾಧ್ಯವಾಗದಿದ್ದರೆ ಸುವರ್ಣಮಯವಾದ ಮೂಲಭಾಗವುಳ್ಳ ಮಹೇಂದ್ರನ ವಜ್ರಾಯುಧಕ್ಕೆ ಸಮಾನವಾದ ಬಾಣಗಳ ಸಮೂಹಗಳಿಂದ ವಿಶ್ವವನ್ನೇ ವಿನಾಶಗೊಳಿಸಬಹುದಾಗಿದೆ."

ಒಜನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ ೬೬ನೆಯ ಸರ್ಗ

## ಲಕ್ಷ್ಮಣನು ಶ್ರೀರಾಮನನ್ನು ಸಮಾಧಾನಗೊಳಿಸಿದುದು

ತಂ ತಥಾ ಶೋಕಸಂತಪ್ತಂ ವಿಲಪಸ್ತಮನಾಥವತ್ ।
ಮೋಹೇನ ಮಹತಾವಿಷ್ಟಂ ಪರಿದ್ಯೂನಮಚೇತನಮ್ ॥೧॥

ತತಃ ಸೌಮಿತ್ರಿರಾಶ್ವಾಸ್ಯ ಮುಹೂರ್ತಾದಿವ ಲಕ್ಷ್ಮಣಃ ।
ರಾಮಂ ಸಂಬೋಧಯಾಮಾಸ ಚರಣೌ ಚಾಭಿಪೀಡಯನ್ ॥೨॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

ಈ ರೀತಿಯಲ್ಲಿ ಶೋಕಸಂತಪ್ತನಾಗಿದ್ದ, ಅನಾಥನಂತೆ ಗೋಳಾಡು ತ್ತಿದ್ದ, ಮೋಹಪರವಶನಾಗಿದ್ದ, ಅತ್ಯಂತದುರ್ಬಲನಾಗಿದ್ದ, ಚಿತ್ತಸ್ವಾಸ್ಥ್ಯ ವನ್ನು ಕಳೆದುಕೊಂಡಿದ್ದ ಶ್ರೀರಾಮನನ್ನು ಸೌಮಿತ್ರಿಯು ಮುಹೂರ್ತಕಾಲದ ವರೆಗೆ ನಯ-ವಿನಯಯುಕ್ತವಾದ ಮಾತುಗಳನ್ನು ಹೇಳಿ ಸಮಾಧಾನಗೊಳಿ ಸುತ್ತಾ ಕಾಲುಗಳೆರಡನ್ನೂ ಒತ್ತುತ್ತಾ ಹೇಳಿದನು :

"ರಾಘವ! ದೇವತೆಗಳು ಬಹಳ ಕಷ್ಟದಿಂದ ಅಮೃತವನ್ನು ಪಡೆದುಕೊಂಡಂತೆ-ನಮ್ಮ ತಂದೆಯಾದ ದಶರಥನು ಮಹಾತಪಸ್ಸನ್ನೂ, ಕಷ್ಟ ಸಾಧ್ಯವಾದ ಪುತ್ರಕಾಮೇಷ್ಟಿಯೇ ಮೊದಲಾದ ಯಾಗಗಳನ್ನೂ ಮಾಡಿ ಮಹಾಮಹಿಮನಾದ ನಿನ್ನನ್ನು ಪಡೆದುಕೊಂಡನು. ಭರತನೇ ನಮ್ಮ ಬಳಿಗೆ ಬಂದಾಗ ಹೇಳಿದಂತೆ ನಿನ್ನ ಸೌಶೀಲ್ಯಾದಿಗುಣಗಳಿಂದ ಬಂಧಿಸ ಲ್ಪಟ್ಟಿದ್ದ ನಮ್ಮ ತಂದೆಯು ನಿನ್ನ ವಿಯೋಗವಾದೊಡನೆಯೇ ಅಮರತ್ವವನ್ನು ಹೊಂದಿದನು. ರಾಮಭದ್ರ! ಸಕಲಗುಣಪರಿಪೂರ್ಣನಾದ ನೀನೇ ತಾತ್ಕಾಲಿಕವಾಗಿ ಪ್ರಾಪ್ತವಾಗಿರುವ ಸೀತಾವಿಯೋಗದುಃಖವನ್ನು ಸಹಿಸಿ ಕೊಳ್ಳದಿದ್ದರೆ-ಅಲ್ಪಬಲವುಳ್ಳ ಸಾಮಾನ್ಯಮನುಷ್ಯನೊಬ್ಬನು ಇಂತಹ ದುಃಖ ಗಳನ್ನು ಹೇಗೆತಾನೇ ಸಹಿಸಿಕೊಳ್ಳುವನು? *

ಅಣ್ಣ! ಸಮಾಧಾನವನ್ನು ತಂದುಕೋ. ಪ್ರಾಣಿಮಾತ್ರದವನಾದ ಯಾವನಿಗೆ ತಾನೇ ಆಪತ್ತು ಸಂಭವಿಸುವುದಿಲ್ಲ? ಪ್ರಪಂಚದಲ್ಲಿ ಹುಟ್ಟಿರುವ ಎಲ್ಲ ಪ್ರಾಣಿಗಳಿಗೂ ಒಂದಲ್ಲ ಒಂದು ಸಮಯದಲ್ಲಿ ಆಪತ್ತು ಬಂದೇಬರು ತ್ತದೆ. ಆದರೆ ಆಪತ್ತುಗಳೊಂದೂ ಶಾಶ್ವತವಾಗಿ ಇದ್ದು ಬಿಡುವುದಿಲ್ಲ. ಅಗ್ನಿಯ ಸ್ಪರ್ಶದಂತೆ ಸ್ವಲ್ಪ ಬಿಸಿಯನ್ನು ಮುಟ್ಟಿಸಿ ಕೆಲವು ದಿವಸಗಳಲ್ಲಿಯೇ

---

* ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋ ಜನಃ – ಎಂಬಂತೆ ಶ್ರೇಷ್ಠರಾದವರು ಹೇಗೆ ವ್ಯವಹರಿಸುತ್ತಾರೆಯೋ ಇತರರೂ ಅದನ್ನೇ ಅನುಸರಣೆ ಮಾಡುತ್ತಾರೆ. ಶ್ರೇಷ್ಠ ರಾದವರು ಅತ್ಯಂತಕಷ್ಟಸಮಯದಲ್ಲಿ ಸಂಯಮದಿಂದ ವರ್ತಿಸಿದರೆ ಇತರರಿಗೆ ಅದೇ ಮಾರ್ಗದರ್ಶನವಾಗುತ್ತದೆ. ನಾಯಕನೇ ಧೃತಿಗೆಟ್ಟರೆ ಅನುಯಾಯಿಗಳು ಪಲಾಯನ ವನ್ನೇ ಮಾಡುತ್ತಾರೆ. ಆದುದರಿಂದ ಧೀರೋದಾತ್ತನಾದ ಶ್ರೀರಾಮನು ಯಾವುದೇ ಕಾರಣದಿಂದಲೂ ಧೃತಿಗೆಡಬಾರದು; ಸಹನೆಯನ್ನು ಕಳೆದುಕೊಳ್ಳಬಾರದು—ಎಂಬುದು ಲಕ್ಷ್ಮಣನ ಅಭಿಪ್ರಾಯವಾಗಿದೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ನಿರಸನಗೊಳ್ಳುತ್ತವೆ. ಆದುದರಿಂದ ವಿವೇಕಿಗಳಾದವರು ಆಪತ್ತು ಬಂದಾಗ ಧೃತಿಗೆಡಬಾರದು.* ಭಾರ್ಯಾವಿರಹಶೋಕದಿಂದ ದುಃಖಿತನಾಗಿರುವ ನೀನು ಕೋಪಾಗ್ನಿಯಿಂದ ಪ್ರಪಂಚವನ್ನೇ ದಹಿಸಿಬಿಟ್ಟರೆ ಅದರಿಂದ ಪೀಡಿತರಾಗುವ ಜನರು ಮತ್ತೆಲ್ಲಿ ಸುಖ-ಶಾಂತಿಗಳನ್ನು ಪಡೆದುಕೊಳ್ಳುತ್ತಾರೆ? ಆಪತ್ತಿನಲ್ಲಿ ಸಿಕ್ಕಿಕೊಳ್ಳುವುದು ಮತ್ತು ಅದರಿಂದ ದುಃಖಪಡುವುದು ಎಂಬುದು ಈಗಿನದಲ್ಲ. ಅನಾದಿಕಾಲದಿಂದಲೂ ಇದು ಹೀಗೆಯೇ ನಡೆದುಕೊಂಡು ಬಂದಿದೆ. ಲೋಕದ ಸ್ವಭಾವವೇ ಈ ರೀತಿಯಾಗಿದೆ. ನಿದರ್ಶನಗಳೆಂದರೆ: ಯಯಾತಿಯು ನಹುಷಚಕ್ರವರ್ತಿಯ ಮಗನು. ಅವನು ಈ ಲೋಕದಲ್ಲಿ ವೈಭವದಿಂದ ರಾಜ್ಯವಾಳುತ್ತಿದ್ದು ಸ್ವರ್ಗದಲ್ಲಿಯೂ ಇಂದ್ರನಿಗೆ ಸಮಾನನಾಗಿ ಸುಖ-ಭೋಗಗಳನ್ನು ಅನುಭವಿಸಿಕೊಂಡಿದ್ದನು. ಅಂತಹವನಿಗೂ ದುಃಖರೂಪವಾದ ಅಜ್ಞಾನವು ಆವರಿಸಿತು. ಸ್ವರ್ಗದಿಂದ ಭ್ರಷ್ಟನಾಗಿ ಕೆಳಕ್ಕೆ ಬಿದ್ದನು. ನಮ್ಮ ತಂದೆಯ ಪುರೋಹಿತರಾದ ವಸಿಷ್ಠಮಹರ್ಷಿಗಳು ಮಹಾಜ್ಞಾನಿಗಳು. ಅವರಿಗೂ ಆಪತ್ತು ತಪ್ಪಲಿಲ್ಲ. ಅವರಿಗೆ ನೂರು ಮಂದಿ ಮಕ್ಕಳಿದ್ದರು. ಅವರೆಲ್ಲರೂ ಒಂದೇ ದಿನ ವಿಶ್ವಾಮಿತ್ರನ ಶಾಪದಿಂದ ಹತರಾದರು. ಈ ಭೂದೇವಿಯು ಜಗತ್ತುಗಳಿಗೇ ತಾಯಿಯಾಗಿರತಕ್ಕವಳು. ಸರ್ವಲೋಕಗಳಿಂದಲೂ, ಸರ್ವಕಾಲಗಳಲ್ಲಿಯೂ ನಮಸ್ಕರಿಸಲ್ಪಡತಕ್ಕವಳು. ಇಂತಹವಳಿಗೂ ಆಪತ್ತೆಂಬುದು ತಪ್ಪಿದ್ದಲ್ಲ. ಆಗಿಂದಾಗ್ಗೆ ಕಂಪಿಸುತ್ತಲೇ ಇರುತ್ತಾಳೆ. ಭೂಕಂಪವು ಆಗಿಂದಾಗ್ಗೆ ಆಗುತ್ತಲೇ ಇರುತ್ತದೆ. ಚಂದ್ರ-ಸೂರ್ಯರು ಪರಾವರಧರ್ಮಗಳ ಪ್ರವರ್ತಕರಾಗಿರುತ್ತಾರೆ. ಧರ್ಮಸ್ವರೂಪರೇ ಆಗಿರುತ್ತಾರೆ. ಜಗತ್ತಿನ ಸಕಲಸರ್ವಸ್ವವೂ ಅವರಲ್ಲಿಯೇ ಪ್ರತಿಷ್ಠಿತವಾಗಿದೆ. ಎಲ್ಲರಿಗೂ ಅವರೇ ಪರಮಾಶ್ರಯರು. ಅಂತಹವರಿಗೂ ಆಪತ್ತಿನಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ರಾಹು-

---

* ನ ಹ ವೈ ಶರೀರಸ್ಯ ಸತಃ ಪ್ರಿಯಾಪ್ರಿಯಯೋರಪಹತಿರಸ್ತಿ । ಸತ್ಪುರುಷನ ಶರೀರವು ಪ್ರಿಯ ಮತ್ತು ಅಪ್ರಿಯಗಳೆರಡರಿಂದಲೂ ಪರಿಣಾಮವನ್ನು ಹೊಂದುವುದಿಲ್ಲ. ಅರ್ಥಾತ್ ಹಿಗ್ಗುವುದೂ ಇಲ್ಲ; ಕುಗ್ಗುವುದೂ ಇಲ್ಲ ಎಂಬ ಶ್ರುತಿವಚನವೂ ಇದನ್ನೇ ಪ್ರತಿಪಾದಿಸುತ್ತದೆ.


CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಕೇತುಗಳಿಂದ ಆಕ್ರಮಿಸಲ್ಪಟ್ಟವರಾಗಿ ದುಃಖವನ್ನು ಆಗಿಂದಾಗ್ಗೆ ಅನು ಭವಿಸುತ್ತಲೇ ಇರುತ್ತಾರೆ. ದೊಡ್ಡ-ದೊಡ್ಡ ಪ್ರಾಣಿಗಳೇ ಆದರೂ ದೇವತೆ ಗಳೇ ಆದರೂ ವಿಧಿನಿಯಮದಿಂದ ತಪ್ಪಿಸಿಕೊಳ್ಳಲಾರವು. ಹೀಗಿರುವಾಗ ದೇಹಧಾರಿಗಳಾದ ಮನುಷ್ಯರ ವಿಷಯದಲ್ಲಿ ಹೇಳತಕ್ಕದ್ದೇನಿದೆ ?

ಇಂದ್ರನೇ ಮೊದಲಾದ ದೇವತೆಗಳಿಗೂ ನೀತಿ ಮತ್ತು ಅನೀತಿಗಳ ಕಾರಣದಿಂದಾಗಿ ಸುಖ-ದುಃಖಗಳು ಇದ್ದೇ ಇರುತ್ತವೆಂದು ನಾವು ಕೇಳಿದ್ದೇವೆ. ಆದುದರಿಂದ ಈಗ ನಿನಗೆ ಪ್ರಾಪ್ತವಾಗಿರುವ ದುಃಖಕ್ಕಾಗಿ ವ್ಯಥೆಪಡಬೇಡ. ವೈದೇಹಿಯು ಒಂದು ವೇಳೆ ನಷ್ಟಳಾಗಿಯೇ ಹೋಗಿದ್ದರೂ, ಅಪಹೃತಳೇ ಆಗಿದ್ದರೂ—ವೀರನಾದ ನೀನು ಸಾಮಾನ್ಯಮನುಷ್ಯರಂತೆ ದುಃಖಪಡುವುದು ಯೋಗ್ಯವಲ್ಲ. ಎಲ್ಲವನ್ನೂ ತಿಳಿದಿರುವ ಸರ್ವಜ್ಞರಾದ ನಿನ್ನಂತಹವರು ಇದಕ್ಕಿಂತಲೂ ಮಿಗಿಲಾದ ಕಷ್ಟಪರಿಸ್ಥಿತಿಯು ಒದಗಿಬಂದರೂ ಹೀಗೆ ಸತತ ವಾಗಿ ಶೋಕಪಡುತ್ತಲೇ ಇರುವುದಿಲ್ಲ. ಮುಖದ ಪ್ರಸನ್ನತೆಯನ್ನು ಕಳೆದು ಕೊಳ್ಳುವುದಿಲ್ಲ. ನರಶ್ರೇಷ್ಠನೇ! ಯುಕ್ತಾಯುಕ್ತತೆಗಳನ್ನೂ ಕರ್ತವ್ಯಾ ಕರ್ತವ್ಯಗಳನ್ನೂ ಯಥಾರ್ಥವಾದ ಬುದ್ಧಿಯಿಂದ ಸಮಾಲೋಚಿಸು. ನಿಶ್ಚಯವಾದ ಮತ್ತು ನಿರ್ಮಲವಾದ ಬುದ್ಧಿಯಿಂದ ಕೂಡಿರುವ ಪ್ರಾಜ್ಞರು ಶುಭಾಶುಭಗಳೆರಡನ್ನೂ ತಿಳಿದವರಾಗಿರುತ್ತಾರೆ. ಕರ್ಮಗಳು ಯಾವಾಗಲೂ ಪ್ರತ್ಯಕ್ಷವಾಗಿ ನೋಡಲು ಸಾಧ್ಯವಾಗದ ಸುಖ-ದುಃಖರೂಪವಾದ ಗುಣ-ದೋಷಗಳಿಂದ ಕೂಡಿರುತ್ತವೆ. ಅವು ಶಾಶ್ವತವಾಗಿರುವುದಿಲ್ಲ. ಯಾವ ಕರ್ಮದಿಂದ ಇಂತಹ ಫಲವು ಪ್ರಾಪ್ತಿಯಾಯಿತೆಂಬುದನ್ನು ದೃಢ ಪಡಿಸಿ ತಿಳಿಯಲು ಸಾಧ್ಯವಾಗುವುದಿಲ್ಲ. ಆದರೆ ಕರ್ಮಮಾಡದೇ ಇಷ್ಟ ಫಲವಾಗಲೀ ಅನಿಷ್ಟಫಲವಾಗಲೀ ಉಂಟಾಗುವುದಿಲ್ಲ. (ಆದುದರಿಂದ ನಾವು ಹಿಂದೆ ಮಾಡಿರುವ ಯಾವುದೋ ದುಷ್ಕರ್ಮದ ಫಲವನ್ನು ನಾವೀಗ ಅನು ಭವಿಸುತ್ತಿದ್ದೇವೆ.) ಹಿಂದೆ ನೀನೇ ನನಗೆ ಈ ವಿಷಯವನ್ನು ಹಲವು ಬಾರಿ ಹೇಳಿರುವೆ. ಅವನ್ನೇ ನಾನೀಗ ನಿನಗೆ ತಿಳಿಸುತ್ತಿದ್ದೇನೆ. ಅಷ್ಟು ಹೊರತಾಗಿ ಸಾಕ್ಷಾತ್ ಬೃಹಸ್ಪತಿಯೂ ಕೂಡ ಸರ್ವಜ್ಞನಾದ ನಿನಗೆ ಉಪದೇಶಮಾಡಲು ಸಮರ್ಥನಲ್ಲ. ಮಹಾಪ್ರಾಜ್ಞನೇ! ನಿನ್ನ ಬುದ್ಧಿಶಕ್ತಿಯು ಎಷ್ಟೆಂಬುದನ್ನು ತಿಳಿಯಲು ದೇವತೆಗಳಿಗೂ ಸಾಧ್ಯವಾಗುವುದಿಲ್ಲ. ಆದರೆ ಈ ಸಮಯದಲ್ಲಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ನಿನ್ನ ಪ್ರಜ್ಞೆಯು ಭಾರ್ಯಾವಿರಹಶೋಕದಿಂದಾಗಿ ಮಲಗಿ ನಿದ್ರಿಸುತ್ತಿದೆ. ಹಾಗೆ ಮಲಗಿರುವ ಪ್ರಜ್ಞೆಯನ್ನು ನಾನು ಎಚ್ಚರಗೊಳಿಸುತ್ತಿದ್ದೇನೆ. ನಿನ್ನ ದಿವ್ಯವಾದ ಪರಾಕ್ರಮವನ್ನು ಯಾರಲ್ಲಿ ತೋರಬೇಕು; ಮಾನುಷವಾದ ಪರಾಕ್ರಮವನ್ನು ಯಾವನಲ್ಲಿ ತೋರಬೇಕು-ಎಂಬುದನ್ನು ಪರಿಶೀಲಿಸಿ ಯಾರು ನಿಜವಾಗಿ ಶತ್ರುಗಳಾಗಿದ್ದಾರೆಯೋ ಅವರನ್ನು ಸಂಹರಿಸಲು ಪ್ರಯತ್ನಿಸು. ಅಣ್ಣಾ! ಪ್ರಪಂಚದಲ್ಲಿರುವ ಸಕಲಪ್ರಾಣಿಗಳನ್ನೂ ವಿನಾಶಮಾಡುವುದರಿಂದ ನಿನಗಾಗುವ ಲಾಭವಾದರೂ ಏನು? ಸೀತೆಯನ್ನು ಅಪಹರಿಸಿರುವ ಪಾಪಿಷ್ಠನಾದ ಆ ಶತ್ರುವು ಯಾರೆಂಬುದನ್ನು ತಿಳಿದು ಅವನನ್ನು ಸಂಹರಿಸುವುದು ಯೋಗ್ಯವಾಗಿದೆ."

೬೬ನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ ೬೭ನೆಯ ಸರ್ಗ

## ರಾಮ-ಲಕ್ಷ್ಮಣರು ಜಟಾಯುವನ್ನು ಸಂಧಿಸಿದುದು : ಶ್ರೀರಾಮನು ಜಟಾಯುವನ್ನು ಬಾಚಿತಬ್ಬಿಕೊಂಡು ಅತ್ತುದು

ಪೂರ್ವಜೋಽಪ್ಯುಕ್ತಮಾತ್ರಸ್ತು ಲಕ್ಷ್ಮಣೇನ ಸುಭಾಷಿತಮ್ ।
ಸಾರಗ್ರಾಹೀ ಮಹಾಸಾರಂ ಪ್ರತಿಜಗ್ರಾಹ ರಾಘವಃ ॥೧॥

ಮಾತಿನ ಸಾರವನ್ನು ಗ್ರಹಿಸುವುದರಲ್ಲಿ ನಿಷ್ಣಾತನಾದ ಶ್ರೀರಾಮನು, ಲಕ್ಷ್ಮಣನಿಗಿಂತಲೂ ಮೊದಲು ಹುಟ್ಟಿದವನೇ ಆದರೂ-ಮಹಾಸಾರಯುಕ್ತವಾಗಿದ್ದ, ಲಕ್ಷ್ಮಣನು ಹೇಳಿದ ಒಳ್ಳೆಯ ಮಾತನ್ನು ಅಂಗೀಕರಿಸಿದನು.*

---

* 'ದೊಡ್ಡವರು ಚಿಕ್ಕವರಿಗೆ ಹಿತೋಪದೇಶಗಳನ್ನು ಮಾಡಬೇಕು. ಚಿಕ್ಕವರು ವಿನೀತರಾಗಿ ಕೇಳಬೇಕು'-ಎಂಬುದು ಸಾಮಾನ್ಯನಿಯಮ. ಕೆಲವು ವೇಳೆ ಚಿಕ್ಕವರೇ ದೊಡ್ಡವರಿಗೆ ಹಿತವಾದ ಮಾತುಗಳನ್ನು ಅರಿಕೆಮಾಡಿಕೊಳ್ಳುವ ಸಂದರ್ಭಗಳೂ ಬರುತ್ತವೆ. ಅಂತಹ ಸಂದರ್ಭಗಳಲ್ಲಿ 'ದೊಡ್ಡವರಿಗೆ ಹಿತವಾದ ಮಾತುಗಳನ್ನು ಹೇಳುವುದು ಸೂಕ್ತವಲ್ಲ' ಎಂಬ ಸಾಮಾನ್ಯನಿಯಮವನ್ನೇ ಅನುಸರಿಸಿ ನಡೆದುಕೊಂಡರೆ ಅದರಿಂದಾಗುವ ದುಷ್ಪರಿಣಾಮಗಳನ್ನೂ ನೋಡಬೇಕಾಗುತ್ತದೆ. ಆದುದರಿಂದ ಸಾಧಾರಣ ನಿಯಮಕ್ಕೆ ಅಪಚಾರವಾದರೂ ಕೆಲವು ಸಮಯಗಳಲ್ಲಿ ದೊಡ್ಡವರಿಗೂ ಹಿತವಚನಗಳನ್ನು ಹೇಳುವುದೇ ಧರ್ಮವಾಗುತ್ತದೆ. ಹಾಗೆ ಹೇಳುವಾಗಲೂ ತನಗೆ ಹೆಚ್ಚಿನ ತಿಳಿವಳಿಕೆಯಿದೆ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಮಹಾಬಾಹುವಾದ ಶ್ರೀರಾಮನು ಉಕ್ಕೇರಿಬಂದಿದ್ದ ಕೋಪವನ್ನು ಉಡುಗಿಸಿ ಚಿತ್ರಧನುಸ್ಸನ್ನು ಊರೆಯಾಗಿಟ್ಟುಕೊಂಡು ಲಕ್ಷ್ಮಣನಿಗೆ ಹೇಳಿದನು :

"ವತ್ಸ ಲಕ್ಷ್ಮಣ ! ನೀನು ಹೇಳಿದ್ದು ಸರಿ. ಈಗೇನು ಮಾಡೋಣ ವೆಂಬುದನ್ನು ಹೇಳು. ಎಲ್ಲಿಗೆ ಹೋಗೋಣ ? ಯಾವ ಉಪಾಯದಿಂದ ಸೀತೆಯನ್ನು ನೋಡಲು ಸಾಧ್ಯವಾಗುತ್ತದೆ ?—ಈ ಎಲ್ಲ ವಿಷಯಗಳನ್ನೂ ವಿಚಾರ ಮಾಡಿ ಹೇಳು."

ಸೀತಾವಿಯೋಗದ ಪರಿತಾಪದಿಂದ ಬಹಳವಾಗಿ ಬಳಲಿದ್ದ ರಾಮನಿಗೆ ಲಕ್ಷ್ಮಣನು ಹೇಳಿದನು :

"ಅಣ್ಣ ! ಈ ಜನಸ್ಥಾನದಲ್ಲಿಯೇ ಸೀತೆಯನ್ನು ಹುಡುಕುವುದು ಯುಕ್ತವಾಗಿ ಕಾಣುತ್ತದೆ. ಏಕೆಂದರೆ: ಅನೇಕರಾಕ್ಷಸರು ಇನ್ನೂ ಇಲ್ಲಿಯೇ ವಾಸಮಾಡುತ್ತಿದ್ದಾರೆ. ಇಲ್ಲಿ ಅನೇಕಪರ್ವತಗಳೂ—ಹೋಗಲು ಅಸಾಧ್ಯವಾದ ಗಿರಿಯ ದುರ್ಗಮಸ್ಥಳಗಳೂ ಇವೆ. ದೊಡ್ಡ ದೊಡ್ಡ ಹಳ್ಳ-ಕೊಳ್ಳಗಳಿವೆ. ಪರ್ವತಗಳ ಕಂದರಗಳಿವೆ. ನಾನಾವಿಧವಾದ ಮೃಗಗಳಿಂದ ತುಂಬಿರುವ ಭಯಂಕರವಾದ ಗುಹೆಗಳಿವೆ. ಕಿನ್ನರರ ವಾಸಗೃಹಗಳಿವೆ. ಗಂಧರ್ವರು ವಾಸಮಾಡುವ ಭವನಗಳಿವೆ. ಈ ಎಲ್ಲ ಪ್ರದೇಶಗಳಲ್ಲಿಯೂ ನನ್ನೊಡನೆ ನೀನು ಸೀತೆಯನ್ನು ಹುಡುಕುವುದು ಯುಕ್ತವಾಗಿ ಕಾಣುತ್ತದೆ.

---

ಯೆಂದು ಭಾವಿಸಿಕೊಳ್ಳದೇ ವಿನೀತನಾಗಿಯೇ ಹೇಳಬೇಕು. ಲಕ್ಷ್ಮಣನ ರೀತಿಯನ್ನೇ ಅನುಸರಿಸಬೇಕು. 'ಸಂಬೋಧಯಾಮಾಸ ಚರಣೌ ಚಾಭಿಪೀಡಯನ್ । ಶ್ರೀರಾಮನ ಎರಡು ಕಾಲುಗಳನ್ನೂ ಗಟ್ಟಿಯಾಗಿ ಹಿಡಿದುಕೊಂಡು ಲಕ್ಷ್ಮಣನು ರಾಮನನ್ನು ಸಂಬೋಧಿಸಿ ಹೇಳುತ್ತಾನೆ.' 'ಮಹಾಸಾರಂ ಸುಭಾಷಿತಂ' ಎಂಬ ಪದಗಳು ಹೃದಯಂಗಮವಾಗಿವೆ. ಯುಕ್ತಿಯುಕ್ತಂ ವಚೋ ಗ್ರಾಹ್ಯಂ ಬಾಲಾದಪಿ ಶುಕಾದಪಿ ಎಂಬಂತೆ ಯುಕ್ತಿಯುಕ್ತವಾದ ಮಾತನ್ನು ಹುಡುಗರು ಹೇಳಿದರೂ ಗ್ರಹಿಸಬೇಕು ; ಗಿಳಿಯು ಹೇಳಿದರೂ ಕೇಳಬೇಕು. ಅವರಲ್ಲಿಯೂ ಮಹಾಸಾರಯುಕ್ತವಾದ ಸುಭಾಷಿತವೆಂದಮೇಲೆ ಹೇಳುವುದೇನಿದೆ ? ೬೬ನೆಯ ಸರ್ಗದಲ್ಲಿ ಲಕ್ಷ್ಮಣನು ಹೇಳಿರುವ ಆಪ್ತವಾಕ್ಯಗಳು ಮಹಾಸಾರಯುಕ್ತವಾದುವೆಂಬುದರಲ್ಲಿ ಸಂಶಯವೇ ಇಲ್ಲ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ತ್ವದ್ವಿಧಾ ಬುದ್ಧಿಸಂಪನ್ನಾ ಮಹಾತ್ಮಾನೋ ನರರ್ಷಭ ।
ಆಪತ್ಸು ನ ಪ್ರಕಮ್ಪನ್ತೇ ವಾಯುವೇಗೈರಿವಾಚಲಾಃ ॥೭॥

ವಾಯುವಿನ ರಭಸವಾದ ಸಂಚಲನದಿಂದ ಪರ್ವತವು ವಿಚಲಿತವಾಗುವುದಿಲ್ಲ. ಹಾಗೆಯೇ ಬುದ್ಧಿಸಂಪನ್ನರಾದ, ಮಹಾತ್ಮರಾದ ನಿನ್ನಂತಹ ಮಾನವಶ್ರೇಷ್ಠರು ಆಪತ್ಕಾಲಗಳಲ್ಲಿ ವಿಚಲಿತರಾಗುವುದಿಲ್ಲ.

ಇತ್ಯುಕ್ತಸ್ತದ್ವನಂ ಸರ್ವಂ ವಿಚಚಾರ ಸಲಕ್ಷ್ಮಣಃ ।
ಕ್ರುದ್ಧೋ ರಾಮಃ ಶರಂ ಘೋರಂ ಸಂಧಾಯ ಧನುಷಿ ಕ್ಷುರಮ್॥

ಕೋಪಗೊಂಡು ಧನುಸ್ಸಿಗೆ ಕ್ಷುರವೆಂಬ ಭಯಂಕರವಾದ ಬಾಣವನ್ನು ಹೂಡಿದ್ದ ಶ್ರೀರಾಮನು ಲಕ್ಷ್ಮಣನ ಮಾತುಗಳನ್ನು ಕೇಳಿ (ಸಮಾಧಾನಗೊಂಡು) ಆತನೊಡನೆ ಕಾಡಿನ ಎಲ್ಲ ಕಡೆಗಳಲ್ಲಿಯೂ ಸೀತೆಗಾಗಿ ಓಡಾಡಿದನು.*

ಹೀಗೆಯೇ ಸೀತೆಯನ್ನರಸುತ್ತಾ ರಾಮ-ಲಕ್ಷ್ಮಣರು ಹೋಗುತ್ತಿದ್ದಾಗ ಶ್ರೀರಾಮನು ಪರ್ವತಶೃಂಗಸದೃಶನಾದ, ಪಕ್ಷಿಶ್ರೇಷ್ಠನಾದ, ಪುಣ್ಯವಂತನಾದ, ರಕ್ತದಿಂದ ತೋಯ್ದು ನೆಲದಲ್ಲಿ ಬಿದ್ದಿದ್ದ ಜಟಾಯುವನ್ನು ನೋಡಿದನು. ಪರ್ವತದ ಶಿಖರದಂತೆಯೇ ಕಾಣುತ್ತಿದ್ದ ಅವನನ್ನು ನೋಡಿ ಲಕ್ಷ್ಮಣನಿಗೆ ಹೇಳಿದನು:

---

* ಈ ಶ್ಲೋಕವನ್ನು ಅನ್ವಯಿಸುವುದು ಸಂದರ್ಭಾನುಸಾರವಾಗಿ ಸ್ವಲ್ಪ ಕಷ್ಟವೇ ಆಗುತ್ತದೆ. ಇತ್ಯುಕ್ತಃ ರಾಮಃ ಕ್ರುದ್ಧಃ ಸನ್ ಘೋರಂ ಶರಂ ಧನುಷಿ ಸಂಧಾಯ ಸಲಕ್ಷ್ಮಣಃ ಸರ್ವಂ ವಿಚಚಾರ-ಲಕ್ಷ್ಮಣನಿಂದ ಹೀಗೆ ಹೇಳಲ್ಪಟ್ಟ ಶ್ರೀರಾಮನು ಕ್ರುದ್ಧನಾಗಿ ಕ್ಷುರವೆಂಬ ಘೋರವಾದ ಬಾಣವನ್ನು ಧನುಸ್ಸಿನಲ್ಲಿ ಅನುಸಂಧಾನಮಾಡಿಕೊಂಡೇ ಲಕ್ಷ್ಮಣನೊಡನೆ ಅವನು ಹೇಳಿದ ಎಲ್ಲ ಪ್ರದೇಶಗಳಲ್ಲಿಯೂ ಸಂಚರಿಸಿದನು-ಎಂಬುದು ಅನ್ವಯಾನುಕ್ರಮವಾದ ಅರ್ಥವಾಗುತ್ತದೆ. ಆದರೆ ಇದೇ ಸರ್ಗದ ಎರಡನೆಯ ಶ್ಲೋಕದಲ್ಲಿ 'ಆತ್ಮನಃ ರೋಷಂ ನಿಗೃಹ್ಯ' ತನ್ನ ಮನಸ್ಸಿನ ಕೋಪವನ್ನು ನಿಗ್ರಹಿಸಿ ಅರ್ಥಾತ್ ಶಾಂತನಾಗಿ-ಎಂದು ಸ್ಪಷ್ಟವಾಗಿದೆ. ಮುಂದೆ ಶ್ರೀರಾಮನ ಮಾತುಗಳೂ ಸಾಂತ್ವನದ ಮಾತುಗಳೇ ಆಗಿವೆ. ಲಕ್ಷ್ಮಣನೂ ಶ್ರೀರಾಮನಿಗೆ ಕೋಪಬರುವಂತಹ ಯಾವ ಮಾತುಗಳನ್ನೂ ಆಡುವುದಿಲ್ಲ. ಹೀಗಿರುವಾಗ ರಾಮನು ಕೋಪಗೊಂಡುದೇಕೆ? ಒಬ್ಬ ವ್ಯಾಖ್ಯಾನಕಾರರು ಸೀತಾಯಾಃ ಅದರ್ಶನಾತ್ ಕ್ರೋಧಃ-ಸೀತೆಯನ್ನು ಕಾಣದೇ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

**ಅನೇನ ಸೀತಾ ವೈದೇಹೀ ಭಕ್ಷಿತಾ ನಾತ್ರ ಸಂಶಯಃ ।**

"ಲಕ್ಷ್ಮಣ ! ಇವನೇ ಸೀತೆಯನ್ನು ತಿಂದುಹಾಕಿದ್ದಾನೆ. ಇದರಲ್ಲಿ ಸಂದೇಹವೇ ಇಲ್ಲ. ಇದು ಹದ್ದಿನ ರೂಪದಲ್ಲಿರುವುದೇ ಹೊರತು ನಿಜವಾದ ಹದ್ದಲ್ಲ. ಗೃಧ್ರರೂಪವನ್ನು ಧರಿಸಿರುವ ರಾಕ್ಷಸನಿವನು. ಯಾವಾಗಲೂ ಅರಣ್ಯದಲ್ಲಿ ಸಂಚರಿಸುತ್ತಿರುತ್ತಾನೆ. ವಿಶಾಲಾಕ್ಷಿಯಾದ ಸೀತೆಯನ್ನು ತಿಂದುಹಾಕಿ ಸುಖವಾಗಿ ಮಲಗಿದ್ದಾನೆ. ಇವನನ್ನೀಗಲೇ ಪ್ರದೀಪ್ತವಾದ ಅಗ್ರಭಾಗಗಳುಳ್ಳ, ನೇರವಾಗಿ ಹೋಗುವ ಘೋರವಾದ ಬಾಣಗಳಿಂದ ಸಂಹರಿಸಿಬಿಡುತ್ತೇನೆ."

ಕ್ರುದ್ಧನಾಗಿದ್ದ ಶ್ರೀರಾಮನು ಲಕ್ಷ್ಮಣನೊಡನೆ ಹೀಗೆ ಹೇಳಿ ಸಮುದ್ರಾಂತವಾದ ಭೂಮಿಯನ್ನೇ ನಡುಗಿಸಿಬಿಡುವನೋ ಎಂಬಂತೆ ಕ್ಷುರವೆಂಬ ಬಾಣವನ್ನು ಧನುಸ್ಸಿನಲ್ಲಿ ಅನುಸಂಧಾನಮಾಡಿ ಆ ಪಕ್ಷಿಯನ್ನು ಹತ್ತಿರದಿಂದಲೇ ನೋಡುವ ಆಸೆಯಿಂದ ಅದರ ಬಳಿಗೆ ಹೋದನು. ಶ್ರೀರಾಮನನ್ನು ನೋಡುತ್ತಲೇ ನೊರೆಯಿಂದ ಕೂಡಿದ ರಕ್ತವನ್ನೇ ಕಕ್ಕುತ್ತಿದ್ದ ಆ ಪಕ್ಷಿಯು ಸೀತಾವಿಯೋಗದುಃಖದಿಂದ ದೀನನಾಗಿದ್ದ ಶ್ರೀರಾಮನೊಡನೆ ಕ್ಷೀಣಿಸಿದ ಮಾತಿನಿಂದ ಹೇಳಿತು :

"ಆಯುಷ್ಮಂತನೇ ! ಸಂಜೀವಿನಿಯಂತಹ ಓಷಧೀಲತೆಗಳನ್ನು ಹುಡುಕುವ ರೀತಿಯಲ್ಲಿ ನೀನು ಯಾವಳನ್ನು ಗಿರಿ-ದುರ್ಗ-ಕಂದರಗಳಲ್ಲಿಯೂ, ನದೀ-ನದಗಳ ತೀರಗಳಲ್ಲಿಯೂ, ಅರಣ್ಯಗಳಲ್ಲಿಯೂ ಹುಡುಕುತ್ತಿರುವೆಯೋ

---

ಇದ್ದುದರಿಂದ ಕೋಪಬಂದಿತು–ಎಂದು ಅರ್ಥಮಾಡಿದ್ದಾರೆ. ಎಲ್ಲೆಲ್ಲಿ ಹುಡುಕಿದರೂ ಸೀತೆಯು ಸಿಕ್ಕದೇ ಇದ್ದುದರಿಂದ ಕೋಪಬರುವುದು ಸಹಜವಾಗಿಯೇ ಇದೆ. ಆದರೆ ಹೀಗೆ ಅರ್ಥಮಾಡಲು 'ಲಕ್ಷ್ಮಣೇನ ಸಹ ಸರ್ವಂ ವಿಚಚಾರ ಎಂದಾದಮೇಲೆ ಸೀತಾಯಾಃ ಅದರ್ಶನಾತ್' ಎಂಬ ಪದಗಳನ್ನು ಅಧ್ಯಾಹಾರಮಾಡಿಕೊಳ್ಳಬೇಕಾಗುವುದು. ಅಥವಾ ಘೋರಂ ಕ್ಷುರಂ ಧನುಷಿ ಸಂಧಾಯ ಸಲಕ್ಷ್ಮಣಃ ಸರ್ವಂ ವಿಚಚಾರ–ಘೋರವಾದ ಕ್ಷುರವೆಂಬ ಬಾಣವನ್ನು ಧನುಸ್ಸಿನಲ್ಲಿ ಅನುಸಂಧಾನಮಾಡಿಕೊಂಡೇ ಲಕ್ಷ್ಮಣಸಹಿತನಾಗಿ ಎಲ್ಲ ಪ್ರದೇಶಗಳಲ್ಲಿಯೂ ಸಂಚಾರಮಾಡಿದನು ಎಂದು ಅನ್ವಯಾನುಸಾರವಾಗಿ ಅರ್ಥಮಾಡಿ ಸೀತಾಯಾಃ ಅದರ್ಶನಾತ್ ಎಲ್ಲಿಯೂ ಸೀತೆಯನ್ನು ಕಾಣದೇ ರಾಮಃ ಕ್ರುದ್ಧೋ ಬಭೂವ ರಾಮನು ಕ್ರುದ್ಧನಾದನು. ಬಭೂವ ಎಂಬ ಪದವನ್ನು ಅಧ್ಯಾ

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

ಆ ಸೀತಾದೇವಿಯನ್ನು ನನ್ನ ಪ್ರಾಣಗಳೊಡನೆ ರಾವಣನು ಅಪಹರಿಸಿಕೊಂಡು ಹೋದನು. ನೀನು ಮತ್ತು ಲಕ್ಷ್ಮಣನು ಆಶ್ರಮದಲ್ಲಿಲ್ಲದಿದ್ದಾಗ ಏಕಾಕಿನಿಯಾಗಿದ್ದ ಸೀತಾದೇವಿಯನ್ನು ಬಲಿಷ್ಠನಾದ ರಾವಣನು ಎಳೆದುಕೊಂಡು ಹೋಗುತ್ತಿದ್ದುದನ್ನು ನಾನು ನೋಡಿದೆನು. ಒಡನೆಯೇ ಸೀತಾದೇವಿಯನ್ನು ರಕ್ಷಿಸುವ ಸಲುವಾಗಿ ಅವಳ ಬಳಿಗೆ ಧಾವಿಸಿದೆನು. ಅವಳನ್ನು ರಾವಣನಿಂದ ಬಿಡಿಸಿಕೊಳ್ಳಲು ನಾನು ರಾವಣನೊಡನೆ ಯುದ್ಧ ಮಾಡಿದೆನು. ಅವನ ಛತ್ರ-ಚಾಮರಾದಿಗಳನ್ನೂ ಮತ್ತು ಸಂಗ್ರಾಮರಥವನ್ನೂ ಧ್ವಂಸಮಾಡಿದೆನು. ಕಡೆಗೆ ನನ್ನಿಂದ ಗಾಯಗೊಳಿಸಲ್ಪಟ್ಟ ರಾವಣನು ಭೂಮಿಯ ಮೇಲೆ ಬಿದ್ದನು. ರಾಮ! ಇದೋ ನೋಡು! ಇದೇ ಅವನ ಮುರಿದುಹೋಗಿರುವ ಧನುಸ್ಸು. ಅವನು ಬಿಟ್ಟ ಬಾಣಗಳು ಇಲ್ಲೆಲ್ಲಾ ಹರಡಿದಂತೆ ಬಿದ್ದಿವೆ. ಇದೇ ಅವನ ಸಂಗ್ರಾಮರಥ. ಮುರಿದು ಬಿದ್ದಿದೆ. ಇಲ್ಲಿ ಸತ್ತುಬಿದ್ದಿರುವವನೇ ಅವನ ಸಾರಥಿ. ರೆಕ್ಕೆಗಳಿಂದ ಅಪ್ಪಳಿಸಿ ನಾನಿವನನ್ನು ಸಂಹರಿಸಿದೆನು. ರಾವಣನೊಡನೆ ಏಕಾಕಿಯಾಗಿ ಯುದ್ಧಮಾಡಿದ ನಾನು ಬಹಳ ಆಯಾಸಗೊಂಡೆನು. ಇದನ್ನು ಗಮನಿಸಿದ ರಾವಣನು ನನ್ನೆರಡು ರೆಕ್ಕೆಗಳನ್ನೂ ಕತ್ತಿಯಿಂದ ಕತ್ತರಿಸಿ ಸೀತೆಯನ್ನೆತ್ತಿಕೊಂಡು ಆಕಾಶಕ್ಕೆ ಹಾರಿಬಿಟ್ಟನು. ರೆಕ್ಕೆಗಳನ್ನು ಕಳೆದುಕೊಂಡ ನಾನು ಅಸಹಾಯನಾದೆನು. ಸೀತೆಯನ್ನು ಬಿಡಿಸಿಕೊಳ್ಳಲೂ ಸಾಧ್ಯವಾಗಲಿಲ್ಲ.

---

ಹಾರ ಮಾಡಿಕೊಳ್ಳಬೇಕಾಗುತ್ತದೆ. ಮಧ್ಯದಲ್ಲಿರುವ ಕ್ರುದ್ಧಃ ಎಂಬ ಪದವನ್ನು ಬೇರೆ ಮಾಡಿ ಪ್ರತ್ಯೇಕವಾಕ್ಯ ಮಾಡಬೇಕಾಗುತ್ತದೆ. ಇದನ್ನು ವಾಕ್ಯಭೇದದೋಷವೆನ್ನುತ್ತಾರೆ. ಒಬ್ಬ ವ್ಯಾಖ್ಯಾನಕಾರರು ಈ ತೊಂದರೆಯನ್ನು ತಪ್ಪಿಸಲು ಕ್ರುದ್ಧಃ = ಕ್ರುಧಂ ಜಹಾತಿ ಸಃ = ತ್ಯಕ್ತಕೋಪಃ ರಾಮಃ। ಕೋಪವನ್ನು ಪರಿತ್ಯಜಿಸಿದ ರಾಮನು ಎಂದು ಕ್ರುದ್ಧ ಪದಕ್ಕೆ ಸ್ವಾರಸ್ಯವಾದ ವ್ಯುತ್ಪತ್ತಿ ಮಾಡಿರುತ್ತಾರೆ. ಆದರೆ ಕ್ರುಧಂ ಜಹಾತಿ ಎಂಬ ವ್ಯುತ್ಪತ್ತಿಯಿಂದ ಕ್ರುದ್ಧಶಬ್ದದ ನಿಷ್ಪತ್ತಿಯಾಗುವುದಾದರೂ ಇದು ಸರ್ವಗ್ರಾಹ್ಯವಾಗುವುದಿಲ್ಲ. ವೈದುಷ್ಯಪ್ರದರ್ಶಕವಾಗುತ್ತದೆ. ಕ್ರುದ್ಧೋ ರಾಮಃ ಎಂಬ ಉತ್ತರಾರ್ಧವಿಲ್ಲದಿದ್ದರೆ ಕಥೆಯು ಸಮಂಜಸವಾಗಿ ಹೊಂದಿಕೊಳ್ಳುತ್ತದೆ. ಆದರೆ ಎಲ್ಲ ಪುಸ್ತಕಗಳಲ್ಲಿಯೂ ಹೀಗೆಯೇ ಪಾಠವಿದೆ. ನಾವು ಕೊಟ್ಟಿರುವ ಅರ್ಥವು ಸಂದರ್ಭಕ್ಕೆ ಹೊಂದಿಕೊಳ್ಳುತ್ತದೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ರಾಘವ! ರಾಕ್ಷಸನು ಈ ಮೊದಲೇ ನನ್ನನ್ನು ಸಂಹರಿಸಿಬಿಟ್ಟಿದ್ದಾನೆ. ಪುನಃ ನೀನೂ ನನ್ನನ್ನು ಕೊಲ್ಲಲು ಉದ್ಯುಕ್ತನಾಗುವುದು ಸರಿಯಲ್ಲ."

ಜಟಾಯುವಿನ ದಾರುಣವಾದ ವೃತ್ತಾಂತವನ್ನು ಕೇಳಿ ಶ್ರೀರಾಮನ ಮುಖವು ಕಣ್ಣೀರಿನಿಂದ ತುಂಬಿಹೋಯಿತು.



ಶ್ರೀರಾಮನು ತನಗೆ ಅತಿಪ್ರಿಯವಾಗಿದ್ದ ಸೀತೆಯ ವೃತ್ತಾಂತವನ್ನೇನೋ ಕೇಳಿದನು. ಆದರೆ ರಾವಣನು ಸೀತೆಯನ್ನು ಅಪಹರಿಸಿಕೊಂಡು ಹೋದನೆಂಬ ವಾರ್ತೆಯನ್ನೂ ಮತ್ತು ಜಟಾಯುವು ತನಗಾಗಿ ಪ್ರಾಣಾರ್ಪಣೆಮಾಡಿದ ವಿಷಯವನ್ನೂ ಕೇಳಿ ಶ್ರೀರಾಮನ ದುಃಖವು ಇಮ್ಮಡಿಯಾಯಿತು. ಧನುಸ್ಸನ್ನು ಬದಿಗಿಟ್ಟು ಜಟಾಯುವನ್ನು ಗಾಢವಾಗಿ ಆಲಿಂಗಿಸಿಕೊಂಡನು. ಮರುಕ್ಷಣದಲ್ಲಿಯೇ ನಿಶ್ಚೇಷ್ಟನಾಗಿ ಭೂಮಿಯ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಮೇಲೆ ಬಿದ್ದುಬಿಟ್ಟನು. ಸ್ವಲ್ಪ ಹೊತ್ತಿನಲ್ಲಿಯೇ ಎಚ್ಚರಗೊಂಡು ಸೀತೆಯನ್ನು ನೆನೆಯುತ್ತಾ ಜಟಾಯುವಿನ ದುರವಸ್ಥೆಯನ್ನು ನೋಡುತ್ತಾ ಗಳ-ಗಳನೆ ಅಳುತ್ತಿದ್ದನು. ಲಕ್ಷ್ಮಣನಿಗೂ ದುಃಖವನ್ನು ತಡೆಯಲು ಸಾಧ್ಯವಾಗಲಿಲ್ಲ. ಅಣ್ಣನೊಡನೆ ಅವನೂ ಅಳುತ್ತಿದ್ದನು. ಶ್ರೀರಾಮನು ಧೀರತಮನೆಂಬುದೇನೋ ನಿಜ. ಆದರೆ ಇಬ್ಬಗೆಯ ಸಂಕಟವನ್ನು ಅವನಿಂದ ಸಹಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಏಕಾಕಿಯಾಗಿ ಅಸಹಾಯಕನಾಗಿ ಬಿದ್ದಿದ್ದ ಜಟಾಯುವಿನ ಉಸಿರು ಕ್ಷಣ-ಕ್ಷಣಕ್ಕೂ ಮೇಲ್ಮುಖವಾಗುತ್ತಿದ್ದಿತು. ಅವನು ಬಹಳ ಸಂಕಟಪಡುತ್ತಿದ್ದನು. ಕಷ್ಟಪಟ್ಟುಕೊಂಡು ದೀರ್ಘವಾಗಿ ನಿಟ್ಟುಸಿರು ಬಿಡುತ್ತಿದ್ದನು. ಇಂತಹ ಅತಿದಯನೀಯವಾದ ಸ್ಥಿತಿಯಲ್ಲಿದ್ದ ಜಟಾಯುವನ್ನು ನೋಡಿ ಶ್ರೀರಾಮನು ಅತಿದುಃಖಿತನಾಗಿ ಲಕ್ಷ್ಮಣನಿಗೆ ಹೇಳಿದನು :

ರಾಜ್ಯಾದ್ಭ್ರಂಶೋ ವನೇ ವಾಸಃ ಸೀತಾ ನಷ್ಟಾ ಮೃತೋ ದ್ವಿಜಃ ।
ಈದೃಶೀಯಂ ಮಮಾಲಕ್ಷ್ಮೀರ್ನಿರ್ದಹೇದಪಿ ಪಾವಕಮ್ ॥ ೨೩॥

"ಲಕ್ಷ್ಮಣ! ನಾನು ಮೊದಲು ರಾಜ್ಯಭ್ರಷ್ಟನಾದೆನು. ಬಳಿಕ ಅರಣ್ಯದಲ್ಲಿ ವಾಸಮಾಡಬೇಕಾಯಿತು. ಸೀತೆಯನ್ನೂ ಕಳೆದುಕೊಂಡೆನು. ನನಗೆ ಸಹಾಯಮಾಡಲು ಬಂದ ಈ ಜಟಾಯುವೂ ಪ್ರಾಣತೊರೆದನು. ಇಂತಹ ದುರ್ಗತಿಯು ನನಗಿಂದು ಒದಗಿಬಂದಿದೆ. ನನ್ನ ದುರದೃಷ್ಟವು ಎಷ್ಟು ಬಲಶಾಲಿಯೆಂದರೆ: ಇದರಲ್ಲಿ ಸಿಲುಕಿದರೆ ಎಲ್ಲವನ್ನೂ ಸುಟ್ಟು ಹಾಕುವ ಬೆಂಕಿಯೂ ಸುಟ್ಟುಹೋದೀತು. ಹೀಗಿರುವಾಗ ನನ್ನ ವಿಷಯವಾಗಿ ಹೇಳುವುದೇನಿದೆ?

ಸಂಪೂರ್ಣಮಪಿ ಚೇದದ್ಯ ಪ್ರತರೇಯಂ ಮಹೋದಧಿಮ್ ।
ಸೋಽಪಿ ನೂನಂ ಮಮಾಲಕ್ಷ್ಮ್ಯಾ ವಿಶುಷ್ಯೇತ್ಸರಿತಾಂ ಪತಿಃ ॥ ೨೪॥

ಸಮುದ್ರಕ್ಕಾದರೂ ಬಿದ್ದು ಈ ಕಷ್ಟದಿಂದ ಪಾರಾಗೋಣವೆಂದು ನಾನೇನಾದರೂ ಯೋಚಿಸಿ ಸಮುದ್ರಕ್ಕೆ ಧುಮುಕಿದರೆ-ನನ್ನ ಈ ದೌರ್ಭಾಗ್ಯದ ಕಾರಣದಿಂದಾಗಿ ತುಂಬಿತುಳುಕುತ್ತಿರುವ ಸಮುದ್ರವೂ ಬತ್ತಿಹೋಗಬಹುದು.

ನಾಸ್ತ್ಯಭಾಗ್ಯತರೋ ಲೋಕೇ ಮತ್ತೋಽಸ್ಮಿನ್ಸಚರಾಚರೇ ।
ಯೇನೇಯಂ ಮಹತೀ ಪ್ರಾಪ್ತಾ ಮಯಾ ವ್ಯಸನವಾಗುರಾ ॥ ೨೫॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಸ್ಥಾವರ-ಜಂಗಮಾತ್ಮಕವಾಗಿರುವ ಈ ಪ್ರಪಂಚದಲ್ಲಿ ನನಗಿಂತಲೂ ದುರ್ಭಾಗ್ಯನಾದವನು ಮತ್ತೊಬ್ಬನಿಲ್ಲ. ಲಕ್ಷ್ಮಣ! ವ್ಯಸನವೆಂಬ ದೊಡ್ಡ ದಾವ ಬಲೆಯಲ್ಲಿ ನಾನು ಸಿಕ್ಕಿಹಾಕಿಕೊಂಡಿದ್ದೇನೆ. ಈ ಬಲೆಯಿಂದ ಬಿಡಿಸಿಕೊಳ್ಳಲು ಸಾಧ್ಯವೇ ಇಲ್ಲವೆಂಬಂತೆ ಕಾಣುತ್ತಿದೆ. ಸೌಮಿತ್ರೇ! ಈ ಗೃಧ್ರರಾಜನು ನಮ್ಮ ತಂದೆಯ ಮಿತ್ರನು. ವೃದ್ಧನಾಗಿರುವನು. ನನ್ನ ದೌರ್ಭಾಗ್ಯದ ಕಾರಣದಿಂದಾಗಿ ಇವನೀಗ ರಾವಣನಿಂದ ಹತನಾಗಿ ನೆಲದ ಮೇಲೆ ಬಿದ್ದಿದ್ದಾನೆ."

ಹೀಗೆ ಶ್ರೀರಾಮನು ತನ್ನ ದೌರ್ಭಾಗ್ಯವನ್ನು ಅನೇಕಪ್ರಕಾರವಾಗಿ ಲಕ್ಷ್ಮಣನೊಡನೆ ಹಳಿದುಕೊಂಡನು. ಅನಂತರ ತಂದೆಯ ಮೇಲೆ ತನಗಿದ್ದ ಪ್ರೀತಿಯನ್ನೇ ಜಟಾಯುವಿನಲ್ಲಿಯೂ ಪ್ರಕಟಪಡಿಸುತ್ತಾ ಅವನ ಮೈದಡವುತ್ತಾ ರೆಕ್ಕೆಗಳನ್ನು ಕಳೆದುಕೊಂಡು ರಕ್ತದಿಂದ ತೋಯ್ದುಹೋಗಿದ್ದ ಗೃಧ್ರರಾಜನನ್ನು ಪುನಃ ಗಾಢವಾಗಿ ಆಲಂಗಿಸಿಕೊಂಡು 'ಕ್ವ ಮೈಥಿಲೀ-ಪ್ರಾಣಸಮಾ ಗತಾ ನನ್ನ ಪ್ರಾಣಸಮಳಾದ ಮೈಥಿಲಿಯು ಎಲ್ಲಿ ಹೋದಳು?'–ಎಂದು ಪ್ರಶ್ನಿಸುತ್ತಲೇ ಎಚ್ಚರದಪ್ಪಿ ಕೆಳಕ್ಕೆ ಬಿದ್ದನು.

೬೭ನೆಯ ಸರ್ಗವು ಮುಗಿಯಿತು.

ಆರಣ್ಯಕಾಂಡ ೬೮ನೆಯ ಸರ್ಗ

## ಜಟಾಯುವಿನ ಮರಣ : ಶ್ರೀರಾಮನಿಂದ ದಹನಸಂಸ್ಕಾರ

ರಾಮಃ ಪ್ರೇಕ್ಷ್ಯ ತು ತಂ ಗೃಧ್ರಂ ಭುವಿ ರೌದ್ರೇಣ ಪಾತಿತಮ್ ।
ಸೌಮಿತ್ರಿಂ ಮಿತ್ರಸಂಪನ್ನಮಿದಂ ವಚನಮಬ್ರವೀತ್ ॥೧॥

ಅತಿಭಯಂಕರನಾದ ರಾವಣನು ಹೊಡೆದುರುಳಿಸಿದ್ದ ಗೃಧ್ರರಾಜನನ್ನು ನೋಡಿ ಶ್ರೀರಾಮನು ಮಿತ್ರರಿಂದ ಸಂಪನ್ನನಾದ ಸೌಮಿತ್ರಿಗೆ ಹೇಳಿದನು :

"ಲಕ್ಷ್ಮಣ! ನನ್ನ ಪ್ರಯೋಜನಾರ್ಥವಾಗಿ ಈ ಪಕ್ಷಿಯು ಬಹಳವಾಗಿ ಪ್ರಯತ್ನಿಸಿತು. ಸೀತೆಯನ್ನು ಬಿಡಿಸಿಕೊಳ್ಳಲು ರಾವಣನೊಡನೆ ಮಾಡಿದ ಯುದ್ಧದಲ್ಲಿ ರಾಕ್ಷಸನಿಂದ ಸಂಹರಿಸಲ್ಪಟ್ಟು ಕೆಳಕ್ಕೆ ಬಿದ್ದಿದೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.
ನಿಶ್ಚಯವಾಗಿಯೂ ಇದು ನನ್ನ ಸಲುವಾಗಿಯೇ ಪ್ರಾಣಾರ್ಪಣೆಯನ್ನು ಮಾಡಲಿದೆ. ಇದರ ಶರೀರದಲ್ಲಿರುವ ಪ್ರಾಣವು ಕ್ಷಣ-ಕ್ಷಣಕ್ಕೂ ಕ್ಷೀಣಿಸುತ್ತಲೇ ಇದೆ. ಧ್ವನಿಯೂ ಕುಗ್ಗಿಹೋಗಿದೆ. ಮಾತನಾಡಲೂ ಆಗುತ್ತಿಲ್ಲ. ಆತಂಕಗೊಂಡು ನಮ್ಮನ್ನೇ ನೋಡುತ್ತಿದೆ."

ಲಕ್ಷ್ಮಣನಿಗೆ ಹೀಗೆ ಹೇಳಿದನಂತರ ಶ್ರೀರಾಮನು ಜಟಾಯುವಿಗೆ ಹೇಳಿದನು :

"ಪಕ್ಷಿರಾಜ ! ನಿನಗೆ ಮಂಗಳವಾಗಲಿ. ಪುನಃ ನಿನಗೇನಾದರೂ ಒಂದೆರಡು ಮಾತುಗಳನ್ನಾಡಲು ಸಾಧ್ಯವಾಗುವುದಾಗಿದ್ದರೆ–ಸೀತಾದೇವಿಯ ವಿಷಯವನ್ನೂ ಮತ್ತು ನಿನ್ನ ಸಂಹಾರಕ್ಕೆ ಸಂಬಂಧಿಸಿದ ವಿಷಯಗಳನ್ನೂ ವಿವರಿಸಿ ಹೇಳು. ರಾವಣನು ಯಾವ ಕಾರಣದಿಂದ ವಿಶ್ವವಂದ್ಯಳಾದ ಸೀತೆಯನ್ನು ಅಪಹರಿಸಿಕೊಂಡು ಹೋದನು ? ನಾನು ಮಾಡಿರುವ ಯಾವ ಅಪರಾಧವನ್ನು ಕಂಡು ರಾವಣನು ನನ್ನ ಪ್ರಿಯತಮೆಯನ್ನು–ನನ್ನನ್ನು ಶಿಕ್ಷಿಸುವ ಸಲುವಾಗಿ–ಅಪಹರಿಸಿದನು ? ರಾವಣನು ನನ್ನ ಪ್ರೇಯಸಿಯನ್ನು ಸೆಳೆದೊಯ್ಯುತ್ತಿದ್ದಾಗ ಚಂದ್ರಸದೃಶವಾದ ಮತ್ತು ನಯನಮನೋಹರವಾದ ಸೀತೆಯ ಮುಖಬಿಂಬವು ಹೇಗಿದ್ದಿತು ? ಪಕ್ಷಿಶ್ರೇಷ್ಠನೇ ! ಆ ಸಮಯದಲ್ಲಿ ಸೀತೆಯು ನಿನಗೆ ಏನೆಂದು ಹೇಳಿದಳು ? ಅವನೊಡನೆ ಯುದ್ಧಮಾಡಿದೆನೆಂದು ನೀನು ಹೇಳಿದೆಯಲ್ಲವೇ ? ಅವನ ಪರಾಕ್ರಮವೆಂತಹುದು ? ಅವನು ಹೇಗಿದ್ದನು ? ಅವನ ಕರ್ಮವೇನು ? ಅವನ ವಾಸಸ್ಥಳವಾವುದು ?–ಈ ಎಲ್ಲ ವಿಷಯಗಳನ್ನೂ ವಿಶದವಾಗಿ ಹೇಳು."

ದೀನಾತ್ಮನಾದ ಜಟಾಯುವು ಅನಾಥನಂತೆ ಅಳುತ್ತಿದ್ದ ಶ್ರೀರಾಮನನ್ನು ನೋಡಿದನು. ಅವನ ಧ್ವನಿಯು ಕುಗ್ಗಿಹೋಗಿದ್ದಿತು. ಅವನಿಗೆ ಮಾತನಾಡಲೂ ಕಷ್ಟವಾಗಿದ್ದಿತು. ಆದರೂ ರಾಮನನ್ನು ಸಮಾಧಾನಗೊಳಿಸಲು ಬಹಳ ಕಷ್ಟದಿಂದ ಹೇಳಿದನು :

"ರಾಘವ ! ದುರಾತ್ಮನಾದ ರಾಕ್ಷಸೇಂದ್ರನಾದ ರಾವಣನು ತನ್ನ ಮಾಯೆಯಿಂದ ಬಿರುಗಾಳಿಯನ್ನೂ–ದಟ್ಟವಾದ ಮೋಡವನ್ನೂ ಸೃಷ್ಟಿಸಿ ಅಂಧಕಾರವು ಕವಿಯುವಂತೆ ಮಾಡಿ ಸೀತೆಯನ್ನು ಅಪಹರಿಸಿಕೊಂಡು ಹೋದನು. ಸೀತೆಯನ್ನು ಬಿಡಿಸಿಕೊಳ್ಳುವ ಸಲುವಾಗಿ ಅವನನ್ನು ತಡೆದು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.
ನಿಲ್ಲಿಸಿ ಬಹಳ ಹೊತ್ತಿನವರೆಗೂ ಅವನೊಡನೆ ಯುದ್ಧಮಾಡಿದೆನು. ಆದರೆ ಅದರಿಂದ ನಾನು ಬಹಳ ಆಯಾಸಗೊಂಡೆನು. ಅದನ್ನು ಗಮನಿಸಿದ ರಾವಣನು ನನ್ನ ಎರಡು ರೆಕ್ಕೆಗಳನ್ನೂ ಕತ್ತರಿಸಿ ವೈದೇಹಿಯನ್ನು ಕರೆದು ಕೊಂಡು ದಕ್ಷಿಣದಿಕ್ಕಿನ ಕಡೆಗೆ ಹೊರಟುಹೋದನು. ನನ್ನ ಊರ್ಧ್ವಮುಖ ವಾಗಿರುವ ಪ್ರಾಣಗಳು ಮಾತನಾಡದಂತೆ ನನ್ನನ್ನು ತಡೆಯುತ್ತಿವೆ. ಕಣ್ಣು ಗಳು ತಿರುಗುತ್ತಿವೆ. ಲಾಮಂಚದ ಬೇರುಗಳಿಂದ ಮಾಡಿದ ತಲೆಗೂದಲು ಗಳನ್ನು ಹೊಂದಿರುವ ಸುವರ್ಣಮಯವಾದ ವೃಕ್ಷಗಳನ್ನು ನೋಡುತ್ತಿದ್ದೇನೆ.* (ನನಗೆ ಮರಣವು ಸನ್ನಿಹಿತವಾಗಿದೆ.) ರಾವಣನು ಸೀತೆಯನ್ನು ಅಪಹರಿಸಿ ಕೊಂಡು ಹೋದ ಮುಹೂರ್ತವು ನಿನಗೆ ಲಾಭದಾಯಕವಾಗಿದೆ. ಆ ಮುಹೂರ್ತದಲ್ಲಿ ಅಪಹರಿಸಲ್ಪಟ್ಟ ಐಶ್ವರ್ಯವು ಅದರ ಸ್ವಾಮಿಗೇ ಹಿಂದಿ ರುಗಿ ಬರುತ್ತದೆ. ರಾವಣನು ಸೀತೆಯನ್ನು ಅಪಹರಿಸಿಕೊಂಡು ಹೋದ ಮುಹೂರ್ತವು ಅಪಹರಿಸಿದವನಿಗೆ ದುಷ್ಫಲವನ್ನು ನೀಡುವ ವಿಂದ – ಎಂಬ ಹೆಸರಿನ ಮುಹೂರ್ತವಾಗಿದ್ದಿತು. ರಾವಣನಿಗೆ ಅದು ತಿಳಿಯಲಿಲ್ಲ. ರಾಕ್ಷಸೇಶ್ವರನಾದ ರಾವಣನು ನಿನ್ನ ಪತ್ನಿಯನ್ನು ಆ ಮುಹೂರ್ತದಲ್ಲಿ ಅಪಹರಿಸಿರುವುದರಿಂದ ಗಾಳವನ್ನು ನುಂಗಿದ ಮೀನಿನಂತೆ ಮರಣವನ್ನಪ್ಪು ತ್ತಾನೆ.[1] ಆತನಿಗೆ ಅದು ತಿಳಿಯಲಿಲ್ಲ. ವೈದೇಹಿಯ ವಿಷಯವಾಗಿ ನೀನು ವ್ಯಥೆಪಡುವ ಕಾರಣವಿಲ್ಲ. ಶೀಘ್ರವಾಗಿಯೇ ನೀನು ಯುದ್ಧದಲ್ಲಿ ರಾವಣನನ್ನು ಸಂಹರಿಸಿ ಸೀತಾದೇವಿಯನ್ನು ಕರೆತಂದು ಅವಳೊಡನೆ ರಮಿ ಸಲಿರುವೆ."

ರಾಮನೊಡನೆ ಮಾತನಾಡುತ್ತಿದ್ದ ಜಟಾಯುವಿಗೆ ಮರಣವು ಸನ್ನಿ ಹಿತವಾಯಿತು. ಆದರೂ ಅವನು ಚಿತ್ತಸ್ವಾಸ್ಥ್ಯವನ್ನು ಕಳೆದುಕೊಂಡಿರಲಿಲ್ಲ.

---

* ಮರಣವು ಸನ್ನಿಹಿತವಾದಾಗ ಮರ-ಗಿಡ-ಬಳ್ಳಿಗಳು ಹೊಂಬಣ್ಣವಾಗಿ ಕಾಣುವುದೆಂಬ ಪ್ರತೀತಿಯಿದೆ.

1 ವಿಂದ ಎಂಬ ಪದವೇ ನಷ್ಟಧನದ ಪ್ರಾಪ್ತಿ ಎಂಬ ಅರ್ಥವನ್ನು ಕೊಡುವುದೆಂದು ವ್ಯಾಖ್ಯಾನಕಾರರು ವಿವರಣೆಕೊಟ್ಟಿದ್ದಾರೆ. ನಷ್ಟಂ ಧನಂ ವಿನ್ದತಿ ಲಭತೇ ಅಸ್ಮಿನ್ ಇತಿ ವಿನ್ದಃ–ಈ ಕಾಲದಲ್ಲಿ ನಷ್ಟವಾದ ಧನವು ಪುನಃ ಸಿಕ್ಕುವುದರಿಂದಲೇ ಈ ಮುಹೂರ್ತಕ್ಕೆ 'ವಿಂದ' ಎಂದು ಹೆಸರು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಇಷ್ಟೆಲ್ಲ ವಿಷಯಗಳನ್ನೂ ಹೇಳಿದನಂತರ ಜಟಾಯುವಿನ ಬಾಯಿಂದ ಮಾಂಸಮಿಶ್ರವಾದ ರಕ್ತವು ಹೊರಬಂದಿತು. ಕಡೆಯದಾಗಿ ಜಟಾಯುವು– "ಪುತ್ರೋ ವಿಶ್ರವಸಃ ಸಾಕ್ಷಾದ್ಭ್ರಾತಾ ವೈಶ್ರವಣಸ್ಯ ಚ॥" ರಾವಣನು ವಿಶ್ರವಸನ ಮಗನು. ಕುಬೇರನ ಸಾಕ್ಷಾತ್ ಸಹೋದರನು"– ಎಂದು ರಾವಣನಾರೆಂಬುದನ್ನೂ ಹೇಳಿ–ಆ ವೇಳೆಗಾಗಲೇ ದುರ್ಬಲವಾಗಿ ಹೋಗಿದ್ದ ಪ್ರಾಣಗಳನ್ನು ಪರಿತ್ಯಜಿಸಿದನು.

ರಾಮನು ಮಾತ್ರ ಕೈಮುಗಿದುಕೊಂಡು 'ಬ್ರೂಹಿ ! ಬ್ರೂಹಿ ! ಹೇಳು ; ಹೇಳು. ಮುಂದೆ ಹೇಳು '–ಎನ್ನುತ್ತಲೇ ಇದ್ದನು.

ಗೃಧ್ರರಾಜನ ಪ್ರಾಣಗಳು ಅವನ ದೇಹವನ್ನು ಬಿಟ್ಟು ಆಕಾಶಕ್ಕೆ ಹಾರಿಹೋದುವು. ಪ್ರಾಣವು ಹೋಗುವ ಸಮಯದಲ್ಲಿ ಗೃಧ್ರಪಕ್ಷಿಯು ತಲೆಯನ್ನು ನೆಲದ ಮೇಲಿಟ್ಟು ಎರಡು ಕಾಲುಗಳನ್ನೂ ಚಾಚಿ ಶರೀರವನ್ನು ವಾಲಿಸಿತು. ಪ್ರಾಣಗಳು ಹಾರಿಹೋದೊಡನೆಯೇ ಶರೀರವು ನೆಲದ ಮೇಲೆ ಬಿದ್ದಿತು.

ಕೆಂಪಾದ ಕಣ್ಣುಗಳನ್ನು ಹೊಂದಿದ್ದ, ಪರ್ವತೋಪಮವಾಗಿದ್ದ, ಪ್ರಾಣಗಳಿಂದ ವಿಹೀನವಾಗಿದ್ದ ಜಟಾಯುವನ್ನು ಶ್ರೀರಾಮನು ನೋಡಿದನು. ಒಂದಾದ ಮೇಲೊಂದರಂತೆ ಒದಗಿಬಂದ ದುಃಖದಿಂದ ಅತಿದೀನನಾಗಿದ್ದ ರಾಮನು ಲಕ್ಷ್ಮಣನಿಗೆ ಹೇಳಿದನು :

"ರಾಕ್ಷಸರ ವಾಸಸ್ಥಾನವಾಗಿರುವ ಈ ದಂಡಕಾರಣ್ಯದಲ್ಲಿ ಈ ಪಕ್ಷಿಯು ಬಹಳ ಕಾಲದಿಂದ ಸುಖವಾಗಿಯೇ ಇದ್ದಿತು. ಆದರೆ ಈಗ ಅದು ಪ್ರಾಣ ಕಳೆದುಕೊಳ್ಳಬೇಕಾಯಿತು. ಬಹಳ ಕಾಲದವರೆಗೂ ಎಚ್ಚರವಾಗಿಯೇ ಇದ್ದರೂ ಅದು ಇಂದು ಸತ್ತುಬಿದ್ದಿದೆ. ಕಾಲವನ್ನು ಮೀರಿಹೋಗುವುದು ನಿಶ್ಚಯವಾಗಿಯೂ ಅತಿಕಷ್ಟ.*

---

* ಚಿರಕಾಲ ಸುಖವಾಗಿ ಬದುಕಿದ್ದವನು ವೃದ್ಧಾಪ್ಯದಲ್ಲಿ–ಸ್ವಾಭಾವಿಕವಾಗಿಯೇ ಮರಣವು ಸನ್ನಿಹಿತವಾಗುವ ಕಾಲದಲ್ಲಿ–ಬೇರೊಬ್ಬರಿಂದ ಹತನಾಗಿ ಪ್ರಾಣತೊರೆಯುವಂತಾಗುವುದು ಶೋಚನೀಯವಾದ ವಿಷಯ. ಇಂತಹ ಪ್ರಕರಣಗಳು ಈಗಲೂ ಅನೇಕವಾಗಿ ನಡೆಯುತ್ತಿರುತ್ತವೆ. ಅದನ್ನೇ ಇಲ್ಲಿ ಶ್ರೀರಾಮನು ' ಕಾಲೋ ಹಿ ದುರತಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಲಕ್ಷ್ಮಣ ! ಈ ಜಟಾಯುವು ನಮಗೆ ಬಹಳವಾಗಿ ಉಪಕಾರಿಯಾಗಿದ್ದನು. ಅವನೂ ಈಗ ಸತ್ತುಹೋದನು. ಸೀತೆಯನ್ನು ರಕ್ಷಿಸುವ ಸಲುವಾಗಿ ಅವಳ ಬಳಿಗೆ ಹೋದ ಜಟಾಯುವು ಬಲಿಷ್ಠನಾದ ರಾವಣನಿಂದ ಹತನಾದನು. ಈ ಪತಗೇಶ್ವರನು ಮಹಾವಿಶಾಲವಾದ ಪಿತೃ-ಪಿತಾಮಹ ಸಂಬಂಧವಾದ ಗೃಧ್ರರಾಜ್ಯವನ್ನೂ ತ್ಯಜಿಸಿ ಇಲ್ಲಿಗೆ ಬಂದು ನನ್ನ ಸಲುವಾಗಿ ಪ್ರಾಣಗಳನ್ನೂ ತೊರೆದನು.

ಸರ್ವತ್ರ ಖಲು ದೃಶ್ಯನ್ತೇ ಸಾಧವೋ ಧರ್ಮಚಾರಿಣಃ !
ಶೂರಾಃ ಶರಣ್ಯಾಃ ಸೌಮಿತ್ರೇ ತಿರ್ಯಗ್ಯೋನಿಗತೇಷ್ವಪಿ ॥೨೪॥

ಸಾಧುಗಳೂ, ಧರ್ಮಚಾರಿಗಳೂ, ಶೂರರೂ, ಶರಣಾಗತರಕ್ಷಕರೂ ಎಲ್ಲೆಲ್ಲಿಯೂ ಇರುತ್ತಾರೆ. ಅಡ್ಡಲಾಗಿ ಓಡಾಡುವ ಜಾತಿಗೆ ಸೇರಿದ ಪ್ರಾಣಿಗಳಲ್ಲೂ ಸಾಧುಪ್ರಾಣಿಗಳೂ, ಧರ್ಮನಿಷ್ಠವಾದ ಮತ್ತು ಕಷ್ಟದಲ್ಲಿರುವವರನ್ನು ರಕ್ಷಿಸತಕ್ಕ ಪ್ರಾಣಿಗಳೂ ಇರುತ್ತವೆ.

ನನ್ನ ಸಲುವಾಗಿ ಪ್ರಾಣತೊರೆದಿರುವ ಜಟಾಯುವಿನ ವಿನಾಶದಿಂದ ಉಂಟಾಗಿರುವ ಈ ದುಃಖವು ಸೀತಾಪಹರಣದಿಂದ ಉಂಟಾದ ದುಃಖಕ್ಕಿಂತಲೂ ಮಿಗಿಲಾದುದು. ಸೀತಾಪಹರಣದಿಂದಲೂ ನನಗೆ ಇಷ್ಟು ದುಃಖ ಉಂಟಾಗಿಲ್ಲ.

ಶ್ರೀಮಂತನಾದ, ಮಹಾಯಶೋವಂತನಾದ ದಶರಥರಾಜನು ನನಗೆ ಪೂಜ್ಯನೂ ಮಾನ್ಯನೂ ಆಗಿರುವಂತೆ ತಂದೆಯ ಪ್ರಿಯಸಖನಾಗಿದ್ದ ಈ ಜಟಾಯುವೂ ಪೂಜ್ಯನೂ ಮಾನ್ಯನೂ ಆಗಿದ್ದಾನೆ. ಆದುದರಿಂದ, ಇವನಿಗೂ ದಹನಸಂಸ್ಕಾರವನ್ನು ಮಾಡುವುದು ನನ್ನ ಕರ್ತವ್ಯವಾಗಿದೆ. ಲಕ್ಷ್ಮಣ ! ಈಗಲೇ ಹೋಗಿ ಒಣಗಿದ ಕಟ್ಟಿಗೆಗಳನ್ನು ಆಯ್ದು ತೆಗೆದುಕೊಂಡು ಬಾ. ಅವುಗಳನ್ನು ಕಡೆದು ಅಗ್ನಿಯನ್ನು ಉಂಟುಮಾಡುತ್ತೇನೆ. ನನ್ನ ಸಲುವಾಗಿ ಪ್ರಾಣತೊರೆದಿರುವ ಈ ಜಟಾಯುವಿಗೆ ಯಥಾವಿಧಿಯಾಗಿ ದಹನ

---

ಕ್ರಮಃ' ಎಂದು ಹೇಳಿದ್ದಾನೆ. ವೃದ್ಧನಾಗಲೀ, ಬಾಲಕನಾಗಲೀ – ಶಸ್ತ್ರಾಘಾತಾದಿಗಳಿಂದಲೇ ಪ್ರಾಣತೊರೆಯುವ ಯೋಗವಿದ್ದರೆ ಅದನ್ನು ತಪ್ಪಿಸಲು ಯಾರಿಂದಲೂ ಸಾಧ್ಯವಾಗುವುದಿಲ್ಲ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಸಂಸ್ಕಾರವನ್ನು ಮಾಡುತ್ತೇನೆ. ಪಕ್ಷಿಗಳ ಲೋಕಕ್ಕೇ ರಾಜನಾದ ಇವನನ್ನು ಚಿತೆಯ ಮೇಲಿಡುತ್ತೇನೆ. ಭಯಂಕರನಾದ ರಾಕ್ಷಸನಿಂದ ಹತನಾದ ಇವನ ಚಿತೆಗೆ ಬೆಂಕಿಯನ್ನಿಡುತ್ತೇನೆ."

ಶ್ರೀರಾಮನು ಹೀಗೆ ಹೇಳುತ್ತಲೇ ಲಕ್ಷ್ಮಣನು ಒಣಗಿದ ಕಟ್ಟಿಗೆಗಳಿಂದ ಚಿತೆಯನ್ನು ಸಿದ್ಧಗೊಳಿಸಿದನು. ಬಳಿಕ ಶ್ರೀರಾಮನು ಜಟಾಯುವನ್ನು ಚಿತೆಯ ಮೇಲಿಡುತ್ತಾ ಹೇಳಿದನು :

ಯಾ ಗತಿರ್ಯಜ್ಞಶೀಲಾನಾಮಾಹಿತಾಗ್ನೇಶ್ಚ ಯಾ ಗತಿಃ ।
ಅಪರಾವರ್ತಿನಾಂ ಯಾ ಚ ಯಾ ಚ ಭೂಮಿಪ್ರದಾಯಿನಾಮ್ ॥
ಮಯಾ ತ್ವಂ ಸಮನುಜ್ಞಾತೋ ಗಚ್ಛ ಲೋಕಾನನುತ್ತಮಾನ್ ।
ಗೃಧ್ರರಾಜ ಮಹಾಸತ್ತ್ವ ಸಂಸ್ಕೃತಶ್ಚ ಮಯಾ ವ್ರಜ ॥೩೦॥

"ಗೃಧ್ರರಾಜನೇ! ಮಹಾಸತ್ತ್ವನೇ! ನನ್ನಿಂದ ಸಂಸ್ಕರಿಸಲ್ಪಡುವ ನೀನು ನನ್ನ ಅಭಿಮತದಂತೆ ಉತ್ತಮೋತ್ತಮವಾದ ಲೋಕಗಳಿಗೆ ಹೋಗು. ಯಜ್ಞಶೀಲರಿಗೆ ಪ್ರಾಪ್ತವಾಗುವ ಪರಮಗತಿಯು ನಿನಗೂ ಲಭಿಸಲಿ. ಆಹಿತಾಗ್ನಿಗಳಿಗೆ ಲಭಿಸುವ ಪರಮಾಶ್ರಯವೂ ಲಭಿಸಲಿ. ಧರ್ಮಯುದ್ಧದಲ್ಲಿ ಯುದ್ಧದಿಂದ ಹಿಂದಿರುಗದವರಿಗೆ ಪ್ರಾಪ್ತವಾಗುವ ಉತ್ತಮಗತಿಯು ನಿನಗೂ ಲಭಿಸಲಿ. ಭೂದಾನಮಾಡುವವರಿಗೆ ಸಿಕ್ಕುವ ಉತ್ತಮಗತಿಯೂ ಲಭಿಸಲಿ."

ಹೀಗೆ ಹೇಳಿ ಶ್ರೀರಾಮನು ಪಕ್ಷಿರಾಜನನ್ನು ಉರಿಯುತ್ತಿದ್ದ ಚಿತೆಯ ಮೇಲಿರಿಸಿ ಒಬ್ಬ ಆಪ್ತಬಂಧುವನ್ನು ಕಳೆದುಕೊಂಡಂತೆ ಬಹಳ ದುಃಖದಿಂದ ದಹನಕ್ರಿಯೆಯನ್ನು ಪೂರೈಸಿದನು.

ಬಳಿಕ ಶ್ರೀರಾಮನು ಲಕ್ಷ್ಮಣನೊಡನೆ ಅರಣ್ಯಕ್ಕೆ ಹೋಗಿ ಜಟಾಯುವಿನ ಸಲುವಾಗಿ ದೊಡ್ಡ-ದೊಡ್ಡ ಮೃಗಗಳನ್ನು ಸಂಹರಿಸಿ ತಂದನು. ಭೂಮಿಯ ಮೇಲೆ ದರ್ಭೆಯನ್ನು ಹರಡಿ ಅರಣ್ಯದಿಂದ ತಂದಿದ್ದ ರೋಹಿಮೃಗಗಳಿಂದ ಮಾಂಸವನ್ನು ತೆಗೆದು ಅದರಿಂದ ಪಿಂಡವನ್ನು ಕಟ್ಟಿ, ಹಸಿರಾಗಿದ್ದ ಮತ್ತು ರಮ್ಯವಾಗಿದ್ದ ದರ್ಭೆಯ ಹುಲ್ಲಿನ ಮೇಲೆ ಆ ಪಿಂಡವನ್ನಿಟ್ಟು ಯಥಾವಿಧಿಯಾಗಿ ಜಟಾಯುವಿಗೆ ಪಿಂಡಪ್ರದಾನಮಾಡಿದನು. ಸತ್ತನಂತರ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಪ್ರೇತನಾಗುವ ಮನುಷ್ಯನು ಆ ಅವಸ್ಥೆಯನ್ನು ಕಳೆದುಕೊಂಡು ಸ್ವರ್ಗಕ್ಕೆ ಹೋಗಲು ಬ್ರಾಹ್ಮಣರು ಯಾವ ಪಿತೃಮೇಧಮಹಾಮಂತ್ರಗಳನ್ನು ಜಪಿಸು ವರೋ-ಅದೇ ಮಂತ್ರಗಳನ್ನೇ ಶ್ರೀರಾಮನೂ ಜಟಾಯುವಿನ ಸ್ವರ್ಗಪ್ರಾಪ್ತಿ ಗಾಗಿ ಜಪಿಸಿದನು. ದಹನಕ್ರಿಯೆ ಮತ್ತು ಪಿಂಡಪ್ರದಾನಗಳಾದನಂತರ ರಾಮ-ಲಕ್ಷ್ಮಣರು ಗೋದಾವರೀನದಿಗೆ ಹೋಗಿ ಗೃಧ್ರರಾಜನಿಗೆ ಜಲತರ್ಪಣ ವನ್ನಿತ್ತರು. ರಾಮ-ಲಕ್ಷ್ಮಣರು ಜಟಾಯುವಿನ ಸಲುವಾಗಿ ಗೋದಾವರೀ ತೀರ್ಥದಲ್ಲಿ ಸ್ನಾನಮಾಡಿ ಶಾಸ್ತ್ರವಿಧಿಗೆ ಅನುಸಾರವಾಗಿ ತರ್ಪಣ ವನ್ನಿತ್ತರು. ಗೃಧ್ರರಾಜನಾದ ಜಟಾಯುವು ಯಶಸ್ಕರವಾದ, ಅತ್ಯಂತ ಕಷ್ಟಸಾಧ್ಯವಾದ ಸಾಹಸಕರ್ಮವನ್ನು ಮಾಡಲು ಹೋಗಿ ಯುದ್ಧದಲ್ಲಿ ರಾವಣನಿಂದ ಹತನಾದನು. ಅದರ ಫಲವಾಗಿ ಪಕ್ಷಿರಾಜನು ಮಹರ್ಷಿಸದೃಶ ನಾದ ಶ್ರೀರಾಮನಿಂದ ಸಂಸ್ಕೃತನಾಗಿ ಶುಭದಾಯಕವಾದ ಸದ್ಗತಿಯನ್ನು ಪಡೆದನು.

ರಾಮ-ಲಕ್ಷ್ಮಣರು ಪಕ್ಷಿಶ್ರೇಷ್ಠನಿಗೆ ಜಲತರ್ಪಣವನ್ನಿತ್ತು ಅವನ ಮಾತಿನಲ್ಲಿ ವಿಶ್ವಾಸವನ್ನಿಟ್ಟು ಅಲ್ಲಿಂದ ಹೊರಟರು. ಸೀತೆಯನ್ನು ಪಡೆಯುವು ದರಲ್ಲಿಯೇ ಏಕಾಗ್ರಚಿತ್ತರಾಗಿ ದೇವತೆಗಳ ಒಡೆಯರಾದ ಇಂದ್ರೋಪೇಂದ್ರ ರಂತೆ ಜೊತೆಗೂಡಿ ಅರಣ್ಯವನ್ನು ಪ್ರವೇಶಿಸಿದರು.

೬೮ನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ ೬೯ನೆಯ ಸರ್ಗ

## ಲಕ್ಷ್ಮಣನು ಅಯೋಮುಖಿಯನ್ನು ದಂಡಿಸಿದುದು : ರಾಮ-ಲಕ್ಷ್ಮಣರು ಕಬಂಧನ ಬಾಹುಪಾಶದಲ್ಲಿ ಸಿಕ್ಕಿ ದುಃಖಿಸಿದುದು

ಕೃತ್ವೈವಮುದಕಂ ತಸ್ಮೈ ಪ್ರಸ್ಥಿತೌ ರಾಘವಲಕ್ಷ್ಮಣೌ ।
ಅವೇಕ್ಷನ್ತೌ ವನೇ ಸೀತಾಂ ಜಗ್ಮತುಃ ಪಶ್ಚಿಮಾಂ ದಿಶಮ್ ॥೧॥

ಹೀಗೆ ರಾಮ-ಲಕ್ಷ್ಮಣರು ಪಕ್ಷಿರಾಜನಿಗೆ ತರ್ಪಣವನ್ನಿತ್ತು ಅರಣ್ಯದಲ್ಲಿ ಸೀತೆಯನ್ನು ಹುಡುಕುತ್ತಾ ಪಶ್ಚಿಮದಿಕ್ಕಿನ ಕಡೆಗೆ ಹೊರಟರು,

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಅನಂತರ ಧನುರ್ಬಾಣಗಳನ್ನು ಹಿಡಿದಿದ್ದ ಇಬ್ಬರೂ ದಕ್ಷಿಣದಿಕ್ಕಿಗೆ ತಿರುಗಿ ಜನಸಂಚಾರವಿಲ್ಲದ ದುರ್ಗಮವಾದ ಹಾದಿಯನ್ನು ಹಿಡಿದು ಹೋಗುತ್ತಿದ್ದರು. ಅವರು ಪ್ರಯಾಣಮಾಡುತ್ತಿದ್ದ ಅರಣ್ಯವು ಹುಲ್ಲು, ಬಿದಿರು ಮೊದಲಾದುವುಗಳ ಪೊದರುಗಳಿಂದಲೂ, ಮರಗಳಿಂದಲೂ ನಿಬಿಡವಾಗಿದ್ದಿತು. ಬಳ್ಳಿಗಳಿಂದ ಆವರಿಸಲ್ಪಟ್ಟಿದ್ದಿತು. ಹಳ್ಳ-ತಿಟ್ಟುಗಳಿಂದ ಕೂಡಿ ದುರ್ಗಮವಾಗಿದ್ದಿತು. ಪ್ರವೇಶಿಸಲು ಅಸಾಧ್ಯವಾಗಿದ್ದಿತು. ಭಯಂಕರವಾಗಿ ಕಾಣುತ್ತಿದ್ದಿತು. ಮಹಾಬಲರಾದ ರಾಮ-ಲಕ್ಷ್ಮಣರು ಅಂತಹ ಮಹಾಭಯಂಕರವಾದ ದಂಡಕಾರಣ್ಯವನ್ನು ಶೀಘ್ರವಾಗಿ ದಾಟಿ ದಕ್ಷಿಣದಿಕ್ಕನ್ನೇ ಹಿಡಿದು ಹೋಗುತ್ತಿದ್ದರು. ಜನಸ್ಥಾನದಿಂದ ಮೂರು ಹರಿದಾರಿಗಳಷ್ಟು ದೂರ ಪ್ರಯಾಣ ಮಾಡಿ ಗಹನವಾಗಿದ್ದ ಕ್ರೌಂಚಾರಣ್ಯವನ್ನು ಪ್ರವೇಶಿಸಿದರು. ಆ ಅರಣ್ಯವು ಮೇಘಗಳ ಸಮೂಹಗಳಂತೆ ಶ್ಯಾಮಲವರ್ಣದಿಂದ ಪ್ರಕಾಶಿಸುತ್ತಿದ್ದಿತು. ನಾನಾವರ್ಣಗಳ ಸುಂದರವಾದ ಪುಷ್ಪಗಳಿಂದ ಸಮಾವೃತವಾಗಿದ್ದು ಕಿಲ-ಕಿಲನೆ ನಗುತ್ತಿರುವುದೋ ಎಂಬಂತೆ ಕಾಣುತ್ತಿದ್ದಿತು. ಮೃಗ-ಪಕ್ಷಿಗಳಿಂದ ಸಮೃದ್ಧವಾಗಿದ್ದಿತು. ಸೀತೆಯನ್ನು ನೋಡುವ ತವಕದಿಂದ ಕೂಡಿದ್ದ ರಾಜಕುಮಾರರು ಆಕೆಗಾಗಿ ಆ ಅರಣ್ಯದಲ್ಲೆಲ್ಲಾ ಹುಡುಕಾಡಿದರು. ಸೀತಾ ವಿರಹದುಃಖದಿಂದ ಪೀಡಿತರಾಗಿದ್ದ ಅವರು ಅಲ್ಲಲ್ಲಿ ವಿಶ್ರಮಿಸಿಕೊಳ್ಳುತ್ತಿದ್ದರು. ಬಳಿಕ ಪೂರ್ವದಿಕ್ಕಿಗೆ ತಿರುಗಿ ಮೂರು ಯೋಜನಗಳಷ್ಟು ದೂರ ನಡೆದು ಕ್ರೌಂಚಾರಣ್ಯವನ್ನೂ ದಾಟಿ ಮತಂಗರ ಆಶ್ರಮದ ಬಳಿಗೆ ಹೋದರು. ಮತಂಗಾಶ್ರಮವಿದ್ದ ಆ ಅರಣ್ಯವು ಬಹಳ ಭಯಂಕರವಾಗಿ ಕಾಣುತ್ತಿದ್ದಿತು. ಅಲ್ಲಿ ಭಯಂಕರವಾದ ಮೃಗ-ಪಕ್ಷಿಗಳು ವಾಸಮಾಡುತ್ತಿದ್ದುವು. ನಾನಾವಿಧವಾದ ಪ್ರಾಣಿಗಳಿಂದ ಸಮಾಕುಲವಾಗಿದ್ದ ಆ ಅರಣ್ಯವು ನಿಬಿಡವಾದ ವೃಕ್ಷಗಳ ಸಮೂಹಗಳಿಂದ ತುಂಬಿದ್ದಿತು. ಮುಂದೆ ಹೋಗುತ್ತಾ ಅಲ್ಲಿದ್ದ ಪರ್ವತದಲ್ಲಿ ಗುಹೆಯೊಂದನ್ನು ನೋಡಿದರು. ಅದು ಪಾತಾಳದಂತೆ ಗಹನವಾಗಿದ್ದಿತು. ಕಗ್ಗತ್ತಲಿನಿಂದ ತುಂಬಿಹೋಗಿದ್ದಿತು. ಸಮೀಪಕ್ಕೆ ಹೋದನಂತರ ರಾಮ-ಲಕ್ಷ್ಮಣರು ಆ ಗುಹೆಯಲ್ಲಿ ರಾಕ್ಷಸಿಯೊಬ್ಬಳನ್ನು ಕಂಡರು.

ಅವಳ ಮುಖವು ವಿಕಾರವಾಗಿದ್ದಿತು. ಅವಳಿಗೆ ದೊಡ್ಡದಾದ ಶರೀರ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ವಿದ್ದಿತು. ಆ ರಾಕ್ಷಸಿಯು ದುರ್ಬಲರಿಗೆ ಭಯವನ್ನುಂಟುಮಾಡುವವಳಾಗಿದ್ದಳು. ನೋಡಿದವರಿಗೆ ಜುಗುಪ್ಸೆಯನ್ನು ಹುಟ್ಟಿಸುತ್ತಾ ಭಯಂಕರವಾಗಿ ಕಾಣುತ್ತಿದ್ದಳು. ಹೊಟ್ಟೆಯು ಜೋತುಬಿದ್ದಿದ್ದು ಬಾಯಲ್ಲಿ ತೀಕ್ಷ್ಣವಾದ ಕೋರೆಹಲ್ಲುಗಳಿದ್ದುವು. ವಕ್ರರೂಪಳಾಗಿದ್ದಳು. ಅವಳಿಗೆ ಅತಿಒರಟಾದ ಚರ್ಮವಿದ್ದಿತು. ಅರಣ್ಯದಲ್ಲಿ ಸಂಚರಿಸುತ್ತಿದ್ದ ಭಯಂಕರವಾದ ಆನೆ-ಹುಲಿ



ಮೊದಲಾದ ದುಷ್ಟಮೃಗಗಳನ್ನು ಹಿಡಿದು ಗಬ-ಗಬನೆ ತಿನ್ನುತ್ತಿದ್ದಳು. ವಿಕಾರರೂಪಳಾಗಿದ್ದು ತಲೆಯನ್ನು ಕೆದರಿಕೊಂಡಿದ್ದಳು. ಅಂತಹ ಮಹಾಭಯಂಕರಳಾದ ರಾಕ್ಷಸಿಯನ್ನು, ರಾಮ-ಲಕ್ಷ್ಮಣರು ನೋಡಿದರು. ಆ ರಾಕ್ಷಸಿಯು ರಾಮ-ಲಕ್ಷ್ಮಣರ ಬಳಿಗೆ ಬಂದಳು. ಅಣ್ಣನ ಮುಂಭಾಗ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ದಲ್ಲಿ ಹೋಗುತ್ತಿದ್ದ ಲಕ್ಷ್ಮಣನಿಗೆ 'ಏಹಿ ರಂಸ್ಯಾವಹೇ ಬೇಗ ಬಾ! ನಾವಿಬ್ಬರೂ ವಿಹರಿಸೋಣ' ಎಂದು ಹೇಳುತ್ತಾ ಲಕ್ಷ್ಮಣನನ್ನು ಬಾಚಿ ತಬ್ಬಿಕೊಂಡು ಹೇಳಿದಳು: "ವೀರನೇ! ನಾನು ಅಯೋಮುಖೀ ಎಂಬ ಹೆಸರಿನವಳು. ನಾನು ನಿನಗೆ ಸಿಕ್ಕಿರುವುದು ನಿನಗೊಂದು ದೊಡ್ಡ ಲಾಭವೇ ಆಗಿದೆ. ನೀನು ನನಗೆ ಅತಿಪ್ರಿಯನಾಗಿರುವೆ. ವೀರನಾಥನೇ! ಉಳಿದಿರುವ ಆಯುಷ್ಯವನ್ನು ನೀನು ಪರ್ವತ-ದುರ್ಗಗಳಲ್ಲಿಯೂ ನದಿಗಳ ಮಳಲು ದಿಬ್ಬಗಳಲ್ಲಿಯೂ ನನ್ನೊಡನೆ ಕ್ರೀಡೆಯಾಡುತ್ತಲೇ ಕಳೆಯಬಹುದು."

ರಾಕ್ಷಸಿಯು ಹೀಗೆ ಹೇಳಿದೊಡನೆಯೇ ಕುಪಿತನಾದ ಲಕ್ಷ್ಮಣನು ಖಡ್ಗವನ್ನೆತ್ತಿ ರಾಕ್ಷಸಿಯ ಕಿವಿ-ಮೂಗುಗಳನ್ನೂ ಸ್ತನಗಳನ್ನೂ ಕತ್ತರಿಸಿದನು. ಕಿವಿ-ಮೂಗುಗಳನ್ನು ಕಳೆದುಕೊಂಡ ಭಯಂಕರರೂಪಳಾಗಿದ್ದ ಆ ರಾಕ್ಷಸಿಯು ವಿಕಾರವಾಗಿ ಕೂಗಿಕೊಳ್ಳುತ್ತಾ ಎತ್ತಕಡೆಯಿಂದ ಬಂದಿದ್ದಳೋ ಅತ್ತಕಡೆಗೇ ಓಡಿಹೋದಳು. ಹೀಗೆ ಆ ರಾಕ್ಷಸಿಯು ಓಡಿಹೋದನಂತರ ತೇಜಸ್ಸಿನಿಂದ ಬೆಳಗುತ್ತಿದ್ದ ರಾಮ-ಲಕ್ಷ್ಮಣರು ಮುಂದೆ ಪ್ರಯಾಣ ಮಾಡುತ್ತಾ ಗಹನವಾಗಿದ್ದ ಮತ್ತೊಂದು ಅರಣ್ಯವನ್ನು ಪ್ರವೇಶಿಸಿದರು.

ಮಹಾತೇಜಸ್ವಿಯಾದ, ಸತ್ತ್ವವಂತನಾದ, ಶೀಲವಂತನಾದ, ಶುಚಿಯಾದ ಲಕ್ಷ್ಮಣನು ಕೈಮುಗಿದುಕೊಂಡು ಮಹಾತೇಜಸ್ವಿಯಾದ ಅಣ್ಣನಿಗೆ ಹೇಳಿದನು:

"ಅಣ್ಣಾ! ನನ್ನ ಎಡತೋಳು ಬಹಳವಾಗಿ ಅದುರುತ್ತಿದೆ. ಮನಸ್ಸು ಉದ್ವಿಗ್ನವಾಗಿರುವಂತೆ ಕಾಣುತ್ತಿದೆ. ಪ್ರಾಯಶಃ ಅನಿಷ್ಟಸೂಚಕವಾದ ಶಕುನಗಳನ್ನು ನಾನು ಕಾಣುತ್ತಿದ್ದೇನೆ. ಆದುದರಿಂದ ಯುದ್ಧಸನ್ನದ್ಧನಾಗು. ನನ್ನ ಹಿತವಾಕ್ಯವನ್ನು ಕೇಳು. ನನಗೆ ಕಾಣುತ್ತಿರುವ ಈ ಶಕುನಗಳು ಸದ್ಯದಲ್ಲಿಯೇ ಭಯಂಕರವಾದ ಸನ್ನಿವೇಶವು ಸನ್ನಿಹಿತವಾಗುವುದೆಂಬುದನ್ನು ಸೂಚಿಸುತ್ತಿವೆ. ಆದರೆ ಇದಕ್ಕಾಗಿ ನಾವು ಭಯಪಡುವ ಕಾರಣವಿಲ್ಲ. ವಂಜುಲಕವೆಂಬ ಹೆಸರಿನ ಮಹಾಭಯಂಕರವಾದ ಈ ಪಕ್ಷಿಯು ಯುದ್ಧದಲ್ಲಿ ನಮ್ಮಿಬ್ಬರಿಗೂ ವಿಜಯವಾಗುವುದನ್ನು ಹೇಳುತ್ತಿರುವುದೋ ಎಂಬಂತೆ ಧ್ವನಿಮಾಡುತ್ತಿದೆ."

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಲಕ್ಷ್ಮಣನು ಹೇಳಿದಂತೆ ಶ್ರೀರಾಮನು ಶತ್ರುವನ್ನು ಎದುರಿಸಲು ಸಿದ್ಧನಾದನು. ತೇಜಸ್ಸಿನ ಬಲದಿಂದ ಅವರು ಭಯಂಕರವಾದ ಆ ಅರಣ್ಯದಲ್ಲಿಯೂ ಸೀತೆಯನ್ನು ಹುಡುಕುತ್ತಿದ್ದರು. ಆ ಸಮಯದಲ್ಲಿ ಆ ಮಹಾರಣ್ಯವನ್ನೇ ಭಗ್ನಗೊಳಿಸುವುದೋ-ಎಂಬಂತಹ ಭಯಂಕರವಾದ ಶಬ್ದವು ಕೇಳಬಂದಿತು. ಆಕಾಶದಲ್ಲಿ ವಾಯುವು ವ್ಯಾಪಿಸಿರುವಂತೆ ಆ ಮಹಾಶಬ್ದವು ಸರ್ವತ್ರ ವ್ಯಾಪಿಸಿತು. ಆ ವನದಲ್ಲಿ ಹುಟ್ಟಿದ ಆ ಘೋರ ಶಬ್ದವು ಸಮಗ್ರವಾದ ಅಂತರಿಕ್ಷವನ್ನೇ ತುಂಬಿಬಿಡುವುದೋ ಎಂಬಂತೆ ಕಾಣುತ್ತಿದ್ದಿತು. ತಮ್ಮನ ಜೊತೆಯಲ್ಲಿದ್ದ ಶ್ರೀರಾಮನು ಆ ಶಬ್ದವು ಎಲ್ಲಿಂದ ಬಂದಿತೆಂಬುದನ್ನು ತಿಳಿಯಲು ಉತ್ಸುಕನಾಗಿದ್ದಾಗ ಪೊದರೊಂದರಲ್ಲಿ ವಿಶಾಲವಾದ ಎದೆಯಿಂದ ಕೂಡಿದ್ದ, ದೊಡ್ಡದಾದ ಶರೀರವನ್ನು ಹೊಂದಿದ್ದ ರಾಕ್ಷಸನೊಬ್ಬನನ್ನು ನೋಡಿದನು. ಆ ರಾಕ್ಷಸನಿಗೆ ತಲೆಯಾಗಲೀ ಕುತ್ತಿಗೆಯಾಗಲೀ ಇರಲಿಲ್ಲ. ಹೊಟ್ಟೆಯಲ್ಲಿ ಮುಖವಿದ್ದಿತು. ಅಂತಹ ಭಯಂಕರನಾದ ರಾಕ್ಷಸನ ಬಳಿಗೆ ರಾಮ-ಲಕ್ಷ್ಮಣರಿಬ್ಬರೂ ಹೋದರು. ಅವನ ಶರೀರದ ಮೇಲಿದ್ದ ಕೂದಲುಗಳು ನಿಬಿಡವಾಗಿಯೂ ಚೂಪಾಗಿಯೂ ಇದ್ದುವು. ಮಹಾಪರ್ವತದಂತೆ ರಾಕ್ಷಸನು ಬಹಳ ಎತ್ತರವಾಗಿದ್ದನು. ಕಾರ್ಮುಗಿಲಿನಂತೆ ಅವನ ಮೈಬಣ್ಣವಿದ್ದು ಬಹಳ ಭಯಂಕರನಾಗಿದ್ದನು. ಮೇಘಗಳಂತೆಯೇ ಗರ್ಜಿಸುತ್ತಿದ್ದನು. ಹೊಟ್ಟೆಯಲ್ಲಿದ್ದ ಮುಖದ ಹಣೆಯಲ್ಲಿ ಹುಬ್ಬಿನಿಂದಲೂ ಪಿಂಗಲವರ್ಣದಿಂದಲೂ ಕೂಡಿದ್ದ, ವಿಶಾಲವಾಗಿಯೂ ನೀಳವಾಗಿಯೂ ಇದ್ದ ಒಂದು ಕಣ್ಣಿದ್ದು ಅದು ಅಗ್ನಿಯ ಜ್ವಾಲೆಯಂತೆಯೇ ಪ್ರಕಾಶಿಸುತ್ತಿದ್ದಿತು. ಅವನ ಮುಖವು ಹೊಟ್ಟೆಯಲ್ಲಿದ್ದುದರಿಂದ ಸುಘೋರವಾದ ಆ ಕಣ್ಣು ಹಣೆಯ ಮಧ್ಯಭಾಗದಲ್ಲಿ ವಕ್ಷಃಸ್ಥಳದಲ್ಲಿದ್ದಿತು. ಮುಖದಲ್ಲಿ ದೊಡ್ಡದಾದ ಕೋರೆಹಲ್ಲುಗಳಿದ್ದು ಕರಾಳವಾಗಿ ಕಾಣುತ್ತಿದ್ದಿತು. ರಾಕ್ಷಸನು ನಾಲಿಗೆಯಿಂದ ಕಟವಾಯಿಗಳನ್ನು ನೆಕ್ಕುತ್ತಿದ್ದನು. ವಿಶಾಲವಾಗಿದ್ದ ಆ ಮುಖದಿಂದಲೇ ಕಬಂಧನು ಭಯಂಕರವಾಗಿದ್ದ ಕರಡಿ-ಹುಲಿ-ಸಿಂಹವೇ ಮೊದಲಾದ ಕಾಡುಪ್ರಾಣಿಗಳನ್ನೂ, ಜಿಂಕೆಗಳನ್ನೂ, ಪಕ್ಷಿಗಳನ್ನೂ, ಭಕ್ಷಿಸುತ್ತಿದ್ದನು. ಅವನಿಗೆ ಯೋಜನದಷ್ಟು ಉದ್ದವಾದ ಮಹಾಘೋರವಾದ ತೋಳುಗಳಿದ್ದುವು. ಅವನು ಎರಡು ತೋಳುಗಳನ್ನೂ ಬಹಳ ದೂರಕ್ಕೆ ಚಾಚಿ ಮೃಗಗಳನ್ನೂ,

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.


ತರಡಿಗಳನ್ನೂ, ಪಕ್ಷಿಗಳನ್ನೂ ಕೈಗಳಿಂದ ಸೆಳೆದುಕೊಳ್ಳುತ್ತಿದ್ದನು. ಹಾಗೆಯೇ ತನಗೆ ಬೇಡವಾದ ಅನೇಕಮೃಗಗಳ ಸಮೂಹಗಳನ್ನು ದೂರ ಕ್ಕೆಸೆಯುತ್ತಿದ್ದನು. ವಿನಯಶೀಲರಾಗಿದ್ದ ರಾಮ-ಲಕ್ಷ್ಮಣರು ಹೋಗು ತ್ತಿದ್ದ ಹಾದಿಯನ್ನು ಸಂಪೂರ್ಣವಾಗಿ ಆವರಿಸಿಕೊಂಡು ನಿಂತಿದ್ದನು. ರಾಮ-ಲಕ್ಷ್ಮಣರು ರಾಕ್ಷಸನಿಗೆ ಅಭಿಮುಖರಾಗಿ ನಿಂತು ಕ್ರೋಶದಷ್ಟು ಎತ್ತರವಾಗಿದ್ದ, ಮಹಾಕಾಯನಾಗಿದ್ದ, ಭಯಂಕರನಾಗಿದ್ದ, ದುಂಡಗಿ ನಾಗಿದ್ದ, ಉದ್ದವಾದ ಭುಜಗಳಿಂದ ಕೂಡಿದ್ದ, ದೇಹದ ರಚನೆಯಲ್ಲಿ ತಲೆಯಿಲ್ಲದ ದೇಹದಂತೆಯೇ ಇದ್ದು ಬಹಳ ಘೋರರೂಪನಾಗಿ ಕಾಣು ತ್ತಿದ್ದ ಕಬಂಧರಾಕ್ಷಸನನ್ನು ನೋಡಿದರು. ಮರುಕ್ಷಣವಲ್ಲಿಯೇ ಮಹಾ ಬಾಹುವಾದ ಕಬಂಧನು ತನ್ನ ವಿಪುಲವಾಗಿದ್ದ ತೋಳುಗಳನ್ನು ಬಹಳ ದೂರದವರೆಗೂ ಚಾಚಿ ರಾಮ-ಲಕ್ಷ್ಮಣರನ್ನು ಬಲಪೂರ್ವಕವಾಗಿ ಪೀಡಿ ಸುತ್ತಾ ಇಬ್ಬರನ್ನೂ ಒಟ್ಟಾಗಿಯೇ ಕೈಗಳಿಂದ ಹಿಡಿದೆಳೆದುಕೊಂಡನು. ರಾಮ-ಲಕ್ಷ್ಮಣರು ಖಡ್ಗಪಾಣಿಗಳಾಗಿದ್ದರೂ, ದೃಢವಾದ ಧನುಸ್ಸುಗಳನ್ನು ಹಿಡಿದಿದ್ದರೂ, ತೀಕ್ಷ್ಣವಾದ ತೇಜಸ್ಸಿನಿಂದ ಬೆಳಗುತ್ತಿದ್ದರೂ, ಮಹಾಭುಜ ರಾಗಿದ್ದರೂ, ಮಹಾಬಲಿಷ್ಠರಾಗಿದ್ದರೂ – ರಾಕ್ಷಸನ ಬಾಹುಪಾಶಗಳಿಂದ ಬಂಧಿಸಲ್ಪಟ್ಟು ಅವನಿಗೆ ಅಧೀನರಾಗಿ ಹೋದರು.

ಆ ಸಮಯದಲ್ಲಿ ಶೂರನಾಗಿದ್ದ ಶ್ರೀರಾಮನು ಧೈರ್ಯವನ್ನು ಆಶ್ರಯಿ ಸಿದ್ದರಿಂದ ವ್ಯಥೆಪಡಲಿಲ್ಲ. ಆದರೆ ಬಾಲಬುದ್ಧಿಯವನಾದ ಲಕ್ಷ್ಮಣನು ಧೈರ್ಯಗುಂದಿದುದರಿಂದ ಬಹಳವಾಗಿ ವ್ಯಥೆಪಡುತ್ತಾ ಅತ್ಯಂತವಿಷಣ್ಣನಾಗಿ ಅಣ್ಣನಿಗೆ ಹೇಳಿದನು :

"ಅಣ್ಣ! ನಾನೀಗ ಅಸ್ವತಂತ್ರನಾಗಿದ್ದೇನೆ. ರಾಕ್ಷಸನ ವಶನಾಗಿಬಿಟ್ಟಿ ದ್ದೇನೆ. ನೀನು ಮಹಾಭೂತಾಕಾರನಾಗಿರುವ ಈ ರಾಕ್ಷಸನಿಗೆ ನನ್ನನ್ನು ಬಲಿ ಯಾಗಿ ಅರ್ಪಿಸಿ ಇವನ ಹಿಡಿತದಿಂದ ಹೇಗಾದರೂ ಮಾಡಿ ತಪ್ಪಿಸಿಕೊಂಡು ಪಲಾಯನಮಾಡು. ನೀನು ವೈದೇಹಿಯನ್ನು ಬಹಳ ಬೇಗ ಪಡೆಯುವೆ ಯೆಂದು ನನ್ನ ಮನಸ್ಸು ಹೇಳುತ್ತಿದೆ. ತಾತ-ಮುತ್ತಾತರಿಂದ ಬಂದಿರುವ ರಾಜ್ಯವನ್ನು ಪಡೆದುಕೊಂಡು ಸಿಂಹಾಸನದಲ್ಲಿ ಕುಳಿತು ರಾಜ್ಯಾಧಿಕಾರವನ್ನು ನಡೆಸುವ ಸಮಯದಲ್ಲಿ ನನ್ನನ್ನು ನೆನೆಸಿಕೊ."

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

ಲಕ್ಷ್ಮಣನು ಹೀಗೆ ಹೇಳಲು ಶ್ರೀರಾಮನು ಅವನಿಗೆ ಧೈರ್ಯವನ್ನು ತುಂಬುತ್ತಾ ಹೇಳಿದನು :

" ಶೂರನೇ ! ಭಯಪಡಬೇಡ. ನಿನ್ನಂತಹವರು ಹೀಗೆಂದಿಗೂ ಧೈರ್ಯಗೆಡಬಾರದು."

ಶ್ರೀರಾಮನು ಹೀಗೆ ಹೇಳುತ್ತಿರುವಾಗಲೇ ದಾನವಶ್ರೇಷ್ಠನಾದ, ಕ್ರೂರನಾದ, ಮಹಾಬಾಹುವಾದ, ಮೇಘಧ್ವನಿಯುಳ್ಳ ಕಬಂಧನು ಇಬ್ಬರನ್ನೂ ಪ್ರಶ್ನಿಸಿದನು :

" ದೊಡ್ಡ-ದೊಡ್ಡ ಕತ್ತಿಗಳನ್ನೂ ಧನುಸ್ಸುಗಳನ್ನೂ ಹಿಡಿದಿರುವ, ಗೂಳಿಗಳಂತೆ ಹೆಗಲುಗಳುಳ್ಳ ನೀವು ಯಾರು ? ತಿಳಿದೋ ತಿಳಿಯದೆಯೋ ನೀವು ಭಯಂಕರವಾದ ಈ ಪ್ರದೇಶಕ್ಕೆ ಬಂದಿರುವಿರಿ. ಅದೃಷ್ಟವಶದಿಂದ ನನ್ನ ಕಣ್ಣಿಗೆ ಬಿದ್ದಿರುವಿರಿ. ಇಲ್ಲಿ ನಿಮಗೆ ಯಾವ ಕಾರ್ಯವಿದೆ ? ಯಾವ ಕಾರಣದಿಂದಾಗಿ ನೀವು ಇಲ್ಲಿಗೆ ಬಂದಿರುವಿರಿ–ಎಂಬುದನ್ನು ಹೇಳಿರಿ. ನಾನು ಹಸಿವಿನಿಂದ ಬಳಲಿ ನಿಂತಿದ್ದಾಗ ನೀವು ಈ ಪ್ರದೇಶಕ್ಕೆ ಆಗಮಿಸಿರುವಿರಿ. ಒಳ್ಳೆಯದೇ ಆಯಿತು. ಚೂಪಾದ ಕೊಂಬುಗಳಿರುವ ಎತ್ತುಗಳಂತೆ ನೀವು ಧನುರ್ಬಾಣಗಳನ್ನೇನೋ ಹಿಡಿದಿರುವಿರಿ. ಆದರೆ ಬಹಳ ಶೀಘ್ರವಾಗಿ ನನ್ನ ವಶರಾಗಿ ಬಿಟ್ಟಿರುವ ನಿಮ್ಮಿಬ್ಬರ ಜೀವಿತವೂ ದುರ್ಲಭವೇ ಸರಿ. ಜೀವಂತರಾಗಿ ನನ್ನಿಂದ ತಪ್ಪಿಸಿಕೊಂಡು ಹೋಗಲು ನಿಮಗೆ ಸಾಧ್ಯವಾಗುವುದಿಲ್ಲ."

ದುರಾತ್ಮನಾದ ಕಬಂಧನ ಆ ಮಾತುಗಳನ್ನು ಕೇಳಿ ಬಾಡಿಹೋದ ಮುಖಭಾವದಿಂದ ಕೂಡಿದ್ದ ಶ್ರೀರಾಮನು ಲಕ್ಷ್ಮಣನಿಗೆ ಹೇಳಿದನು :

" ಸತ್ಯವಿಕ್ರಮನೇ ! ನಮಗೆ ಸೀತೆಯಂತೂ ಸಿಕ್ಕಲಿಲ್ಲ. ಆದರೆ ಒಂದು ಕಷ್ಟದಿಂದ ಮತ್ತೊಂದು ದಾರುಣವಾದ ಕಷ್ಟವನ್ನು ಎದುರಿಸುತ್ತಲೇ ಇದ್ದೇವೆ. ಕಷ್ಟಗಳು ಒಂದಾದಮೇಲೆ ಮತ್ತೊಂದರಂತೆ ಪರಂಪರೆಯಾಗಿ ಬರುತ್ತಲೇ ಇವೆ. ಒಂದು ಕಷ್ಟಕ್ಕಿಂತ ಮತ್ತೊಂದು ಕಷ್ಟವು ಹೆಚ್ಚು ದಾರುಣವಾಗಿರುತ್ತದೆ. ಈಗ ಒದಗಿಬಂದಿರುವ ಆಪತ್ತು ನಮ್ಮ ಜೀವಿತವನ್ನೇ ಕೊನೆಗಾಣಿಸಬಹುದು. ಅಂತಹ ವ್ಯಸನವು ಈಗ ಪ್ರಾಪ್ತವಾಗಿದೆ. ಪ್ರಪಂಚದಲ್ಲಿರುವ ಎಲ್ಲ ಪ್ರಾಣಿಗಳ ವಿಷಯದಲ್ಲಿಯೂ ಕಾಲಪುರುಷನದೇ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಪರಮಾಧಿಕಾರವಾಗಿದೆ. ಅವನ ಪರಾಕ್ರಮವು ಅತುಲವಾದುದು. ಕಾಲ ಪುರುಷನ ಇಚ್ಛೆಯಂತೆ ನಾವಿಬ್ಬರೂ ಈಗ ಪರಂಪರೆಯಾಗಿ ಬರುತ್ತಿರುವ ವ್ಯಸನಗಳಿಂದ ವಿಮೋಹಿತರಾಗಿದ್ದೇವೆ. ಪ್ರಾಣಿವಲಯದಲ್ಲಿ ಕಾಲನಿಗೆ ಅಸಾಧ್ಯವಾದ ಕಾರ್ಯವೆಂಬುದೇ ಇಲ್ಲ. ಅವನು ಎಲ್ಲ ಪ್ರಾಣಿಗಳ ಮೇಲೂ ತನ್ನ ಹತೋಟಿಯನ್ನು ಇಟ್ಟೇ ಇರುತ್ತಾನೆ.

ಶೂರಾಶ್ಚ ಬಲವನ್ತಶ್ಚ ಕೃತಾಸ್ತ್ರಾಶ್ಚ ರಣಾಜಿರೇ ।
ಕಾಲಾಭಿಪನ್ನಾಃ ಸೀದನ್ತಿ ಯಥಾ ವಾಲುಕಸೇತವಃ ॥೪೯॥

ಶೂರರಾಗಲೀ, ಬಲಿಷ್ಠರಾಗಲೀ, ಅಸ್ತ್ರವಿದ್ಯಾವಿಶಾರದರೇ ಆಗಲೀ– ರಣರಂಗದಲ್ಲಿ ಕಾಲನ ಹಿಡಿತಕ್ಕೆ ಸಿಕ್ಕಿದರೆಂದರೆ–ಮಳಲಿನ ಸೇತುವೆಯಂತೆ ವಿನಾಶಹೊಂದುತ್ತಾರೆ."

ದೃಢವಿಕ್ರಮನಾದ, ಸತ್ಯಪರಾಕ್ರಮಿಯಾದ, ಮಹಾಯಶೋವಂತನಾದ, ಪ್ರತಾಪವಂತನಾದ ಶ್ರೀರಾಮನು ಲಕ್ಷ್ಮಣನ ಸ್ಥಿತಿಯನ್ನು ನೋಡಿ ತನ್ನ ಬುದ್ಧಿಯನ್ನು ಸ್ಥಿರವಾಗಿರಿಸಿಕೊಂಡನು. (ಧೈರ್ಯಗೆಡಲಿಲ್ಲ.)

೬೯ನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ ೭೦ನೆಯ ಸರ್ಗ

## ರಾಮ-ಲಕ್ಷ್ಮಣರು ಕಬಂಧನ ಎರಡು ಭುಜಗಳನ್ನೂ ಕತ್ತರಿಸಿದುದು: ಕಬಂಧನು ರಾಮ-ಲಕ್ಷ್ಮಣರನ್ನು ಸ್ವಾಗತಿಸಿದುದು

ತೌ ತು ತತ್ರ ಸ್ಥಿತೌ ದೃಷ್ಟ್ವಾ ಭ್ರಾತರೌ ರಾಮಲಕ್ಷ್ಮಣೌ ।
ಬಾಹುಪಾಶಪರಿಕ್ಷಿಪ್ತೌ ಕಬನ್ಧೋ ವಾಕ್ಯಮಬ್ರವೀತ್ ॥೧॥

ಬಾಹುಪಾಶಗಳಿಂದ ಬಂಧಿಸಲ್ಪಟ್ಟು ತನ್ನ ವಶರಾಗಿದ್ದ ರಾಮ-ಲಕ್ಷ್ಮಣರಿಗೆ ಕಬಂಧನು ಹೇಳಿದನು:

"ಕ್ಷತ್ರಿಯಶ್ರೇಷ್ಠರೇ! ಹಸಿವಿನಿಂದ ಪೀಡಿತನಾಗಿರುವ ನನ್ನನ್ನು ನೋಡುತ್ತಾ ನೀವೇಕೆ ಹೀಗೆ ನಿಂತಿರುವಿರಿ? ಬುದ್ಧಿಗೆಟ್ಟಿರುವ ನೀವು ನನ್ನ ಆಹಾರಾರ್ಥವಾಗಿ ದೈವದಿಂದಲೇ ನನ್ನ ಬಳಿಗೆ ಕಳುಹಿಸಲ್ಪಟ್ಟಿರುವಿರಿ."

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಕಬಂಧನ ಮಾತನ್ನು ಕೇಳಿ ದುಃಖತಪ್ತನಾದ ಲಕ್ಷ್ಮಣನು ಈ ಸಮಯದಲ್ಲಿ ಪರಾಕ್ರಮವನ್ನೇ ಅವಲಂಬಿಸಬೇಕೆಂದು ನಿಶ್ಚಯಿಸಿದವನಾಗಿ ತತ್ಕಾಲಯೋಗ್ಯವಾದ ಮತ್ತು ಹಿತಕರವಾದ ಮಾತನ್ನು ರಾಮನಿಗೆ ಹೇಳಿದನು :

"ಅಣ್ಣ ! ಈ ರಾಕ್ಷಸಾಧಮನು ನಮ್ಮಿಬ್ಬರನ್ನೂ ಬಹಳ ಬೇಗ ನುಂಗಿಬಿಡುತ್ತಾನೆ. ಆದುದರಿಂದ ನಾವೀಗಲೇ ಕತ್ತಿಗಳಿಂದ ಈ ರಾಕ್ಷಸನ ತೋಳುಗಳನ್ನು ಕತ್ತರಿಸಿಬಿಡೋಣ. ಮಹಾಕಾಯನಾದ ಇವನು ಬಹಳ ಭಯಂಕರನಾಗಿದ್ದಾನೆ. ಭುಜಗಳಲ್ಲಿಯೇ ಇವನ ಬಲ-ಪರಾಕ್ರಮಗಳೆಲ್ಲವೂ ಅಡಗಿವೆ. ಲೋಕವನ್ನೇ ಪರಾಜಯಗೊಳಿಸಿ ಈಗ ಇವನು ನಮ್ಮನ್ನೂ ಸಂಹರಿಸಲು ಬಯಸಿದ್ದಾನೆ.

ನಿಶ್ಚೇಷ್ಟಾನಾಂ ವಧೋ ರಾಜನ್ಕುತ್ಸಿತೋ ಜಗತೀಪತೇಃ ।
ಕ್ರತುಮಧ್ಯೋಪನೀತಾನಾಂ ಪಶೂನಾಮಿವ ರಾಘವ ॥೬॥

ಯಜ್ಞಕ್ಕಾಗಿ ತರಲ್ಪಡುವ ಪಶುಗಳನ್ನು ವಧಿಸುವಂತೆ-ಯಾವ ವಿಧವಾದ ಚೇಷ್ಟೆಯನ್ನೂ ಮಾಡದಿರುವ (ಪ್ರತೀಕಾರವನ್ನು ಮಾಡಲು ಅಸಮರ್ಥವಾದ) ಪ್ರಾಣಿಗಳನ್ನು ವಧಿಸುವುದು ರಾಜನಿಗೆ ನಿಂದ್ಯವಾದುದು. ಆದುದರಿಂದ ಇವನ ಭುಜಗಳನ್ನು ಮಾತ್ರವೇ ಕತ್ತರಿಸಿಹಾಕೋಣ."

ರಾಮ-ಲಕ್ಷ್ಮಣರು ಆಡಿಕೊಳ್ಳುತ್ತಿದ್ದ ಆ ಮಾತುಗಳನ್ನು ಕೇಳಿದ ರಾಕ್ಷಸನು ಪರಮಕ್ರುದ್ಧನಾಗಿ ಭಯಂಕರವಾಗಿದ್ದ ತನ್ನ ಬಾಯನ್ನು ಅಗಲವಾಗಿ ತೆರೆದು ಅವರಿಬ್ಬರನ್ನೂ ಭಕ್ಷಿಸಲು ಉಪಕ್ರಮಿಸಿದನು.

ಯಾವ ಕಾಲದಲ್ಲಿ, ಯಾವ ಸ್ಥಳದಲ್ಲಿ, ಯಾವ ಕಾರ್ಯವನ್ನು ಮಾಡಬೇಕೆಂಬುದನ್ನು ಚೆನ್ನಾಗಿ ತಿಳಿದಿದ್ದ ರಾಘವರು ಹೆಚ್ಚಿನ ಉತ್ಸಾಹದಿಂದ ಕಬಂಧನ ಎರಡು ತೋಳುಗಳನ್ನೂ ಹೆಗಲಿನ ಪ್ರದೇಶದಲ್ಲಿ ಕತ್ತಿಗಳಿಂದ ಕಡಿದುಹಾಕಿದರು. ಸಮರ್ಥನಾದ ಶ್ರೀರಾಮನು ಯಾವ ವಿಧವಾದ ಆತಂಕವೂ ಇಲ್ಲದೇ ರಾಕ್ಷಸನ ಬಲತೋಳನ್ನು ಕತ್ತರಿಸಿದನು. ಲಕ್ಷ್ಮಣನು ಎಡತೋಳನ್ನು ಕತ್ತರಿಸಿದನು. ಮಹಾಬಾಹುವಾದ ಗಟ್ಟಿಯಾಗಿ ಗರ್ಜನೆ ಮಾಡುತ್ತಿದ್ದ ರಾಕ್ಷಸನು ತೋಳುಗಳನ್ನು ಕಳೆದುಕೊಂಡೊಡನೆಯೇ ಮಹಾ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಮೇಘವಂತೆ ಭೂಮ್ಯಾಕಾಶಗಳನ್ನೂ, ದಿಕ್ಕುಗಳನ್ನೂ ಘೋರಗರ್ಜನೆಗಳಿಂದ ತುಂಬುತ್ತಾ ಕೆಳಕ್ಕೆ ಬಿದ್ದನು.



ರಕ್ತದ ಪ್ರವಾಹದಲ್ಲಿ ತೋಯ್ದುಹೋಗಿದ್ದ ರಾಕ್ಷಸನು–ಎರಡು ಭುಜಗಳೂ ತುಂಡಾಗಿರುವುದನ್ನು ಗಮನಿಸಿ ಅತ್ಯಂತದೀನನಾಗಿ ಆ ಇಬ್ಬರು ವೀರರನ್ನೂ – 'ಕೌ ಯುವಾಂ – ನೀವಿಬ್ಬರೂ ಯಾರು?' – ಎಂದು ಪ್ರಶ್ನಿಸಿದನು.

ಶುಭಲಕ್ಷಣಸಂಪನ್ನನಾದ ಮಹಾಬಲನಾದ ಲಕ್ಷ್ಮಣನು ಕಬಂಧನಿಗೆ ಶ್ರೀರಾಮನ ಪರಿಚಯಮಾಡಿಕೊಡುತ್ತಾ ಹೇಳಿದನು :

"ರಾಕ್ಷಸನೇ! ಇವನು ಇಕ್ಷ್ವಾಕುವಂಶದವನು. ರಾಮನೆಂಬ ಹೆಸರ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ನಿಂದ ಜನರಲ್ಲಿ ವಿಖ್ಯಾತನಾಗಿರುವನು. ನಾನು ಇವನ ಅನಂತರ ಹುಟ್ಟಿದವನು. ನನ್ನ ಹೆಸರು ಲಕ್ಷ್ಮಣ. ಚಿಕ್ಕತಾಯಿಯ ಕಾರಣದಿಂದಾಗಿ ಇವನ ರಾಜ್ಯಾಭಿಷೇಕವು ನಿಂತುಹೋಯಿತು. ಅಷ್ಟು ಮಾತ್ರವಲ್ಲ. ಅವಳು ಇವನನ್ನು ಕಾಡಿಗೂ ಅಟ್ಟಿಬಿಟ್ಟಳು. ನನ್ನೊಡನೆಯೂ ಭಾರ್ಯೆಯಾದ ಸೀತೆಯೊಡನೆಯೂ ಕಾಡಿಗೆ ಬಂದ ಇವನು ಈ ಮಹಾರಣ್ಯದಲ್ಲಿ ಸಂಚರಿಸುತ್ತಿದ್ದನು. ದೇವತೆಗಳಂತೆ ಪ್ರಭಾವಶಾಲಿಯಾದ ಇವನು ನಿರ್ಜನವಾದ ಅರಣ್ಯದಲ್ಲಿ ವಾಸಮಾಡುತ್ತಿದ್ದಾಗ ಇವನ ಭಾರ್ಯೆಯನ್ನು ರಾಕ್ಷಸನೊಬ್ಬನು ಅಪಹರಿಸಿಬಿಟ್ಟನು. ಅವಳನ್ನೇ ಹುಡುಕುತ್ತಾ ನಾವಿಲ್ಲಿಗೆ ಬಂದೆವು. ಇದು ನಮ್ಮ ಸೂಕ್ಷ್ಮಪರಿಚಯವಾಗಿದೆ. ಈಗ ನೀನಾರೆಂಬುದನ್ನು ಹೇಳು. ತಲೆಯಿಲ್ಲದ ಶರೀರದವನಂತೆ ನೀನೇಕೆ ಈ ಅರಣ್ಯದಲ್ಲಿರುವೆ ? ವಕ್ಷಃಸ್ಥಳದಲ್ಲಿ ಪ್ರದೀಪ್ತವಾಗಿರುವ ಮುಖದಿಂದ ಕೂಡಿ ತೊಡೆಗಳನ್ನು ಮುರಿದುಕೊಂಡು ಈ ಅರಣ್ಯದಲ್ಲೇಕೆ ತೆವಳುತ್ತಿರುವೆ ? "

ಹೀಗೆ ಲಕ್ಷ್ಮಣನು ಪ್ರಶ್ನಿಸಲು ಕಬಂಧನು ಇಂದ್ರನು ಹೇಳಿದ್ದ ಮಾತುಗಳನ್ನು ಸ್ಮರಿಸಿದನು. ಅನಂತರ ಅತ್ಯಂತಸಂತೋಷದಿಂದ ಲಕ್ಷ್ಮಣನ ಪ್ರಶ್ನೆಗಳಿಗೆ ಉತ್ತರಿಸಿದನು :

" ನರಶ್ರೇಷ್ಠರೇ ! ನಿಮಗೆ ಸ್ವಾಗತವು. ಭಾಗ್ಯವಶದಿಂದಲೇ ನಾನು ನಿಮ್ಮನ್ನು ಕಾಣುತ್ತಿದ್ದೇನೆ. ಸೌಭಾಗ್ಯದ ಕಾರಣದಿಂದಲೇ ನೀವು ನನ್ನ ಈ ತೋಳುಗಳನ್ನು ಕತ್ತರಿಸಿರುವಿರಿ. ಹಿಂದೆ ನಾನು ಮಾಡಿದ ಅವಿನಯದ ಕಾರಣದಿಂದ ನನ್ನ ಸುಂದರರೂಪವು ಹೋಗಿ ನನಗೆ ಈ ವಿರೂಪವು ಪ್ರಾಪ್ತವಾಯಿತು. ನನ್ನ ವಿಷಯವನ್ನು ಯಥಾವತ್ತಾಗಿ ಹೇಳುವೆನು ; ಕೇಳಿರಿ."

೭೦ನೆಯ ಸರ್ಗವು ಮುಗಿಯಿತು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



## ಕಬಂಧನ ಆತ್ಮಕಥೆ : ತನ್ನ ಶರೀರವನ್ನು ಸುಟ್ಟನಂತರ ಸೀತೆಯ ವಿಷಯವನ್ನು ತಿಳಿಸುವುದಾಗಿ ಕಬಂಧನು ಆಶ್ವಾಸನೆಯನ್ನಿತ್ತುದು

ಪುರಾ ರಾಮ ಮಹಾಬಾಹೋ ಮಹಾಬಲಪರಾಕ್ರಮ ।
ರೂಪಮಾಸೀನ್ಮಮಾಚಿನ್ತ್ಯಂ ತ್ರಿಷು ಲೋಕೇಷು ವಿಶ್ರುತಮ್ ।
ಯಥಾ ಸೂರ್ಯಸ್ಯ ಸೋಮಸ್ಯ ಶಕ್ರಸ್ಯ ಚ ಯಥಾ ವಪುಃ ॥೧॥

"ಮಹಾಬಲಪರಾಕ್ರಮನೇ ! ಮಹಾಬಾಹುವೇ ! ರಾಮಭದ್ರ ! ಮೂರು ಲೋಕಗಳಲ್ಲಿಯೂ ವಿಖ್ಯಾತವಾದ ಅಚಿಂತ್ಯವಾದ ರೂಪವೇ ಹಿಂದೆ ನನಗಿದ್ದಿತು. ಸೂರ್ಯ-ಚಂದ್ರೇಂದ್ರರ ಶರೀರಗಳಂತೆಯೇ ತೇಜೋವಿಶಿಷ್ಟವಾದ ಶರೀರವು ನನ್ನದಾಗಿದ್ದಿತು.

ನಾನು ಅಂತಹ ರೂಪವಂತನಾಗಿದ್ದರೂ ಈ ಭಯಂಕರರೂಪವನ್ನು ತಾಳಿ ಲೋಕಕ್ಕೇ ಭಯವನ್ನುಂಟುಮಾಡುತ್ತಿದ್ದೆನು. ಅರಣ್ಯದಲ್ಲಿರುತ್ತಿದ್ದ ಋಷಿಗಳಿಗೆ ನಾನಾವಿಧವಾದ ತೊಂದರೆಗಳನ್ನು ಕೊಡುತ್ತಿದ್ದೆನು.

ಒಮ್ಮೆ ಸ್ಥೂಲಶಿರಸನೆಂಬ ಮುನಿಯು ಗೆಡ್ಡೆ-ಗೆಣಸುಗಳನ್ನು ಸಂಗ್ರಹಿಸುತ್ತಿದ್ದಾಗ ಈ ಘೋರರೂಪದಿಂದಲೇ ನಾನು ಅವನ ಬಳಿಗೆ ಹೋಗಿ ಅವನನ್ನು ಭಯಪಡಿಸಿದೆನು. ಅದರಿಂದ ಮಹರ್ಷಿಯು ಕುಪಿತನಾದನು. ದಾರುಣವಾದ ಶಾಪಕೊಡುವ ಸ್ವಭಾವವನ್ನು ಹೊಂದಿದ್ದ ಆ ಮುನಿಯು ನನ್ನ ಈ ಘೋರರೂಪವನ್ನು ನೋಡಿ ಹೇಳಿದನು :

ಏತದೇವ ನೃಶಂಸಂ ತೇ ರೂಪಮಸ್ತು ವಿಗರ್ಹಿತಮ್ ॥೪॥

"ಅತಿನಿಂದ್ಯವಾದ ಮತ್ತು ಅತಿಕ್ರೂರವಾದ ಇದೇ ರೂಪವೇ ನಿನಗೆ ಶಾಶ್ವತವಾಗಿ ಉಳಿಯಲಿ."

ನನ್ನ ಅಪರಾಧದಿಂದಲೇ ಋಷಿಯ ಮಹಾಶಾಪಕ್ಕೊಳಗಾದ ನಾನು ಶಾಪದ ಬಿಡುಗಡೆಯನ್ನು ಸೂಚಿಸಬೇಕೆಂದು ಕ್ರುದ್ಧನಾಗಿದ್ದ ಸ್ಥೂಲಶಿರಸ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಮುನಿಯನ್ನು ಬಹಳವಾಗಿ ಬೇಡಿಕೊಂಡೆನು. ನನ್ನ ದೀನಪ್ರಾರ್ಥನೆಯಿಂದ ಪ್ರಸನ್ನನಾದ ಮಹರ್ಷಿಯು ಹೇಳಿದನು :

ಯದಾ ಛಿತ್ತ್ವಾ ಭುಜೌ ರಾಮಸ್ತ್ವಾಂ ದಹೇದ್ವಿಜನೇ ವನೇ ।
ತದಾ ತ್ವಂ ಪ್ರಾಪ್ಸ್ಯಸೇ ರೂಪಂ ಸ್ವಮೇವ ವಿಪುಲಂ ಶುಭಮ್ ॥ ೬॥

'ಎಂದು ಶ್ರೀರಾಮನು ನಿನ್ನ ಎರಡು ಭುಜಗಳನ್ನೂ ಕಡಿದು ನಿರ್ಜನವಾದ ಅರಣ್ಯಪ್ರದೇಶದಲ್ಲಿ ನಿನ್ನ ದೇಹವನ್ನು ಸುಡುವನೋ-ಅಂದು ನೀನು ವಿಪುಲವಾದ, ಶುಭಾವಹವಾದ ಮತ್ತು ಕಾಂತಿಯಿಂದ ರಾರಾಜಿಸುವ ನಿನ್ನ ಸಹಜವಾದ ರೂಪವನ್ನು ಪಡೆಯುವೆ' – ಎಂದು ಹೇಳಿ ಸ್ಥೂಲಶಿರಸನು ತಪಸ್ಸಿನಲ್ಲಿ ಮಗ್ನನಾದನು.

ಲಕ್ಷ್ಮಣ! ನನ್ನನ್ನು ದನುವಿನ ಪುತ್ರನೆಂದು ತಿಳಿ. ಈ ಕುತ್ಸಿತವಾದ ರೂಪವು ನನಗೆ ಬರಲು ರಣರಂಗದಲ್ಲಿ ಇಂದ್ರನ ಕೋಪವೂ ಒಂದು ಕಾರಣವಾಯಿತು. ಉಗ್ರವಾದ ತಪಸ್ಸಿನಿಂದ ನಾನು ಪಿತಾಮಹನನ್ನು ಸಂತೋಷಗೊಳಿಸಿದೆನು. ತುಷ್ಟನಾದ ಪಿತಾಮಹನು ನನಗೆ ದೀರ್ಘಾಯುಷ್ಯವನ್ನು ಅನುಗ್ರಹಿಸಿದನು. ಆದರಿಂದ ನನ್ನ ತಲೆಯು ತಿರುಗಿತು.

ದೀರ್ಘಮಾಯುರ್ಮಯಾ ಪ್ರಾಪ್ತಂ ಕಿಂ ಮಾಂ ಶಕ್ರಃ ಕರಿಷ್ಯತಿ ।

'ದೀರ್ಘಾಯುಷ್ಯವನ್ನು ನಾನು ಬ್ರಹ್ಮನಿಂದಲೇ ಪಡೆದುಕೊಂಡಿರುವಾಗ ಇಂದ್ರನು ನನ್ನನ್ನೇನು ಮಾಡಬಲ್ಲನು?' – ಎಂಬ ಅಹಂಕಾರದ ಬುದ್ಧಿಯು ನನಗುಂಟಾಯಿತು. ಆ ಅಹಂಕಾರದಿಂದಲೇ ನಾನು ಇಂದ್ರನನ್ನು ಯುದ್ಧಕ್ಕೆ ಆಹ್ವಾನಿಸಿದೆನು. ಇಂದ್ರನು ನನ್ನ ಮೇಲೆ ಮಾಡಿದ ವಜ್ರಾಯುಧದ ಪ್ರಹಾರದಿಂದಾಗಿ ನನ್ನ ಶಿರಸ್ಸು ಮತ್ತು ತೊಡೆಗಳು ಶರೀರದೊಳಗೆ ಸೇರಿಕೊಂಡುವು. ನಾನವನನ್ನು ಬಹಳವಾಗಿ ಪ್ರಾರ್ಥಿಸಲು ಅವನು ನನ್ನನ್ನು ಯಮಾಲಯಕ್ಕೆ ಕಳುಹಿಸದೇ ಜೀವಸಹಿತವಾಗಿ ಬಿಟ್ಟುಬಿಟ್ಟನು. 'ಪಿತಾಮಹನು ನಿನಗೆ ಅನುಗ್ರಹಿಸಿರುವ ದೀರ್ಘಾಯುಷ್ಯವು ಸತ್ಯವಾಗಿಯೇ ಉಳಿಯಲಿ'–ಎಂದು ಇಂದ್ರನು ನನ್ನೊಡನೆ ಹೇಳಿದನು. ಬಳಿಕ ನಾನು ಇಂದ್ರನನ್ನು ಪುನಃ ಪ್ರಾರ್ಥಿಸಿಕೊಂಡೆನು.

"ದೇವೇಂದ್ರ! ವಜ್ರಾಯುಧದ ಪ್ರಹಾರದಿಂದಾಗಿ ನಾನು ಶಿರಸ್ಸನ್ನೂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ತೊಡೆಗಳನ್ನೂ ಕಳೆದುಕೊಂಡಿದ್ದೇನೆ. ಸಂಚರಿಸಲು ಅವಕಾಶವಿಲ್ಲದಿರುವಾಗ ಆಹಾರವನ್ನು ಪಡೆದುಕೊಳ್ಳುವುದು ಕಷ್ಟ. ಆಹಾರವನ್ನೇ ತೆಗೆದುಕೊಳ್ಳದೇ ಬಹಳ ಕಾಲದವರೆಗೆ ನಾನು ಹೇಗೆ ತಾನೇ ಬದುಕಿರುವೆನು ?"

ನಾನು ಇಂದ್ರನಿಗೆ ಹೀಗೆ ಹೇಳಲು ಇಂದ್ರನು ನನಗೆ ಯೋಜನದಷ್ಟು ಉದ್ದವಾಗಿದ್ದ ತೋಳುಗಳನ್ನೇ ದಯಪಾಲಿಸಿದನು. ನನ್ನ ಹೊಟ್ಟೆಯಲ್ಲಿಯೇ ತೀಕ್ಷ್ಣವಾದ ಕೋರೆಹಲ್ಲುಗಳಿಂದ ಕೂಡಿರುವ ಮುಖವನ್ನೂ ಕಲ್ಪಿಸಿಕೊಟ್ಟನು. ಇಂದ್ರನ ಆ ವರಪ್ರಸಾದದಿಂದಾಗಿ ನಾನು ಈ ನನ್ನ ಉದ್ದವಾದ ಭುಜಗಳಿಂದಲೇ ಕಾಡಿನಲ್ಲಿ ತಿರುಗಾಡುತ್ತೇನೆ. ಅಲ್ಲಲ್ಲಿ ಸಿಕ್ಕುವ ಸಿಂಹ-ಗಜ-ಮೃಗ-ವ್ಯಾಘ್ರಗಳನ್ನು ಸೆಳೆದು ತಂದು ಭಕ್ಷಿಸುತ್ತೇನೆ. ನಾನು ನಿಜಸ್ವರೂಪವನ್ನು ಹೊಂದುವ ಕಾಲವನ್ನು ಇಂದ್ರನೂ ಸೂಚಿಸಿದ್ದನು. 'ಯದಾ ರಾಮಃ ಸಲಕ್ಷ್ಮಣಃ । ಛೇತ್ಸ್ಯತೇ ಸಮರೇ ಬಾಹೂ ತದಾ ಸ್ವರ್ಗಂ ಗಮಿಷ್ಯಸಿ ॥೧೩॥ ಲಕ್ಷ್ಮಣಸಹಿತನಾಗಿ ರಾಮನು ಯಾವಾಗ ನಿನ್ನೆರಡು ತೋಳುಗಳನ್ನು ಕತ್ತರಿಸುವನೋ-ಆಗ ನಿನ್ನ ಶಾಪವಿಮೋಚನೆಯಾಗಿ ನೀನು ಸ್ವರ್ಗಕ್ಕೆ ತೆರಳುವೆ.'

ರಾಜಶ್ರೇಷ್ಠನೇ ! ಈ ಅರಣ್ಯದಲ್ಲಿ ನಾನು ಈ ಶರೀರದಿಂದ ಯಾವ ಯಾವ ಪ್ರಾಣಿಗಳನ್ನು ನೋಡುವೆನೋ ಅವೆಲ್ಲವನ್ನೂ ಹಿಡಿಯುವುದರಲ್ಲಿ ಆಸಕ್ತನಾಗಿರುವೆನು. ಕಾರಣವೇನೆಂದರೆ : ಮಹರ್ಷಿಯ ಮತ್ತು ಇಂದ್ರನ ಮಾತಿನಂತೆ 'ರಾಮನು ಬಂದೇ ಬರುವನು ಮತ್ತು ನಾನು ಅವನನ್ನು ಅವಶ್ಯವಾಗಿ ಹಿಡಿದೇ ಹಿಡಿಯುವೆನು'-ಎಂಬುದನ್ನು ನಾನು ತಿಳಿದಿದ್ದೆನು. ದೃಢವಾದ ಈ ಬುದ್ಧಿಯನ್ನು ಹೊಂದಿದ್ದ ನಾನು ವಿಕಾರವಾದ ಈ ದೇಹದ ತ್ಯಾಗದಲ್ಲಿ ಸರ್ವದಾ ಪ್ರಯತ್ನಶೀಲನಾಗಿಯೇ ಇರುತ್ತಿದ್ದೆನು. ನೀನು ಆ ರಾಮನೇ ಆಗಿರುವೆ. ನಿನಗೆ ಮಂಗಳವಾಗಲಿ. ನಾನು ಬೇರೆಯವರಿಂದ ಎಂದಿಗೂ ವಧಿಸಲ್ಪಡತಕ್ಕವನಲ್ಲ. ರಾಮನೆ ಬಾಹುಗಳನ್ನು ಭೇದಿಸುವನೆಂಬ ಸತ್ಯವಾದ ಮಾತನ್ನು ಮಹರ್ಷಿಯೇ ನನಗೆ ಹೇಳಿದ್ದನು. ನರಶ್ರೇಷ್ಠನೇ ! ನೀವಿಬ್ಬರೂ ಸೇರಿ ನನಗೆ ದಹನಸಂಸ್ಕಾರವನ್ನು ಮಾಡಿರಿ. ಅನಂತರ ನಾನು ನಿಮಗೆ ಕೆಲವು ಹಿತವಚನಗಳನ್ನು ಹೇಳುವೆನು. ಹಾಗೂ ನಿಮಗೆ ಒಬ್ಬ ಒಳ್ಳೆಯ ಮಿತ್ರನನ್ನೂ ಪರಿಚಯಿಸಿಕೊಡುವೆನು."

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ದನುವಿನ ಮಗನಾದ ಕಬಂಧನು ಮಹಾತ್ಮನಾದ ಶ್ರೀರಾಮನಿಗೆ ಹೀಗೆ ಹೇಳಲು ಶ್ರೀರಾಮನು ಲಕ್ಷ್ಮಣನೂ ಕೇಳುವಂತೆಯೇ ಕಬಂಧನಿಗೆ ಹೀಗೆ ಹೇಳಿದನು :

"ಕಬಂಧ! ನಾನು ತಮ್ಮನಾದ ಲಕ್ಷ್ಮಣನೊಡನೆ ಜನಸ್ಥಾನದಿಂದ ಹೊರಟುಹೋಗಿದ್ದೆನು. ಆ ಸಮಯದಲ್ಲಿ ಯಶೋವತಿಯಾದ, ನನ್ನ ಭಾರ್ಯೆಯಾದ ಸೀತಾದೇವಿಯನ್ನು ರಾವಣನು ನಿರಾಯಾಸವಾಗಿ ಅಪಹರಿಸಿಕೊಂಡುಹೋದನು. ನಮಗೆ ಅವನ ಹೆಸರು ಮಾತ್ರ ತಿಳಿದಿರುವುದೇ ಹೊರತು ಅವನ ರೂಪವಾಗಲೀ, ಅವನು ವಾಸಮಾಡುತ್ತಿರುವ ಸ್ಥಳವಾಗಲೀ, ಅವನ ಪ್ರಭಾವವಾಗಲೀ–ತಿಳಿಯದಾಗಿದೆ. ಶೋಕಪೀಡಿತರಾಗಿರುವ, ಅನಾಥರಾಗಿರುವ, ದಿಕ್ಕುಗಾಣದೇ ಕಂಡ-ಕಂಡೆಡೆಗಳಲ್ಲಿ ಸೀತೆಯನ್ನು ಹುಡುಕುವ ಸಲುವಾಗಿ ಅಲೆದಾಡುತ್ತಿರುವ ನಮ್ಮ ವಿಷಯದಲ್ಲಿ ಸಮುಚಿತವಾದ ಕಾರುಣ್ಯವನ್ನು ತೋರಿ ಉಪಕರಿಸು. ನಿನ್ನ ಪ್ರಾರ್ಥನೆಯಂತೆ ಹಿಂದೆಯೇ ಆನೆಗಳಿಂದ ಮುರಿದುಹಾಕಲ್ಪಟ್ಟು ಈಗ ಒಣಗಿಹೋಗಿರುವ ಕಟ್ಟಿಗೆಗಳನ್ನು ಸಂಗ್ರಹಿಸಿ ದೊಡ್ಡ ಗುಂಡಿಯೊಂದನ್ನು ತೋಡಿ ಅದರಲ್ಲಿ ನಿನ್ನನ್ನು ಹಾಕಿ ಅಗ್ನಿಸಂಸ್ಕಾರವನ್ನು ಮಾಡುತ್ತೇವೆ. ಅದಕ್ಕೆ ಮೊದಲು ನೀನು ಸೀತೆಯ ಸಮಾಚಾರವನ್ನು ಪೂರ್ಣವಾಗಿ ಹೇಳು. ನೀನು ಅವಳ ವಿಷಯವನ್ನು ಯಥಾವತ್ತಾಗಿ ತಿಳಿದಿರುವೆಯಾದರೆ–ಯಾರಿಂದ ಅಪಹೃತಳಾಗಿ ಎಲ್ಲಿಗೆ ಒಯ್ಯಲ್ಪಟ್ಟಳೆಂಬುದನ್ನು ಸ್ಪಷ್ಟವಾಗಿ ಹೇಳು. ಇದರಿಂದ ನಮಗೆ ಹೆಚ್ಚು ಒಳ್ಳೆಯದನ್ನು ಮಾಡಿದಂತಾಗುವುದು."

ಶ್ರೀರಾಮನು ದಾನವನಿಗೆ ಸರ್ವಶ್ರೇಷ್ಠವಾದ ಈ ಮಾತನ್ನು ಹೇಳಲು ಮಾತನಾಡುವುದರಲ್ಲಿ ಅತ್ಯಂತಕುಶಲನಾದ ಕಬಂಧನು ತನ್ನಂತೆಯೇ ವಾಗ್ಮಿಯಾದ ರಾಮನಿಗೆ ಹೇಳಿದನು :

ದಿವ್ಯಮಸ್ತಿ ನ ಮೇ ಜ್ಞಾನಂ ನಾಭಿಜಾನಾಮಿ ಮೈಥಿಲೀಮ್ ।
ಯಸ್ತಾಂ ಜ್ಞಾಸ್ಯತಿ ತಂ ವಕ್ಷ್ಯೇ ದಗ್ಧಃ ಸ್ವಂ ರೂಪಮಾಸ್ಥಿತಃ ॥

"ರಾಮ! ನನಗೀಗ ದಿವ್ಯಜ್ಞಾನವಿಲ್ಲ. ಆದುದರಿಂದ ಮೈಥಿಲಿಯ ಯಾವ ಒಂದು ವಿಷಯವೂ ನನಗೆ ತಿಳಿಯದು. ನಿನ್ನಿಂದ ದಹಿಸಲ್ಪಟ್ಟು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ನಿಜಸ್ವರೂಪವನ್ನು ಪಡೆದುಕೊಂಡನಂತರ ನನಗೆ ದಿವ್ಯಜ್ಞಾನವುಂಟಾಗುತ್ತದೆ. ಆಗ ನಿನಗೆ ಯಾರು ಅವಳ ಸಮಾಚಾರವನ್ನು ಹೇಳಬಲ್ಲನೋ ಅಂತಹ ವರನ್ನು ನಿನಗೆ ತಿಳಿಸಿಕೊಡುತ್ತೇನೆ. ನನ್ನ ಪೂರ್ವರೂಪವನ್ನು ಪಡೆದು ಕೊಳ್ಳದಿದ್ದರೆ ಸೀತೆಯ ವಿಷಯವನ್ನು ತಿಳಿದು ಹೇಳುವ ಶಕ್ತಿಯು ನನ್ನ ಲ್ಲಿರುವುದಿಲ್ಲ. ನನ್ನ ದಹನವಾಗದೇ ಸೀತೆಯನ್ನು ಅಪಹರಿಸಿರುವ ಮಹಾ ವೀರನಾದ ಆ ರಾಕ್ಷಸನನ್ನು ತಿಳಿಯುವ ಸಾಮರ್ಥ್ಯವು ನನಗಿಲ್ಲವಾಗಿದೆ. ಶಾಪದ ದೋಷದಿಂದಾಗಿ ನನ್ನಲ್ಲಿದ್ದ ಅತೀಂದ್ರಿಯಜ್ಞಾನವೇ ಭ್ರಷ್ಟವಾಗಿ ಹೋಗಿದೆ. ನನ್ನ ಅಪರಾಧದಿಂದಲೇ ಲೋಕನಿಂದ್ಯವಾದ ಈ ಘೋರರೂಪವು ನನಗೆ ಬಂದಂತಾಗಿದೆ. ರಾಮಭದ್ರ! ಬಳಲಿರುವ ಕುದುರೆಗಳಿಂದ ಕೂಡಿ ರುವ (ಮೆಲ್ಲ-ಮೆಲ್ಲನೆ ಅಸ್ತಾಚಲವನ್ನು ಸೇರುತ್ತಿರುವ) ಸೂರ್ಯನು ಮುಳುಗುವುದರೊಳಗಾಗಿಯೇ ನನ್ನನ್ನು ಆಳವಾದ ಹಳ್ಳದಲ್ಲಿ ಹಾಕಿ ಯಥಾ ವಿಧಿಯಾಗಿ ದಹಿಸಿ ಸಂಸ್ಕರಿಸು. ದಹನಸಂಸ್ಕಾರವಾದನಂತರ ರಾಕ್ಷಸನ ಸಮಾಚಾರವನ್ನು ತಿಳಿದಿರುವವನ ಪರಿಚಯವನ್ನು ನಾನುಮಾಡಿ ಕೊಡುತ್ತೇನೆ. ಸೀತೆಯನ್ನು ಅಪಹರಿಸಿರುವ ರಾಕ್ಷಸನ ವೃತ್ತಾಂತವನ್ನು ತಿಳಿ ದಿರುವ ನ್ಯಾಯತತ್ಪರನಾದ ಅವನೊಡನೆ ನೀನು ಸಖ್ಯವನ್ನು ಮಾಡಿಕೊಳ್ಳ ಬೇಕು. ನಿನ್ನ ಸಖ್ಯದಿಂದ ಸುಪ್ರೀತನಾಗುವ ಅವನು ನಿನಗೆ ಖಂಡಿ ತವಾಗಿಯೂ ಸಹಾಯಮಾಡುತ್ತಾನೆ. ಅವನಿಗೆ ಈ ಮೂರು ಲೋಕಗಳಲ್ಲಿ ತಿಳಿಯದಿರುವ ವಿಷಯವೇ ಇಲ್ಲ. ಕಾರಣಾಂತರದಿಂದ ಅವನು ಹಿಂದೆ ಈ ಎಲ್ಲ ಲೋಕಗಳಲ್ಲಿಯೂ ಸುತ್ತಾಡಿರುವನು."

ಎಪ್ಪತ್ತೊಂದನೆಯ ಸರ್ಗವು ಮುಗಿಯಿತು.



CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.


## ರಾಮ-ಲಕ್ಷ್ಮಣರಿಂದ ಕಬಂಧನ ದಹನ: ದಿವ್ಯರೂಪವನ್ನು ಪಡೆದ ದನುಪುತ್ರನಿಂದ ಸುಗ್ರೀವನೊಡನೆ ಮೈತ್ರಿಯನ್ನು ಬೆಳೆಸುವಂತೆ ರಾಮನಿಗೆ ಸಲಹೆ

ಏವಮುಕ್ತೌ ತು ತೌ ವೀರೌ ಕಬನ್ಧೇನ ನರೇಶ್ವರೌ ।
ಗಿರಿಪ್ರದರಮಾಸಾದ್ಯ ಪಾವಕಂ ವಿಸಸರ್ಜತುಃ ॥೧॥

ನರೇಶ್ವರರಾದ ರಾಮ-ಲಕ್ಷ್ಮಣರಿಗೆ ಕಬಂಧನು ಹೀಗೆ ಹೇಳಲು ವೀರರಿಬ್ಬರೂ ಪರ್ವತದ ಕಂದರವೊಂದರಲ್ಲಿ ಚಿತೆಯನ್ನು ಸಿದ್ಧಗೊಳಿಸಿ ಕಬಂಧನ ಶರೀರವನ್ನು ಮೇಲಿಟ್ಟು ಬೆಂಕಿಯನ್ನು ಮುಟ್ಟಿಸಿದರು. ಲಕ್ಷ್ಮಣನು ಉರಿಯುತ್ತಿರುವ ಕೊಳ್ಳಿಗಳಿಂದ ಚಿತೆಯ ಸುತ್ತಲೂ ಬೆಂಕಿಯನ್ನು ಹೊತ್ತಿಸಿದನು. ಚಿತೆಯ ಸುತ್ತಲೂ ಬೆಂಕಿಯು ಹೊತ್ತಿಕೊಂಡು ಧಗ-ಧಗನೆ ಉರಿಯಲಾರಂಭಿಸಿತು. ಮೇದಸ್ಸಿನಿಂದ ತುಂಬಿಹೋಗಿದ್ದ, ತುಪ್ಪದ ಉಂಡೆಯಂತೆಯೇ ಇದ್ದ ಕಬಂಧನ ಶರೀರವನ್ನು ಅಗ್ನಿಯು ಮೆಲ್ಲ-ಮೆಲ್ಲನೆ ಸುಡುತ್ತಿದ್ದಿತು. ದೊಡ್ಡದಾಗಿದ್ದ ಕಬಂಧನ ಶರೀರವು ಸಂಪೂರ್ಣವಾಗಿ ಭಸ್ಮವಾದನಂತರ ಮಹಾಬಲನಾದ ಕಬಂಧನು ದಿವ್ಯರೂಪವನ್ನು ಧರಿಸಿ ಚಿತೆಯನ್ನು ಪಕ್ಕಕ್ಕೆ ಸರಿಸಿ ಹೊಗೆಯಿಲ್ಲದ ಅಗ್ನಿಯಂತೆ ಮೇಲೆದ್ದು ಬಂದನು. ಆ ಸಮಯದಲ್ಲವನು ಕೊಳೆಯಿಲ್ಲದ (ಶುಭ್ರವಾದ) ವಸ್ತ್ರವನ್ನೂ ದಿವ್ಯವಾದ ಮಾಲೆಯನ್ನೂ ಧರಿಸಿದ್ದನು. ಬಹಳ ವೇಗವಾಗಿ ಚಿತೆಯಿಂದ ಮೇಲಕ್ಕೆ ಹಾರಿದನು. ಆ ಸಮಯದಲ್ಲವನು ದಿವ್ಯವಾದ ಕಾಂತಿಯಿಂದ ಬೆಳಗುತ್ತಿದ್ದನು. ಧೂಳಿಲ್ಲದ ಶುಭ್ರವಾಗಿದ್ದ ಬಟ್ಟೆಯನ್ನು ತೊಟ್ಟಿದ್ದನು. ಕೈಗಳಲ್ಲಿ ಉಂಗುರಗಳನ್ನೂ, ಕಿವಿಗಳಲ್ಲಿ ಕುಂಡಲಗಳನ್ನೂ, ಭುಜಗಳಲ್ಲಿ ಭುಜಕೀರ್ತಿಗಳನ್ನೂ, ವಕ್ಷಃಸ್ಥಳದಲ್ಲಿ ಕಂಠೀಹಾರವನ್ನೂ ತಲೆಯಲ್ಲಿ ಕಿರೀಟವನ್ನೂ ಧರಿಸಿದ್ದನು. ಮಹಾತೇಜಸ್ವಿಯಾಗಿದ್ದ ಕಬಂಧನು ಮೇಲಕ್ಕೆ ಹಾರಿ ಅಂತರಿಕ್ಷದಲ್ಲಿ ಹಂಸಗಳಿಂದ ನಿಯುಕ್ತವಾಗಿದ್ದ ಪ್ರಕಾಶಮಾನವಾಗಿದ್ದ ವಿಮಾನದಲ್ಲಿ ಕುಳಿತು ತನ್ನ ಪ್ರಭೆಯಿಂದ ಎಲ್ಲ ದಿಕ್ಕುಗಳನ್ನೂ ಬೆಳಗುತ್ತಾ ರಾಮನಿಗೆ ಹೇಳಿದನು:

"ರಾಮ! ಸೀತೆಯನ್ನು ಹೇಗೆ ಪಡೆಯುವೆಯೆಂಬುದನ್ನು ಯಥಾ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಪತ್ತಾಗಿ ಹೇಳುವೆನು ; ಕೇಳು. ಲೋಕದಲ್ಲಿ ಎಲ್ಲರೂ ಅನುಸರಿಸಲೇಬೇಕಾದ ಆರು ಯುಕ್ತಿಗಳಿವೆ.* ಆ ಆರು ಯುಕ್ತಿಗಳ ಮೂಲಕವಾಗಿಯೇ ರಾಜರ ಎಲ್ಲ ಕಾರ್ಯಗಳೂ ವಿಮರ್ಶಿಸಲ್ಪಡುತ್ತವೆ. ದುರ್ದಶೆಯಲ್ಲಿರತಕ್ಕವನು ದೌರ್ಭಾಗ್ಯದಲ್ಲಿರುವವನನ್ನೇ ಸೇವಿಸಬೇಕಾಗುತ್ತದೆ. ( ಕಷ್ಟದಲ್ಲಿರುವವಂಗೆ ಕಷ್ಟದಲ್ಲಿರುವವರೇ ಸಹಾಯಕರಾಗುತ್ತಾರೆ.) ನೀನಿಂದು ದುರ್ದಶೆಯನ್ನು ಹೊಂದಿ ಲಕ್ಷ್ಮಣನೊಡನೆ ಹೀನಾವಸ್ಥೆಯಲ್ಲಿರುವೆ. ಈ ಕಾರಣದಿಂದಲೇ ನಿನಗೆ ಹೆಂಡತಿಯ ಅಪಹರಣದ ವ್ಯಸನವೂ ಉಂಟಾಗಿದೆ.

ಸುಹೃದರಲ್ಲಿ ಶ್ರೇಷ್ಠನಾದವನೇ ! ನೀನು ಅವಶ್ಯವಾಗಿ ನಿನ್ನಂತೆಯೇ ದುರ್ದಶೆಯಲ್ಲಿರುವ ಒಬ್ಬನನ್ನು ಸ್ನೇಹಿತನನ್ನಾಗಿ ಮಾಡಿಕೊಳ್ಳಬೇಕು. ಇಲ್ಲದಿದ್ದರೆ ಎಷ್ಟೇ ಚಿಂತಿಸಿದರೂ ನಿನ್ನ ಕಾರ್ಯಸಿದ್ಧಿಯಾಗುವುದೆಂದು ನಾನು ಭಾವಿಸುವುದಿಲ್ಲ. ಆದುದರಿಂದ ನಿನ್ನ ಕಾರ್ಯವು ಸಿದ್ಧಿಸಬೇಕಾದರೆ ನಿನ್ನಂತೆಯೇ ಕಷ್ಟದಲ್ಲಿರುವ ಮತ್ತೊಬ್ಬನನ್ನು ಹುಡುಕಿ ಅವನೊಡನೆ ಮೈತ್ರಿಯನ್ನು ಬೆಳೆಸಬೇಕು. ಈ ಸಮಯದಲ್ಲಿ ನಿನಗೆ ಮಿತ್ರನಾಗಲು ಯೋಗ್ಯನಾದವನು ಯಾರೆಂಬುದನ್ನು ಹೇಳುವೆನು ; ಕೇಳು. ಪಂಪಾ ಸರೋವರದ ಪರಿಸರದಿಂದ ಶೋಭಾಯಮಾನವಾಗಿ ಕಾಣುತ್ತಿರುವ ಋಷ್ಯ ಮೂಕವೆಂಬ ಶ್ರೇಷ್ಠವಾದ ಪರ್ವತವಿದೆ. ಅಲ್ಲಿ ನಾಲ್ಕು ಮಂದಿ ವಾನರ ರೊಡನೆ ಸುಗ್ರೀವನೆಂಬ ವಾನರಶ್ರೇಷ್ಠನಿದ್ದಾನೆ. ಇಂದ್ರನ ಮಗನಾದ ವಾಲಿಯೇ ಅವನ ಅಣ್ಣ. ಕಾರಣಾಂತರಗಳಿಂದ ಕ್ರುದ್ಧನಾದ ವಾಲಿಯು ಸುಗ್ರೀವನನ್ನು ರಾಜ್ಯಭ್ರಷ್ಟನನ್ನಾಗಿ ಮಾಡಿರುವನು. ಸುಗ್ರೀವನೂ ಸಾಮಾನ್ಯನಲ್ಲ. ಕಪಿಶ್ರೇಷ್ಠನಾದ ಅವನು ಮಹಾವೀರ್ಯನು. ಮಹಾ ತೇಜಸ್ವಿಯು. ಅಮಿತವಾದ ಕಾಂತಿಯುಳ್ಳವನು. ಸತ್ಯಸಂಧನು. ವಿನಯ ಶೀಲನು. ಧೈರ್ಯವಂತನು. ಬುದ್ಧಿವಂತನು. ಮಹಾತ್ಮನು. ಕಾರ್ಯ ದಕ್ಷನು. ವಾಗ್ಮಿಯು. ಮಹಾಬಲಿಷ್ಠನು ಮತ್ತು ಅತಿಶಯವಾದ ಪರಾಕ್ರಮ ವುಳ್ಳವನು. ಅಣ್ಣನಾದ ಮಹಾತ್ಮನಾದ ವಾಲಿಯು ಅಖಂಡವಾದ ಕಿಷ್ಕಿಂಧಾ

* ಸಂಧಿ, ವಿಗ್ರಹ, ಯಾನ, ಆಸನ, ದ್ವೈಧೀಭಾವ, ಸಮಾಶ್ರಯ–ಇವು ಆರು ಯುಕ್ತಿಗಳು.



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ರಾಜ್ಯವನ್ನು ತಾನೊಬ್ಬನೇ ಆಳಬೇಕೆಂಬ ದುರಾಸೆಯಿಂದ ಸುಗ್ರೀವನನ್ನು ರಾಜ್ಯಭ್ರಷ್ಟನನ್ನಾಗಿ ಮಾಡಿರುವನು. ಅವನೂ ನಿನ್ನಂತೆಯೇ ಕಷ್ಟದಲ್ಲಿರುವುದರಿಂದ ನಿನಗೆ ಯೋಗ್ಯನಾದ ಮಿತ್ರನಾಗುತ್ತಾನೆ ಮತ್ತು ಸೀತೆಯನ್ನು ಹುಡುಕುವುದರಲ್ಲಿ ಸಹಾಯಕನೂ ಆಗುತ್ತಾನೆ. ಆದುದರಿಂದ ಇನ್ನು ಮೇಲಾದರೂ ನೀನು ಮನಸ್ಸನ್ನು ದುಃಖಕ್ಕೆ ಈಡುಮಾಡಬೇಡ.

ಭವಿತವ್ಯಂ ಹಿ ಯಚ್ಚಾಪಿ ನ ತಚ್ಛಕ್ಯಮಿಹಾನ್ಯಥಾ ।
ಕರ್ತುಮಿಕ್ಷ್ವಾಕುಶಾರ್ದೂಲ ಕಾಲೋ ಹಿ ದುರತಿಕ್ರಮಃ ॥೧೩॥

ಇಕ್ಷ್ವಾಕುಕುಲಶ್ರೇಷ್ಠನೇ! ಆಗಬೇಕಾದುದು ಆಗಿಯೇ ತೀರುತ್ತದೆ. ಅದನ್ನು ಯಾವುದೇ ಕಾರಣದಿಂದಲೂ ಬದಲಾಯಿಸಲು ಸಾಧ್ಯವೇ ಆಗುವುದಿಲ್ಲ. ಕಾಲವನ್ನು ಅತಿಕ್ರಮಿಸಲು ಯಾರಿಂದಲೂ ಸಾಧ್ಯವಾಗುವುದೇ ಇಲ್ಲ.

ವೀರನೇ! ರಾಘವ! ಶೀಘ್ರವಾಗಿ ಹೋಗು. ಈಗಲೇ ನೀನು ಹೋಗಿ ಸುಗ್ರೀವನನ್ನು ಸ್ನೇಹಿತನನ್ನಾಗಿ ಮಾಡಿಕೋ. ನೀವಿಬ್ಬರೂ ಒಟ್ಟಾಗಿ ಸೇರಿ ಪರಸ್ಪರದ್ರೋಹಚಿಂತನೆಯಿಲ್ಲದೇ ಇರುವುದಕ್ಕಾಗಿ ಪ್ರಜ್ವಲಿಸುವ ಅಗ್ನಿಯ ಸಮ್ಮುಖದಲ್ಲಿ ಮೈತ್ರಿಯನ್ನು ಮಾಡಿಕೊಳ್ಳಿರಿ. ಸುಗ್ರೀವನು ವಾನರನೆಂಬ ಕಾರಣದಿಂದ ಅವನನ್ನು ನೀನು ಅವಮಾನಿಸಬಾರದು. ಅವನು ಕೃತಜ್ಞನು. ಮಾಡಿದ ಉಪಕಾರವನ್ನು ಸ್ಮರಿಸುವವನು. ಯಾವುದೇ ರೂಪವನ್ನಾದರೂ ಹೊಂದುವ ಸಾಮರ್ಥ್ಯವಿರುವವನು. ವೀರ್ಯವಂತನಾಗಿದ್ದರೂ ಪ್ರಕೃತದಲ್ಲಿ ನಿನ್ನ ಸಹಾಯವನ್ನು ಅಪೇಕ್ಷಿಸುತ್ತಾನೆ. ಅವನು ಅಪೇಕ್ಷಿಸುವ ಕಾರ್ಯವನ್ನು ಮಾಡಿಕೊಡಲು ನೀವಿಬ್ಬರೂ ಸಮರ್ಥರಾಗಿರುವಿರಿ. ಅವನು ನಿಮ್ಮೊಡನೆ ಮೈತ್ರಿಯನ್ನು ಬೆಳೆಸಿದನಂತರ ನಿಮ್ಮಿಂದ ಪ್ರಯೋಜನವನ್ನು ಪಡೆಯಲಿ ಅಥವಾ ಪಡೆಯದೆಯೇ ಇರಲಿ–ನಿನ್ನ ಕಾರ್ಯವನ್ನಂತೂ ಅವನು ತಪ್ಪದೇ ಮಾಡಿಕೊಡುತ್ತಾನೆ.

ಸುಗ್ರೀವನು ಋಕ್ಷರಜಸ ಎಂಬುವನಲ್ಲಿ* ಸೂರ್ಯನಿಂದ ಹುಟ್ಟಿ

---

*ಋಕ್ಷರಜಸನು ವಾನರಕುಲದ ಮೂಲಪುರುಷ. ಬ್ರಹ್ಮನು ಮೇರುಪರ್ವತದಲ್ಲಿ ತಪಸ್ಸು ಮಾಡುತ್ತಿದ್ದಾಗ ಅವನ ಕಣ್ಣೀರಿನಿಂದ ಋಕ್ಷರಜಸನು ಹುಟ್ಟಿದನು. ಅವನು ಬ್ರಹ್ಮನ ಅಪ್ಪಣೆಯಂತೆ ಆ ಸುತ್ತಮುತ್ತಲ ವನದಲ್ಲಿ ಸಂಚರಿಸುತ್ತಿದ್ದಾಗ ಒಮ್ಮೆ ಅಲ್ಲಿನ ಸರೋವರದಲ್ಲಿ ಇಣುಕಿನೋಡುತ್ತಿದ್ದಾಗ ಅದರೊಳಗೆ ತನ್ನ ಪ್ರತಿಬಿಂಬವನ್ನು ಕಂಡು ಅದರೊಡನೆ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಪವನು. ವಾಲಿಯೊಡನೆ ವೈರವನ್ನು ಕಟ್ಟಿಕೊಂಡಿರುವ ಅವನು ವಾಲಿಯ ಭಯದಿಂದಾಗಿ ಪಂಪಾತೀರದಲ್ಲಿ ಅಲೆದಾಡುತ್ತಿದ್ದಾನೆ. ಋಶ್ಯಮೂಕಪರ್ವತ ವನ್ನೇ ನಿವಾಸಸ್ಥಾನವನ್ನಾಗಿ ಮಾಡಿಕೊಂಡಿರುವ ವನಚರನಾದ ಕಪೀಶ್ವರ ನನ್ನು ಸತ್ಯಪ್ರತಿಜ್ಞೆಯ ಮೂಲಕವಾಗಿ ಅಗ್ನಿಯ ಸಮೀಪದಲ್ಲಿ ಆಯುಧವ ನ್ನಿಟ್ಟು ಅಗ್ನಿಸಾಕ್ಷಿಯಾಗಿ ಮಿತ್ರನನ್ನಾಗಿ ಮಾಡಿಕೊ. ಕಪಿಶ್ರೇಷ್ಠನಾದ ಸುಗ್ರೀವನು ತನ್ನ ಬುದ್ಧಿನೈಪುಣ್ಯದಿಂದ ಮಾಂಸಾಶಿಗಳಾದ ಎಲ್ಲ ರಾಕ್ಷಸರ ನೆಲೆಗಳನ್ನೂ ಸಂಪೂರ್ಣವಾಗಿ ತಿಳಿದಿರುವನು. ಎಲ್ಲಿಯವರೆಗೆ ಸೂರ್ಯನ ಬೆಳಕು ಪ್ರಸರಿಸಿರುವುದೋ–ಅಲ್ಲಿಯವರೆಗೂ ಈ ಭೂಮಂಡಲದಲ್ಲಿ ಸುಗ್ರೀವ ನಿಗೆ ತಿಳಿಯದಿರುವುದೇ ಯಾವುದೂ ಇಲ್ಲ. ಅವನು ತನ್ನ ಅನುಯಾಯಿ ಗಳಾದ ಕಪಿಗಳೊಡನೆ ನದಿಗಳ ತೀರಪ್ರದೇಶಗಳಲ್ಲಿಯೂ ವಿಸ್ತಾರವಾದ ಪರ್ವತಪ್ರದೇಶಗಳಲ್ಲಿಯೂ, ಗಿರಿ-ದುರ್ಗ-ಕಂದರಪ್ರದೇಶಗಳಲ್ಲಿಯೂ ಹುಡುಕಿ ನಿನ್ನ ಪತ್ನಿಯನ್ನು ತಂದೊಪ್ಪಿಸುತ್ತಾನೆ. ನಿನ್ನ ವಿಯೋಗದಿಂದ ದುಃಖಪಡು ತ್ತಿರುವ ಸೀತಾದೇವಿಯನ್ನು ಹುಡುಕುವ ಸಲುವಾಗಿ ಮಹಾಕಾಯರಾದ ವಾನರರನ್ನು ಎಲ್ಲ ದಿಕ್ಕುಗಳಿಗೂ ಕಳುಹಿಸುತ್ತಾನೆ. ಸುಂದರಾಂಗಿಯಾದ ಮೈಥಿಲಿಯನ್ನು ರಾವಣನ ಅರಮನೆಯಲ್ಲಿಯೂ ಹುಡುಕಿಸುತ್ತಾನೆ. ನಿನ್ನ ಪ್ರಿಯತಮೆಯಾದ ಸೀತಾದೇವಿಯು ಮೇರುಪರ್ವತಶಿಖರದ ತುತ್ತತುದಿ ಯಲ್ಲೇ ಇರಲಿ, ಪಾತಾಲದಲ್ಲಿಯೇ ಆಶ್ರಯವನ್ನು ಪಡೆದಿರಲಿ–ಕಪಿಶ್ರೇಷ್ಠ ನಾದ ಸುಗ್ರೀವನು ಅಲ್ಲಿಗೂ ಹೋಗಿ ಅವಳನ್ನು ಹುಡುಕಿ ಕರೆತರುತ್ತಾನೆ.

---

ಹೋರಾಡಬೇಕೆಂದು ಸರೋವರದಲ್ಲಿ ಧುಮುಕಿದನು. ಒಳಗೆಲ್ಲಾ ಹುಡುಕಿದರೂ ಯಾರೂ ಸಿಗಲಿಲ್ಲ. ಮೇಲಕ್ಕೆ ಬರುವಷ್ಟರಲ್ಲಿ ಹೆಂಗಸಾಗಿದ್ದನು. ಅದೇ ಸಮಯದಲ್ಲಿ ಅಸ್ತಮಿ ಸುತ್ತಿದ್ದ ಸೂರ್ಯನೂ, ಬ್ರಹ್ಮಸಂದರ್ಶನಕ್ಕಾಗಿ ಹೋಗುತ್ತಿದ್ದ ಇಂದ್ರನೂ ಆ ನಾರಿ ಯನ್ನು ನೋಡಿ ಮೋಹಗೊಂಡರು. ಇಂದ್ರನ ತೇಜಸ್ಸು ಬಾಲದ ಮೇಲೆ ಬಿದ್ದು ವಾಲಿಯು ಹುಟ್ಟಿದನು. ಸೂರ್ಯನ ತೇಜಸ್ಸು ಕುತ್ತಿಗೆಯಲ್ಲಿ ಬಿದ್ದು ಸುಗ್ರೀವನು ಹುಟ್ಟಿದನು. ಬೆಳಗಾಗುವಷ್ಟರಲ್ಲಿ ಹೆಣ್ಣಾಗಿದ್ದ ಋಕ್ಷರಜಸನು ಪುನಃ ಗಂಡಸಾದನು. ಬ್ರಹ್ಮನಲ್ಲಿ ಹೋಗಿ ವಿಷಯವನ್ನು ಹೇಳಿದಾಗ ಬ್ರಹ್ಮನು ಮಕ್ಕಳನ್ನು ಕರೆದುಕೊಂಡು ಕಿಷ್ಕಿಂಧೆಯಲ್ಲಿ ರಾಜ್ಯಭಾರಮಾಡುವಂತೆ ಋಕ್ಷರಜಸನಿಗೆ ಹೇಳಿದನು. ಬ್ರಹ್ಮನ ಅಪ್ಪಣೆ ಯಂತೆ ಋಕ್ಷರಜಸನು ಕಿಷ್ಕಿಂಧೆಯಲ್ಲಿ ಸ್ವಲ್ಪಕಾಲ ರಾಜ್ಯವಾಳುತ್ತಿದ್ದು ವಾಲಿಗೆ ಪಟ್ಟಗಟ್ಟಿ, ಸುಗ್ರೀವನನ್ನು ಯುವರಾಜನನ್ನಾಗಿ ಮಾಡಿ ತಪಸ್ಸಿಗೆ ಹೊರಟುಹೋದನು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಆಕೆಯು ರಾಕ್ಷಸರ ಮಧ್ಯದಲ್ಲಿದ್ದರೂ ಅಲ್ಲಿಗೂ ಹೋಗಿ ರಾಕ್ಷಸರನ್ನು ಸಂಹರಿಸಿ ಸೀತೆಯನ್ನು ಕರೆತಂದು ನಿನಗೊಪ್ಪಿಸುತ್ತಾನೆ."

೭೨ನೆಯ ಸರ್ಗವು ಮುಗಿಯಿತು.



ದಿವ್ಯರೂಪವನ್ನು ಧರಿಸಿದ ಕಬಂಧನು ರಾಮ-ಲಕ್ಷ್ಮಣರಿಗೆ
ಋಷ್ಯಮೂಕಪರ್ವತದ ಮಾರ್ಗವನ್ನು ತೋರಿಸಿ
ಮತಂಗಮುನಿಯ ವನವನ್ನೂ ಮತ್ತು ಆಶ್ರಮವನ್ನೂ
ಪರಿಚಯಿಸಿ ತನ್ನ ಧಾಮಕ್ಕೆ ತೆರಳಿದುದು

ನಿದರ್ಶಯಿತ್ವಾ ರಾಮಾಯ ಸೀತಾಯಾಃ ಪರಿಮಾರ್ಗಣೇ ।
ವಾಕ್ಯಮನ್ವರ್ಥಮರ್ಥಜ್ಞಃ ಕಬನ್ಧಃ ಪುನರಬ್ರವೀತ್ ॥೧॥

ವಿಷಯಜ್ಞನಾದ ಕಬಂಧನು ಶ್ರೀರಾಮನಿಗೆ ಸೀತೆಯನ್ನು ಹುಡುಕುವ ಉಪಾಯವನ್ನು ಸೂಚಿಸಿ ತಾನು ಹಿಂದೆ ಹೇಳಿದುದಕ್ಕೆ ಸಂಬಂಧಿಸಿದಂತೆಯೇ ಇದ್ದ ಮಾತನ್ನು ಪುನಃ ಹೇಳಿದನು :

"ರಾಮ ! ಅದೋ ನೋಡು ! ಅಲ್ಲಿ ಮನೋಹರವಾದ ಹೂಗಳಿರುವ ವೃಕ್ಷಗಳು ಪಶ್ಚಿಮದಿಕ್ಕಿನುದ್ದಕ್ಕೂ ಪ್ರಕಾಶಮಾನವಾಗಿ ಕಾಣುತ್ತಿವೆಯಲ್ಲವೇ ? ಆ ಮೂಲಕ ಹಾದುಹೋಗಿರುವ ಹಾದಿಯೇ ನಿನಗೆ ಶುಭದಾಯಕವು. ಆ ಮರಗಳ ಸಮೂಹದಲ್ಲಿ ನೇರಳೆ-ಮಾವು-ಹಲಸು-ಆಲ-ಅರಳಿ-ತಿಂದುಕ-ಅಶ್ವತ್ಥ-ಕಣಿಗಲೆ - ಮಾವು - ಧನ್ವನ - ನಾಗಕೇಸರ - ತಿಲಕ-ನಕ್ತಮಾಲಿಕಾ-ನೀಲ-ಅಶೋಕ-ಕದಂಬ-ಕರವೀರ-ಗೇರು-ಅಶೋಕ-ರಕ್ತಚಂದನ-ಮಂದಾರ–ಇವೇ ಮೊದಲಾದ ಫಲ-ಪುಷ್ಪಗಳಿಂದ ತುಂಬಿರುವ ವೃಕ್ಷಗಳಿವೆ. ಆ ಮರಗಳನ್ನು ಹತ್ತಿ ಅಥವಾ ಬಲಪೂರ್ವಕವಾಗಿ ಅವುಗಳ ರೆಂಬೆಗಳನ್ನು ಬಗ್ಗಿಸಿ ಅವುಗಳಲ್ಲಿರುವ ಅಮೃತಸದೃಶವಾದ ಹಣ್ಣುಗಳನ್ನು ತಿನ್ನುತ್ತಾ ನೀವಿಬ್ಬರೂ ಪ್ರಯಾಣಮಾಡಿರಿ. ಆ ವನವನ್ನು ದಾಟಿ ಮುಂದೆ ಹೋದರೆ ಅಲ್ಲಿ ಉತ್ತರಕುರುಗಳ ದೇಶದಂತೆಯೇ ಇರುವ, ನಂದನವನಕ್ಕೆ ಸಮಾನವಾದ ಹೂಬಿಟ್ಟ ಮರಗಳಿರುವ ಮತ್ತೊಂದು ವನಪ್ರದೇಶವಿದೆ. ಚೈತ್ರರಥವನದಲ್ಲಿ ಎಲ್ಲ ಋತುಗಳ ಸಮಾಗಮವೂ ಇರುವಂತೆ–ಎಲ್ಲ ಕಾಲಗಳಲ್ಲಿಯೂ ಇಷ್ಟವಾದ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಎಲ್ಲ ಫಲಗಳನ್ನೂ ನೀಡುವ ಮತ್ತು ಮಧುವನ್ನು ಸರ್ವಕಾಲದಲ್ಲಿಯೂ ಸುರಿಸುವ ವೃಕ್ಷಗಳು ಅಲ್ಲಿವೆ. ಹಣ್ಣುಗಳ ಭಾರದಿಂದ ಬಗ್ಗಿರುವ, ಮೇಘ ಮತ್ತು ಪರ್ವತಗಳಿಗೆ ಸದೃಶವಾದ ದೊಡ್ಡ-ದೊಡ್ಡ ರೆಂಬೆಗಳನ್ನು ಹೊಂದಿರುವ ವೃಕ್ಷಗಳು ಆ ವನದ ಎಲ್ಲ ಕಡೆಗಳಲ್ಲಿಯೂ ಇದ್ದು ಶೋಭಾಯಮಾನವಾಗಿ ಕಾಣುತ್ತವೆ. ಆ ವೃಕ್ಷಗಳನ್ನು ಹತ್ತಿಯೋ ಅಥವಾ ನೆಲದಲ್ಲಿಯೇ ನಿಂತು ರೆಂಬೆಗಳನ್ನು ಕೆಳಕ್ಕೆ ಜಗ್ಗಿಸಿಯೋ-ಹೇಗೆ ಅನುಕೂಲವೋ ಹಾಗೆ-ಅಮೃತಕ್ಕೆ ಸಮಾನವಾದ ಹಣ್ಣುಗಳನ್ನು ಲಕ್ಷ್ಮಣನು ನಿನಗೆ ಕಿತ್ತುಕೊಡುತ್ತಾನೆ. ನಾನು ಹೇಳಿದ ಆ ಮಾರ್ಗದಲ್ಲಿ ನೀವು ಶ್ರೇಷ್ಠವಾದ ಪರ್ವತಗಳಲ್ಲಿ ಸುತ್ತಾಡುತ್ತಾ ಒಂದು ಪರ್ವತದಿಂದ ಮತ್ತೊಂದು ಪರ್ವತಕ್ಕೂ-ಒಂದು ವನದಿಂದ ಮತ್ತೊಂದು ವನಕ್ಕೂ ಹೋಗುತ್ತಾ ಪಂಪಾ ಎಂಬ ಪುಷ್ಕರಿಣಿಯ ತೀರವನ್ನು ಸೇರುವಿರಿ. ಆ ಸರೋವರದಲ್ಲಿ ಕಾಲಿಗೆ ಘಾಸಿಯನ್ನುಂಟುಮಾಡುವ ನೊರಜುಗಲ್ಲುಗಳಿಲ್ಲ. ಅದರ ದಡವು ಯಾವಾಗಲೂ ಕುಸಿಯುವುದಿಲ್ಲ. ನಾಲ್ಕು ಕಡೆಗಳಲ್ಲಿಯೂ ಅಚ್ಚುಕಟ್ಟಾದ ಸೋಪಾನಗಳಿಂದ ಕೂಡಿದೆ. ಅಲ್ಲಿ ಪಾಚಿಯಿಲ್ಲ. ಮಧ್ಯ-ಮಧ್ಯದಲ್ಲಿ ಮಳಲಿನ ದಿಣ್ಣೆಗಳಿವೆ. ಅದು ಕಮಲಗಳಿಂದಲೂ ಕನ್ನೈದಿಲೆಗಳಿಂದಲೂ ಪರಿಶೋಭಿಸುತ್ತಿದೆ. ಆ ಸರೋವರದಲ್ಲಿ ಕಲಹಂಸಗಳೂ, ನೀರುಕೋಳಿಗಳೂ, ಕುರರಗಳೂ ಸುಮಧುರವಾದ ಕಂಠದಿಂದ ಧ್ವನಿಮಾಡುತ್ತಿರುತ್ತವೆ. ತಮ್ಮನ್ನು ಯಾರಾದರೂ ಯಾವಾಗಲಾದರೂ ಬೇಟೆಯಾಡುವರೆಂಬ ಸಂದೇಹವೇ ಎಂದೂ ಇಲ್ಲದಿರುವ ಆ ಪಕ್ಷಿಗಳು ಮನುಷ್ಯರನ್ನು ನೋಡಿ ಉದ್ವೇಗದಿಂದ ಓಡಿಹೋಗುವುದಿಲ್ಲ. ಬೆಣ್ಣೆಯ ಉಂಡೆಯಂತೆ ಸ್ಥೂಲವಾಗಿರುವ ಆ ಪಕ್ಷಿಗಳನ್ನು ಹಿಡಿದು ಆಹಾರವಾಗಿ ಸೇವಿಸಿರಿ. ಪಂಪಾಸರೋವರದಲ್ಲಿರುವ ಕೆಂಪುಮೀನುಗಳನ್ನೂ, ವಕ್ರವಾದ ಮುಖವುಳ್ಳ ಮೀನುಗಳನ್ನೂ, ನಡಗಳೆಂಬ ಮೀನುಗಳನ್ನೂ ಬಾಣಗಳಿಂದ ಸಂಹರಿಸಿ ಅವುಗಳ ಮೇಲಿನ ತೊಗಟೆಯನ್ನೂ, ರೆಕ್ಕೆಗಳನ್ನೂ ತೆಗೆದು ದಪ್ಪವಾಗಿರುವ ಮತ್ತು ಮುಳ್ಳುಗಳಿಲ್ಲದೇ ಇರುವ ಆ ಮೀನುಗಳನ್ನು ಬಾಣದ ಅಗ್ರಭಾಗದಲ್ಲಿ ಚುಚ್ಚಿ ಬೆಂಕಿಯಲ್ಲಿ ಬೇಯಿಸಿ-ನಿನ್ನ ವಿಷಯದಲ್ಲಿ ವಿಶೇಷವಾದ ಭಕ್ತಿಯಿರುವ ಲಕ್ಷ್ಮಣನು-ನಿನಗೆ ತಿನ್ನಲು ಕೊಡುತ್ತಾನೆ. ಹಾಗೆ ಪಂಪಾ ಸರೋವರದ ಶುಚಿ-ರುಚಿಯಾದ ಆ ಮೀನುಗಳನ್ನು ಅಧಿಕವಾಗಿ ತಿನ್ನುವ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ನಿನಗೆ–ಕಮಲಪುಷ್ಪಗಳ ಸಮೂಹದಲ್ಲಿರುವ ಸುಗಂಧಯುಕ್ತವಾದ, ಶುಭಕರ ವಾದ, ಸುಖಕರವಾದ, ಶೀತಲವಾದ, ಆರೋಗ್ಯದಾಯಕವಾದ, ಬೆಳ್ಳಿ ಯಂತೆ ಮತ್ತು ಸ್ಫಟಿಕದಂತೆ ಸ್ವಚ್ಛವಾದ, ಕಲ್ಮಶವಿಲ್ಲದ ತೀರ್ಥವನ್ನು ಕಮಲದೆಲೆಯಲ್ಲಿ ಹಿಡಿದು ತಂದು ಲಕ್ಷ್ಮಣನು ನಿನಗೆ ಕುಡಿಸುತ್ತಾನೆ. ಪರ್ವ ತದ ಗುಹೆಗಳಲ್ಲಿ ಮಲಗುವ, ಅರಣ್ಯಸಂಚಾರಿಗಳಾದ ಹಂದಿಗಳನ್ನು ಲಕ್ಷ್ಮಣನು ಸಾಯಂಕಾಲದ ವೇಳೆಯಲ್ಲಿ ಅರಣ್ಯದಲ್ಲಿ ಸಂಚರಿಸುತ್ತಾ ನಿನಗೆ ತೋರಿಸುತ್ತಾನೆ. ನರೋತ್ತಮನೇ! ರಾಘವ! ನೀರುಕುಡಿಯಬೇಕೆಂಬ ಆಸೆಯಿಂದ ಸರೋವರದ ಸಮೀಪಕ್ಕೆ ಬರುವ, ಗೂಳಿಗಳಂತೆಯೇ ಗರ್ಜಿಸುವ, ಸ್ಥೂಲವಾಗಿರುವ ಹೊಂಬಣ್ಣದ ಹಂದಿಗಳನ್ನು ಪಂಪಾಸರೋವರದ ಸಮೀಪ ದಲ್ಲಿ ನೀನು ನೋಡುವೆ. ಸಾಯಂಕಾಲದ ವೇಳೆಯಲ್ಲಿ ಪುಷ್ಪಸಮೃದ್ಧಿಯಿಂದ ಹೂಗಳಮಾಲೆಗಳನ್ನು ಧರಿಸಿರುವುವೋ ಎಂಬಂತೆ ಕಾಣುವ ನಯನಮನೋ ಹರವಾದ ವೃಕ್ಷಗಳನ್ನೂ, ಸರೋವರದ ಶುಭಜಲವನ್ನೂ ನೋಡುವ ನೀನು ಸೀತಾವಿಯೋಗದಿಂದ ಆಗಿರುವ ದುಃಖವನ್ನು ಸ್ವಲ್ಪವಾದರೂ ಮರೆಯುವ. ಸುಮನೋಹರವಾದ ಪುಷ್ಪಗಳಿಂದ ಸಮೃದ್ಧವಾದ ತಿಲಕವೃಕ್ಷಗಳನ್ನೂ, ಹೊಂಗೇಮರಗಳನ್ನೂ, ಅರಳಿರುವ ನೀಲಕಮಲಗಳನ್ನೂ, ಶ್ವೇತಕಮಲ ಗಳನ್ನೂ ಪಂಪಾಸರೋವರದ ಪರಿಸರದಲ್ಲಿ ಕಾಣುವ ನಿನಗೆ ಭಾರ್ಯಾ ವಿಯೋಗದ ದುಃಖವು ಕಮ್ಮಿಯಾಗುತ್ತದೆ. ಸುಗಂಧಯುಕ್ತವಾದ ಆ ಪುಷ್ಪ ಗಳನ್ನು ಬಿಡಿಸಿ ಯಾವ ಮನುಷ್ಯನೂ ಅಲಂಕರಿಸಿಕೊಳ್ಳಲು ಹೋಗುವುದಿಲ್ಲ. ಆ ಪುಷ್ಪಗಳು ಯಾವಾಗಲೂ ಬಾಡಿಹೋಗುವುದಿಲ್ಲ; ಅವುಗಳ ದಳಗಳೂ ಉದುರಿಹೋಗುವುದಿಲ್ಲ. ರಾಮ! ಆ ಪುಷ್ಪಗಳ ವಿಷಯದಲ್ಲಿ ಒಂದು ಐತಿಹ್ಯವೂ ಇದೆ. ಹಿಂದೆ ಪಂಪಾಸರೋವರದ ತೀರಪ್ರದೇಶದಲ್ಲಿಯೇ ಶಿಷ್ಯ ರೊಡನೆ ಮತಂಗಮಹರ್ಷಿಗಳಿದ್ದರು. ಏಕಾಗ್ರಚಿತ್ತರಾಗಿದ್ದ ಮಹರ್ಷಿಗಳ ಶಿಷ್ಯರು ಗುರುಗಳ ಸಲುವಾಗಿ ಕಾಡಿನಲ್ಲಿ ಸಿಕ್ಕುವ ಗೆಡ್ಡೆ-ಗೆಣಸುಗಳನ್ನು ಅನುದಿನವೂ ಹೊತ್ತುತರುತ್ತಿದ್ದರು. ಅದರಿಂದ ಆಯಾಸಗೊಂಡ ಶಿಷ್ಯ ರಾದ ಋಷಿಗಳ ಶರೀರಗಳಿಂದ ಬೆವರಿನ ಹನಿಗಳು ಭೂಮಿಯಲ್ಲಿ ಬೀಳು ತ್ತಿದ್ದುವು. ಮುನಿಗಳಾದ ಮತಂಗಶಿಷ್ಯರ ತಪಃಪ್ರಭಾವದಿಂದಾಗಿ ಆ ಬೆವರಿನ ಹನಿಗಳೇ ಪುಷ್ಪಮಾಲಿಕೆಗಳಾದುವು. ರಾಘವ! ಮತಂಗಶಿಷ್ಯರ ಬೆವರಿನ

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.


ಹನಿಗಳಿಂದ ಹುಟ್ಟಿರುವ ಆ ಪುಷ್ಪಗಳು ಹಾಳಾಗುವುದೇ ಇಲ್ಲ. ದಿವ್ಯಲೋಕಗಳನ್ನು ಸೇರಿರುವ ಮತಂಗರ ಮತ್ತು ಅವರ ಶಿಷ್ಯರ ಪರಿಚಾರಿಣಿಯು ಈಗಲೂ ಅಲ್ಲಿಯೇ ಕಾಣಿಸಿಕೊಳ್ಳುತ್ತಾಳೆ. ಶಬರೀ ಎಂಬ ಹೆಸರಿನ ಆ ಪರಿಚಾರಿಣಿಯು ಒಬ್ಬ ಸಂನ್ಯಾಸಿನಿಯು. ಬಹಳ ದಿವಸಗಳಿಂದಲೂ ಅಲ್ಲಿಯೇ ಜೀವನ ನಡೆಸುತ್ತಿದ್ದಾಳೆ. ಸರ್ವಕಾಲದಲ್ಲಿಯೂ ತನ್ನ ಶ್ರಮಣಧರ್ಮದಲ್ಲಿಯೇ ನಿರತಳಾಗಿರುವ ಅವಳು ಸರ್ವಪ್ರಾಣಿಗಳಿಂದಲೂ ಸಂಪೂಜಿತನಾದ ದೇವಸದೃಶನಾದ ನಿನ್ನನ್ನು ಸಂದರ್ಶಿಸಿದನಂತರ ಸ್ವರ್ಗಕ್ಕೆ ಹೋಗುವಳು. ಕಾಕುತ್ಸ್ಥ ! ಪಂಪಾಸರೋವರದ ಪಶ್ಚಿಮತೀರಕ್ಕೆ ಹೋಗುವ ನೀನು ಅಲ್ಲಿ ನಿಗೂಢವಾಗಿರುವ, ಅನುಪಮವಾದ, ಪವಿತ್ರವಾದ ಮತಂಗರ ಆಶ್ರಮಮಂಡಲವನ್ನು ಕಾಣುವೆ.

ಆ ಆಶ್ರಮದ ಹತ್ತಿರದಲ್ಲಿಯೇ ಇರುವ ಪರ್ವತದಲ್ಲಿ ಅನೇಕ ಆನೆಗಳಿವೆ. ಆದರೆ ಮತಂಗಮುನಿಗಳ ಪ್ರಭಾವದಿಂದಾಗಿ ಆ ಆನೆಗಳು ಆ ಆಶ್ರಮಕ್ಕಾಗಲೀ ಮತ್ತು ಆಶ್ರಮವಿರುವ ವನಪ್ರದೇಶಕ್ಕಾಗಲೀ ಬರುವುದಿಲ್ಲ. ಮತಂಗಮಹರ್ಷಿಗಳೇ ಆ ಆಶ್ರಮವನ್ನು ನಿರ್ಮಿಸಿದ್ದ ಕಾರಣ ಅದಕ್ಕೆ ಮತಂಗಾಶ್ರಮವೆಂದೇ ಹೆಸರಾಯಿತು. ಆಶ್ರಮವಿರುವ ಆ ವನವೂ 'ಮತಂಗವನ'-ಎಂಬ ಹೆಸರಿನಿಂದಲೇ ಪ್ರಸಿದ್ಧಿಯನ್ನು ಹೊಂದಿತು. ರಘುನಂದನ ! ನಾನಾವಿಧವಾದ ಪಕ್ಷಿಗಳಿಂದ ವ್ಯಾಪ್ತವಾಗಿರುವ ದೇವತೆಗಳ ವನವಾದ ನಂದನವನದಂತೆಯೇ ನಯನಮನೋಹರವಾಗಿರುವ ಆ ಮತಂಗವನದಲ್ಲಿ ನೀನು ಕಷ್ಟಗಳನ್ನು ಮರೆತು ಸುಖದಿಂದ ವಿರಮಿಸುವೆ.

ಪಂಪಾಸರೋವರಕ್ಕೆ ಪೂರ್ವದಲ್ಲಿ ಪುಷ್ಪಭರಿತವಾದ ವೃಕ್ಷಗಳಿಂದ ಕೂಡಿರುವ * ಋಷ್ಯಮೂಕಪರ್ವತವಿದೆ. ಅದನ್ನು ಹತ್ತುವುದು ಬಹಳ ಕಷ್ಟ. ಮೇಲಾಗಿ ಆ ಪರ್ವತವು ಎಳೆನಾಗರುಗಳಿಂದ (ಮರಿಯಾನೆಗಳಿಂದ) ರಕ್ಷಿಸಲ್ಪಡುತ್ತಿದೆ. ಪ್ರಶಸ್ತವಾದ ಆ ಪರ್ವತವು ಹಿಂದೆ ಬ್ರಹ್ಮನಿಂದಲೇ ನಿರ್ಮಿತವಾಗಿದೆ.

---

* ಋಷ್ಯಮೂಕಃ (ಋಶ್ಯಮೂಕಃ) ಎಂಬುದಕ್ಕೆ ವ್ಯಾಖ್ಯಾನಕಾರರು ನಾನಾರ್ಥಗಳನ್ನು ಹೇಳಿದ್ದಾರೆ. ಋಷೀಣಾಂ ತತ್ರ ಪ್ರಾಪ್ತಾನಾಂ ಅಮೂಕಃ = ಮೂಕತಾನಿವೃತ್ತಿಃ, ಅಜ್ಞಾನಧ್ವಂಸ ಇತಿ ಯಾವತ್ = ಅಲ್ಲಿಗೆ ಹೋದ ಋಷಿಗಳಿಗೆ ಅಜ್ಞಾನವು

CC-0. Bhagavad Ramanuja National Research Institute, Melukote Collection.

ಶಯಾನಃ ಪುರುಷೋ ರಾಮ ತಸ್ಯ ಶೈಲಸ್ಯ ಮೂರ್ಧನಿ ।
ಯತ್ಸ್ವಪ್ನೇ ಲಭತೇ ವಿತ್ತಂ ತತ್ಪ್ರಬುದ್ಧೋಽಧಿಗಚ್ಛತಿ ।
ನ ತ್ವೇನಂ ವಿಷಮಾಚಾರಃ ಪಾಪಕರ್ಮಾಧಿರೋಹತಿ ॥ ೩೨॥

ಆ ಋಶ್ಯಮೂಕಪರ್ವತದ ಶಿಖರದಲ್ಲಿ ಮಲಗಿದವನು – ಸ್ವಪ್ನದಲ್ಲೇನಾದರೂ ಸಂಪತ್ತನ್ನು ಕಂಡುದಾದರೆ–ಎಚ್ಚರಗೊಂಡಾಗ ಸ್ವಪ್ನದಲ್ಲಿ ಕಂಡ ಆ ಸಂಪತ್ತನ್ನು ಪಡೆದುಕೊಳ್ಳುತ್ತಾನೆ. ಆಚಾರ-ವಿಚಾರಗಳಿಲ್ಲದವನೂ ಪಾಪಿಷ್ಠನೂ ಆ ಪರ್ವತವನ್ನು ಹತ್ತಲಾರನು.

ಯಾವನಾದರೂ ದುರಾಚಾರಿಯೋ ಪಾಪಕರ್ಮಿಯೋ ಆ ಪರ್ವತವನ್ನು ಹತ್ತಿ ಅಲ್ಲಿ ಮಲಗಿದ್ದೇ ಆದರೆ ಮಲಗಿರುವವನನ್ನೇ ಹಿಡಿದು ರಾಕ್ಷಸರು ಪ್ರಹರಿಸುತ್ತಾರೆ. ಪಂಪಾತೀರದಲ್ಲಿರುವ ಮತಂಗಾಶ್ರಮವಾಸಿಗಳಿಗೆ ಋಷ್ಯಮೂಕಪರ್ವತದಲ್ಲಿ ಮರಿಯಾನೆಗಳು ಕ್ರೀಡಿಸುವಾಗ ಮಾಡುವ ಘೀಂಕಾರಗಳ ಶಬ್ದಗಳು ಗಟ್ಟಿಯಾಗಿಯೂ ಸ್ಪಷ್ಟವಾಗಿಯೂ ಕೇಳಿಸುತ್ತವೆ. ಮೇಘಗಳಂತೆ ಕಪ್ಪಾಗಿರುವ ಮಹಾವೇಗವುಳ್ಳ ಶ್ರೇಷ್ಠವಾದ ಮುದ್ದಾನೆಗಳು ಹೆಣ್ಣಾನೆಯ ಸಲುವಾಗಿ ಪರಸ್ಪರವಾಗಿ ಕಾದಾಡಿ ರಕ್ತಧಾರೆಗಳಿಂದ ನೆನೆದು, ಗುಂಪನ್ನು ಬಿಟ್ಟು ಏಕಾಕಿಯಾಗಿ ಸಂಚರಿಸುವುದನ್ನು ನೀನು ಆ ಪರ್ವತದಲ್ಲಿ ಕಾಣಬಹುದಾಗಿದೆ. ಅರಣ್ಯದಲ್ಲಿ ಸುತ್ತಾಡಿ ಬಹಳವಾಗಿ ಬಳಲುವ ಆ ಆನೆಗಳು ಶುದ್ಧವಾದ, ಸುಂದರವಾದ, ಶುಭದಾಯಕವಾದ, ಸರ್ವಸುಗಂಧಯುಕ್ತವಾದ, ಸುಖಸ್ಪರ್ಶಿಯಾದ ಪಂಪಾಸರೋವರದ ನೀರನ್ನು ಕುಡಿದು ದಣಿವಾರಿಸಿಕೊಂಡು ಗಹನವಾದ ಅರಣ್ಯದೊಳಕ್ಕೆ ನುಗ್ಗಿ ಹೋಗುತ್ತವೆ.

ಆ ಪ್ರದೇಶದಲ್ಲಿರುವ ಕರಡಿಗಳನ್ನೂ, ಹುಲಿಗಳನ್ನೂ, ನೀಲವಾಗಿಯೂ ಕೋಮಲವಾಗಿಯೂ ಇರುವ–ಓಟದಲ್ಲಿ ಅಪಜಯವೆಂಬುದೇ ಇಲ್ಲದ ರುರು ಮೃಗಗಳನ್ನೂ ನೋಡಿದರೆ ನಿನ್ನ ಶೋಕವು ಹೋಗುತ್ತದೆ. ರಾಘವ ! ಆ ಋಷ್ಯಮೂಕಪರ್ವತದಲ್ಲಿರುವ ಒಂದು ಗುಹೆಯು ಬಹಳ ಶೋಭಾಯಮಾನ

---

ಹೋಗಿಬಿಡುವುದರಿಂದ ಅದಕ್ಕೆ ಋಷ್ಯಮೂಕ ಎಂದು ಹೆಸರು. (2) ಋಶ್ಯಾಃ = ಮೃಗವಿಶೇಷಾಃ ಮೂಕಾಃ ಭವನ್ತಿ ಯಸ್ಮಿನ್ ಸಃ–ಋಶ್ಯ ಎಂಬ ಮೃಗಗಳು ಎಲ್ಲಿ ಗಲಾಟೆ ಮಾಡದೇ ನಿಶ್ಶಬ್ದವಾಗಿರುತ್ತವೆಯೋ ಅದು ಋಶ್ಯಮೂಕ. ಮೌನಿಗಳಾದ ಋಷಿಗಳ ಪರ್ವತ–ಎಂದೂ ಅರ್ಥ ಹೇಳಬಹುದು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ವಾಗಿದೆ. ಆದರೆ ಅದರ ದ್ವಾರವು ಬಂಡೆಯಿಂದ ಮುಚ್ಚಿಹೋಗಿದೆ. ಆದುದರಿಂದ ಅದರೊಳಗೆ ಪ್ರವೇಶಿಸುವುದು ಬಹಳ ಕಷ್ಟವೇ ಸರಿ. ಆ ಗುಹೆಯ ಪೂರ್ವದ ಕಡೆಯ ಬಾಗಿಲಿನಲ್ಲಿ ಶೀತಲವಾದ ನೀರಿನಿಂದ ಕೂಡಿರುವ ಒಂದು ಮಡುವಿದೆ. ಅದು ನಾನಾವಿಧವಾದ ಮೃಗಗಳಿಂದಲೂ ಕಂದ-ಮೂಲ-ಫಲಗಳಿಂದಲೂ ಸುತ್ತುವರಿದಿದ್ದು ಬಹಳ ರಮ್ಯವಾಗಿ ಕಾಣುತ್ತದೆ. ಸಾಮಾನ್ಯರಿಂದ ಪ್ರವೇಶಿಸಲು ಅಸಾಧ್ಯವಾದ ಆ ಗುಹೆಯಲ್ಲಿಯೇ ಸುಗ್ರೀವನು ತನ್ನ ಅನುಚರರಾದ ನಾಲ್ವರು ವಾನರರೊಡನೆ ವಾಸವಾಗಿದ್ದಾನೆ. ಯಾವಾಗಲಾದರೊಮ್ಮೆ ಅವನು ಋಷ್ಯಮೂಕಪರ್ವತದ ಕೋಡುಗಲ್ಲಿನ ಮೇಲೆ ನಿಂತಿರುವುದೂ ಉಂಟು."

ದಿವ್ಯವಾದ ಮಾಲೆಯನ್ನು ಧರಿಸಿದ್ದ, ಸೂರ್ಯಸಮಪ್ರಭನಾದ, ವೀರ್ಯವಂತನಾದ ಕಬಂಧನು ರಾಮ-ಲಕ್ಷ್ಮಣರಿಗೆ ಹೀಗೆ ನಿರ್ದೇಶಿಸಿ ಆಕಾಶದಲ್ಲಿ ಜಾಜ್ವಲ್ಯಮಾನವಾಗಿ ಪ್ರಕಾಶಿಸಿದನು. ಆಗ ರಾಮ-ಲಕ್ಷ್ಮಣರು ಅಲ್ಲಿಂದ ಹೊರಡಲು ಉದ್ಯುಕ್ತರಾಗಿ, ಆಕಾಶದಲ್ಲಿ ನಿಂತಿದ್ದ, ಮಹಾಭಾಗ್ಯಶಾಲಿಯಾದ ಕಬಂಧನಿಗೆ 'ನೀನಿನ್ನು ಹೋಗಿಬರಬಹುದು'-ಎಂದು ಹೇಳಿದರು. 'ಗಮ್ಯತಾಂ ಕಾರ್ಯಸಿದ್ಧ್ಯರ್ಥಂ ಕಾರ್ಯದ ಸಿದ್ಧಿಗಾಗಿ ನೀವಿಬ್ಬರೂ ಪ್ರಯಾಣಮಾಡಿರಿ'-ಎಂಬುದಾಗಿ ಕಬಂಧನೂ ರಾಮ-ಲಕ್ಷ್ಮಣರಿಗೆ ಹೇಳಿದನು. ಸುಪ್ರೀತರಾದ ರಾಮ-ಲಕ್ಷ್ಮಣರ ಅನುಮತಿಯನ್ನು ಪಡೆದು ಕಬಂಧನು ಸ್ವರ್ಗಾಭಿಮುಖವಾಗಿ ಹೊರಟುಹೋದನು.

ರಾಮ-ಲಕ್ಷ್ಮಣರಿಂದ ದಹಿಸಲ್ಪಟ್ಟ ಕಬಂಧನು ತನ್ನ ಹಿಂದಿನ ಸುಂದರವಾದ ರೂಪವನ್ನು ಪಡೆದುಕೊಂಡು ದಿವ್ಯಕಾಂತಿಯಿಂದ ಸಮಾವೃತನಾದನು. ಅವನ ದೇಹವೆಲ್ಲವೂ ದೇದೀಪ್ಯಮಾನವಾಗಿ ಬೆಳಗುತ್ತಿದ್ದಿತು. ಆಕಾಶದಲ್ಲಿ ನಿಂತು ರಾಮನನ್ನೇ ನೋಡುತ್ತಾ ಮುಂದೆ ಮಾಡಬೇಕಾದ ಕಾರ್ಯವನ್ನು ನಿರ್ದೇಶಿಸುತ್ತಾ 'ಸಖ್ಯಂ ಕುರುಷ್ವ' 'ಸುಗ್ರೀವನೊಡನೆ ಗೆಳೆತನವನ್ನು ಮಾಡಿಕೊ'-ಎಂದು ಹೇಳಿ ಅದೃಶ್ಯನಾದನು.

೭೩ನೆಯ ಸರ್ಗವು ಮುಗಿಯಿತು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


## ಮತಂಗವನದಲ್ಲಿದ್ದ ಶಬರಿಯ ಆಶ್ರಮಕ್ಕೆ ರಾಮ-ಲಕ್ಷ್ಮಣರ ಪ್ರಯಾಣ : ಶಬರಿಯಿಂದ ಸತ್ಕಾರ : ಮತಂಗವನದರ್ಶನ : ಶಬರಿಯು ತನ್ನ ಶರೀರವನ್ನು ಅಗ್ನಿಯಲ್ಲಿ ಅರ್ಪಿಸಿ ದಿವ್ಯಧಾಮಕ್ಕೆ ತೆರಳಿದುದು

ತೌ ಕಬನ್ಧೇನ ತಂ ಮಾರ್ಗಂ ಪಮ್ಪಾಯಾ ದರ್ಶಿತಂ ವನೇ ।
ಪ್ರತಸ್ಥತುರ್ದಿಶಂ ಗೃಹ್ಯ ಪ್ರತೀಚೀಂ ನೃವರಾತ್ಮಜೌ ॥೧॥

ರಾಜಕುಮಾರರಾದ ರಾಮ-ಲಕ್ಷ್ಮಣರು, ಕಬಂಧನು ನಿರ್ದೇಶಿಸಿದಂತೆ ಪಂಪಾಸರೋವರಕ್ಕೆ ಹೋಗುವ ಪಶ್ಚಿಮದಿಕ್ಕಿನ ಮಾರ್ಗವನ್ನು ಹಿಡಿದು ಹೊರಟರು.

ಜೇನುಗೂಡುಗಳಿಂದಲೂ ಫಲ-ಪುಷ್ಪಗಳಿಂದಲೂ ಸಮೃದ್ಧವಾಗಿದ್ದ ಪರ್ವತಗಳ ಮಧ್ಯಭಾಗದಲ್ಲಿದ್ದ ವೃಕ್ಷಗಳನ್ನು ನೋಡುತ್ತಾ ರಾಮ-ಲಕ್ಷ್ಮಣರು ಸುಗ್ರೀವನನ್ನು ಕಾಣಲು ಹೋಗುತ್ತಿದ್ದರು. ರಾತ್ರಿಯಲ್ಲಿ ಪರ್ವತದ ತಪ್ಪಲಿನಲ್ಲಿ ತಂಗಿದ್ದು ಬೆಳಗಾಗುತ್ತಲೇ ಪ್ರಯಾಣವನ್ನು ಮುಂದುವರಿಸಿ ಸ್ವಲ್ಪ ಹೊತ್ತಿನಲ್ಲಿಯೇ ಪಂಪಾಪುಷ್ಕರಣಿಯ ಪಶ್ಚಿಮತೀರವನ್ನು ಸೇರಿದ ರಾಮ-ಲಕ್ಷ್ಮಣರು ಅಲ್ಲಿ ಅತ್ಯಂತರಮ್ಯವಾಗಿದ್ದ ಶಬರಿಯ ಆಶ್ರಮವನ್ನು ನೋಡಿದರು. ಅನೇಕವೃಕ್ಷಗಳಿಂದ ಸುತ್ತುವರಿಯಲ್ಪಟ್ಟದ್ದ ಸುರಮ್ಯವಾಗಿದ್ದ ಆ ಆಶ್ರಮದ ಸೊಬಗನ್ನು ಎವೆಯಿಕ್ಕದೇ ನೋಡುತ್ತಾ ಆ ಸಹೋದರರು ಶ್ರಮಣಿಯ ಸಮೀಪಕ್ಕೆ ಹೋದರು. ತಪಸ್ಸಿನ ಸಿದ್ಧಿಯನ್ನು ಪಡೆದಿದ್ದ ಶಬರಿಯು ರಾಮ-ಲಕ್ಷ್ಮಣರನ್ನು ನೋಡಿದೊಡನೆಯೇ ಕೈಮುಗಿದು ಮೇಲೆದ್ದಳು. ಬಳಿಕ ಇಬ್ಬರ ಪಾದಾರವಿಂದಗಳನ್ನು ಮುಟ್ಟಿ ನಮಸ್ಕರಿಸಿದಳು. ಯಥಾವಿಧಿಯಾಗಿ ಆ ಸೋದರರಿಗೆ ಸುಖಾಸನಗಳನ್ನಿತ್ತು ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿದಳು. ಬಳಿಕ ಶ್ರೀರಾಮನು ಧರ್ಮಾಚರಣೆಯಲ್ಲಿಯೇ ನಿರತಳಾಗಿದ್ದ ಸಂನ್ಯಾಸಿನಿಯನ್ನು ಪ್ರಶ್ನಿಸಿದನು :

ಕಚ್ಚಿತ್ತೇ ನಿರ್ಜಿತಾ ವಿಘ್ನಾಃ ಕಚ್ಚಿತ್ತೇ ವರ್ಧತೇ ತಪಃ ।
ಕಚ್ಚಿತ್ತೇ ನಿಯತಃ ಕ್ರೋಧ ಆಹಾರಶ್ಚ ತಪೋಧನೇ ॥೮॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

"ತಪೋಧನಳೇ! ತಪಸ್ಸಿಗೆ ವಿಘ್ನವನ್ನುಂಟುಮಾಡುವ ಕಾಮ-ಕ್ರೋಧಾದಿಗಳನ್ನು ನೀನು ಜಯಿಸಿರುವೆಯಾ? ನಿನ್ನ ತಪಸ್ಸು ದಿನದಿಂದ ದಿನಕ್ಕೆ ವರ್ಧಿಸುತ್ತಿರುವುದೇ? ಕೋಪವು ನಿನ್ನ ಹತೋಟಿಗೆ ಒಳಪಟ್ಟಿರುವುದೇ? ಆಹಾರವೂ ನಿಯತವಾಗಿರುವುದೇ?

ಕಚ್ಚಿತ್ತೇ ನಿಯಮಾಃ ಪ್ರಾಪ್ತಾಃ ಕಚ್ಚಿತ್ತೇ ಮನಸಃ ಸುಖಮ್ ।
ಕಚ್ಚಿತ್ತೇ ಗುರುಶುಶ್ರೂಷಾ ಸಫಲಾ ಚಾರುಭಾಷಿಣಿ ॥೯॥

ಚಾರುಭಾಷಿಣಿಯೇ! ನೀನು ನಿಯತವಾದ ವ್ರತಾನುಷ್ಠಾನಗಳನ್ನು ಆಚರಿಸುತ್ತಿರುವೆಯಾ? ನಿನ್ನ ಮನಸ್ಸು ಯಾವ ವಿಧವಾದ ಚಿಂತೆಯಲ್ಲಿಯೂ ಮಗ್ನವಾಗದೇ ಸುಖವಾಗಿರುವುದೇ? ನೀನು ಮಾಡಿರುವ ಗುರುಶುಶ್ರೂಷೆಯು ಸಾಫಲ್ಯವನ್ನು ಹೊಂದಿರುವುದೇ?"

ಶ್ರೀರಾಮನು ಹೀಗೆ ಪ್ರಶ್ನಿಸಲಾಗಿ ಸಿದ್ಧಪುರುಷರಿಗೆ ಪ್ರಿಯಳಾದ, ತಪಸ್ಸಿನ ಸಿದ್ಧಿಯನ್ನು ಪಡೆದಿದ್ದ, ತಾಪಸಿಯಾದ, ವೃದ್ಧೆಯಾದ ಶಬರಿಯು ಶ್ರೀರಾಮನ ಸಮ್ಮುಖದಲ್ಲಿ ಕುಳಿತು ಉತ್ತರಿಸಿದಳು:

ಅದ್ಯ ಪ್ರಾಪ್ತಾ ತಪಃಸಿದ್ಧಿಸ್ತವ ಸಂದರ್ಶನಾನ್ಮಯಾ ।
ಅದ್ಯ ಮೇ ಸಫಲಂ ತಪ್ತಂ ಗುರವಶ್ಚ ಸುಪೂಜಿತಾಃ ॥೧೧॥

ಅದ್ಯ ಮೇ ಸಫಲಂ ಜನ್ಮ ಸ್ವರ್ಗಶ್ಚೈವ ಭವಿಷ್ಯತಿ ।
ತ್ವಯಿ ದೇವವರೇ ರಾಮ ಪೂಜಿತೇ ಪುರುಷರ್ಷಭ ॥೧೨॥

"ರಾಮಭದ್ರ! ನಿನ್ನ ಈ ದಿವ್ಯದರ್ಶನದಿಂದಾಗಿ ಇದೀಗಲೇ ನನ್ನ ತಪಸ್ಸು ಸಿದ್ಧಿಸಿತು. ನನ್ನ ಜನ್ಮವು ಸಾರ್ಥಕವಾಯಿತು. ನನ್ನ ಗುರುಗಳ ಶುಶ್ರೂಷೆಯನ್ನೂ ನಾನು ಚೆನ್ನಾಗಿಯೇ ಮಾಡಿದ್ದೇನೆ. (ಅದರ ಫಲವೇ ನಿನ್ನ ದಿವ್ಯದರ್ಶನವಾಗಿದೆ.) ನಾನು ಮಾಡಿರುವ ತಪಸ್ಸು ಈಗ ಫಲಿತವಾಗಿದೆ. ಪುರುಷರ್ಷಭನೇ! ದೇವಶ್ರೇಷ್ಠನಾದ ನಿನ್ನನ್ನು ಸತ್ಕರಿಸಿದರೆ ನನಗೆ ಸ್ವರ್ಗವೂ ಲಭಿಸುತ್ತದೆ.

ಚಕ್ಷುಷಾ ತವ ಸೌಮ್ಯೇನ ಪೂತಾಸ್ಮಿ ರಘುನನ್ದನ ।
ಗಮಿಷ್ಯಾಮ್ಯಕ್ಷಯಾಲ್ಲೋಕಾಂಸ್ತ್ವತ್ಪ್ರಸಾದಾದರಿಂದಮ ॥೧೩॥

ರಘುನಂದನನೇ! ಸೌಮ್ಯವಾದ ನಿನ್ನ ದೃಷ್ಟಿಪಾತದಿಂದಲೇ ನಾನು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.
ಪವಿತ್ರಳಾದೆನು. ನಿನ್ನ ಪ್ರಸನ್ನತೆಯಿಂದಾಗಿ ನಾನು ನಾಶವಿಲ್ಲದ ಪುಣ್ಯ ಲೋಕಗಳಿಗೆ ಹೋಗುತ್ತೇನೆ.



ನಾನು ಇದುವರೆಗೂ ಯಾವ ಗುರುಜನರ ಸೇವೆಯನ್ನು ಮಾಡುತ್ತಿದ್ದೆನೋ-ಆ ಗುರುಜನರೆಲ್ಲರೂ ನೀನು ಚಿತ್ರಕೂಟಕ್ಕೆ ಬರುತ್ತಿದ್ದಂತೆಯೇ ವಿಮಾನಗಳಲ್ಲಿ ಕುಳಿತು ಇಲ್ಲಿಂದಲೇ ಸ್ವರ್ಗಾರೋಹಣಮಾಡಿದರು. ಆ ಸಮಯದಲ್ಲಿ ಮಹಾಭಾಗ್ಯಶಾಲಿಗಳಾದ ಧರ್ಮಜ್ಞರಾದ ಮಹರ್ಷಿಗಳು ನನಗೆ ಹೀಗೆ ಹೇಳಿ ಹೋದರು :

ಆಗಮಿಷ್ಯತಿ ತೇ ರಾಮಃ ಸುಪುಣ್ಯಮಿಮಮಾಶ್ರಮಮ್ ।

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸ ತೇ ಪ್ರತಿಗ್ರಹೀತವ್ಯಃ ಸೌಮಿತ್ರಿಸಹಿತೋಽತಿಥಿಃ ।
ತಂ ಚ ದೃಷ್ಟ್ವಾ ವರಾಲ್ಲೋಕಾನಕ್ಷಯಾಂಸ್ತ್ವಂ ಗಮಿಷ್ಯಸಿ ॥೧೬॥

"ಶ್ರೀರಾಮನು ಪುಣ್ಯತಮವಾದ ಈ ನಿನ್ನ ಆಶ್ರಮಕ್ಕೆ ಆಗಮಿಸುವನು. ಅತಿಥಿಯಾಗಿ ಬರುವ ಸೌಮಿತ್ರೀಸಹಿತನಾದ ಶ್ರೀರಾಮನನ್ನು ನೀನು ಆದರದಿಂದ ಸ್ವಾಗತಿಸಿ ಸತ್ಕರಿಸಬೇಕು. ಶ್ರೀರಾಮನನ್ನು ನೀನು ಸಂದರ್ಶಿಸಿದ ನಂತರ ನಾಶರಹಿತವಾದ ಪುಣ್ಯಲೋಕಗಳಿಗೆ ನೀನು ಹೋಗುವೆ."

ಪುರುಷಶ್ರೇಷ್ಠನೇ ! ಮಹಾಭಾಗ್ಯಶಾಲಿಗಳಾದ ಮಹರ್ಷಿಗಳು ಹೀಗೆ ಹೇಳಿ ಸ್ವರ್ಗಾರೋಹಣಮಾಡಿದರು. ಆಗಿನಿಂದ ನಾನು ಪಂಪಾಸರೋವರದ ತೀರಪ್ರದೇಶದಲ್ಲಿ ಸಿಕ್ಕುವ ನಾನಾವಿಧವಾದ ಕಂದ-ಮೂಲ-ಫಲಗಳನ್ನು ನಿನ್ನ ಸಲುವಾಗಿ ಶೇಖರಿಸಿಡುತ್ತಿದ್ದೇನೆ."

ಶಬರಿಯು ಹೀಗೆ ಹೇಳಲು ಧರ್ಮಾತ್ಮನಾದ ಶ್ರೀರಾಮನು ಆತ್ಮವಿಜ್ಞಾನಸಂಪನ್ನೆಯಾಗಿದ್ದ ಶಬರಿಗೆ ಹೇಳಿದನು :

"ಶ್ರಮಣಿ ! ದನುವಂಶೀಯನಾದ ಕಬಂಧನಿಂದ ಮಹಾತ್ಮರಾದ ನಿನ್ನ ಗುರುಗಳ ಮಹಿಮೆಯನ್ನು ಯಥಾವತ್ತಾಗಿ ಕೇಳಿ ತಿಳಿದಿರುವೆನು. ಅವರ ಆ ಮಹಿಮೆಯನ್ನು ಈಗ ನಾನು ಪ್ರತ್ಯಕ್ಷವಾಗಿಯೇ ಕಾಣಲು ಬಯಸುತ್ತೇನೆ. ಯುಕ್ತವೆಂದು ಭಾವಿಸುವೆಯಾದರೆ ಅದನ್ನು ನನಗೆ ತೋರಿಸು."

ಶ್ರೀರಾಮನ ಮುಖಾರವಿಂದದಿಂದ ಹೊರಟ ಆ ಮಾತನ್ನು ಕೇಳಿ ಶಬರಿಯು ರಾಮ-ಲಕ್ಷ್ಮಣರಿಬ್ಬರಿಗೂ ಆ ಮತಂಗವನವನ್ನು ತೋರಿಸುತ್ತಾ ಹೇಳಿದಳು :

"ಶ್ರೀರಾಮ ! ಇತ್ತ ನೋಡು. ದಟ್ಟವಾದ ಮೇಘಗಳಂತೆಯೇ ಇರುವ ಈ ಮಹಾವನವು ಮೃಗಗಳಿಂದಲೂ ಪಕ್ಷಿಗಳಿಂದಲೂ ವ್ಯಾಪ್ತವಾಗಿದೆ. ಮತಂಗಮಹರ್ಷಿಗಳು ಇದನ್ನು ನಿರ್ಮಿಸಿದರಾದ ಕಾರಣ ಇದು ಮತಂಗವನವೆಂದೇ ಪ್ರಸಿದ್ಧವಾಗಿದೆ. ಇತ್ತ ಕಡೆ ನೋಡಿರಿ. ಆತ್ಮದರ್ಶಿಗಳಾದ ನನ್ನ ಗುರುಗಳು ಇಲ್ಲಿಯೇ ವಾಸವಾಗಿದ್ದರು. ಇಲ್ಲಿಯೇ ಅವರು ಮಂತ್ರದಿಂದ ಪರಿಶುದ್ಧವಾಗಿದ್ದ ತಮ್ಮ ದೇಹರೂಪವಾದ ಪಂಜರವನ್ನು ಮಂತ್ರೋ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಚ್ಚಾರಣಪೂರ್ವಕವಾಗಿ ಅಗ್ನಿಯಲ್ಲಿ ಹೋಮಮಾಡಿಕೊಂಡರು. (ಅಗ್ನಿಪ್ರವೇಶಮಾಡಿದರು.)* ಇತ್ತ ನೋಡಿರಿ. ಇದು ಪ್ರತ್ಯಕ್ಸ್ಥಲೀ-ಎಂಬ ಹೆಸರಿನ ವೇದಿಕೆಯಾಗಿದೆ. (ಪಶ್ಚಿಮದಿಕ್ಕಿನಲ್ಲಿ ಸ್ಥಾಪಿಸಿರುವ ತಗ್ಗಿನ ವೇದಿಕೆಯಾಗಿದೆ.) ಈ ಸ್ಥಳದಲ್ಲಿಯೇ ನಾನು ಸತ್ಕರಿಸುತ್ತಿದ್ದ ಗುರುಗಳು ಬಹಳ ಶ್ರಮಪಟ್ಟು ನಡುಗುತ್ತಿರುವ ಕೈಗಳಿಂದ ದಿವ್ಯಪುಷ್ಪಗಳ ಮೂಲಕವಾಗಿ ದೇವತೆಗಳ ಅರ್ಚನೆಯನ್ನು ಮಾಡುತ್ತಿದ್ದರು.

ರಾಘವ ! ಗುರುಗಳ ತಪಃಪ್ರಭಾವದಿಂದ ಈಗಲೂ ಅಪಾರವಾದ ಪ್ರಭೆಯಿಂದ ಕೂಡಿರುವ ಈ ವೇದಿಯು ತನ್ನ ಕಾಂತಿಯಿಂದ ಎಲ್ಲ ದಿಕ್ಕುಗಳನ್ನೂ ಬೆಳಗುತ್ತಿರುವುದನ್ನು ನೋಡು. ಸತತವಾದ ವ್ರತೋಪವಾಸಗಳಿಂದ ದುರ್ಬಲರಾಗಿದ್ದ ನನ್ನ ಗುರುಗಳು ತೀರ್ಥಯಾತ್ರೆಗೆ ಹೋಗಲು ಅಶಕ್ತರಾಗಿದ್ದರು. ಆದರೆ ಅವರಿಗೆ ತೀರ್ಥಗಳಲ್ಲಿ ಸ್ನಾನಮಾಡಬೇಕೆಂಬ ಮನಸ್ಸುಂಟಾಯಿತು. ಅವರು ಪುಣ್ಯೋಪೇತವಾದ ಸಪ್ತಸಮುದ್ರಗಳನ್ನೂ ಮನಸ್ಸಿನಲ್ಲಿಯೇ ಚಿಂತಿಸಿದರು. ಮಹಾಮಹಿಮರಾದ ಅವರು ಹಾಗೆ ಚಿಂತಿಸಿದ ಮಾತ್ರದಿಂದಲೇ ಸಪ್ತಸಾಗರಗಳೂ ಇಲ್ಲಿಗೆ ಆಗಮಿಸಿದುವು. ಇತ್ತಕಡೆ ಕಾಣುತ್ತಿರುವುದೇ ಆ ಸಪ್ತಸಮುದ್ರಗಳ ಸಾನ್ನಿಧ್ಯವಿರುವ ದಿವ್ಯತೀರ್ಥ.

---

* ಜುಹವಾಞ್ಚಕ್ರಿರೇ ನೀಡಂ (ತೀರ್ಥಂ) ಮನ್ತ್ರವನ್ಮನ್ತ್ರಪೂಜಿತಮ್ । ಮೂವರು ವ್ಯಾಖ್ಯಾನಕಾರರೂ ಬೇರೆ-ಬೇರೆಯಾಗಿಯೇ ಈ ಉತ್ತರಾರ್ಧಕ್ಕೆ ವ್ಯಾಖ್ಯಾನಮಾಡಿರುತ್ತಾರೆ. ಕೆಲವರು 'ನೀಡಂ' ಎಂಬ ಪಾಠವನ್ನೂ ಮತ್ತೆ ಕೆಲವರು ತೀರ್ಥಂ ಎಂಬ ಪಾಠವನ್ನೂ ಇಟ್ಟುಕೊಂಡಿರುತ್ತಾರೆ. (1) ಮನ್ತ್ರಪೂಜಿತಂ= ಮನ್ತ್ರಸ್ಯ ಗಾಯತ್ರ್ಯಾಃ ಜಪೇನ ಪೂಜಿತಂ ಅತಿಶುದ್ಧಂ, ನೀಡಂ ದೇಹಪಞ್ಜರಂ= ಗಾಯತ್ರೀ ಮಂತ್ರ ಜಪದಿಂದ ಪರಿಶುದ್ಧವಾಗಿ ಮಾಡಲ್ಪಟ್ಟ ದೇಹಪಂಜರವನ್ನು, ಮನ್ತ್ರವತ್ ಹೋಮಮನ್ತ್ರವತ್= ಹೋಮಮಂತ್ರದೋಪಾದಿಯಲ್ಲಿ, ಜುಹವಾಂಚಕ್ರಿರೇ ಹುತವನ್ತಃ-ಹೋಮಮಾಡಿದರು. (2) ಮನ್ತ್ರವತಾಂ ಮನ್ತ್ರೈಃ ಪೂಜಿತಂ ಮಂತ್ರವಿದರ ಮಂತ್ರಗಳಿಂದ ಸಂಪೂಜಿತವಾದ, ತೀರ್ಥಂ= ಗಙ್ಗಾದಿ ಪುಣ್ಯಸಲಿಲಂ ಗಂಗೆಯೇ ಮೊದಲಾದ ಪುಣ್ಯೋದಕಗಳನ್ನು, ಇಹ ಪ್ರದೇಶೇ= ಈ ಸ್ಥಳದಲ್ಲಿ, ಜುಹವಾಞ್ಚಕ್ರಿರೇ= ಆಹೂತವನ್ತಃ ಆಹ್ವಾನಿಸಿದರು. 3) ಮನ್ತ್ರವಿದಾಂ ಮನ್ತ್ರೈಃ ಪೂಜಿತಂ ಆಹ್ವಾನಮನ್ತ್ರೈಃ ಅಭಿಮನ್ತ್ರಿತಂ= ಮಂತ್ರವಿದರ ಆಹ್ವಾನಮಂತ್ರಗಳಿಂದ ಅಭಿಮಂತ್ರಿತವಾದ, ತೀರ್ಥಂ= ಅಧ್ವರಂ ಯಾಗವನ್ನು, ಜುಹವಾಞ್ಚಕ್ರಿರೇ= ಕೃತವನ್ತಃ-ಮಾಡಿದರು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಆ ನನ್ನ ಮಹಾತ್ಮರಾದ ಗುರುಗಳು ಸಪ್ತಸಮುದ್ರತೀರ್ಥದಲ್ಲಿ ಸ್ನಾನಮಾಡಿ ಒದ್ದೆಯಾಗಿರುವ ನಾರುಮಡಿಗಳನ್ನು ಇಲ್ಲಿ ಕಾಣುತ್ತಿರುವ ವೃಕ್ಷಗಳ ಮೇಲೆ ಒಣಹಾಕುತ್ತಿದ್ದರು. ಆದರೆ ಆ ನಾರುಮಡಿಗಳು ಇಂದಿನವರೆಗೂ ಒಣಗಿಯೇ ಇಲ್ಲ. ಮಹಾಭಾಗ್ಯಶಾಲಿಗಳಾದ ಅವರು ದೇವತೆಗಳನ್ನು ಪೂಜಿಸುವಾಗ ಕನ್ನೈದಿಲೆಯೊಡನೆ ಇತರ ಪುಷ್ಪಗಳನ್ನೂ ಸೇರಿಸಿ ಮಾಲೆಗಳನ್ನು ಮಾಡಿ ದೇವತೆಗಳಿಗೆ ಹಾರಹಾಕುತ್ತಿದ್ದರು. ಅಂದವರು ಹಾಕಿದ ಪುಷ್ಪಹಾರಗಳು ಇಂದಿಗೂ ಬಾಡಿಹೋಗಿಲ್ಲ. ನವನೂತನವಾಗಿಯೇ ಕಾಣುತ್ತಿವೆ.

ರಾಮಭದ್ರ ! ನೀನು ತಮ್ಮನೊಡನೆ ದಿವ್ಯವಾದ ಈ ಮತಂಗವನವನ್ನು ಸಮಗ್ರವಾಗಿ ನೋಡಿರುವೆ. ನನ್ನ ಗುರುಗಳ ಮಹಿಮೆಯ ವಿಷಯವಾಗಿ ಕೇಳಬೇಕಾದುದೆಲ್ಲವನ್ನೂ ಕೇಳಿರುವೆ. ನಾನು ನಿನ್ನ ಅನುಜ್ಞೆಯನ್ನು ಪಡೆದು ಈ ದೇಹವನ್ನು ಪರಿತ್ಯಜಿಸಲು ಬಯಸಿದ್ದೇನೆ. ಇದು ಯಾರ ಆಶ್ರಮವಾಗಿರುವುದೋ ಮತ್ತು ನಾನು ಯಾರ ಪರಿಚಾರಿಣಿಯೋ-ಅಂತಹ ಆತ್ಮದರ್ಶಿಗಳಾದ ನನ್ನ ಗುರುಗಳ ಸಮೀಪಕ್ಕೇ ನಾನು ಹೋಗಲು ಇಚ್ಛಿಸಿದ್ದೇನೆ."

ಶಬರಿಯ ಧರ್ಮಯುಕ್ತವಾದ ಮಾತನ್ನು ಕೇಳಿ ರಾಮ-ಲಕ್ಷ್ಮಣರಿಬ್ಬರೂ ಬಹಳವಾಗಿ ಸಂತೋಷಪಟ್ಟರು. 'ಇದು ನಿಶ್ಚಯವಾಗಿಯೂ ಆಶ್ಚರ್ಯಕರವಾದ ದೃಶ್ಯವೇ ಸರಿ'-ಎಂದೂ ಉದ್ಗರಿಸಿದರು. ಬಳಿಕ ಶ್ರೀರಾಮನು ಕಠೋರವ್ರತನಿಷ್ಠಳಾದ ಶಬರಿಗೆ ಹೇಳಿದನು:

ಅರ್ಚಿತೋಽಹಂ ತ್ವಯಾ ಭಕ್ತ್ಯಾ ಗಚ್ಛ ಕಾಮಂ ಯಥಾಸುಖಮ್॥

"ಭದ್ರೇ ! ನೀನು ನನ್ನನ್ನು ಮನಸ್ತೃಪ್ತಿಯಾಗುವಂತೆ ಭಕ್ತಿಯಿಂದ ಉಪಚರಿಸಿರುವೆ. ನಿನ್ನ ಇಚ್ಛೆಗೆ ಅನುಸಾರವಾಗಿ ನಿನಗೆ ಅಭೀಷ್ಟವಾದ ಲೋಕಗಳಿಗೆ ಸುಖವಾಗಿ ಹೋಗು."

ಶ್ರೀರಾಮನು ಹೀಗೆ ಹೇಳಲು ಜಟಾಧಾರಿಣಿಯಾಗಿದ್ದ, ನಾರುಮಡಿ ಮತ್ತು ಕೃಷ್ಣಾಜಿನಗಳನ್ನು ತೊಟ್ಟಿದ್ದ ಶಬರಿಯು ಆ ಕ್ಷಣದಲ್ಲಿಯೇ ತನ್ನ ಜೀರ್ಣವಾಗಿದ್ದ ದೇಹವನ್ನು ಬಿಡುವ ಇಚ್ಛೆಯಿಂದ ಶ್ರೀರಾಮನ ಅನುಜ್ಞೆಯನ್ನು ಪಡೆದು ಧಗ-ಧಗಿಸುತ್ತಿದ್ದ ಯಜ್ಞೇಶ್ವರನಲ್ಲಿ ಆಹುತಿಯನ್ನಾಗಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಸಮರ್ಪಿಸಿಕೊಂಡು ತಾನೂ ಯಜ್ಞೇಶ್ವರನಂತೆಯೇ ಪ್ರಜ್ವಲಿಸುತ್ತಾ ಸ್ವರ್ಗಲೋಕಕ್ಕೆ ಹೊರಟುಹೋದಳು. ಪಾರ್ಥಿವಶರೀರವನ್ನು ತ್ಯಜಿಸಿ ದಿವ್ಯ ಶರೀರವನ್ನು ಧರಿಸಿ ಅಗ್ನಿಯಿಂದ ಹೊರಬಂದ ಶಬರಿಯು ದಿವ್ಯವಾದ ಆಭರಣಗಳನ್ನು ತೊಟ್ಟುಕೊಂಡು ದಿವ್ಯವಾದ ಮಾಲೆಗಳಿಂದ ಶರೀರವನ್ನು ಸಿಂಗರಿಸಿಕೊಂಡಿದ್ದಳು. ದಿವ್ಯಗಂಧವನ್ನು ಪೂಸಿಕೊಂಡು ದಿವ್ಯವಾದ ವಸ್ತ್ರಗಳನ್ನುಟ್ಟಿದ್ದಳು. ನೋಡಲು ರಮ್ಯಳಾಗಿದ್ದಳು. ಹೀಗೆ ಸರ್ವಸಮಲಂಕೃತಳಾಗಿದ್ದ ಶಬರಿಯು ವಿಶೇಷವಾಗಿ ಪ್ರಕಾಶಿಸುವ ಮಿಂಚಿನಂತೆ – ಮತಂಗವನದ ಪ್ರದೇಶವನ್ನೆಲ್ಲಾ ತನ್ನ ಕಾಂತಿಯಿಂದ ಬೆಳಗುತ್ತಾ ಸ್ವರ್ಗಾರೋಹಣಮಾಡಿದಳು. ಪುಣ್ಯಾತ್ಮರಾದ ಮಹರ್ಷಿಗಳು ಯಾವ ಪುಣ್ಯಸ್ಥಾನದಲ್ಲಿ ವಿಹರಿಸುತ್ತಿದ್ದರೋ – ಅಂತಹುದೇ ಪುಣ್ಯಸ್ಥಾನವನ್ನು ಶಬರಿಯು ಆತ್ಮಸಮಾಧಿಯೋಗದಿಂದ ಪಡೆದುಕೊಂಡಳು.

ಒ೪ನೆಯ ಸರ್ಗವು ಮುಗಿಯಿತು.

ಆರಣ್ಯಕಾಂಡ ೭೫ನೆಯ ಸರ್ಗ

## ರಾಮ-ಲಕ್ಷ್ಮಣರು ಸಂಭಾಷಿಸುತ್ತಾ ಪಂಪಾಸರೋವರದ ತೀರಕ್ಕೆ ಹೋದುದು

ದಿವಂ ತು ತಸ್ಯಾಂ ಯಾತಾಯಾಂ ಶಬರ್ಯಾಂ ಸ್ವೇನ ತೇಜಸಾ ।
ಲಕ್ಷ್ಮಣೇನ ಸಹ ಭ್ರಾತ್ರಾ ಚಿನ್ತಯಾಮಾಸ ರಾಘವಃ ॥೧॥

ಶಬರಿಯು ತನ್ನ ತೇಜೋಬಲದಿಂದ ಸ್ವರ್ಗಕ್ಕೆ ಹೊರಟುಹೋದ ಬಳಿಕ ಶ್ರೀರಾಮನು ಲಕ್ಷ್ಮಣನೊಡನೆ ಮತಂಗಮಹರ್ಷಿಗಳ ತಪಃಪ್ರಭಾವದ ವಿಷಯವಾಗಿ ಆಲೋಚಿಸತೊಡಗಿದನು.

ಮಹರ್ಷಿಗಳ ತಪಸ್ಸಿನ ಪ್ರಭಾವವನ್ನು ಪ್ರತ್ಯಕ್ಷವಾಗಿ ನೋಡಿ ಆಶ್ಚರ್ಯಗೊಂಡು ಅದೇ ವಿಷಯವನ್ನೇ ಪುನಃ ಪುನಃ ವಿವೇಚಿಸುತ್ತಿದ್ದ ಶ್ರೀರಾಮನು ಅಣ್ಣನ ಸೇವೆಯಲ್ಲಿಯೇ ಏಕಾಗ್ರಚಿತ್ತನಾಗಿದ್ದ ಲಕ್ಷ್ಮಣನಿಗೆ ಹೇಳಿದನು :

"ಲಕ್ಷ್ಮಣ ! ಅನೇಕವಿಧವಾದ ಆಶ್ಚರ್ಯಕರದೃಶ್ಯಗಳಿಂದ ಕೂಡಿರುವ ಜಿತೇಂದ್ರಿಯರಾದ ಮಹರ್ಷಿಗಳ ಈ ದಿವ್ಯಾಶ್ರಮವನ್ನು ನೋಡಿಯಾಯಿತು. ಇಲ್ಲಿ ಹುಲಿಗಳೂ-ಜಿಂಕೆಗಳೂ ಯಾವ ಆತಂಕವೂ ಇಲ್ಲದೇ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.
ಪರಸ್ಪರ ವಿಶ್ವಾಸದಿಂದ ಸಂಚರಿಸುತ್ತಿವೆ. ಈ ವನದಲ್ಲಿ ಹಲವಾರು ಬಗೆಯ ಪಕ್ಷಿಗಳು ನಿವಾಸಮಾಡಿಕೊಂಡಿವೆ. ನಾವಿಬ್ಬರೂ ಸಪ್ತಸಮುದ್ರಗಳ ಸಾನ್ನಿಧ್ಯವಿರುವ ಈ ದಿವ್ಯತೀರ್ಥದಲ್ಲಿ ಸ್ನಾನಮಾಡಿದ್ದಾಯಿತು. ಪಿತೃಗಳಿಗೆ ತರ್ಪಣಾದಿಗಳನ್ನಿತ್ತು ವಿಧಿವತ್ತಾಗಿ ಅವರನ್ನು ಪೂಜಿಸಿದ್ದೂ ಆಯಿತು. ನನ್ನ ಮನಸ್ಸಿನಲ್ಲೀಗ ಶುಭಕರವಾದ ಭಾವನೆಗಳೇ ಮೂಡುತ್ತಿವೆ. ಲಕ್ಷ್ಮಣ! ನಾವಿನ್ನು ಬಹಳ ಸುಂದರವಾಗಿರುವ ಪಂಪಾತೀರಕ್ಕೆ ಹೋಗೋಣ. ಋಶ್ಯಮೂಕಪರ್ವತವೂ ಬಹಳ ಹತ್ತಿರದಲ್ಲಿಯೇ ಕಂಗೊಳಿಸುತ್ತಿದೆ. ಅಲ್ಲಿಯೇ ಸೂರ್ಯನ ಮಗನಾದ ಧರ್ಮಾತ್ಮನಾದ ಸುಗ್ರೀವನು ವಾಸಮಾಡುತ್ತಿದ್ದಾನೆ. ವಾಲಿಯಿಂದ ಭಯಗೊಂಡಿರುವ ಮತ್ತು ನಾಲ್ವರು ಅನುಯಾಯಿಗಳೊಡನೆ ವಾಸಮಾಡುತ್ತಿರುವ ಸುಗ್ರೀವನನ್ನು ನೋಡಲು ನಾನು ಕಾತರನಾಗಿದ್ದೇನೆ. ಸೀತೆಯನ್ನು ಹುಡುಕುವ ಕಾರ್ಯವು ಅವನನ್ನೇ ಅವಲಂಬಿಸಿದೆ."

ಹೀಗೆ ಹೇಳಿದ ಶ್ರೀರಾಮನಿಗೆ ಲಕ್ಷ್ಮಣನು ಹೇಳಿದನು :

"ಅಣ್ಣ! ನಾವು ಬೇಗನೆ ಅಲ್ಲಿಗೆ ಹೋಗೋಣ. ನನ್ನ ಮನಸ್ಸು ಕೂಡ ಅಲ್ಲಿಗೆ ಹೋಗಲು ತವಕಿಸುತ್ತಿದೆ."

ರಾಜಕುಮಾರನಾದ, ಪ್ರಭುವಾದ ಶ್ರೀರಾಮನು ಮತಂಗಾಶ್ರಮದಿಂದ ಹೊರಟು ಲಕ್ಷ್ಮಣನೊಡನೆ ಪಂಪಾಸರೋವರದ ಬಳಿಗೆ ಹೋದನು. ಪಂಪಾ ಸರೋವರವಿದ್ದ ಆ ವನವು ಪುಷ್ಪಭರಿತವಾಗಿದ್ದ ವೃಕ್ಷಗಳಿಂದ ಸರ್ವತ್ರ ವ್ಯಾಪ್ತವಾಗಿದ್ದಿತು. ಬಕಪಕ್ಷಿಗಳಿಂದಲೂ, ನವಿಲುಗಳಿಂದಲೂ, ಮರಕುಟಕಪಕ್ಕಿಗಳಿಂದಲೂ, ಗಿಳಿಗಳಿಂದಲೂ, ಇನ್ನೂ ಹಲವು ಬಗೆಯ ಪಕ್ಷಿಗಳಿಂದಲೂ ನಿನಾದಿತವಾಗಿದ್ದಿತು. ಏಕಾಗ್ರಚಿತ್ತರಾಗಿದ್ದ ರಾಮ-ಲಕ್ಷ್ಮಣರು ಅಂತಹ ಸುಂದರವಾದ ವನವನ್ನು ವೀಕ್ಷಿಸುತ್ತಾ ಪಂಪಾತೀರವನ್ನು ಸೇರಿದರು. ವಿಧ-ವಿಧವಾದ ಪುಷ್ಪಭರಿತವಾದ ವೃಕ್ಷಗಳನ್ನೂ, ಸರೋವರಗಳನ್ನೂ, ನೋಡಿ ಕಾಮಾಭಿತಪ್ತನಾಗಿದ್ದ ಶ್ರೀರಾಮನು ಶ್ರೇಷ್ಠವಾದ ಪಂಪಾಸರೋವರದ ಬಳಿಗೆ ಬಂದನು. ಆ ಸರೋವರವು ಕುಡಿಯಲು ಯೋಗ್ಯವಾದ ಸ್ವಚ್ಛವಾದ ಶುಭಜಲದಿಂದ ಕೂಡಿದ್ದಿತು. ಶ್ರೀರಾಮನು ಬಹಳ ದೂರ


CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.
ನಡೆದು ಮುಂದೆ ಹೋಗುತ್ತಾ ಪಂಪಾಸರೋವರದ ಒಂದು ಭಾಗವೇ ಆಗಿದ್ದ ಮತಂಗಸರಸ್ಸೆಂಬ ಹೆಸರಿನಿಂದ ಪ್ರಸಿದ್ಧವಾಗಿದ್ದ ತೀರ್ಥದಲ್ಲಿ ಸ್ನಾನಮಾಡಿದನು. ರಾಮ-ಲಕ್ಷ್ಮಣರು ಶಾಂತರಾಗಿ ಮತ್ತು ಏಕಾಗ್ರಚಿತ್ತರಾಗಿ ಅಲ್ಲಿಗೆ ಬಂದಿದ್ದರು. ಸೀತಾವಿರಹಶೋಕದಿಂದ ವ್ಯಾಕುಲನಾಗಿದ್ದ ಶ್ರೀರಾಮನು ಕಮಲಪುಷ್ಪಗಳಿಂದ ಸಮಾವೃತವಾಗಿದ್ದ, ರಮ್ಯವಾಗಿದ್ದ ಪಂಪಾಸರೋವರದಲ್ಲಿಳಿದನು. ಆ ಸರೋವರವು ತಿಲಕ, ಅಶೋಕ, ಪುನ್ನಾಗ, ವಕುಲ-ಇವೇ ಮುಂತಾದ ವೃಕ್ಷಗಳಿಂದ ಸುತ್ತುವರಿಯಲ್ಪಟ್ಟಿದ್ದಿತು. ರಮ್ಯವಾದ ಉಪವನದಿಂದ ಕೂಡಿದ್ದಿತು. ಆ ಸರೋವರದಲ್ಲಿ ತಾವರೇಹೂಗಳ ಪರಾಗಗಳಿಂದ ಮಿಶ್ರವಾದ ಜಲವಿದ್ದಿತು. ನೀರು ಸ್ಫಟಿಕದಂತೆ ಶುಭ್ರವಾಗಿದ್ದಿತು. ಸರೋವರದ ನಡುಭಾಗಗಳಲ್ಲಿ ಮಳಲಿನ ಗುಡ್ಡೆಗಳಿದ್ದುವು. ಆ ಸರೋವರದಲ್ಲಿ ಮೀನುಗಳೂ ಆಮೆಗಳೂ ಹೇರಳವಾಗಿದ್ದುವು. ಸಖಿಯರಂತೆ ಲತೆಗಳಿಂದ ಸುತ್ತುವರಿಯಲ್ಪಟ್ಟಿದ್ದ ತೀರವೃಕ್ಷಗಳಿಂದ ಸರೋವರವು ಶೋಭಾಯಮಾನವಾಗಿ ಕಾಣುತ್ತಿದ್ದಿತು. ಆ ಸರೋವರವನ್ನು ಕಿನ್ನರ-ನಾಗ-ಗಂಧರ್ವ-ಯಕ್ಷ-ರಾಕ್ಷಸರು ಸರ್ವಕಾಲದಲ್ಲಿಯೂ ಸೇವಿಸುತ್ತಿದ್ದರು. ನಾನಾವಿಧವಾದ ಲತೆಗಳಿಂದಲೂ ಮತ್ತು ವೃಕ್ಷಗಳಿಂದಲೂ ಆ ಸರೋವರವು ಸುತ್ತುವರಿಯಲ್ಪಟ್ಟಿದ್ದಿತು. ಶೀತಲವಾದ ನೀರಿಗೆ ಶುಭದಾಯಕವಾದ ಆ ಸರೋವರವು ನಿಧಿಪ್ರಾಯವಾಗಿದ್ದಿತು. ಪದ್ಮಪುಷ್ಪಗಳಿಂದಲೂ, ಸೌಗಂಧಿಕಪುಷ್ಪಗಳಿಂದಲೂ ಮಿಶ್ರಿತವಾದ ಸರೋವರದ ನೀರು ಒಂದು ಕಡೆಯಲ್ಲಿ ಕೆಂಪಾಗಿ ಕಾಣುತ್ತಿದ್ದಿತು. ಕುಮುದಪುಷ್ಪಗಳ ಸಮೂಹವಿದ್ದ ದಿಕ್ಕಿನಲ್ಲಿ ನೀರು ಬಿಳುಪಾಗಿ ಕಾಣುತ್ತಿದ್ದಿತು. ಮತ್ತೊಂದು ಕಡೆ ನೀಲಕಮಲ ಸಮೂಹಗಳ ಸಂಪರ್ಕದಿಂದ ನೀಲವಾಗಿ ಕಾಣುತ್ತಿದ್ದಿತು. ಈ ಕಾರಣದಿಂದ ಪಂಪಾಸರೋವರದ ನೀರು ಹಲವಾರು ಬಣ್ಣಗಳಿಂದ ಕೂಡಿದ ರತ್ನಗಂಬಳಿಯಂತೆ ಕಾಣುತ್ತಿದ್ದಿತು. ಕಮಲ-ಕನ್ನೈದಿಲೆಗಳಿಂದಲೂ ಪದ್ಮ-ಸೌಗಂಧಿಕಪುಷ್ಪಗಳಿಂದಲೂ ಆ ಸರೋವರವು ನಿಬಿಡವಾಗಿದ್ದಿತು. ಪುಷ್ಪಿತವಾದ ಮಾವಿನ ಮರಗಳು ಪಂಪಾಸರೋವರದ ವನದಲ್ಲಿದ್ದುವು. ನವಿಲುಗಳ ಕೇಕೆಯ ಧ್ವನಿಯಿಂದ ಆ ವನಪ್ರದೇಶವೆಲ್ಲವೂ ನಿನಾದಿತವಾಗುತ್ತಿದ್ದಿತು. ಅಂತಹ ಪರಿಸರದಿಂದ ಕೂಡಿದ್ದ ಬಹುಸುಂದರವಾದ ಸರೋವರವನ್ನು ಸೌಮಿತ್ರಿಸಹಿತನಾದ

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri


ಶ್ರೀರಾಮನು ನೋಡಿ ಸೀತೆಯನ್ನು ನೆನೆಯುತ್ತಾ ಗಟ್ಟಿಯಾಗಿ ವಿಲಪಿಸಿದನು. ತಿಲಕವೃಕ್ಷಗಳಿಂದಲೂ, ಸೀಬೇಗಿಡಗಳಿಂದಲೂ, ವಟವೃಕ್ಷಗಳಿಂದಲೂ, ಶ್ವೇತವೃಕ್ಷಗಳಿಂದಲೂ, ಪುಷ್ಪಿತವಾದ ಮತ್ತಿಮರಗಳಿಂದಲೂ, ಸುರಗಿಮರಗಳಿಂದಲೂ, ಮಾಲತೀ-ಕುಂದವೃಕ್ಷಗಳ ಪೊದೆಗಳಿಂದಲೂ, ನೀರುಹಲಸಿನ ಮರಗಳಿಂದಲೂ, ಅಶೋಕವೃಕ್ಷಗಳಿಂದಲೂ, ಏಳಿಲೆ ಬಾಳೆಯ ಗಿಡಗಳಿಂದಲೂ, ಚಿಲ್ಲದ ಗಿಡಗಳಿಂದಲೂ, ತಾಳೇಮರಗಳಿಂದಲೂ, ಇನ್ನೂ ಅನೇಕವಾದ ವೃಕ್ಷವಿಶೇಷಗಳಿಂದಲೂ ಸುತ್ತುವರಿಯಲ್ಪಟ್ಟದ್ದು ಸರ್ವಾಲಂಕಾರಭೂಷಿತೆಯಾದ ಪ್ರಮದೆಯಂತೆ ಪರಿಶೋಭಿಸುತ್ತಿದ್ದ ಪಂಪಾಸರೋವರವನ್ನು ನೋಡಿ ಶ್ರೀರಾಮನು ಸೀತೆಯನ್ನು ಬಾರಿ-ಬಾರಿಗೂ ನೆನೆಯುತ್ತಾ ಬಹಳವಾಗಿ ಶೋಕಿಸುತ್ತಾ ಲಕ್ಷ್ಮಣನಿಗೆ ಹೇಳಿದನು :

" ಈ ಪಂಪಾಸರೋವರದ ತೀರಪ್ರದೇಶದಲ್ಲಿಯೇ ಹಿಂದೆ ಕಬಂಧನು ಹೇಳಿರುವಂತೆ ಗೈರಿಕಾದಿ ಧಾತುಗಳಿಂದ ಸಮಲಂಕೃತವಾದ, ಪುಷ್ಪಿತವಾದ ವೃಕ್ಷಗಳಿಂದ ಚಿತ್ರಿತವಾಗಿರುವ, ಋಷ್ಯಮೂಕವೆಂದು ವಿಖ್ಯಾತವಾದ ಪರ್ವತವಿದೆ. ಮಹಾತ್ಮನಾದ ಋಕ್ಷರಜಸನ ಮಗನಾದ ಮಹಾವೀರ್ಯನಾದ ಸುಗ್ರೀವನೆಂದು ವಿಖ್ಯಾತನಾದ ವಾನರಶ್ರೇಷ್ಠನು ಅಲ್ಲಿ ವಾಸಮಾಡುತ್ತಿದ್ದಾನೆ. ನೀನು ವಾನರೇಂದ್ರನಾದ ಆ ಸುಗ್ರೀವನ ಬಳಿಗೆ ಹೋಗು. ತಮ್ಮ ! ಸೀತೆಯಿಲ್ಲದೇ ನಾನು ಹೇಗೆ ತಾನೇ ಜೀವಿಸಿಯೇನು ? "

ಮನ್ಮಥನಿಂದ ಬಹಳವಾಗಿ ಪೀಡಿಸಲ್ಪಡುತ್ತಿದ್ದ, ಸೀತಾದೇವಿಯಲ್ಲಿಯೇ ನೆಟ್ಟಮನಸ್ಸುಳ್ಳವನಾಗಿದ್ದ ಶ್ರೀರಾಮನು ಲಕ್ಷ್ಮಣನಿಗೆ ಹೀಗೆ ಹೇಳುತ್ತಾ ಶೋಕ-ವಿಷಾದಗಳಿಂದ ಕೂಡಿದವನಾಗಿ ಮುನ್ನಡೆಯುತ್ತಾ ವನದ ಸೊಬಗನ್ನು ಬಾರಿ-ಬಾರಿಗೂ ವೀಕ್ಷಿಸುತ್ತಾ ನಾನಾವಿಧವಾದ ಪಕ್ಷಿಗಳ ಸಮೂಹಗಳಿಂದ ಸಮಾಕುಲವಾಗಿದ್ದ, ಸುತ್ತಲೂ ಇದ್ದ ಕಾನನಗಳಿಂದ ಸುಂದರವಾಗಿ ಕಾಣುತ್ತಿದ್ದ ಪಂಪಾಸರೋವರದ ತೀರಪ್ರದೇಶವನ್ನು ಲಕ್ಷ್ಮಣನೊಡನೆ ಸೇರಿದನು.

೭೫ನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡವು ಮುಗಿಯಿತು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

ಸ್ವಸ್ತಿಪ್ರಜಾಭ್ಯಃ ಪರಿಪಾಲಯನ್ತಾಂ
ನ್ಯಾಯ್ಯೇನ ಮಾರ್ಗೇಣ ಮಹೀಂ ಮಹೀಶಾಃ ।
ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ
ಲೋಕಾಃ ಸಮಸ್ತಾಃ ಸುಖಿನೋ ಭವನ್ತು ॥

ಕಾಲೇ ವರ್ಷತು ಪರ್ಜನ್ಯಃ ಪೃಥಿವೀ ಸಸ್ಯಶಾಲಿನೀ ।
ದೇಶೋಽಯಂ ಕ್ಷೋಭರಹಿತೋ ಬ್ರಾಹ್ಮಣಾಃ ಸನ್ತು ನಿರ್ಭಯಾಃ ॥

ಮಙ್ಗಲಂ ಕೋಸಲೇನ್ದ್ರಾಯ ಮಹನೀಯಗುಣಾತ್ಮನೇ ।
ಚಕ್ರವರ್ತಿತನೂಜಾಯ ಸಾರ್ವಭೌಮಾಯ ಮಙ್ಗಲಮ್ ॥

ಯನ್ಮಙ್ಗಲಂ ಸುಪರ್ಣಸ್ಯ ವಿನತಾಕಲ್ಪಯತ್ಪುರಾ ।
ಅಮೃತಂ ಪ್ರಾರ್ಥಯಾನಸ್ಯ ತತ್ತೇ ಭವತು ಮಙ್ಗಲಮ್ ॥

ತ್ರೀನ್ವಿಕ್ರಮಾನ್ಪ್ರಕ್ರಮತೋ ವಿಷ್ಣೋರಮಿತತೇಜಸಃ ।
ಯದಾಸೀನ್ಮಙ್ಗಲಂ ರಾಮ ತತ್ತೇ ಭವತು ಮಙ್ಗಲಮ್ ॥

ಋತವಃ ಸಾಗರಾ ದ್ವೀಪಾ ವೇದಾ ಲೋಕಾ ದಿಶಶ್ಚ ತೇ ।
ಮಙ್ಗಲಾನಿ ಮಹಾಬಾಹೋ ದಿಶನ್ತು ತವ ಸರ್ವದಾ ॥

ರಾಮಾಯ ರಾಮಪದಪಙ್ಕಜಷಟ್ಪದಾಯ
ರಾಮಾನುಜಾಯ ಭರತಾಯ ಸಹಾನುಜಾಯ ।
ದೇವ್ಯೈ ವಿದೇಹಕುಲಮಙ್ಗಲದೀಪಿಕಾಯೈ
ವಾಲ್ಮೀಕಯೇ ಹನುಮತೇ ಚ ನಮೋ ವದಾಮಃ ॥

ಕಾಯೇನ ವಾಚಾ ಮನಸೇನ್ದ್ರಿಯೈರ್ವಾ
ಬುದ್ಧ್ಯಾತ್ಮನಾ ವಾ ಪ್ರಕೃತೇಃ ಸ್ವಭಾವಾತ್ ।
ಕರೋಮಿ ಯದ್ಯತ್ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ ॥

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ಶ್ರೀರಾಘವ ನಮೋಽಸ್ತು ತೇ ॥

ಶ್ರೀಕೃಷ್ಣಾರ್ಪಣಮಸ್ತು ಶ್ರೀಸದ್ಗುರುಚರಣಾರವಿನ್ದಾರ್ಪಣಮಸ್ತು

॥ ಓಂ ತತ್ಸತ್ ॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಶ್ರೀ ಮಹಾಗಣಪತಯೇ ನಮಃ ಶ್ರೀಮಹಾಸರಸ್ವತ್ಯೈ ನಮಃ ಶ್ರೀ ಸದ್ಗುರವೇ ನಮಃ



ತಪಃಸ್ವಾಧ್ಯಾಯನಿರತಂ ತಪಸ್ವೀ ವಾಗ್ವಿದಾಂ ವರಮ್ ।
ನಾರದಂ ಪರಿಪಪ್ರಚ್ಛ ವಾಲ್ಮೀಕಿರ್ಮುನಿಪುಙ್ಗವಮ್ ॥

# ಶ್ರೀಮದ್ವಾಲ್ಮೀಕಿರಾಮಾಯಣ - ಕಿಷ್ಕಿಂಧಾಕಾಂಡ

 ೧ನೆಯ ಸರ್ಗ

## ಪಂಪಾಸರೋವರದ ದರ್ಶನದಿಂದ ಶ್ರೀರಾಮನ ವ್ಯಾಕುಲತೆ : ಲಕ್ಷ್ಮಣನು ಶ್ರೀರಾಮನನ್ನು ಸಮಾಧಾನಗೊಳಿಸಿದುದು : ರಾಮ-ಲಕ್ಷ್ಮಣರು ಋಷ್ಯಮೂಕಪರ್ವತದ ಕಡೆಗೆ ಬರುತ್ತಿರುವುದನ್ನು ಕಂಡು ಸುಗ್ರೀವನೇ ಮೊದಲಾದ ವಾನರರು ಭಯಗ್ರಸ್ತರಾದುದು

ಸ ತಾಂ ಪುಷ್ಕರಿಣೀಂ ಗತ್ವಾ ಪದ್ಮೋತ್ಪಲಝಷಾಕುಲಾಮ್ ।
ರಾಮಃ ಸೌಮಿತ್ರಿಸಹಿತೋ ವಿಲಲಾಪಾಕುಲೇನ್ದ್ರಿಯಃ ॥೧॥

ಶ್ರೀರಾಮನು ಲಕ್ಷ್ಮಣನ ಸಮೇತನಾಗಿ ಪಂಪಾಸರೋವರದ ತೀರ ಪ್ರದೇಶಕ್ಕೆ ತೆರಳಿ ಕಮಲಗಳಿಂದಲೂ, ಕನ್ನೈದಿಲೆಗಳಿಂದಲೂ ಮತ್ತು ಮೀನುಗಳಿಂದಲೂ ಕೂಡಿದ್ದ ಸರೋವರವನ್ನು ನೋಡಿ ದುಃಖಮನಸ್ಕನಾಗಿ ಗೋಳಾಡಿದನು. ಸರೋವರದ ಸೊಬಗನ್ನು ನೋಡಿದೊಡನೆಯೇ ಶ್ರೀರಾಮನ ಇಂದ್ರಿಯಗಳು ಹರ್ಷದಿಂದ ವಿಚಲಿತವಾದುವು. ಮನ್ಮಥನ ಹಿಡಿತಕ್ಕೆ ಸಿಕ್ಕಿದ್ದ ಶ್ರೀರಾಮನು ಲಕ್ಷ್ಮಣನಿಗೆ ಹೇಳಿದನು : *

---

* ಸರೋವರವನ್ನು ನೋಡಿದೊಡನೆಯೇ ಶ್ರೀರಾಮನಿಗೆ ಹರ್ಷವುಂಟಾದುದು ಹೇಗೆ? ಮರುಕ್ಷಣದಲ್ಲಿಯೇ ಅವನಿಗೆ ಸೀತೆಯ ನೆನಪು ಬಂದು ದುಃಖವಾದುದು ಹೇಗೆ?– ಎಂಬುದನ್ನು ಒಬ್ಬ ವ್ಯಾಖ್ಯಾನಕಾರರು ಹೀಗೆ ಚಿತ್ರಿಸಿದ್ದಾರೆ : ಸರೋವರಗಳಲ್ಲಿ ಪದ್ಮ, ಕನ್ನೈದಿಲೆ ಮತ್ತು ಇತ್ತಲಿಂದತ್ತ-ಅತ್ತಲಿಂದಿತ್ತ ಚಲಿಸುವ ಮೀನುಗಳನ್ನು ನೋಡಿದರೆ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


"ಲಕ್ಷ್ಮಣ! ವೈಡೂರ್ಯಮಣಿಯಂತೆ ಸ್ವಚ್ಛವಾಗಿರುವ ನೀರಿನಿಂದ ಕೂಡಿರುವ, ಅರಳಿದ ಕಮಲಗಳಿಂದಲೂ ಕನ್ನೈದಿಲೆಗಳಿಂದಲೂ ಸಮೃದ್ಧವಾಗಿರುವ, ನಾನಾವಿಧವಾದ ವೃಕ್ಷಗಳಿಂದ ಸುತ್ತುವರಿಯಲ್ಪಟ್ಟಿರುವ ಈ ಪಂಪಾಸರೋವರವು ಎಷ್ಟು ಶೋಭಾಯಮಾನವಾಗಿ ಕಾಣುತ್ತಿದೆ! ಇದರ ಸುತ್ತಲೂ ಇರುವ ಸುಂದರವಾಗಿ ಕಾಣುತ್ತಿರುವ ಈ ಅರಣ್ಯವನ್ನು ನೋಡು; ತಮ್ಮ! ಇಲ್ಲಿರುವ ಮರಗಳು ದೊಡ್ಡ ದೊಡ್ಡ ರೆಂಬೆಗಳಿಂದ ಕೂಡಿದ್ದು ಶಿಖರಯುಕ್ತವಾದ ಪರ್ವತಗಳಂತೆಯೇ ಕಾಣುತ್ತಿವೆ. ಭರತನ ವಿಯೋಗ, ವೈದೇಹಿಯ ಅಪಹರಣ-ಈ ದುಃಖಗಳಿಂದ ಸಂತಪ್ತನಾಗಿರುವ ನನ್ನನ್ನು ವಸಂತನೂ ವಿಶೇಷವಾಗಿ ಪೀಡಿಸುತ್ತಿರುವನು.*

ಲಕ್ಷ್ಮಣ! ಶೋಕಪೀಡಿತನಾಗಿರುವ ನನಗೂ ಆಶ್ಚರ್ಯಕರವಾದ ಅರಣ್ಯದಿಂದ ಸುತ್ತುವರಿಯಲ್ಪಟ್ಟಿರುವ ಈ ಪಂಪಾಸರೋವರವು ಶೋಭಾಯಮಾನವಾಗಿ ಕಾಣುತ್ತಿದೆ. ಈ ಸರೋವರವು ಬಗೆ-ಬಗೆಯ ಪುಷ್ಪಗಳಿಂದ ವ್ಯಾಪ್ತನಾಗಿದೆ. ಶೀತೋದಕದಿಂದ ಕೂಡಿದ್ದು ಮಂಗಳಕರವಾಗಿದೆ. ಕಮಲ ಪುಷ್ಪಗಳಿಂದ ತುಂಬಿಹೋಗಿದೆ. ಈ ಕಾರಣಗಳಿಂದ ಈ ಸರೋವರವು ಅತ್ಯಂತಸುಂದರವಾಗಿ ಕಾಣುತ್ತಿದೆ. ಪಂಪಾರಣ್ಯವಾದರೋ ಸರ್ಪಗಳಿಂದಲೂ ವಿಷಜಂತುಗಳಿಂದಲೂ ಕೂಡಿದ್ದು ಮೃಗ-ಪಕ್ಷಿಗಳಿಂದ ಆಶ್ರಯಿಸಲ್ಪಟ್ಟಿದೆ. ಇಲ್ಲಿರುವ ವೃಕ್ಷಗಳು ಬಣ್ಣ-ಬಣ್ಣದ ಹೂಗಳಿಂದ ಸಮಲಂಕೃತವಾಗಿವೆ. ನೀಲವಾಗಿಯೂ ಹಸಿರಾಗಿಯೂ ಕಾಣುವ ಈ ಅರಣ್ಯದ ಹುಲ್ಲುಗಾವಲು, ರಂಗು-ರಂಗುಗಳಿಂದ ಕೂಡಿದ ರತ್ನಗಂಬಳಿಗಳಿಂದ ಹಾಸಲ್ಪಟ್ಟಿರುವಂತೆ

---

ಹರ್ಷವುಂಟಾಗುವುದು ಸ್ವಾಭಾವಿಕ. ಅಂತೆಯೇ ಶ್ರೀರಾಮನಿಗೂ ಹರ್ಷವುಂಟಾಯಿತು. ಆದರ ಜೊತೆಯಲ್ಲಿಯೇ ಶ್ರೀರಾಮನಿಗೆ ಕಮಲಗಳನ್ನು ನೋಡಿದೊಡನೆಯೇ ಕಮಲ ವದನೆಯಾದ ಸೀತಾದೇವಿಯ ಮುಖವು ಸ್ಮರಣೆಗೆ ಬಂದಿತು. ಕನ್ನೈದಿಲೆಯನ್ನು ನೋಡಿದೊಡನೆಯೇ ಅವಳ ಕಪ್ಪಾದ ಕಣ್ಣುಗಳು ಸ್ಮರಣೆಗೆ ಬಂದುವು ಚಂಚಲವಾದ ಮೀನುಗಳನ್ನು ನೋಡಿದೊಡನೆಯೇ ಸೀತಾದೇವಿಯ ಚಂಚಲವಾದ ಕಡೆಗಣ್ಣಿನ ನೋಟವು ಸ್ಮರಣೆಗೆ ಬಂದಿತು. ಆದರಿಂದಾಗಿ ಶ್ರೀರಾಮನು ಕಾಮಪೀಡಿತನಾದನು.

* ಭರತನ ದುಃಖವನ್ನು ಎರಡು ಬಗೆಯಾಗಿ ವ್ಯಾಖ್ಯಾನಕಾರರು ನಿರೂಪಿಸಿದ್ದಾರೆ: ಅಣ್ಣನನ್ನು ಅಯೋಧ್ಯೆಗೆ ಕರೆದುಕೊಂಡುಹೋಗಲಾಗದೇ ದುಃಖದಿಂದ ಅವನ ಪಾದುಕೆ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಕಾಣುತ್ತಿದೆ. ವೃಕ್ಷಗಳ ತುದಿಗಳು ಸುತ್ತಲೂ ಇರುವ ಪುಷ್ಪಗಳ ಭಾರದಿಂದ ಸಮೃದ್ಧವಾಗಿರುವಂತೆ ಕಾಣುತ್ತಿವೆ. ಹೂತುಂಬಿದ ಕುಡಿಗಳಿಂದ ಕೂಡಿರುವ ಬಳ್ಳಿಗಳು ಪುಷ್ಪಸಮೃದ್ಧಿಯಿಂದ ಕೂಡಿರುವ ವೃಕ್ಷಗಳನ್ನು ಎಲ್ಲ ಕಡೆಗಳಿಂದಲೂ ಮುಚ್ಚಿಬಿಟ್ಟವೆ. ಲಕ್ಷ್ಮಣ! ಸುಖದಾಯಕವಾದ ಗಾಳಿಯೂ ಮೆಲ್ಲ-ಮೆಲ್ಲನೆ ಬೀಸುತ್ತಿದೆ. ವೃಕ್ಷಗಳು ಫಲ-ಪುಷ್ಪಗಳಿಂದ ತುಂಬಿಹೋಗಿವೆ. ಸುಗಂಧಯುಕ್ತವಾದ ಈ ವಸಂತಕಾಲವು ಮನ್ಮಥನ ಪ್ರಭಾವವನ್ನು ಹೆಚ್ಚಿಸುತ್ತಿದೆ. ನೀರನ್ನು ಸುರಿಸುವ ಮೇಘಗಳಂತೆ ಪುಷ್ಪವೃಷ್ಟಿಯನ್ನೇ ಸುರಿಸುತ್ತಿರುವ ಈ ಅರಣ್ಯಗಳ ಸೊಬಗನ್ನು ನೋಡು, ಲಕ್ಷ್ಮಣ! ರಮ್ಯವಾಗಿರುವ ಬಂಡೆಗಳ ಮಧ್ಯದಲ್ಲಿಯೂ ಹುಟ್ಟಬೆಳೆದಿರುವ ನಾನಾವಿಧವಾದ ವೃಕ್ಷಗಳು ಗಾಳಿಯ ವೇಗದಿಂದ ಅಲುಗಾಡಿಸಲ್ಪಟ್ಟು ಪರಿಸರದಲ್ಲಿರುವ ಭೂಪ್ರದೇಶವನ್ನು ಪುಷ್ಪಗಳಿಂದ ಮುಚ್ಚುತ್ತಿವೆ. ಕೆಳಗೆ ಬಿದ್ದಿರುವ, ಬೀಳುತ್ತಿರುವ ಮತ್ತು ವೃಕ್ಷಗಳ ಮೇಲಿರುವ ಕುಸುಮಗಳೊಡನೆ ವಾಯುದೇವನು ಕ್ರೀಡಿಸುತ್ತಿರುವನೋ ಎಂಬಂತೆ ಕಾಣುತ್ತಿರುವ ಈ ಸುಂದರ ದೃಶ್ಯವನ್ನು ನೋಡು, ತಮ್ಮ! ವಾಯುವು ವೃಕ್ಷಗಳಲ್ಲಿರುವ ಹೂಗಳಿಂದ ತುಂಬಿರುವ ವಿಧ-ವಿಧವಾದ ರೆಂಬೆಗಳನ್ನು ತನ್ನ ವೇಗದಿಂದ ಅಲುಗಾಡಿಸುತ್ತಿದೆ. ಇದರಿಂದಾಗಿ ಹೂಗಳಲ್ಲಿರುವ ಮಧುವನ್ನು ಸವಿಯುತ್ತಿರುವ ದುಂಬಿಗಳು ಧ್ವನಿಮಾಡುತ್ತಾ ಮೇಲೇಳುತ್ತಿವೆ. ಇದನ್ನು ನೋಡಿದರೆ ದುಂಬಿಗಳೊಡನೆ ವಾಯುವೂ ಗಾನಮಾಡುತ್ತಿರುವಂತೆ ಭಾಸವಾಗುತ್ತದೆ. ಪರ್ವತದ ಗುಹೆಗಳಿಂದ ಹೊರಬರುವ ಗಾಳಿಯು ಶ್ರೇಷ್ಠನಾದ ಗಾಯಕನಂತೆ ಸುಯ್ಯನೆ ಧ್ವನಿಮಾಡುತ್ತಾ ಬೀಸುತ್ತಿದೆ. ಇದನ್ನು ನೋಡಿದರೆ ಮದಿಸಿದ ಕೋಗಿಲೆಗಳ ಸುಮಧುರವಾದ ನಿನಾದಗಳೊಡನೆ ವೃಕ್ಷಗಳನ್ನೂ ವಾಯುದೇವನು ನೃತ್ಯಮಾಡಿಸುತ್ತಿರುವನೋ ಎಂಬಂತೆ ಕಾಣುತ್ತಿದೆ. ಗಾಳಿಯು ನಾಲ್ಕು ದಿಕ್ಕುಗಳಲ್ಲಿಯೂ ರಭಸವಾಗಿ ಬೀಸುತ್ತಾ ವೃಕ್ಷಗಳನ್ನು ಅಲುಗಾಡಿ

---

ಗಳನ್ನು ಮಾತ್ರ ತೆಗೆದುಕೊಂಡುಹೋದುದು; ರಾಮನು ಅಯೋಧ್ಯೆಗೆ ಹೋಗುವವರೆಗೂ ತಾನು ಅಯೋಧ್ಯೆಯನ್ನು ಪ್ರವೇಶಿಸುವುದಿಲ್ಲವೆಂಬ ಪ್ರತಿಜ್ಞೆಮಾಡಿ ನಂದಿಗ್ರಾಮದಲ್ಲಿ ಕಠೋರವ್ರತನಿಷ್ಠನಾಗಿ ವಾಸಮಾಡುತ್ತಿರುವುದು–ಇದು ಭರತನಿಗೆ ಸಂಬಂಧಿಸಿದ ದುಃಖಗಳೆಂದು ವ್ಯಾಖ್ಯಾನಕಾರರ ಅಭಿಪ್ರಾಯವಾಗಿದೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸುತ್ತಿದೆ. ಇದರಿಂದ ವೃಕ್ಷಗಳ ರೆಂಬೆಗಳು ಒಂದಕ್ಕೊಂದು ಸೇರಿಕೊಂಡು ಮರಗಳ ಮಾಲೆಯೋಪಾದಿಯಲ್ಲಿ ಕಾಣುತ್ತಿವೆ. ಶ್ರೀಚಂದನದಂತೆ ಶೀತಲ ವಾಗಿರುವ, ಸ್ಪರ್ಶಮಾತ್ರದಿಂದಲೇ ಮನಸ್ಸಿಗೆ ಆಹ್ಲಾದವನ್ನುಂಟುಮಾಡುವ, ಎಂತಹ ಆಯಾಸವನ್ನಾದರೂ ಹೋಗಲಾಡಿಸುವ ಆ ವಾಯುವೇ ಶುಭ ಸೂಚಕವಾದ ಗಂಧವನ್ನು ಹೊತ್ತು ಈ ಸ್ಥಳದಲ್ಲಿ ಬೀಸುತ್ತಿದೆ. ಮಧುರವಾದ ಮಕರಂದದ ಸುಗಂಧದಿಂದ ವ್ಯಾಪ್ತವಾಗಿರುವ ಅರಣ್ಯಗಳಲ್ಲಿ ಗಾಳಿಯಿಂದ ಅಲುಗಾಡುತ್ತಿರುವ ವೃಕ್ಷಗಳು ಧ್ವನಿಮಾಡುತ್ತಿರುವ ದುಂಬಿಗಳೊಡನೆ ಸೇರಿ ತಾವೂ ಶಬ್ದಮಾಡುತ್ತಿವೆಯೋ ಎಂಬಂತೆ ಕಾಣುತ್ತಿದೆ. ಪರ್ವತಗಳ ರಮ್ಯ ವಾದ ಪ್ರಸ್ಥಭೂಮಿಗಳಲ್ಲಿ ಹೂಗಳಿಂದ ಕೂಡಿರುವ ಮನೋಹರವಾದ ಮಹಾವೃಕ್ಷಗಳೊಡನೆ ಪರಸ್ಪರವಾಗಿ ಸೇರಿಕೊಂಡಂತಿರುವ ಪರ್ವತಶಿಖರ ಗಳು ಬಹಳವಾಗಿ ಪ್ರಕಾಶಿಸುತ್ತಿವೆ.

ವೃಕ್ಷಗಳ ರೆಂಬೆಗಳ ಮುಂಭಾಗಗಳು ಪುಷ್ಪಗಳಿಂದ ಮುಚ್ಚಿಹೋಗಿವೆ. ಅವು ಗಾಳಿಯ ರಭಸದಿಂದ ಅಲುಗಾಡುತ್ತಿವೆ. ಆ ಪುಷ್ಪಗುಚ್ಛಗಳ ಮೇಲೆ ದುಂಬಿಗಳು ಕುಳಿತಿವೆ. ಇದನ್ನು ನೋಡಿದರೆ ಮುಡಿಯಲ್ಲಿ ಹೂವನ್ನು ಮುಡಿದು ಕಪ್ಪಾದ ಕೂದಲುಗಳಿಂದ ವಿರಾಜಿಸುತ್ತಿರುವ ವೃಕ್ಷಗಳು ನಾಟ್ಯ ಗಾನವನ್ನು ಮಾಡುತ್ತಿವೆಯೋ ಎಂಬಂತೆ ಕಾಣುತ್ತಿದೆ. ಸುವರ್ಣಾಭರಣ ಗಳಿಂದ ಭೂಷಿತವಾಗಿರುವಂತೆ ಹೊಂಬಣ್ಣದ ಪುಷ್ಪಗಳಿಂದ ಕೂಡಿರುವ, ಪೀತಾಂಬರವನ್ನು ಧರಿಸಿರುವ ಮನುಷ್ಯರಂತೆ ಕಾಣುತ್ತಿರುವ, ಸುತ್ತಲೂ ಸೊಂಪಾಗಿ ಬೆಳೆದಿರುವ ಬೆಟ್ಟದ ಕಣಿಗಿಲೆ ಗಿಡಗಳನ್ನು ನೋಡು, ಲಕ್ಷ್ಮಣ! ನಾನಾವಿಧವಾದ ಪಕ್ಷಿಗಳಿಂದ ನಿನಾದಿತವಾಗುತ್ತಿರುವ ಈ ವಸಂತಕಾಲವು ಸೀತೆಯನ್ನು ಕಳೆದುಕೊಂಡಿರುವ ನನ್ನ ದುಃಖವನ್ನು ಉದ್ದೀಪನಗೊಳಿಸು ತ್ತಿದೆ. ಶೋಕದಿಂದ ಸಮಾಕ್ರಾಂತನಾಗಿರುವ ನನ್ನನ್ನು ಮನ್ಮಥನೂ ಬಹಳ ವಾಗಿ ಸಂತಾಪಗೊಳಿಸುತ್ತಿದ್ದಾನೆ. ಮಾವಿನ ಚಿಗುರುಗಳನ್ನು ತಿಂದು ಹೃಷ್ಟ ವಾಗಿರುವ ಕೋಗಿಲೆಯು ಸುಮಧುರವಾಗಿ ಧ್ವನಿಮಾಡುತ್ತಾ ನನ್ನನ್ನು ಆಹ್ವಾನಿಸುತ್ತಿರುವಂತೆ ಕಾಣುತ್ತಿದೆ. ಅರಣ್ಯದಲ್ಲಿ ಪ್ರವಹಿಸುತ್ತಿರುವ ರಮ್ಯ ವಾದ ನದಿಗಳಲ್ಲಿ ಸಂಚರಿಸುತ್ತಿರುವ ಈ ನೀರುಕೋಳಿಗಳು ಸುಮಧುರವಾಗಿ ಧ್ವನಿಮಾಡುತ್ತಾ ಕಾಮಾಭಿಭೂತನಾಗಿರುವ ನನ್ನನ್ನು ಮತ್ತಷ್ಟು ದುಃಖಿತ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ನನ್ನಾಗಿ ಮಾಡುತ್ತಿವೆ. ಹಿಂದೆ ಆಶ್ರಮದಲ್ಲಿದ್ದಾಗ ಸೀತೆಯು ಈ ನೀರು ಕೋಳಿಗಳ ಧ್ವನಿಯನ್ನು ಕೇಳಿದೊಡನೆಯೇ ಸಂತೋಷಭರಿತಳಾಗಿ ನನ್ನನ್ನು ಹತ್ತಿರಕ್ಕೆ ಕರೆದು ಹೆಚ್ಚು ಆನಂದಪಡುತ್ತಿದ್ದಳು. ಚಿತ್ರ-ವಿಚಿತ್ರವಾಗಿರುವ, ನಾನಾಬಗೆಯಾಗಿ ಕೂಗುವ ಹಕ್ಕಿಗಳು ಎಲ್ಲ ಕಡೆಗಳಿಂದಲೂ ಬಂದು ವೃಕ್ಷ ಗಳಲ್ಲಿಯೂ, ಪೊದೆಗಳಲ್ಲಿಯೂ ಮತ್ತು ಲತೆಗಳಲ್ಲಿಯೂ ಸೇರಿಕೊಳ್ಳುತ್ತಿವೆ. ಹೆಣ್ಣು ಪಕ್ಷಿಗಳು ಗಂಡುಪಕ್ಷಿಗಳೊಡನೆ ಸೇರಿ ಸಜಾತೀಯ ಪಕ್ಷಿಗಳಿಂದ ಅಭಿ ನಂದಿಸಲ್ಪಟ್ಟವುಗಳಾಗಿ ದುಂಬಿಗಳ ಝೇಂಕಾರಧ್ವನಿಯಿಂದ ವಿಶೇಷವಾದ ಆನಂದವನ್ನು ಹೊಂದಿ ಸುಮಧುರವಾಗಿ ಚಿಲಿಪಿಲಿಗುಟ್ಟುತ್ತಿವೆ. ಈ ಪಂಪಾ ಸರೋವರದ ತೀರಪ್ರದೇಶದಲ್ಲಿ ಗುಂಪು-ಗುಂಪಾಗಿರುವ ಪಕ್ಷಿಗಳು-ರತಿಕ್ರೀಡೆಗೆ ಪ್ರಚೋದಿಸುವ ನೀರುಕೋಳಿಗಳ ಕೂಗಿನಿಂದಲೂ, ಗಂಡುಕೋಗಿಲೆಗಳ ಸುಮ ಧುರವಾದ ಧ್ವನಿಯಿಂದಲೂ ಆನಂದಪಡುತ್ತಿವೆ. ನನ್ನಲ್ಲಿರುವ ಕಾಮವನ್ನು ಉದ್ದೀಪನಗೊಳಿಸುತ್ತಾ ಈ ವೃಕ್ಷಗಳೂ ಧ್ವನಿಮಾಡುತ್ತಿವೆ. ಲಕ್ಷ್ಮಣ! ಈ ವಸಂತಾಗ್ನಿಯು ನನ್ನನ್ನು ನಿಶ್ಚಯವಾಗಿಯೂ ಸುಟ್ಟುಹಾಕುತ್ತಿದೆ. ಅಶೋಕವೃಕ್ಷದ ಹೂವಿನ ಗೊಂಚಲುಗಳು ಕೆಂಡಗಳಂತಿವೆ. ದುಂಬಿಗಳ ಝೇಂಕಾರಶಬ್ದವೇ ಅಗ್ನಿಯಲ್ಲಾಗುವ ಘಟ-ಘಟಾ ಶಬ್ದವಾಗಿದೆ. ತಾಮ್ರ ವರ್ಣದ ಚಿಗುರುಗಳೇ ಅಗ್ನಿಯ ಜ್ವಾಲೆಯಾಗಿದೆ. ವಸಂತವೆಂಬ ಇಂತಹ ಅಗ್ನಿಯು ನನ್ನನ್ನು ಸುಟ್ಟುಹಾಕುತ್ತಿದೆ. ಸೂಕ್ಷ್ಮವಾದ ರೆಪ್ಪೆಗಳಿಂದ ಕೂಡಿರುವ ಕಣ್ಣುಗಳುಳ್ಳ, ಸುಂದರವಾದ ಕೇಶರಾಶಿಯಿರುವ, ಮೃದುವಾಗಿ ಮಾತನಾಡುವ ಜಾನಕಿಯನ್ನು ನೋಡದಿದ್ದರೆ ನಾನು ಜೀವಿಸಿರುವುದರಿಂದ ಯಾವ ಪ್ರಯೋಜನವೂ ಇಲ್ಲ. ಕಾಡಿನ ಎಲ್ಲೆಯವರೆಗೂ ವ್ಯಾಪಿಸಿರುವ ಕೋಗಿಲೆಗಳ ಇಂಪಾದ ಧ್ವನಿಗಳೂ, ಕಾಡಿನ ಸೊಬಗನ್ನು ಹೆಚ್ಚಿಸುತ್ತಿರುವ ಈ ವಸಂತಕಾಲವೂ ನನ್ನ ಪ್ರೇಯಸಿಯಾದ ಸೀತೆಗೂ ಬಹಳ ಪ್ರಿಯವಾ ಗಿದ್ದಿತು. ಮಂದಮಾರುತ, ಕೋಗಿಲೆಯ ಧ್ವನಿ ಇವೇ ಮುಂತಾದ ವಸಂತ ಕಾಲದ ಗುಣಗಳಿಂದ ವೃದ್ಧಿಹೊಂದುತ್ತಿರುವ, ಮನ್ಮಥನ ಬಾಧೆಯಿಂದ ಹುಟ್ಟಿರುವ ಈ ಶೋಕಾಗ್ನಿಯು ಬಹುಬೇಗನೆ ನನ್ನನ್ನು ಸುಟ್ಟುಹಾಕುತ್ತಿದೆ. ಪ್ರೇಯಸಿಯಾದ ಸೀತಾದೇವಿಯನ್ನು ಕಾಣದೇ ವಸಂತಕಾಲದ ಚಿಗುರು ಗಳಿಂದ ಕೂಡಿರುವ ವೃಕ್ಷಗಳನ್ನು ಮಾತ್ರ ನೋಡುತ್ತಿದ್ದೇನೆ. ಇದರಿಂದಾಗಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಕಾಮಜ್ವರವು ಮತ್ತಷ್ಟು ಅಧಿಕವಾಗುತ್ತಿದೆ. ಕಣ್ಣಿಗೆ ಕಾಣಿಸದಿರುವ ವೈದೇಹಿಯು ನನ್ನ ಶೋಕವನ್ನು ಹೆಚ್ಚಿಸುವುದು ಸ್ವಾಭಾವಿಕವಾಗಿಯೇ ಇದೆ. ಆದರೆ ಹಲವು ಬಗೆಗಳಲ್ಲಿ ಕಾಣಿಸಿಕೊಳ್ಳುತ್ತಿರುವ, ಮಂದಮಾರುತನ ಮೂಲಕವಾಗಿ ಬೆವರನ್ನು ಹೋಗಲಾಡಿಸುವ ವಸಂತನೂ ನನ್ನ ಶೋಕವನ್ನು ಹೆಚ್ಚಿಸುತ್ತಿದ್ದಾನೆ.[1] ಮರಿಜಿಂಕೆಯ ಕಣ್ಣುಗಳಂತೆ ಚಂಚಲವಾದ ಕಣ್ಣುಗಳನ್ನು ಹೊಂದಿರುವ ಅದೃಶ್ಯಳಾಗಿರುವ ಸೀತೆಯೂ, ಅರಣ್ಯದಲ್ಲಿ ಬೀಸುತ್ತಿರುವ ಚೈತ್ರಮಾಸದ ಮಂದಾನಿಲನೂ ಚಿಂತೆ ಮತ್ತು ಶೋಕಗಳಿಂದ ಹೆಚ್ಚು ಪೀಡಿತನಾಗಿರುವ ನನ್ನನ್ನು ಮತ್ತಷ್ಟು ಸಂತಾಪಗೊಳಿಸುತ್ತಿದ್ದಾರೆ. ಇಲ್ಲಿ ಕಾಣುತ್ತಿರುವ ನವಿಲುಗಳು ಸ್ಫಟಿಕಮಯವಾದ ಗವಾಕ್ಷಗಳಂತೆಯೇ ಕಾಣುವ, ಗಾಳಿಯಿಂದ ಚದುರಿದಂತೆ ಮಾಡಲ್ಪಟ್ಟ ತಮ್ಮ ರೆಕ್ಕೆಗಳಿಂದ ಜಾಗರವಾಡುತ್ತಾ ಅಲ್ಲಲ್ಲಿ ನೃತ್ಯವಾಡುತ್ತಾ ಶೋಭಾಯಮಾನವಾಗಿ ಕಾಣುತ್ತಿವೆ.[2] ಹೆಣ್ಣುನವಿಲುಗಳಿಂದ ಸುತ್ತುವರಿಯಲ್ಪಟ್ಟಿರುವ, ಮದದಿಂದ ಮೋಹಗೊಂಡಿರುವ ಈ ಗಂಡುನವಿಲುಗಳು ಮೊದಲೇ ಮನ್ಮಥನಿಂದ ಪೀಡಿತನಾಗಿರುವ ನನ್ನ ಕಾಮವನ್ನು ಮತ್ತಷ್ಟು ಉದ್ರೇಕಗೊಳಿಸುತ್ತಿವೆ. ಪರ್ವತದ ತಪ್ಪಲುಪ್ರದೇಶದಲ್ಲಿ ಮನ್ಮಥನಿಂದ ಪೀಡಿತವಾದ ಹೆಣ್ಣು ನವಿಲು ನರ್ತನವಾಡುತ್ತಿರುವ ಗಂಡುನವಿಲನ್ನು ವಶಪಡಿಸಿಕೊಳ್ಳುವ ಸಲುವಾಗಿ ಅದನ್ನು ಅನುಸರಿಸಿಯೇ ತಾನೂ ನೃತ್ಯವಾಡುತ್ತಿದೆ. ನೃತ್ಯಪ್ರಸಂಗದಲ್ಲಿ ಮುಂದಕ್ಕೆ ಹೋದ ಹೆಣ್ಣುನವಿಲನ್ನು ಹಿಡಿಯುವ ಮನಸ್ಸಿನಿಂದ ಗಂಡುನವಿಲು ತನ್ನ ಸುಂದರವಾದ ರೆಕ್ಕೆಗಳನ್ನು ಪಸರಿಸಿಕೊಂಡು ನನ್ನನ್ನು ಉಪಹಾಸ ಮಾಡಲೋ ಎಂಬಂತೆ ಶಬ್ದಮಾಡುತ್ತಾ ಹೆಣ್ಣುನವಿಲನ್ನೇ ಅನುಸರಿಸಿ

---

[1] ಒಬ್ಬ ವ್ಯಾಖ್ಯಾನಕಾರರು ಈ ಶ್ಲೋಕದಲ್ಲಿ ಬರುವ 'ಸ್ವೇದಸಂಸರ್ಗದೂಷಕಃ' ಎಂಬುದಕ್ಕೆ 'ಸ್ವೇದಃ – ಕಾಮವಿಕಾರಜಃ– ಕಾಮವಿಕಾರದಿಂದ ಹುಟ್ಟುವ ಬೆವರು; ತೇನ ದೂಷಯತಿ ಮಲಿನೀಕರೋತಿ – ಅದರಿಂದ ಮಾಲಿನ್ಯವನ್ನುಂಟುಮಾಡತಕ್ಕವನು ಎಂದು ಅರ್ಥಮಾಡಿರುತ್ತಾರೆ.

[2] ಗವಾಕ್ಷೈರಿವ = ಇಲ್ಲಿ ಸ್ಫಟಿಕದಂತೆ ಸ್ವಚ್ಛವಾಗಿರುವುದು ನವಿಲುಗರಿಗಳ ನಾಳ. ಗಾಳಿಯ ಬಡಿತದಿಂದ ನವಿಲುಗಳು ರೆಕ್ಕೆಗಳನ್ನು ಹರಡಿಕೊಂಡು ಜಾಗರವಾಡುವಾಗ ಆ ನಾಳಗಳು ಕಿಟಕಿಯಲ್ಲಿರುವ ಜಾಲರಿಗಳಂತೆ ಕಾಣುತ್ತವೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಹೋಗುತ್ತಿದೆ. ನವಿಲುಗಳಿಂದಲೇ ತುಂಬಿರುವ ಈ ಅರಣ್ಯದಲ್ಲಿ ನನ್ನಪತ್ನಿಯನ್ನು ಒಯ್ದ ರಾಕ್ಷಸನು ಹೆಣ್ಣುನವಿಲನ್ನು ಅಪಹರಣಮಾಡಿಲ್ಲವೆಂಬುದು ನಿಜ. ರಾಕ್ಷಸನೇನಾದರೂ ಹೆಣ್ಣುನವಿಲನ್ನು ಅಪಹರಿಸಿಕೊಂಡು ಹೋಗಿದ್ದರೆ-ಗಂಡುನವಿಲು ಇಷ್ಟು ಆನಂದದಿಂದ ಕುಣಿದಾಡುತ್ತಿರಲಿಲ್ಲ. ಆದುದರಿಂದಲೇ ಈ ಅರಣ್ಯಪ್ರದೇಶದಲ್ಲಿ ಗಂಡು-ಹೆಣ್ಣುಗಳೆರಡೂ ಜೊತೆಗೂಡಿ ಕುಣಿದಾಡುತ್ತಿವೆ. ಈ ವಸಂತಕಾಲದಲ್ಲಿ ಸೀತೆಯಿಲ್ಲದೇ ಕಾಲಕಳೆಯುವುದೇ ನನಗೆ ಬಹಳ ಕಷ್ಟವಾಗಿದೆ. ಈ ಕಾಲದಲ್ಲಿ ಪಶು-ಪಕ್ಷಿಗಳೂ ಎಷ್ಟೊಂದು ಅನುರಾಗದಿಂದಿರುತ್ತವೆಯೆಂಬುದನ್ನು ನೋಡು, ಲಕ್ಷ್ಮಣ! ನಾವು ನೋಡುತ್ತಿರುವಂತೆಯೇ ಈ ಹೆಣ್ಣುನವಿಲು ಗಂಡುನವಿಲನ್ನು ಅನುಸರಿಸಿ ಹೋಗುತ್ತಿದೆ. ಒಂದು ವೇಳೆ ವಿಶಾಲಾಕ್ಷಿಯಾದ ಸೀತೆಯೇನಾದರೂ ಈ ಸಮಯದಲ್ಲಿ ರಾಕ್ಷಸನಿಂದ ಅಪಹೃತಳಾಗದೇ ಇಲ್ಲಿಯೇ ಇದ್ದಿದ್ದರೆ-ಕಾಮಮೋಹಿತಳಾದ ಅವಳು ಸಂಭ್ರಮದಿಂದ ನನ್ನನ್ನೇ ಅನುಸರಿಸಿ ಬರುತ್ತಿದ್ದಳು. ಶಿಶಿರರ್ತುವು ಕಳೆದನಂತರ ಬಂದಿರುವ ಈ ವಸಂತರ್ತುವಿನಲ್ಲಿ ಪುಷ್ಪಭಾರದಿಂದ ಕೂಡಿರುವ ವೃಕ್ಷಗಳಿಂದ ಸಮೃದ್ಧವಾಗಿರುವ ಅರಣ್ಯಗಳಲ್ಲಿರುವ ಸುಕೋಮಲವಾದ ಪುಷ್ಪಗಳು ಭಾರ್ಯೆಯಿಂದ ವಿಹೀನನಾಗಿರುವ ನನಗೆ ನಿಷ್ಪ್ರಯೋಜಕಗಳಾಗಿ ಕಾಣುತ್ತಿವೆ. ವೃಕ್ಷಗಳಲ್ಲಿರುವ ಹೂಗಳು ಅತಿಯಾದ ಕಾಂತಿಯಿಂದ ಕೂಡಿದ್ದು ಬಹಳ ಸುಂದರವಾಗಿದ್ದರೂ ಯಾರಿಗೂ ಯಾವ ವಿಧವಾದ ಪ್ರಯೋಜನಕ್ಕೂ ಬಾರದೇ ದುಂಬಿಗಳ ಗುಂಪುಗಳೊಡನೆ ನೆಲದ ಮೇಲೆ ಬಿದ್ದುಹೋಗುತ್ತಿವೆ. ಅತ್ಯಾನಂದದಿಂದ ಕೂಡಿ ಗುಂಪು-ಗುಂಪಾಗಿ ಕುಳಿತಿರುವ ಗಂಡು-ಹೆಣ್ಣು ಪಕ್ಷಿಗಳು ನನ್ನಲ್ಲಿರುವ ಕಾಮವನ್ನು ಹೆಚ್ಚುಮಾಡಲು ಪರಸ್ಪರವಾಗಿ ಆಹ್ವಾನಿಸುತ್ತಿವೆಯೋ ಎಂಬಂತೆ ಕಲ-ಕಲನಿನಾದಗಳನ್ನು ಮಾಡುತ್ತಿವೆ.

ನನ್ನ ಪ್ರೇಯಸಿಯಿರುವೆಡೆಯಲ್ಲಿಯೂ ವಸಂತರ್ತುವೇ ಇದ್ದರೆ ಬೇರೆಯವರ ಅಧೀನದಲ್ಲಿರುವ ಅವಳು ಕೂಡ ನನ್ನಂತೆಯೇ ಶೋಕಿಸುತ್ತಿರುತ್ತಾಳೆ. ಅವಳಿರುವ ಸ್ಥಳದಲ್ಲಿ ವಸಂತನಿನ್ನೂ ಆವಿರ್ಭವಿಸಿರಲಾರನು. ಇದು ನಿಶ್ಚಯ. ಕನ್ನೈದಿಲೆಯಂತೆ ಕಪ್ಪಾದ ಕಣ್ಣುಗಳುಳ್ಳ ಸೀತೆಯು ಈ ವಸಂತಸಮಯದಲ್ಲಿ ನನ್ನನ್ನು ಬಿಟ್ಟು ಹೇಗೆ ತಾನೇ ಜೀವಿಸಿದ್ದಾಳು? ಒಂದು ವೇಳೆ ನನ್ನ ಪ್ರೇಯಸಿಯಿರುವೆಡೆಯಲ್ಲಿಯೂ ವಸಂತನಿದ್ದರೆ ಅವಳು ಕೂಡ ನನ್ನಂತೆ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ವಿರಹವೇದನೆಯನ್ನು ಅನುಭವಿಸುತ್ತಿದ್ದರೂ-ಇತರರು ಅವಳನ್ನು ಭಯ ಪಡಿಸುವಾಗ ಏಕಾಕಿನಿಯಾದ ಸುಂದರವಾದ ಕಟಿಪ್ರದೇಶದಿಂದ ಕೂಡಿರುವ ಆ ನನ್ನ ಪ್ರಿಯತಮೆಯು ಏನು ತಾನೇ ಮಾಡಿಯಾಳು? ವಿರಹದಿಂದ ರೋದನಮಾಡಲು ಕೂಡ ಅವಳಿಗೆ ಸಾಧ್ಯವಾಗದೇ ಇರಬಹುದು. ತುಂಬು ಜವ್ವನೆಯಾದ, ಕಮಲದೆಲೆಗಳಂತೆ ವಿಶಾಲವಾದ ಕಣ್ಣುಗಳನ್ನು ಹೊಂದಿರುವ, ಮೃದುವಾಗಿ ಮಾತನಾಡುವ ನನ್ನ ಪ್ರೇಯಸಿಯು ವಸಂತಕಾಲವು ಬಂದೊಡನೆಯೇ ವಿರಹವೇದನೆಯಿಂದಾಗಿ ಪ್ರಾಣವನ್ನೇ ಪರಿತ್ಯಜಿಸುವಳು. ಇದು ನಿಶ್ಚಯ. ನನ್ನಿಂದ ವಿಹೀನಳಾಗಿರುವ ಸಾಧ್ವಿಯಾದ ಸೀತೆಯು ಜೀವಿಸಿರಲು ಖಂಡಿತವಾಗಿಯೂ ಸಮರ್ಥಳಲ್ಲ. ಈ ವಿಚಾರವು ನನ್ನ ಮನಸ್ಸಿನಲ್ಲಿ ದೃಢವಾಗಿಬಿಟ್ಟಿದೆ.* ವೈದೇಹಿಯ ಪ್ರೀತಿಯು ನನ್ನಲ್ಲಿ ಯಥಾವತ್ತಾಗಿ ನೆಲೆಗೊಂಡಿದೆ. ಅಂತೆಯೇ ನನ್ನ ಪ್ರೀತಿಯೂ ವೈದೇಹಿಯಲ್ಲಿ ನೆಲೆಗೊಂಡಿದೆ. ಆದುದರಿಂದ ನಾನು ಅವಳಿಗಾಗಿ ವಿರಹವೇದನೆಯನ್ನು ಅನುಭವಿಸುತ್ತಿದ್ದೇನೆ. ಅಂತೆಯೇ ಅವಳು ಕೂಡ ನನ್ನ ಸಲುವಾಗಿ ವಿರಹವೇದನೆಯನ್ನು ಅನುಭವಿಸುತ್ತಿದ್ದಾಳೆ. ಹೂಗಳ ಸುಗಂಧವನ್ನೂ ಮತ್ತು ಹಿಮದ ಕಣಗಳನ್ನೂ ಹೊತ್ತುತರುವ ಶೀತಲನಾಗಿರುವ (ಶೈತ್ಯ-ಸೌರಭ್ಯ-ಮಾಂದ್ಯಗಳಿಂದ ಕೂಡಿರುವ) ಈ ವಾಯುದೇವನು ಎಲ್ಲರಿಗೂ ಸ್ಪರ್ಶಸುಖವನ್ನು ಉಂಟುಮಾಡುವನೆಂಬುದರಲ್ಲಿ ಸಂದೇಹವೇ ಇಲ್ಲ. ಆದರೆ ಆ ನನ್ನ ಕಾಂತೆಯನ್ನೇ ಚಿಂತಿಸುತ್ತಿರುವ ನನಗೆ ಇವನು ಉರಿಯುತ್ತಿರುವ ಯಜ್ಞೇಶ್ವರನಿಗೆ ಸಮಾನನಾಗಿ ಕಾಣುತ್ತಿದ್ದಾನೆ. ಹಿಂದೆ ನಾನು ಸೀತೆಯೊಡನಿದ್ದಾಗ ಈ ಮಂದಮಾರುತನನ್ನು ಸರ್ವದಾ ಸುಖಕರನೆಂದೇ ಭಾವಿಸಿದ್ದೆನು. ಆದರೆ ಸೀತೆಯಿಲ್ಲದಿರುವ ಈ ಸಮಯದಲ್ಲಿ ಇವನೇ ನನ್ನಲ್ಲಿ ವಿರಹಶೋಕವನ್ನು ಕೆರಳಿಸುತ್ತಿದ್ದಾನೆ.

ಅಲ್ಲಿ ನೋಡು, ಲಕ್ಷ್ಮಣ! ಇದೇ ಕಾಗೆಯು ಹಿಂದೆ ಪಂಚವಟಿಯಲ್ಲಿ

---

* ಮೊದಲು-ಮೊದಲು ಸೀತೆಯು ನನಗಾಗಿ ಜೀವಿಸಿರುವಳೆಂದು ಬುದ್ಧಿಯು ಸೂಚಿಸುತ್ತಿದ್ದಿತು. ಆದರೆ ನನಗಾಗುತ್ತಿರುವ ಹೃದಯವೇದನೆಯನ್ನು ಪರಿಗಣಿಸಿದರೆ ಅವಳು ಜೀವಿಸಿರಲಾರಳೆಂದು ನನ್ನ ಬುದ್ಧಿಯು ಸೂಚಿಸುತ್ತದೆ. ಈಗ ನನ್ನ ಬುದ್ಧಿಯು ಸಂಪೂರ್ಣವಾಗಿ ಪರಿವರ್ತನೆಹೊಂದಿದೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ನಾನು ಸೀತೆಯೊಡನಿದ್ದಾಗ ಆಕಾಶಕ್ಕೆ ಹಾರಿ ಕರ್ಣಕಠೋರವಾಗಿ ಅರಚಿ ಕೊಳ್ಳುತ್ತಾ ಅವಳ ವಿಯೋಗವನ್ನು ಸೂಚಿಸಿದ್ದಿತು. ಸೀತೆಯಿಲ್ಲದಿರುವ ಈ ಸಮಯದಲ್ಲಿ ಅದೇ ಕಾಗೆಯೇ ಮರದ ಮೇಲೆ ಕುಳಿತು ಪ್ರಹೃಷ್ಟವಾಗಿ ಕೂಗಿಕೊಳ್ಳುತ್ತಾ ಸೀತೆಯ ಸಮಾಗಮವನ್ನು ಸೂಚಿಸುತ್ತಿದೆ. ಹಿಂದೆ ಸೀತೆಯು ನನ್ನೊಡನಿದ್ದಾಗ ಆಕಾಶದಲ್ಲಿ ಅರಚುತ್ತಾ ಸೀತೆಯ ಅಪಹಾರ ವನ್ನು ಸೂಚಿಸಿದ್ದಿತು. ಈಗ ಅದೇ ಕಾಗೆಯೇ ಸಂತೋಷದಿಂದ ಕೂಗುತ್ತಾ ನಾನು ವಿಶಾಲಾಕ್ಷಿಯಾದ ಸೀತೆಯ ಸಮೀಪಕ್ಕೆ ಹೋಗುವೆನೆಂಬುದನ್ನೂ ಸೂಚಿಸುತ್ತಿದೆ. ಸುಪುಷ್ಪಿತವಾದ ಅಗ್ರಭಾಗಗಳುಳ್ಳ ವೃಕ್ಷಗಳಲ್ಲಿ ಕುಳಿತು ಚಿಲಿ-ಪಿಲಿಗುಟ್ಟುತ್ತಿರುವ ಪಕ್ಷಿಗಳ ಮದವನ್ನು ಹೆಚ್ಚಿಸುವ ಈ ಸುಮಧುರವಾದ ನಿನಾದವನ್ನು ಕೇಳು. ಮದದಿಂದ ತೂರಾಡುತ್ತಿರುವ, ಪ್ರೇಯಸಿಯಂತಿರುವ, ಗಾಳಿಯಿಂದ ವಿಚಲಿತವಾಗುತ್ತಿರುವ ತಿಲಕಪುಷ್ಪಗುಚ್ಛದ ಬಳಿಗೆ ದುಂಬಿಯು ಬಹಳ ಬೇಗ ಹೋಗುತ್ತಿದೆ.

ಈ ಅಶೋಕವೃಕ್ಷವು ಕಾಮಿಗಳಿಗೆ ಶೋಕವನ್ನು ಹೆಚ್ಚಿಸುತ್ತಿದೆಯೇ ಹೊರತು ತನ್ನ ಹೆಸರಿಗೆ ತಕ್ಕಂತೆ ಶೋಕನಿವಾರಣೆಯನ್ನು ಮಾಡುತ್ತಿಲ್ಲ. ಗಾಳಿಯಿಂದ ಮೇಲೆ ಹಾರಿಸಲ್ಪಟ್ಟ, ಕಾಮದೇವನ ಪುಷ್ಪಬಾಣಗಳಂತಿರುವ ಪುಷ್ಪಗುಚ್ಛಗಳಿಂದ ನನ್ನನ್ನು ಭಯಪಡಿಸಲು ನಿಂತಿರುವಂತೆ ಕಾಣು ತ್ತಿದೆ. ಲಕ್ಷ್ಮಣ! ಹೂಗಳಿಂದ ತುಂಬಿರುವ ಈ ಮಾವಿನ ಮರಗಳು– ಶೃಂಗಾರಸಂಬಂಧವಾದ ವಿಲಾಸಗಳಿಂದ ಉದ್ರಿಕ್ತವಾದ ಮನಸ್ಸುಳ್ಳ, ಸುಗಂಧದ್ರವ್ಯಗಳಿಂದ ಅಲಂಕೃತವಾದ ಮನುಷ್ಯರಂತೆಯೇ ಕಾಣುತ್ತಿವೆ. ಲಕ್ಷ್ಮಣ! ಅಲ್ಲಿ ನೋಡು. ಪಂಪಾಸರೋವರದ ಸುತ್ತಲೂ ಇರುವ ವಿಚಿತ್ರವಾದ ಕಾನನಗಳಲ್ಲಿ ಕಿನ್ನರರು ಸಂಚರಿಸುತ್ತಿದ್ದಾರೆ. ಈ ಸರೋ ವರವು ಸ್ವಚ್ಛವಾದ ನೀರಿನಿಂದ ಕೂಡಿದೆ. ಕಮಲಗಳಿಂದಲೂ, ಕನ್ನೈದಿಲೆ ಗಳಿಂದಲೂ, ಸೌಗಂಧಿಕಪುಷ್ಪಗಳಿಂದಲೂ ಸಮೃದ್ಧವಾಗಿದೆ. ಹಂಸ ಗಳಿಂದಲೂ ಕಾರಂಡವಗಳಿಂದಲೂ ವ್ಯಾಪ್ತವಾಗಿದೆ. ಪ್ರಾತಃಕಾಲದ ಸೂರ್ಯ ನಂತೆಯೇ ಪ್ರಕಾಶಮಾನವಾಗಿ ಕಮಲಗಳಿಂದ ಸರ್ವತ್ರ ವ್ಯಾಪ್ತವಾಗಿ ಅತ್ಯಂತಶೋಭಾಯಮಾನವಾಗಿದೆ. ಆ ಕಮಲಗಳಲ್ಲಿರುವ ಕೇಸರಗಳನ್ನು ದುಂಬಿಗಳು ಹೀರುತ್ತಿವೆ. ಚಕ್ರವಾಕಪಕ್ಷಿಗಳು ಈ ಸರೋವರದಲ್ಲಿ ನಿವಾಸ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.
ಮಾಡಿಕೊಂಡಿವೆ. ಈ ಸರೋವರವು ಬೆಟ್ಟದ ತಪ್ಪಲುಪ್ರದೇಶಗಳಿಂದಲೂ ಅರಣ್ಯದಿಂದಲೂ ಸುತ್ತುವರಿಯಲ್ಪಟ್ಟಿದೆ. ನೀರನ್ನು ಕುಡಿಯಲು ಬರುವ ಆನೆಗಳ ಮತ್ತು ಜಿಂಕೆಗಳ ಸಮೂಹಗಳಿಂದ ಅತ್ಯಂತಶೋಭಾಯಮಾನವಾಗಿ ಕಾಣುತ್ತಿದೆ. ಪರಿಶುದ್ಧವಾದ ಈ ಸರೋವರದ ನೀರಿನಲ್ಲಿ ಅಲೆಗಳು ಗಾಳಿಯಿಂದ ಪ್ರೇರಿತವಾಗಿ ಮೇಲೇಳುತ್ತಿವೆ. ಅಲೆಗಳ ಬಡಿತಗಳಿಂದ ಸರೋವರದಲ್ಲಿರುವ ಕಮಲಗಳು ಮೇಲಕ್ಕೆ-ಕೆಳಕ್ಕೆ ಓಲಾಡುತ್ತಾ ವಿರಾಜಿಸುತ್ತಿವೆ. ಈ ಕಮಲಗಳ ದಳಗಳಂತೆ ವಿಶಾಲನೇತ್ರೆಯಾದ ಸದಾ ಕಮಲಗಳನ್ನೇ ಬಹಳವಾಗಿ ಪ್ರೀತಿಸುತ್ತಿದ್ದ ವೈದೇಹಿಯನ್ನು ಕಾಣದಿರುವ ನನಗೆ ನನ್ನ ಜೀವಿತದಲ್ಲಿಯೇ ಜುಗುಪ್ಸೆಯುಂಟಾಗಿದೆ.

ಅಹೋ ಕಾಮಸ್ಯ ವಾಮತ್ವಂ ಯೋ ಗತಾಮಪಿ ದುರ್ಲಭಾಮ್ ।
ಸ್ಮಾರಯಿಷ್ಯತಿ ಕಲ್ಯಾಣೀಂ ಕಲ್ಯಾಣತರವಾದಿನೀಮ್ ॥ ೭೮ ॥

ಮನ್ಮಥನ ಕೌಟಿಲ್ಯವು ಎಷ್ಟು ಅಸಾಧಾರಣವಾದುದು! ನನ್ನನ್ನು ಬಿಟ್ಟು ಎಲ್ಲಿಯೋ ಹೋಗಿರುವ ದುರ್ಲಭಳಾದ, ಕಲ್ಯಾಣಮಯಿಯಾದ, ಯಾವಾಗಲೂ ಶುಭಕರವಾದ ಮಾತುಗಳನ್ನೇ ಆಡುತ್ತಿದ್ದ ನನ್ನ ಪ್ರಿಯತಮೆಯನ್ನು ಜ್ಞಾಪಿಸಿಕೊಳ್ಳುವಂತೆ ಮಾಡಿದ್ದಾನೆ. ಪುಷ್ಪಿತವಾದ ವೃಕ್ಷಗಳ ರೂಪದಲ್ಲಿ ಆಗಮಿಸಿರುವ ವಸಂತನೇನಾದರೂ ಹೆಚ್ಚಾಗಿ ನನ್ನನ್ನು ಬಾಧೆ ಪಡಿಸದಿದ್ದರೆ ಮನ್ಮಥನ ಬಾಧೆಯನ್ನು ನಾನು ಹೇಗಾದರೂ ತಡೆದುಕೊಳ್ಳುತ್ತಿದ್ದೆನು. ವಸಂತನೊಡನೆಯೇ ಮನ್ಮಥನೂ ಬಂದುಬಿಟ್ಟಿರುವುದರಿಂದ ನನಗೆ ಈ ಮದನಪೀಡೆಯನ್ನು ತಡೆದುಕೊಳ್ಳಲು ಸಾಧ್ಯವಾಗುತ್ತಲೇ ಇಲ್ಲ. ಸೀತೆಯೊಡನಿದ್ದಾಗ ಯಾವ ವಸ್ತುಗಳು ನನಗೆ ಮನೋಹರವಾಗಿದ್ದುವೋ-ಅವೇ ವಸ್ತುಗಳು ಈಗ ಅವಳಿಲ್ಲದಿರುವಾಗ ಮನಸ್ಸಿಗೆ ಬೇಡವಾಗಿದೆ. ಈ ಕಮಲಕೋಶದ ದಳಗಳನ್ನು ನೋಡಿದೊಡನೆಯೇ ಇವು ಸೀತೆಯ ನೇತ್ರಕೋಶಗಳಿಗೆ ಸಮಾನವಾಗಿವೆಯೆಂದು ನನ್ನ ದೃಷ್ಟಿಯು ನೆನಪಿಗೆ ತರುತ್ತದೆ.

ಕಮಲಪುಷ್ಪಗಳ ಕೇಸರಗಳನ್ನು ಸೇರಿಸಿಕೊಂಡ ವೃಕ್ಷಗಳ ಮಧ್ಯದಿಂದ ಹೊರಬರುತ್ತಿರುವ ಮಂದಮಾರುತವು ಸೀತಾದೇವಿಯ ನಿಟ್ಟುಸಿರಿನಂತೆ ಮನೋಹರವಾಗಿ ಬೀಸುತ್ತಿದೆ. ಈ ಸರೋವರದ ದಕ್ಷಿಣಭಾಗದಲ್ಲಿರುವ ಬೆಟ್ಟದ ತಪ್ಪಲುಪ್ರದೇಶಗಳಲ್ಲಿ ಪರಮಶೋಭಾಯಮಾನವಾಗಿ ಕಾಣುವ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಅರಳಿರುವ ಬೆಟ್ಟದಾವರೆಯ ಗುಚ್ಛಗಳಿಂದ ಕೂಡಿರುವ ರೆಂಬೆಗಳನ್ನು ನೋಡು ; ತಮ್ಮ ! ಇಲ್ಲಿ ಕಾಣುತ್ತಿರುವ ಈ ಶ್ರೇಷ್ಠವಾದ ಪರ್ವತವು ಗೈರಿಕಾದಿ ಧಾತುಗಳಿಂದ ವಿಭೂಷಿತವಾಗಿದೆ. ಈ ಪರ್ವತವನ್ನು ಬಿರುಸಾದ ಬಿರುಗಾಳಿಯು ಬಾರಿ-ಬಾರಿಗೂ ಅಪ್ಪಳಿಸುತ್ತಾ ಅಧಿಕವಾದ ಮತ್ತು ವಿಚಿತ್ರವಾದ ಧೂಳಿಯನ್ನು ಎಬ್ಬಿಸುತ್ತಿದೆ. ಈ ಬೆಟ್ಟದ ತಪ್ಪಲಿನ ಎಲ್ಲ ಕಡೆಗಳಲ್ಲಿಯೂ ರಮ್ಯವಾದ ಕೆಂಪುಹೂಗಳಿಂದ ಕೂಡಿರುವ ಎಲೆಗಳಿಲ್ಲದ ಮುತ್ತುಗದ ಮರಗಳಿವೆ. ಇವುಗಳನ್ನು ನೋಡಿದರೆ ಬೆಟ್ಟದ ತಪ್ಪಲುಗಳೇ ಹೊತ್ತಿಕೊಂಡು ಉರಿಯುತ್ತಿವೆಯೋ ಎಂಬಂತೆ ಕಾಣುತ್ತಿದೆ. ಪಂಪಾಸರೋವರದ ತೀರದಲ್ಲಿ ಹುಟ್ಟಿರುವ ಪುಷ್ಪರಸದಿಂದಲೂ ಮತ್ತು ಸುಗಂಧದಿಂದಲೂ ಕೂಡಿರುವ ಈ ವೃಕ್ಷಗಳು ಒಂದಕ್ಕೊಂದು ಸೇರಿಕೊಂಡಂತೆಯೇ ಇವೆ. ಜಾಜಿ, ಮಲ್ಲಿಗೆಯ ಬಳ್ಳಿ, ಕೆಂಪುಕಣಿಗಲೆ, ಕೇದಿಗೆ ( ತಾಳೆ ), ಸಿಂಧುವಾರ ( ಲಕ್ಕಿಗಿಡ ), ಕಾಡಿರುವಂತಿಗೆ, ಇರುವಂತಿಗೆ, ಸುಗಂಧಯುಕ್ತವಾದ ಕೋಲುಮಲ್ಲಿಗೆ ಗಿಡಗಳ ಪೊದೆ, ಕರಂಜ, ಹಿಪ್ಪೆ, ಅಶೋಕ, ಹವಳ, ಸಂಪಿಗೆ, ತಿಲಕ, ನಾಗಕೇಸರ, ಈಚಲು, ವಸಲೆ, ಖರ್ಜೂರ, ಪದ್ಮಕ, ನೀಲಾಶೋಕ, ಲೋಧ್ರ, ಸಿಂಹದ ಕೂದಲಿನ ಬಣ್ಣದಿಂದ ಕೂಡಿರುವ ಅಂಕೋಲೆಗಿಡ, ಹಳದೀಹೂವಿನ ಗೋರಂಟೀಗಿಡ, ಚೂರ್ಣಕ, ಪಾರಿಜಾತ, ಮಾವು, ಹಸಿರುಪಾದರಿ, ತೆಂಗಾಂಚಳ, ಮುಚುಲಿಂದ ( ನಾರಂಗ ), ಅರ್ಜುನ ( ಕೆಂಪುಮತ್ತಿ ), ಕೇದಗೆ, ಚಳ್ಳೇಗಿಡ, ಚಾಗೇಮರ, ಅಸುಗೆಮರ, ಧವ, ಕೆಂಪುಬೂರುಗ, ಮುತ್ತುಗ, ಕೆಂಪುಹೂವಿನಿಂದ ಕೂಡಿದ ಮುಳ್ಳುಗೋರಂಟೆಗಿಡ, ನೆಮ್ಮಿಗಿಡ, ಹೊಂಗೇಮರ, ಗಂಧದ ಮರ, ಸ್ಯಂದನವೃಕ್ಷ, ಕಿರುತಾಳೆ, ತಿಲಕ, ನಾಗವೃಕ್ಷ-ಇವೇ ಮುಂತಾದ ಪಂಪಾವನದಲ್ಲಿರುವ ಸಕಲವೃಕ್ಷಗಳೂ ಪುಷ್ಪಭರಿತವಾಗಿದ್ದು ತುದಿಯಲ್ಲಿ ಹೂಗಳರಳಿರುವ ಲತೆಗಳಿಂದ ಸುತ್ತುವರಿಯಲ್ಪಟ್ಟವೆ. ಈ ಪುಷ್ಪವೃಕ್ಷಗಳ ಸೊಬಗನ್ನು ನೋಡು ; ಲಕ್ಷ್ಮಣ ! *

---

* ಈ ಗಿಡ-ಮರಗಳ ಹೆಸರುಗಳೆಲ್ಲವೂ ಸಾಮಾನ್ಯವಾಗಿ ಅಮರಕೋಶದ ವನೌಷಧಿ ವರ್ಗದಲ್ಲಿ ಬರುತ್ತವೆ. ೮೦ನೆಯ ಶ್ಲೋಕದಲ್ಲಿ ಚೂರ್ಣಕಾಃ ಎಂದು ಒಂದು ವೃಕ್ಷದ ಹೆಸರಿದೆ. ಪೂರ್ಣಕಾಃ ಎಂದು ಇದಕ್ಕೆ ಪಾಠಾಂತರವೂ ಇದೆ. ಆದರೆ ಈ ಎರಡು ವೃಕ್ಷಗಳೂ ನಿಘಂಟುವಿನಲ್ಲಿ ಕಂಡುಬರುವುದಿಲ್ಲ. ವ್ಯಾಖ್ಯಾನಕಾರರು ಪೂರ್ಣಕಾಃ ಎಂಬ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಮದಿಸಿದ ಶ್ರೀಷ್ಠರಾದ ಸ್ತ್ರೀಯರು ಪುರುಷನನ್ನು ಅನುಸರಿಸುವಂತೆ ಮಧುವಿನಿಂದ ಕೂಡಿರುವ ಪುಷ್ಪಲತೆಗಳು ಗಾಳಿಯ ರಭಸದಿಂದ ಹೊಯ್ದಾಡುವ ರೆಂಬೆಗಳ ಮೂಲಕವಾಗಿ ಸಮೀಪಕ್ಕೆ ಬರುತ್ತಿವೆಯೋ ಎಂಬಂತೆ ಕಾಣುತ್ತಿರುವ ವೃಕ್ಷಗಳನ್ನೇ ಅನುಸರಿಸುತ್ತಿವೆ. ವೃಕ್ಷದಿಂದ ವೃಕ್ಷಕ್ಕೂ, ಪರ್ವತದಿಂದ ಪರ್ವತಕ್ಕೂ, ವನದಿಂದ ವನಕ್ಕೂ ಹೋಗುತ್ತಿರುವ ಈ ಮಾರುತನು ಬಗೆ-ಬಗೆಯ ರಸಾಸ್ವಾದನಗಳಿಂದ ಆನಂದತುಂದಿಲನಾಗಿರುವಂತೆ ಬೀಸುತ್ತಿದ್ದಾನೆ. ಕೆಲವು ವೃಕ್ಷಗಳು ಪುಷ್ಪಗಳಿಂದ ಸಮೃದ್ಧವಾಗಿದ್ದು ಮಕರಂದದ ವಾಸನೆಯಿಂದ ಕೂಡಿವೆ. ಕೆಲವು ವೃಕ್ಷಗಳು ಮೊಗ್ಗುಗಳಿಂದ ಸಮೃದ್ಧವಾಗಿದ್ದು ಶ್ಯಾಮಲವರ್ಣದಿಂದ ಪ್ರಕಾಶಿಸುತ್ತಿವೆ. ಅನುರಾಗದಿಂದ ಅನುರಕ್ತವಾದ ದುಂಬಿಯು "ಇದು ಮೃದುವಾಗಿದೆ; ಇದು ರುಚಿಯಾಗಿದೆ; ಇದು ರಸವತ್ತಾಗಿದೆ; ಈ ಪುಷ್ಪವು ಚೆನ್ನಾಗಿ ಅರಳಿದೆ."–ಹೀಗೆ ಭಾವಿಸಿ ಪುಷ್ಪಗಳಲ್ಲಿ ಲೀನವಾಗಿಬಿಡುತ್ತದೆ. ಪಂಪಾಸರೋವರದ ತೀರದ ಮರಗಳಲ್ಲಿರುವ ಪುಷ್ಪಗಳಲ್ಲಿ ಲೀನವಾಗುವ ದುಂಬಿಗಳು ಮಧುವಿನ ಆಸೆಯಿಂದಾಗಿ ಒಂದು ಪುಷ್ಪದಿಂದ ಮತ್ತೊಂದು ಪುಷ್ಪದ ಕಡೆಗೆ ಹಾರುತ್ತಲೇ ಇರುತ್ತವೆ. ತಾನೇ ತಾನಾಗಿ ಕೆಳಕ್ಕೆ ಬಿದ್ದಿರುವ ಪುಷ್ಪಗಳ ರಾಶಿಗಳಿಂದ ಈ ಭೂಮಿಯು ವ್ಯಾಪ್ತವಾಗಿದ್ದು ಮಲಗುವ ಸಲುವಾಗಿ ನೆಲದ ಮೇಲೆ ಹಾಸಿರುವ ಸುಪ್ಪತ್ತಿಗೆಗಳಂತೆ ಸುಖದಾಯಕವಾಗಿವೆ. ಪರ್ವತದ ತಪ್ಪಲುಪ್ರದೇಶಗಳಲ್ಲಿ ಇದೇ ರೀತಿಯಲ್ಲಿ ವಿಧ-ವಿಧವಾದ ಹಾಸಿಗೆಗಳು ಹಾಸಲ್ಪಟ್ಟಿರುವಂತೆ ಕಾಣುತ್ತದೆ. ಸಂಪಿಗೆಯೇ ಮೊದಲಾದ ಹೊಂಬಣ್ಣದಿಂದ ಕೂಡಿರುವ ಪುಷ್ಪವೃಕ್ಷಗಳ

---

ಪಾಠವನ್ನಿಟ್ಟುಕೊಂಡು ಶಾಲ್ಮಲೀಭೇದಾಃ ವೃಕ್ಷವಿಶೇಷಾಃ – ಬೂರುಗದ ಒಂದು ಪ್ರಭೇದ ಎಂದು ಅರ್ಥಮಾಡಿರುತ್ತಾರೆ. ಹೀಗೆಯೇ ೮೧ನೇ ಶ್ಲೋಕದಲ್ಲಿ ಮುಚುಕುನ್ದಾಃ ಎಂಬ ಪಾಠವೂ, ಮುಚುಲಿಂದಾಃ ಎಂಬ ಪಾಠವೂ ಇದೆ. ಈ ಎರಡು ಶಬ್ದಗಳೂ ನಿಘಂಟುವಿನಲ್ಲಿರುವುದಿಲ್ಲ. ವ್ಯಾಖ್ಯಾನಕಾರರು ಮುಚುಲಿಂದಾಃ ಎಂಬ ಪಾಠದಂತೆ ನಾರಙ್ಗವೃಕ್ಷಾಃ ಎಂದು ಅರ್ಥಮಾಡಿರುತ್ತಾರೆ. ೮೧ನೆಯ ಶ್ಲೋಕದಲ್ಲಿ ಬರುವ ಧವಾಃ ಎಂಬ ಶಬ್ದಕ್ಕೆ ಪತಿಶಾಖಿನರಾ ಧವಾಃ ಎಂಬ ನಾನಾರ್ಥಕೋಶದಂತೆ 'ವೃಕ್ಷಗಳು' ಎಂದು ಅರ್ಥವಾಗುತ್ತದೆ. ವ್ಯಾಖ್ಯಾನಕಾರರು ಧವಾಃ ಎಂಬುಪಕ್ಕೆ ಮಧುರಾಖ್ಯಾಃ ವೃಕ್ಷವಿಶೇಷಾಃ–ಮಧುರವೆಂಬ ವೃಕ್ಷವಿಶೇಷಗಳು–ಎಂದು ಅರ್ಥಮಾಡಿರುತ್ತಾರೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.
ಪ್ರದೇಶದಲ್ಲಿ ಹೊಂಬಣ್ಣದ ಹಾಸಿಗೆಗಳಿವೆ. ಕರ್ಣಿಕಾರವೇ ಮೊದಲಾದ ಕೆಂಪು ಹೂವುಗಳಿರುವ ಕೆಂಪುಬಣ್ಣದ ಹಾಸಿಗೆಗಳಿವೆ. ಹೇಮಂತ-ಶಿಶಿರರ್ತುಗಳ ಕಡೆಯಲ್ಲಿ ಬರುವ ಚೈತ್ರಮಾಸದಲ್ಲಿ ( ವಸಂತಕಾಲದಲ್ಲಿ ) ವೃಕ್ಷಗಳು ಪುಷ್ಪ ಸಮೃದ್ಧಿಯಲ್ಲಿ ಒಂದು ಮತ್ತೊಂದನ್ನು ಸ್ಪರ್ಧಿಸುತ್ತಿವೆಯೋ ಎಂಬಂತೆ ಕಾಣುತ್ತಿರುವುದನ್ನು ನೋಡು, ಲಕ್ಷ್ಮಣ! ಪುಷ್ಪಗಳ ಗುಚ್ಛವನ್ನೇ ಶಿರೋಭೂಷಣವನ್ನಾಗಿ ಧರಿಸಿರುವ ರೆಂಬೆಗಳಿಂದ ಕೂಡಿರುವ ಈ ವೃಕ್ಷಗಳು ದುಂಬಿಗಳ ಝೇಂಕಾರಗಳ ಮೂಲಕವಾಗಿ ಒಂದು ವೃಕ್ಷವು ಮತ್ತೊಂದು ವೃಕ್ಷವನ್ನು ಸ್ಪರ್ಧೆಗೆ ಕರೆಯುತ್ತಿದೆಯೋ ಎಂಬಂತಿದ್ದು ಅತ್ಯಂತಶೋಭಾಯ ಮಾನವಾಗಿ ಕಾಣುತ್ತಿವೆ.

ಈ ಕಾರಂಡವಪಕ್ಷಿಯು ಪಂಪಾಸರೋವರದ ಸ್ವಚ್ಛವಾದ ನೀರಿನಲ್ಲಿ ಮುಳುಗಿ ನನ್ನ ಮನಸಿನಲ್ಲಡಗಿರುವ ಕಾಮವನ್ನು ಉದ್ದೀಪನಗೊಳಿಸಲೋ ಎಂಬಂತೆ ತನ್ನ ಕಾಂತೆಯೊಡನೆ ರತಿಕ್ರೀಡೆಯನ್ನಾಡುತ್ತಿದೆ. ಮಂದಾಕಿನೀ ನದಿಗೆ ಯಾವ ಮನೋಹರವಾದ ಗುಣ-ರೂಪಗಳಿವೆಯೋ ಆ ಗುಣ-ರೂಪ ಗಳೇ ಈ ಪಂಪಾಸರೋವರಕ್ಕೂ ಇವೆ. ಮಂದಾಕಿನೀನದಿಯ ಗುಣಗಳು ಜಗತ್ಪ್ರಸಿದ್ಧವಾಗಿವೆ. ಮಂದಾಕಿನೀನದಿಯ ಮನೋರಮ್ಯತೆಯನ್ನೇ ಹೊಂದಿ ರುವ ಪಂಪಾಸರೋವರಕ್ಕೆ ಲಭಿಸಿರುವ ಖ್ಯಾತಿಯು ಯುಕ್ತವಾಗಿಯೇ ಇದೆ. ಸಾಧ್ವಿಯಾದ ಸೀತೆಯು ಒಂದು ವೇಳೆ ಈ ಸ್ಥಳದಲ್ಲಿಯೇ ನಮಗೆ ಕಾಣಿಸಿ ನಾವು ಇಲ್ಲಿಯೇ ವಾಸಿಸುವ ಅವಕಾಶವೇನಾದರೂ ಲಭಿಸಿದರೆ–ನಾನು ಇಂದ್ರ ಪದವಿಯನ್ನೂ ಅಪೇಕ್ಷಿಸುವುದಿಲ್ಲ; ಪುನಃ ಅಯೋಧ್ಯೆಗೆ ಹೋಗಲೂ ಇಷ್ಟ ಪಡುವುದಿಲ್ಲ. ಇಂತಹ ರಮಣೀಯವಾದ ಹಚ್ಚನೆಯ ಹುಲ್ಲಿರುವ ಪ್ರದೇಶ ದಲ್ಲಿ ಸೀತೆಯೊಡನೆ ವಿಹರಿಸುವ ನನಗೆ ಯಾವ ವಿಧವಾದ ಚಿಂತೆಯೂ ಇರು ವುದಿಲ್ಲ. ನನಗೆ ಬೇರೆಯ ವಸ್ತುಗಳಲ್ಲಿ ಯಾವ ಆಸೆಯೂ ಉಂಟಾಗುವು ದಿಲ್ಲ. ಮನೋಹರವಾದ ಹಚ್ಚಹಸಿರಾದ ಎಲೆಗಳಿಂದ ಕೂಡಿರುವ ಈ ವೃಕ್ಷಗಳು ಅನೇಕವಿಧವಾದ ಪುಷ್ಪಗಳಿಂದ ಸಮೃದ್ಧವಾಗಿದ್ದು ಈ ಅರಣ್ಯ ದಲ್ಲಿ ಪತ್ನಿಯಿಂದ ರಹಿತನಾಗಿರುವ ನನ್ನ ಬುದ್ಧಿಯನ್ನು ಉನ್ಮಾದಗೊಳಿಸು ತ್ತಿದೆ. ಕಮಲಪುಷ್ಪಗಳಿಂದ ವ್ಯಾಪ್ತವಾಗಿರುವ ಚಕ್ರವಾಕ, ನೀರುಕಾಗೆ,


CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ನೀರುಕೋಳಿ, ಕ್ರೌಂಚ–ಇವೇ ಮೊದಲಾದ ಪಕ್ಷಿಗಳಿಂದಲೂ, ಮಹಾಮೃಗ ಗಳಿಂದಲೂ ಸೇವಿಸಲ್ಪಡುತ್ತಿರುವ, ಶೀತಲವಾದ ನೀರಿನಿಂದ ಕೂಡಿರುವ ಈ ದಿವ್ಯಸರೋವರವನ್ನು ನೋಡು, ತಮ್ಮ! ನಾನಾಪ್ರಕಾರವಾಗಿ ಕಲರವ ಗಳನ್ನು ಮಾಡುತ್ತಿರುವ ಪಕ್ಷಿಗಳಿಂದ ಈ ಸರೋವರವು ಬಹಳ ಶೋಭಾಯ ಮಾನವಾಗಿ ಕಾಣುತ್ತಿದೆ. ಅಧಿಕವಾದ ಸಂತೋಷದಿಂದ ಕೂಡಿರುವ ನಾನಾ ಜಾತಿಯ ಗಂಡು-ಹೆಣ್ಣು ಪಕ್ಷಿಗಳು ಪರಸ್ಪರವಾಗಿ ಹಾವ-ಭಾವಗಳಿಂದಿದ್ದು ನನ್ನ ಮನಸ್ಸಿನಲ್ಲಿರುವ ಕಾಮವನ್ನು ಉದ್ದೀಪನಗೊಳಿಸುತ್ತಿರುವಂತೆ ನನಗೆ ಭಾಸವಾಗುತ್ತಿದೆ. ಲಕ್ಷ್ಮಣ! ಈ ಪರ್ವತದ ಚಿತ್ರ-ವಿಚಿತ್ರವಾದ ತಪ್ಪಲು ಪ್ರದೇಶಗಳಲ್ಲಿ ಚಂದ್ರಮುಖಿಯಾದ, ಯುವತಿಯಾದ, ಕಮಲಾಕ್ಷಿಯಾದ ನನ್ನ ಪ್ರಿಯತಮೆಯನ್ನು ಸ್ಮರಣೆಗೆ ತರುತ್ತಾ ಆ ಗಂಡುಜಿಂಕೆಗಳು ಹೆಣ್ಣು ಜಿಂಕೆಗಳನ್ನನುಸರಿಸಿ ಹೋಗುತ್ತಿವೆ. ಮರಿಜಿಂಕೆಯ ಕಣ್ಣುಗಳಂತೆ ಚಂಚಲ ವಾದ ಕಣ್ಣುಗಳಿಂದ ಕೂಡಿರುವ ವೈದೇಹಿಯಿಂದ ರಹಿತವಾಗಿರುವ ನನ್ನ ಮನಸ್ಸನ್ನು ವ್ಯಥೆಗೊಳಿಸಲು ಇಚ್ಛಿಸುತ್ತಿವೆಯೋ ಎಂಬಂತೆ ಜಿಂಕೆಗಳ ಆ ಹೆಣ್ಣು-ಗಂಡು ಜೋಡಿಗಳು ಪರ್ವತದ ತಪ್ಪಲುಪ್ರದೇಶದಲ್ಲಿ ಸ್ವೇಚ್ಛೆಯಿಂದ ಸಂಚರಿಸುತ್ತಿವೆ. ಮದಿಸಿದ ಆನೆಗಳ ಗುಂಪುಗಳಿಂದ ವ್ಯಾಪ್ತವಾಗಿರುವ ಪರ್ವತದ ಈ ತಪ್ಪಲಿನಲ್ಲಿ ಪ್ರಿಯತಮೆಯಾದ ಆ ನನ್ನ ಸೀತೆಯನ್ನು ಕಂಡೆನಾದರೆ ನನಗೆ ಶುಭೋದಯವಾದೀತು. ಪಂಪಾಸರೋವರದ ಮೂಲಕ ವಾಗಿ ಬೀಸುತ್ತಿರುವ ಸಂತೋಷದಾಯಕವಾದ ಈ ವಾಯುವನ್ನು ಸುಂದರ ವಾದ ನಡುವಿನಿಂದ ಕೂಡಿರುವ ವೈದೇಹಿಯೊಡನೆ ಸೇವಿಸುವಂತಾದರೆ ಮಾತ್ರವೇ ನಾನು ಜೀವಿಸಿರುವೆನು. ಪದ್ಮ-ಸೌಗಂಧಿಕಪುಷ್ಪಗಳ ವಾಸನೆ ಯನ್ನು ಹೊತ್ತು ತರುವ ಶೋಕವಿನಾಶಕವಾದ ಮಂಗಳಕರವಾದ ಪಂಪಾ ರಣ್ಯದ ವಾಯುವನ್ನು ಸೇವಿಸುವವರೇ ಧನ್ಯರು. ಲಕ್ಷ್ಮಣ! ಯುವತಿ ಯಾದ, ಪದ್ಮದಳನೇತ್ರೆಯಾದ, ಜನಕನ ಮಗಳಾದ, ಪ್ರಿಯತಮೆಯಾದ, ಈಗ ಪರಾಧೀನಳಾಗಿರುವ ಸೀತೆಯು ನನ್ನಿಂದ ಬೇರ್ಪಟ್ಟು ಹೇಗೆ ತಾನೇ ತನ್ನ ಪ್ರಾಣಗಳನ್ನು ಉಳಿಸಿಕೊಂಡಿರುವಳು? ಸತ್ಯನಿಷ್ಠನಾದ, ಧರ್ಮಜ್ಞನಾದ ಜನಕನು ತುಂಬಿದ ಸಭೆಯಲ್ಲಿ ನಮ್ಮ ಕುಶಲವನ್ನು ಕೇಳುತ್ತಾ–'ಸೀತೆಯೆಲ್ಲಿ?'–ಎಂದು ಪ್ರಶ್ನಿಸಿದರೆ ಅವನಿಗೆ ನಾನು ಏನು

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

ಹೇಳಲಿ? ಅವಳು ಪತಿವ್ರತಾಧರ್ಮವನ್ನಾಶ್ರಯಿಸಿ, ತಂದೆಯಿಂದ ಅರಣ್ಯಕ್ಕೆ ದೂಡಲ್ಪಟ್ಟ ನಿರ್ಭಾಗ್ಯನಾದ ನನ್ನನ್ನೇ ಆಶ್ರಯಿಸಿ ಕಾಡಿಗೆ ಬಂದಳು. ಆ ನನ್ನ ಪ್ರಿಯತಮೆಯು ಈಗ ಎಲ್ಲಿರಬಹುದು? ರಾಜ್ಯಭ್ರಷ್ಟನಾದ, ಹೃದಯ ಶೂನ್ಯನಾದ ನನ್ನನ್ನು ಯಾವಳು ಕಾಡಿಗೂ ಅನುಸರಿಸಿಬಂದಳೋ-ಅಂತಹ ಸಾಧ್ವಿಯಾದ ಸೀತೆಯಿಂದ ವಿಹೀನನಾಗಿರುವ ಅತಿದೀನನಾಗಿರುವ ನಾನು ಹೇಗೆ ತಾನೇ ನನ್ನ ಪ್ರಾಣಗಳನ್ನು ಧರಿಸಿಕೊಂಡಿರಲಿ? ಸುಂದರವಾಗಿಯೂ ಮನೋಹರವಾಗಿಯೂ ಇರುವ ಪದ್ಮದಳಗಳಂತೆ ಕಣ್ಣುಗಳುಳ್ಳ, ಸುಗಂಧ ಯುಕ್ತವಾದ, ಶುಭಲಕ್ಷಣಗಳಿಂದ ಕೂಡಿ, ಯಾವ ವಿಧವಾದ ಕಲೆಗಳೂ ಇಲ್ಲದ ಸೀತೆಯ ಸುಂದರವಾದ ಮುಖವನ್ನು ನೋಡದಿರುವುದರಿಂದ ನನ್ನ ಬುದ್ಧಿಯು ಹಾಳಾಗಿಹೋಗುತ್ತಿರುವಂತೆ ಕಾಣುತ್ತಿದೆ. ಮುಗುಳ್ನಗೆ ಮತ್ತು ಪರಿಹಾಸಗಳ ನಡುವೆ ಹೊರಬರುತ್ತಿದ್ದ, ಗುಣವಿಶಿಷ್ಟವಾಗಿದ್ದ, ಸುಮಧುರ ವಾಗಿದ್ದ ಮತ್ತು ಹಿತಕರವಾಗಿದ್ದ ವೈದೇಹಿಯ ಅನುಪಮವಾದ ಮಾತು ಗಳನ್ನು ನಾನು ಪುನಃ ಯಾವಾಗ ಕೇಳುವೆನು? ಯುವತಿಯಾದ, ಸಾಧ್ವಿ ಯಾದ ಸೀತೆಯು ನನ್ನೊಡನೆ ಅರಣ್ಯಕ್ಕೆ ಬಂದು ಕಷ್ಟವನ್ನು ಅನುಭವಿಸು ತ್ತಿದ್ದರೂ-ಮನ್ಮಥನಿಂದ ಪೀಡಿತನಾದ ಅಥವಾ ಮಾನಸಿಕವಾದ ಯಾತನೆ ಗಳಿಗೆ ಒಳಗಾಗಿದ್ದ ನನ್ನನ್ನು ನೋಡಿ-ಕಷ್ಟವೇ ಇಲ್ಲದವಳಂತೆ ಹೆಚ್ಚು ಸಂತೋಷಗೊಂಡವಳಂತೆ ಚೆನ್ನಾಗಿ ಮಾತನಾಡಿಕೊಂಡಿರುತ್ತಿದ್ದಳು.

ಅಯೋಧ್ಯೆಯಲ್ಲಿ ನನ್ನ ತಾಯಿ ಕೌಸಲ್ಯೆಯು-'ಆ ನನ್ನ ಸೊಸೆಯೆಲ್ಲಿ? ಅವಳು ನಿನ್ನನ್ನಗಲಿ ಹೇಗೆ ಹೋದಳು?'-ಮುಂತಾಗಿ ಪ್ರಶ್ನಿಸಿದರೆ ನಾನವ ಳಿಗೆ ಏನೆಂದು ಉತ್ತರಿಸಲಿ? ಲಕ್ಷ್ಮಣ! ಆದುದರಿಂದ ನಾನು ಅಯೋಧ್ಯೆಗೆ ಬರುವುದಿಲ್ಲ. ನೀನು ಮಾತ್ರ ಅಯೋಧ್ಯೆಗೆ ಹೊರಟುಹೋಗು. ಅಲ್ಲಿ ಭ್ರಾತೃ ವತ್ಸಲನಾದ ಭರತನನ್ನು ಕಂಡು ಅವನಿಗೆ ಎಲ್ಲ ವಿಷಯಗಳನ್ನೂ ತಿಳಿಸಿ ಬಿಡು. ಜನಕನ ಮಗಳಾದ ಸೀತೆಯಿಲ್ಲದೇ ನಾನು ಖಂಡಿತವಾಗಿಯೂ ಜೀವಿಸಿರುವುದಿಲ್ಲ."

ಹೀಗೆ ಅನಾಥನಂತೆ ವಿಲಪಿಸುತ್ತಿದ್ದ ಮಹಾತ್ಮನಾದ ಶ್ರೀರಾಮನಿಗೆ ತಮ್ಮನಾದ ಲಕ್ಷ್ಮಣನು ತತ್ಕಾಲೋಚಿತವಾದ ಯುಕ್ತಿಯುಕ್ತವಾದ ಈ ಮಾತನ್ನು ಹೇಳಿದನು:

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

"ರಾಮ! ನಿನಗೆ ಮಂಗಳವಾಗಲಿ. ಪುರುಷೋತ್ತಮನೇ! ಶೋಕಿಸ ಬೇಡ. ಉಂಟಾಗಿರುವ ದುಃಖವನ್ನು ತಡೆದುಕೊ. ಮನಸ್ಸಿನಲ್ಲಿ ಯಾವ ಬಗೆಯ ಕಳಂಕವೂ ಇಲ್ಲದಿರುವ ನಿನ್ನಂತಹವರ ಬುದ್ಧಿಯು ಯಾವುದೇ ಕಾರಣದಿಂದಲೂ ಕಾಲುಷ್ಯವನ್ನು ಹೊಂದಬಾರದು.

ಸ್ಮೃತ್ವಾ ವಿಯೋಗಜಂ ದುಃಖಂ ತ್ಯಜ ಸ್ನೇಹಂ ಪ್ರಿಯೇ ಜನೇ ।
ಅತಿಸ್ನೇಹಪರಿಷ್ವಙ್ಗಾದ್ವರ್ತಿರಾರ್ದ್ರಾಽಪಿ ದಹ್ಯತೇ ॥೧೧೬॥

'ಇಷ್ಟರಾದವರ ಅನಿವಾರ್ಯವಾದ ವಿಯೋಗದುಃಖವನ್ನು ಎಲ್ಲರೂ ಸಹಿಸಿಕೊಳ್ಳಲೇಬೇಕು.' ಅದನ್ನೇ ಸ್ಮರಿಸುತ್ತಾ ಪ್ರಿಯಜನರ ವಿಷಯದಲ್ಲಿ ಹೆಚ್ಚಿನ ಮಮತೆಯನ್ನಿಟ್ಟುಕೊಳ್ಳಬೇಡ. ಅತಿಯಾದ ಸ್ನೇಹದ (ಎಣ್ಣೆಯ) ಸಂಬಂಧವಿರುವುದರಿಂದ ಬತ್ತಿಯು ಒದ್ದೆಯಾಗಿದ್ದರೂ ಸುಟ್ಟುಹೋಗುತ್ತದೆ. (ನೆನೆದಿದ್ದರೂ ಬತ್ತಿಯು ಹೆಚ್ಚು ಎಣ್ಣೆಯ ಸಂಬಂಧದಿಂದಾಗಿ ಉರಿದು ಹೋಗುವಂತೆ-ಆರ್ದ್ರತೆಯಿಂದ ಕೂಡಿರುವ ಮನಸ್ಸು ಬಂಧುಜನರಲ್ಲಿ ಅತಿ ಸ್ನೇಹದ ಕಾರಣದಿಂದಾಗಿ ಅವರ ವಿಯೋಗವುಂಟಾದಾಗ ಸುಟ್ಟುಹೋಗುತ್ತದೆ.) ಸೀತೆಯನ್ನು ಹುಡುಕುವ ಕಾರ್ಯದಲ್ಲಿ ನಾವು ತೊಡಗೋಣ. ರಾವಣನು ಪಾತಾಳವನ್ನು ಹೊಕ್ಕರೂ, ಅಲ್ಲಿಂದ ಮುಂದೆ ಇನ್ನೂ ಗಹನವಾದ ಸ್ಥಳಕ್ಕೆಹೋದರೂ ಅವನು ಉಳಿಯಲಾರನು. ಮೊದಲು ಪಾಪಿಷ್ಠನಾದ ಆ ರಾವಣರಾಕ್ಷಸನು ಎಲ್ಲಿರುವನೆಂಬುದನ್ನು ತಿಳಿಯಲು ಪ್ರಯತ್ನಿಸೋಣ. ಅವನಿಗೆ ಸೀತೆಯನ್ನು ಒಪ್ಪಿಸುವಂತೆ ಎಚ್ಚರಿಸೋಣ. ನಮ್ಮ ಪರಾಕ್ರಮ ವೆಷ್ಟೆಂಬುದನ್ನು ತಿಳಿದ ಅವನು ಸೀತೆಯನ್ನಾದರೂ ನಮಗೆ ತಂದೊಪ್ಪಿಸು ತ್ತಾನೆ; ಹಾಗೆ ಮಾಡದಿದ್ದರೆ ನಮ್ಮಿಂದ ಹತನಾದರೂ ಆಗುತ್ತಾನೆ. ಒಂದು ವೇಳೆ ರಾವಣನು ಸೀತೆಯೊಡನೆ ದಿತಿಯ ಗರ್ಭದಲ್ಲಿ ಸೇರಿಕೊಂಡಿದ್ದರೂ ಮೈಥಿಲಿಯನ್ನು ಒಪ್ಪಿಸದಿದ್ದಲ್ಲಿ ಗರ್ಭವನ್ನು ಪ್ರವೇಶಿಸಿಯಾದರೂ ನಾನು ಅವನನ್ನು ಸಂಹರಿಸುತ್ತೇನೆ.

ಆರ್ಯ! ಧೈರ್ಯವನ್ನು ತಂದುಕೊ. ದೈನ್ಯದಿಂದ ಕೂಡಿರುವ ಬುದ್ಧಿ ಯನ್ನು ಪರಿತ್ಯಜಿಸು.

ಅರ್ಥೋ ಹಿ ನಷ್ಟಕಾರ್ಯಾರ್ಥೈರ್ನಾಯತ್ನೇನಾಧಿಗಮ್ಯತೇ ॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ವಸ್ತುವು ಕಳೆದುಹೋದರೆ ಪುನಃ ಅದನ್ನು ಪಡೆದುಕೊಳ್ಳುವ ಪ್ರಯತ್ನ ದಲ್ಲಿ ವಿಮುಖರಾಗಬಾರದು. ಕಳೆದುಹೋದ ವಸ್ತುವು ಪ್ರಯತ್ನವಿಲ್ಲದಿದ್ದರೆ ಖಂಡಿತವಾಗಿಯೂ ಸಿಕ್ಕುವುದಿಲ್ಲ.

ಉತ್ಸಾಹೋ ಬಲವಾನಾರ್ಯ ನಾಸ್ತ್ಯುತ್ಸಾಹಾತ್ಪರಂ ಬಲಮ್ ।
ಸೋತ್ಸಾಹಸ್ಯಾಸ್ತಿ ಲೋಕೇಽಸ್ಮಿನ್ನ ಕಿಂಚಿದಪಿ ದುರ್ಲಭಮ್ ॥

ಆರ್ಯನೇ ! ಉತ್ಸಾಹವೆಂಬುದು ಬಲವತ್ತರವಾದುದು. ಉತ್ಸಾಹ ಕ್ಕಿಂತಲೂ ಶ್ರೇಷ್ಠವಾದ ಬಲವು ಮತ್ತೊಂದಿಲ್ಲ. ಉತ್ಸಾಹವಿರುವ ಮನುಷ್ಯ ನಿಗೆ ಪ್ರಪಂಚದಲ್ಲಿ ದುರ್ಲಭವಾದುದು ಯಾವುದೂ ಇರುವುದಿಲ್ಲ.

ಉತ್ಸಾಹವನ್ತಃ ಪುರುಷಾ ನಾವಸೀದನ್ತಿ ಕರ್ಮಸು ।
ಉತ್ಸಾಹಮಾತ್ರಮಾಶ್ರಿತ್ಯ ಪ್ರತಿಲಪ್ಸ್ಯಾಮ ಜಾನಕೀಮ್ ॥೧೨೨॥

ಉತ್ಸಾಹವಂತರಾದ ಮನುಷ್ಯರು ದುಷ್ಕರವಾದ ಕಾರ್ಯದಲ್ಲಿ ತೊಡ ಗಿದರೂ ವಿನಾಶಹೊಂದುವುದಿಲ್ಲ. ಆದುದರಿಂದ ನಾವೂ ಉತ್ಸಾಹವನ್ನೇ ಅವಲಂಬಿಸಿ ಜಾನಕಿಯನ್ನು ಹುಡುಕೋಣ. ಇದರ ಫಲವಾಗಿ ನಾವು ಸೀತೆಯನ್ನು ಪಡೆಯುವುದು ನಿಶ್ಚಯ.

ತ್ಯಜ್ಯತಾಂ ಕಾಮವೃತ್ತಿತ್ವಂ ಶೋಕಂ ಸಂನ್ಯಸ್ಯ ಪೃಷ್ಠತಃ ।
ಮಹಾತ್ಮಾನಂ ಕೃತಾತ್ಮಾನಮಾತ್ಮಾನಂ ನಾವಬುಧ್ಯಸೇ ॥೧೨೩॥

ಸೀತಾವಿಯೋಗದಿಂದುಂಟಾಗಿರುವ ಶೋಕವನ್ನು ಹಿಂದಕ್ಕೆ ತಳ್ಳಿ ಅವಳ ಸ್ಮರಣೆಯಿಂದ ನಿನಗುಂಟಾಗಿರುವ ಕಾಮುಕತೆಯನ್ನು ಪರಿತ್ಯಜಿಸು. ನೀನು ಮಹಾತ್ಮನೆಂಬುದನ್ನೂ ಕೃತಾತ್ಮನೆಂಬುದನ್ನೂ ಮರೆತುಬಿಟ್ಟಿ ರುವೆ." *

ಲಕ್ಷ್ಮಣನು ಹೀಗೆ ಹೇಳಲು ದುಃಖದಿಂದ ಬುದ್ಧಿಗೆಟ್ಟಿದ್ದ ಶ್ರೀರಾಮನು ಶೋಕ-ಮೋಹಗಳನ್ನು ಪರಿತ್ಯಜಿಸಿ ಧೈರ್ಯತಾಳಿದನು. ಶಾಂತಸ್ವರೂಪ

---

*ಮಹಾತ್ಮಾ ಮತ್ತು ಕೃತಾತ್ಮಾ ಎಂಬುದಕ್ಕೆ ವ್ಯಾಖ್ಯಾನಕಾರರು ಪರಿ-ಪರಿಯಾಗಿ ಅರ್ಥಮಾಡಿರುತ್ತಾರೆ. ಮಹಾತ್ಮಾ = ಧನವಂತ; ಶ್ರೇಷ್ಠ. ಯಾರ ಶರೀರವು ಇತರರಿಗೆ ಮಹತ್ತ್ವದ್ದಾಗಿ ಕಾಣುತ್ತದೆಯೋ ಅವರು ಮಹಾತ್ಮರು. ಕೃತಾತ್ಮಾ–ಶುದ್ಧವಾದ ಆತ್ಮ ವುಳ್ಳವನು. ಶಾಸ್ತ್ರಗಳಿಂದ ಪರಿಶುದ್ಧವಾದ ಹೃದಯವುಳ್ಳವನು. ಕೃತಃ = ಶುದ್ಧಃ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ನಾದ, ಅಚಿಂತ್ಯಪರಾಕ್ರಮನಾದ ಶ್ರೀರಾಮನು ಗಾಳಿಯಿಂದ ಓಲಾಡುತ್ತಿದ್ದ ವೃಕ್ಷಗಳಿಂದ ಸುತ್ತುವರಿಯಲ್ಪಟ್ಟಿದ್ದ, ರಮ್ಯವಾಗಿದ್ದ ಮತ್ತು ಸುಮಧುರವಾಗಿದ್ದ ಪಂಪಾಸರೋವರವನ್ನು ದಾಟಿದನು. ಸೀತೆಯ ಸ್ಮರಣೆಯಿಂದ ಉದ್ವಿಗ್ನವಾದ ಮನಸ್ಸಿನಿಂದ ಕೂಡಿದ್ದ ಮತ್ತು ಅದರಿಂದಲೇ ಅತ್ಯಂತ ದುಃಖಿತನಾಗಿದ್ದ ಶ್ರೀರಾಮನು ಲಕ್ಷ್ಮಣನು ಹೇಳಿದ ವಿಷಯವನ್ನು ಮನಸ್ಸಿನಲ್ಲಿಯೇ ವಿಚಾರಮಾಡಿ ಸಮಾಧಾನಹೊಂದಿದನು. ಅರಣ್ಯಗಳನ್ನೂ, ಕಂದರಗಳನ್ನೂ, ಝರಿಗಳನ್ನೂ ನೋಡುತ್ತಾ ತಮ್ಮನೊಡನೆ ಮುನ್ನಡೆದನು. ಅಂತಹ ಶ್ರೀರಾಮನನ್ನು-ಮದಿಸಿದ ಆನೆಯಂತೆ ಒಯ್ಯಾರದಿಂದ ಹೆಜ್ಜೆಯನ್ನಿಡುತ್ತಿದ್ದ, ಅಣ್ಣನ ಸೇವೆಯಲ್ಲಿಯೇ ಏಕಾಗ್ರವಾದ ಮನಸ್ಸಿನಿಂದ ಕೂಡಿದ್ದ, ಅಣ್ಣನಿಗೆ ಇಷ್ಟವಾದ ಕಾರ್ಯವನ್ನೇ ಮಾಡುತ್ತಿದ್ದ ಮಹಾತ್ಮನಾದ ಲಕ್ಷ್ಮಣನು-' ರರಕ್ಷ ಧರ್ಮೇಣ ಬಲೇನ ಚೈವ '-ಧರ್ಮದಿಂದಲೂ ಬಲದಿಂದಲೂ ದುಃಖವು ಕಮ್ಮಿಯಾಗುವಂತೆ ಮಾಡಿದನು.[1]

ಋಷ್ಯಮೂಕಪರ್ವತದ ಸಮೀಪದಲ್ಲಿಯೇ ಸಂಚರಿಸುತ್ತಿದ್ದ ವಾನರರ ಅಧಿಪತಿಯಾದ ವೇಗವಂತನಾದ ಸುಗ್ರೀವನು ಅದ್ಭುತದರ್ಶನರಾದ ರಾಮ-ಲಕ್ಷ್ಮಣರನ್ನು ನೋಡಿದನು. ಅವರು ತನ್ನ ಶತ್ರುವಾದ ವಾಲಿಯ ಕಡೆಯವರಿರಬಹುದೆಂದು ಆವನಿಗೆ ಭಯವಾಯಿತು. ಆ ಭಯದಿಂದಾಗಿ ಅವನ

---

ಸಂಸ್ಕೃತಃ ಆತ್ಮಾ ಹೃದಯಂ ಯಸ್ಯ ಸಃ ಕೃತಾತ್ಮಾ-ಸಂಸ್ಕೃತವಾದ ಆತ್ಮವುಳ್ಳವನು. ಇವು ಎರಡು ಸಾಧಾರಣವಾದ ಅರ್ಥಗಳಾಗಿರುತ್ತವೆ. ೧) ಮಹಾತ್ಮಾ = ರಜಸ್ತಮೋಮಲಾಸ್ಪೃಷ್ಟಚಿತ್ತಃ-ರಜಸ್ತಮಗಳೆಂಬ ಮಲದ ಸ್ಪರ್ಶವಿಲ್ಲದಿರುವ ಬುದ್ಧಿಯುಳ್ಳವನು. ಅರ್ಥಾತ್ ಸತ್ತ್ವಸ್ವರೂಪನು. ನಿರತಿಶಯಶೌರ್ಯಧೈರ್ಯಾದಿಸ್ವಭಾವಚಿತ್ತಃ – ನಿರತಿಶಯವಾದ ಶೌರ್ಯವೀರ್ಯಾದಿಸ್ವಭಾವವುಳ್ಳ ಚಿತ್ತವೃತ್ತಿಯಿರುವವನು. ಕೃತಾತ್ಮಾ= ಶ್ರುತಿಸ್ಮೃತ್ಯಾದಿಷು ಗುರುಭಿಃ ಶಿಕ್ಷಿತಸ್ವರೂಪಃ = ಶ್ರುತಿ-ಸ್ಮೃತಿಗಳಲ್ಲಿ ಗುರುಗಳಿಂದ ಸುಶಿಕ್ಷಿತನಾದ ೨) ಮಹಾತ್ಮಾನಂ-ಮಹಾನಾಂ = ಸರ್ವಪೂಜ್ಯಬ್ರಹ್ಮಾದಿತ್ರಯಾಣಾಂ ಆತ್ಮಾನಂ ಸರ್ವಪೂಜ್ಯರಾದ ಬ್ರಹ್ಮ-ವಿಷ್ಣು-ಮಹೇಶರಿಗೆ ಆತ್ಮಸ್ವರೂಪನಾದ, ನಿಯ

---

1 ಧರ್ಮೇಣ ಬಲೇನ ಚೈವ ಎಂಬುದಕ್ಕೆ ವ್ಯಾಖ್ಯಾನಕಾರರು ಹೀಗೆ ಅರ್ಥಮಾಡಿರುತ್ತಾರೆ: ಧರ್ಮೇಣ: ಸಂಸ್ತವೋತ್ಯಾದಿ ರಾಜನೀತಿಕಥನೇನ-೧೧೫ನೆಯ ಶ್ಲೋಕದಲ್ಲಿ ಹೇಳಿರುವಂತೆ ರಾಜಧರ್ಮವನ್ನು ಶ್ರೀರಾಮನಿಗೆ ಜ್ಞಾಪಿಸುತ್ತಾ ಬಲೇನ: ತಪ್ರಾಪ್ಸ್ಯೇನಂ ಹನಿಷ್ಯಾಮಿ ೧೧೭ನೆಯ ಶ್ಲೋಕದಲ್ಲಿ ಹೇಳಿರುವಂತೆ ದಿತಿಯ ಗರ್ಭವನ್ನು ಪ್ರವೇಶಿಸಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಚಲನ-ವಲನಗಳೇ ನಿಂತುಹೋದುವು. ಆನೆಯಂತೆ ಮಂದಗಮನವುಳ್ಳ ಮಹಾತ್ಮನಾದ ಸುಗ್ರೀವನು ಋಶ್ಯಮೂಕಪರ್ವತದ ಸಮೀಪದಲ್ಲಿ ಸಂಚರಿಸುತ್ತಿದ್ದಾಗ ಅಲ್ಲಿಯೇ ಸಂಚರಿಸುತ್ತಿದ್ದ ರಾಜಕುಮಾರರನ್ನು ನೋಡಿ ವಾಲಿಯಿಂದ ಕಳುಹಿಸಲ್ಪಟ್ಟವರೆಂದು ಭಾವಿಸಿ ಬಹಳವಾಗಿ ವಿಷಾದಿಸಿದನು. ಚಿಂತಾಮಗ್ನನಾಗಿ ಭಯದ ಭಾರದಿಂದ ಕುಸಿದೇಹೋದನು. ಪಂಪಾಸರೋವರದ ತೀರಪ್ರದೇಶದಲ್ಲಿದ್ದ ಋಶ್ಯಮೂಕಪರ್ವತದ ತಪ್ಪಲಿನಲ್ಲಿದ್ದ ಮತಂಗಮಹರ್ಷಿಗಳ ಆಶ್ರಮವು ಪರಮಪವಿತ್ರವಾಗಿಯೂ ಸುಖದಾಯಕವಾಗಿಯೂ ಇದ್ದಿತು. ಮಹರ್ಷಿಗಳ ಶಾಪದಿಂದಾಗಿ ವಾಲಿಯು ಅಲ್ಲಿಗೆ ಬರಲು ಸಾಧ್ಯವಿರಲಿಲ್ಲ. ಈ ಕಾರಣದಿಂದ ಆ ಆಶ್ರಮವು ವಾಲಿಯ ಶತ್ರುಗಳಾದ ಸುಗ್ರೀವನೇ ಮೊದಲಾದ ವಾನರರಿಗೆ ಆಶ್ರಯಸ್ಥಾನವಾಗಿದ್ದಿತು. ಅಂದು ಮಹಾತೇಜಸ್ವಿಗಳಾದ ರಾಮ-ಲಕ್ಷ್ಮಣರನ್ನು ನೋಡಿದೊಡನೆಯೇ ಭಯಗೊಂಡ ವಾನರರು ರಕ್ಷಣೆಗಾಗಿ ಮತಂಗಮಹರ್ಷಿಗಳ ಆಶ್ರಮಕ್ಕೆ ಧಾವಿಸಿದರು.

ಗನೆಯ ಸರ್ಗವು ಮುಗಿಯಿತು.

---

ನ್ತಾರಂ = ನಿಯಂತೃವಾದ ಆತ ಏವ ಆದುದರಿಂದಲೇ ಕೃತಾತ್ಮಾನಂ = ಕೃತಃ ಆತ್ಮಾ ಮನಃ ಯಸ್ಮಿಂಸ್ತಂ = ಬ್ರಹ್ಮ-ವಿಷ್ಣು ಮಹೇಶರಿಂದಲೇ ಇಡಲ್ಪಟ್ಟ ಮನಸ್ಸುಳ್ಳವನು. ಅವರಿಂದ ಧ್ಯಾನಿಸಲ್ಪಡುವವನು ೩) ಮಹಾತ್ಮಾ = ಮಹಾಧೈರ್ಯಃ ಮಹಾಧೈರ್ಯವಂತ. ಕೃತಾತ್ಮಾ = ಶಿಕ್ಷಿತಮನಸ್ಕಃ-ಸುಶಿಕ್ಷಿತವಾದ ಮನಸ್ಸಿನಿಂದ ಕೂಡಿರುವವನು.

---

ರಾವಣನು ಕುಳಿತಿದ್ದರೂ ಅಲ್ಲಿಯೂ ಅವನನ್ನು ಸಂಹರಿಸುತ್ತೇನೆ-ಎಂಬ ಬಲಪ್ರದರ್ಶನದ ಮಾತನ್ನು ಹೇಳುತ್ತಾ ರರಕ್ಷ = ನಿರ್ದುಃಖಮಕರೋತ್ = ಶ್ರೀರಾಮನನ್ನು ಲಕ್ಷ್ಮಣನು ದುಃಖರಹಿತನನ್ನಾಗಿ ಮಾಡಿದನು. (೨) ಧರ್ಮೇಣ = ರಾಮಸೇವಕತ್ವರೂಪ ಸ್ವಭಾವೇನ-ರಾಮನ ಸೇವಕರೂಪವಾದ ತನ್ನ ಸ್ವಭಾವದಿಂದ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



## ಸುಗ್ರೀವಾದಿಗಳ ಸಂದೇಹ : ಹನುಮಂತನಿಂದ ಅದರ ನಿವಾರಣೆ : ರಾಮ-ಲಕ್ಷ್ಮಣರ ಬಳಿಗೆ ಹನುಮಂತನ ಆಗಮನ

ತೌ ತು ದೃಷ್ಟ್ವಾ ಮಹಾತ್ಮಾನೌ ಭ್ರಾತರೌ ರಾಮಲಕ್ಷ್ಮಣೌ ।
ವರಾಯುಧಧರೌ ವೀರೌ ಸುಗ್ರೀವಃ ಶಙ್ಕಿತೋಽಭವತ್ ॥೧॥

ಶ್ರೇಷ್ಠವಾದ ಆಯುಧಗಳನ್ನು ಧರಿಸಿದ್ದ, ಮಹಾತ್ಮರಾದ, ವೀರರಾದ ರಾಮ-ಲಕ್ಷ್ಮಣರನ್ನು ನೋಡಿ ಋಷ್ಯಮೂಕಪರ್ವತದ ಮೇಲೆ ಕುಳಿತಿದ್ದ ಸುಗ್ರೀವನಿಗೆ ಸಂದೇಹವುಂಟಾಯಿತು.

ಕಳವಳಗೊಂಡ ಮನಸ್ಸಿನಿಂದ ಕೂಡಿದ್ದ ಆ ವಾನರಪುಂಗವನು ಭ್ರಾಂತನಾಗಿ ಎಲ್ಲ ದಿಕ್ಕುಗಳನ್ನೂ ನೋಡತೊಡಗಿದನು. ನಿಂತಲ್ಲಿ ನಿಲ್ಲದೇ ಅಲ್ಲಿಂದಿಲ್ಲಿಗೂ ಇಲ್ಲಿಂದಲ್ಲಿಗೂ ಬುದ್ಧಿಗೆಟ್ಟವನಂತೆ ಓಡಾಡುತ್ತಿದ್ದನು. ರಾಮ-ಲಕ್ಷ್ಮಣರನ್ನು ನೋಡಿದೊಡನೆಯೇ ಅವನ ಮನಸ್ಸು ಅಸ್ಥಿರವಾಗುತ್ತಿದ್ದಿತು. ಒಂದು ಕಡೆ ನಿಲ್ಲಲು ಸಾಧ್ಯವಾಗುತ್ತಲೇ ಇರಲಿಲ್ಲ. ಅತ್ಯಂತ ಭೀತನಾಗಿದ್ದ ಕಪೀಶ್ವರನ ಮನಸ್ಸು ದುಃಖದಲ್ಲಿ ಮುಳುಗಿತು. ರಾಜಧರ್ಮವನ್ನು ತಿಳಿದಿದ್ದ ಸುಗ್ರೀವನು ಸಚಿವರೊಂದಿಗೆ ತನ್ನ ದೌರ್ಬಲ್ಯವನ್ನೂ-ಶತ್ರುವಿನ ಪ್ರಾಬಲ್ಯವನ್ನೂ ಕುರಿತು ಚರ್ಚಿಸಿದನು. ವಾಲಿಯೊಡನೆ ಯುದ್ಧಮಾಡುವುದು ಅಸಾಧ್ಯವೆಂದು ಭಾವಿಸಿ ಉದ್ವಿಗ್ನನಾದನು. ತಮ್ಮ ನಾಯಕನಂತೆಯೇ ಇತರ ವಾನರರೂ ಉದ್ವಿಗ್ನರಾದರು. ಬಳಿಕ ಪ್ಲವಗೇಶ್ವರನಾದ ಸುಗ್ರೀವನು ರಾಮ-ಲಕ್ಷ್ಮಣರನ್ನು ನೋಡುತ್ತಾ ಸಚಿವರಿಗೆ ಹೇಳಿದನು : "ಅಲ್ಲಲ್ಲಿ ಸುತ್ತಾಡುತ್ತಾ ದುರ್ಗಮವಾದ ಈ ಅರಣ್ಯಪ್ರದೇಶಕ್ಕೆ ಆಗಮಿಸಿರುವ ಇವರಿಬ್ಬರನ್ನೂ ವಾಲಿಯೇ ಕಳುಹಿಸಿರುವುದು ನಿಶ್ಚಯ. ಇವರು ತಮ್ಮ ನಿಜರೂಪವನ್ನು ಮರೆಸಿಕೊಳ್ಳಲು ನಾರುಮಡಿಗಳನ್ನುಟ್ಟಿದ್ದಾರೆ."

ಸುಗ್ರೀವನ ಮಂತ್ರಿಗಳು ರಾಜನು ಹೇಳಿದ ಆ ಮಾತನ್ನು ಕೇಳಿ, ಶ್ರೇಷ್ಠವಾದ ಧನುಸ್ಸುಗಳನ್ನು ಧರಿಸಿದ್ದ ರಾಮ-ಲಕ್ಷ್ಮಣರನ್ನು ನೋಡಿ,

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ತಾವು ತಂಗಿದ್ದ ಸ್ಥಳದಿಂದ ಮತ್ತೊಂದು ಪರ್ವತದ ಶಿಖರಕ್ಕೆ ಸುಗ್ರೀವನೊಡನೆ ಧಾವಿಸಿದರು. ಅಲ್ಲಿಯೂ ನೆಮ್ಮದಿಯಿಲ್ಲದೇ ವಾನರರ ಗುಂಪುಗಳ ನಾಯಕರಾಗಿದ್ದ ಅವರೆಲ್ಲರೂ ಸುಗ್ರೀವನೊಡನೆ ಬೇರೊಂದು ಪರ್ವತಶಿಖರಕ್ಕೆ ಹೋದರು. ಅಲ್ಲಿ ಒಂದು ಸ್ಥಳವನ್ನು ಆರಿಸಿಕೊಂಡು ವಾನರಶ್ರೇಷ್ಠನಾದ ಸುಗ್ರೀವನನ್ನು ಸುತ್ತುವರಿದು ಕುಳಿತುಕೊಂಡರು. ಅಲ್ಲಿಗೆ ಬಂದು ಸೇರುವ ಮೊದಲು ಒಂದೇ ಗುರಿಯನ್ನು ಹೊಂದಿದ್ದ ವಾನರೇಶ್ವರರು ಒಂದು ಪರ್ವತದ ಶಿಖರದಿಂದ ಮತ್ತೊಂದು ಪರ್ವತಶಿಖರಕ್ಕೆ ಹಾರುತ್ತಾ ತಮ್ಮ ವೇಗದಿಂದ ಪರ್ವತಶಿಖರಗಳನ್ನೇ ಅಲುಗಾಡಿಸಿಬಿಟ್ಟರು. ಮಹಾಬಲಿಷ್ಠರಾಗಿದ್ದ ಅವರು ಪರ್ವತಗಳಲ್ಲಿದ್ದ ಪುಷ್ಪಭರಿತವಾಗಿದ್ದ ವೃಕ್ಷಗಳನ್ನು ಮುರಿದುಹಾಕಿದರು. ಪರ್ವತದ ನಾಲ್ಕು ಕಡೆಗಳಿಂದಲೂ ಹಾರಿಕೊಂಡು ಬಂದ ಆ ಕಪೀಶ್ವರರು ಅಲ್ಲಿದ್ದ ಜಿಂಕೆಗಳನ್ನೂ, ಬೆಕ್ಕುಗಳನ್ನೂ, ಶಾರ್ದೂಲಗಳನ್ನೂ ಭಯಪಡಿಸಿದರು. ಹೀಗೆ ಅವರೆಲ್ಲರೂ ಶ್ರೇಷ್ಠವಾದ ಆ ಪರ್ವತದ ತಪ್ಪಲಿಗೆ ಬಂದು ಸುಗ್ರೀವನೊಡನೆ ಸೇರಿ ಕೈಮುಗಿದುಕೊಂಡು ಕುಳಿತರು. ವಾಲಿಯು ಮಾಡಿರುವ ಮೋಸಕೃತ್ಯವಿರಬಹುದೆಂಬ ಸಂದೇಹದಿಂದ ಬಹಳವಾಗಿ ಭಯಗೊಂಡಿದ್ದ ಸುಗ್ರೀವಾದಿಗಳನ್ನು ಕುರಿತು ಮಾತನಾಡುವುದರಲ್ಲಿ ಪಂಡಿತನಾದ ಹನುಮಂತನು ಹೇಳಿದನು :

" ಕಪಿಶ್ರೇಷ್ಠರೇ ! ವಾಲಿಯ ಸಲುವಾಗಿ ನಿಮಗುಂಟಾಗಿರುವ ಭಯವನ್ನು ದೂರೀಕರಿಸಿರಿ. ಏಕೆಂದರೆ : ನಾವೆಲ್ಲರೂ ಮಲಯಪರ್ವತದಲ್ಲಿದ್ದೇವೆ.* ಇಲ್ಲಿ ವಾಲಿಯ ಸಂಬಂಧವಾದ ಭಯಕ್ಕೆ ಅವಕಾಶವೇ ಇಲ್ಲ. ಹರಿಪುಂಗವನೇ ! ಸುಗ್ರೀವ ! ಯಾರ ದೆಸೆಯಿಂದಾಗಿ ನೀನು ಉದ್ವಿಗ್ನಚಿತ್ತನಾಗಿ ಓಡೋಡಿ ಇಲ್ಲಿಗೆ ಬಂದೆಯೋ ಕ್ರೂರನಾದ ಮತ್ತು ಭಯಂಕರದರ್ಶನನಾದ ಆ ವಾಲಿಯನ್ನು ನಾನು ಇಲ್ಲೆಲ್ಲೂ ಕಾಣುತ್ತಿಲ್ಲ. ಪಾಪಕರ್ಮನಾದ ಅಗ್ರಜನಾದ ಯಾವ ವಾಲಿಯಿಂದ ನಿನಗೆ ಭಯವಿರುವುದೋ ದುಷ್ಟಾತ್ಮನಾದ ಆ ವಾಲಿಯು ಇಲ್ಲಿಗೆ ಬರಲಾರನು. ಆದುದರಿಂದ ನಿನಗೆ ಯಾವ ವಿಧವಾದ ಭಯವನ್ನೂ ನಾನಿಲ್ಲಿ ಕಾಣುತ್ತಿಲ್ಲ.

* ಋಷ್ಯಮೂಕಪರ್ವತದ ಸಾಲಿನಲ್ಲೇ ಇದ್ದ ಮತ್ತೊಂದು ಪರ್ವತ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಅಹೋ ಶಾಖಾಮೃಗತ್ವಂ ತೇ ವ್ಯಕ್ತಮೇವ ಪ್ಲವಂಗಮ ।
ಲಘುಚಿತ್ತತಯಾತ್ಮಾನಂ ನ ಸ್ಥಾಪಯಸಿ ಯೋ ಮತೌ ॥೧೭॥

ನೀನು ರೆಂಬೆಗಳಿಂದ ರೆಂಬೆಗಳಿಗೆ ಚಂಚಲಬುದ್ಧಿಯಿಂದ ಹಾರಾಡುವ ಶಾಖಾಮೃಗ–ಎಂಬುದು ಈ ನಿನ್ನ ವರ್ತನೆಯಿಂದ ವ್ಯಕ್ತವಾಯಿತು. ನಿನ್ನ ಅಲ್ಪಬುದ್ಧಿಯ ಕಾರಣದಿಂದಾಗಿ ನಿನ್ನ ಮನಸ್ಸನ್ನು ಒಳ್ಳೆಯ ವಿಚಾರಗಳಲ್ಲಿ ತೊಡಗಿಸುತ್ತಿಲ್ಲ. ಯಾವುದನ್ನೂ ಸರಿಯಾಗಿ ವಿಚಾರಮಾಡುತ್ತಿಲ್ಲ.

ಬುದ್ಧಿಯಿಂದಲೂ ಮತ್ತು ವಿಜ್ಞಾನದಿಂದಲೂ ಸಂಪನ್ನನಾಗಿ ಇತರರ ಹಾವ-ಭಾವಗಳಿಂದ ಅವರ ಮನೋಭಾವಗಳನ್ನು ತಿಳಿದು ಎಲ್ಲ ಕಾರ್ಯಗಳನ್ನೂ ಮಾಡು.

ನ ಹ್ಯಬುದ್ಧಿಂ ಗತೋ ರಾಜಾ ಸರ್ವಭೂತಾನಿ ಶಾಸ್ತಿ ಹಿ ॥೧೮॥

ಬುದ್ಧಿಬಲದ ಆಶ್ರಯವಿಲ್ಲದ ರಾಜನು ಎಲ್ಲ ಪ್ರಜೆಗಳನ್ನೂ ಆಳಲಾರನು."

ಸುಗ್ರೀವನು ಹನುಮಂತನ ಶುಭಕರವಾದ ಆ ಮಾತನ್ನು ಕೇಳಿ ಶುಭಕರವಾದ ಉತ್ತರವನ್ನೇ ಹೇಳಿದನು:

" ನೋಡು, ಹನುಮಂತ! ಅವರು ದೀರ್ಘಬಾಹುಗಳಾಗಿದ್ದಾರೆ. ಅವರಿಗೆ ಅಗಲವಾದ ಕಣ್ಣುಗಳಿವೆ. ಬಿಲ್ಲು-ಬಾಣಗಳನ್ನೂ ಕತ್ತಿಯನ್ನೂ ಧರಿಸಿದ್ದಾರೆ. ದೇವಕುಮಾರರಂತೆಯೇ ಇದ್ದಾರೆ. ಇಂತಹವರನ್ನು ನೋಡಿದರೆ ಯಾರಿಗೆ ತಾನೇ ಭಯವಾಗುವುದಿಲ್ಲ? ಪುರುಷಶ್ರೇಷ್ಠರಾದ ಇವರನ್ನು ವಾಲಿಯೇ ಕಳುಹಿಸಿರಬಹುದೆಂದು ನಾನು ಶಂಕಿಸುತ್ತೇನೆ.

ರಾಜಾನೋ ಬಹುಮಿತ್ರಾಶ್ಚ ವಿಶ್ವಾಸೋ ನಾತ್ರ ಹಿ ಕ್ಷಮಃ ॥೨೧॥

ರಾಜರಿಗೆ ಬಹುಮಂದಿ ಮಿತ್ರರಿರುತ್ತಾರೆ. ಆದುದರಿಂದ ಇವರ ವಿಷಯದಲ್ಲಿ ನಂಬಿಕೆಯನ್ನಿಡುವುದು ಯುಕ್ತವಾಗಿ ಕಾಣುವುದಿಲ್ಲ.

ಅರಯಶ್ಚ ಮನುಷ್ಯೇಣ ವಿಜ್ಞೇಯಾಶ್ಛದ್ಮಚಾರಿಣಃ ।
ವಿಶ್ವಸ್ತಾನಾಮವಿಶ್ವಸ್ತಾಶ್ಛಿದ್ರೇಷು ಪ್ರಹರನ್ತಿ ಹಿ ॥೨೨॥

ವೇಷವನ್ನು ಮರೆಸಿಕೊಂಡು ತಿರುಗಾಡುವ ಶತ್ರುಗಳನ್ನು ಬುದ್ಧಿವಂತ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ನಾದ ಮನುಷ್ಯನು ಪತ್ತೆಹಚ್ಚಬೇಕು. ಏಕೆಂದರೆ: ಯಾರನ್ನೂ ನಂಬದೇ ಎಚ್ಚರದಿಂದಿರುವ ಶತ್ರುಗಳು-ಯಾವ ವಿಧವಾದ ಅಪಾಯವೂ ಇಲ್ಲವೆಂದು ನಂಬಿರುವವರನ್ನು ಸಮಯನರಿತು ಛಿದ್ರಾನ್ವೇಷಣಮಾಡಿ ಪ್ರಹರಿಸುತ್ತಾರೆ.

ರಾಜನೀತಿಗೆ ಅನುಸಾರವಾಗಿ ಕಾರ್ಯಮಾಡುವುದರಲ್ಲಿ ವಾಲಿಯು ಮಹಾಬುದ್ಧಿವಂತನು. ರಾಜರು ಸಾಮಾನ್ಯವಾಗಿ ದೂರಾಲೋಚನೆಯುಳ್ಳವರು. ಆದುದರಿಂದಲೇ ಅವರು ಶತ್ರುವನ್ನು ಯಾವುದಾದರೂ ಉಪಾಯದಿಂದ ಸಂಹಾರಮಾಡುತ್ತಾರೆ. ಅಂತಹವರನ್ನು ಜನಸಾಮಾನ್ಯರಂತೆ ವೇಷವನ್ನು ಧರಿಸಿದ ಬುದ್ಧಿವಂತರಾದ ಮನುಷ್ಯರೇ ಕಂಡುಹಿಡಿಯಬೇಕು. ಆದುದರಿಂದ ನೀನು ಈ ಸಮಯದಲ್ಲಿ ಸಾಮಾನ್ಯನಂತೆ ಅವರ ಬಳಿಗೆ ಹೋಗಿ ಅವರ ರೂಪ, ಚಲನ-ವಲನಗಳು, ಅವರಾಡುವ ಮಾತುಗಳು–ಇವುಗಳಿಂದ ಅವರಾರೆಂಬುದನ್ನು ತಿಳಿದುಬರಬೇಕು. ಅವರ ಸ್ವಭಾವವನ್ನು ಸೂಕ್ಷ್ಮವಾಗಿ ಪರಿಶೀಲಿಸು. ಅವರೇನಾದರೂ ಶುದ್ಧವಾದ ಮನಸ್ಸುಳ್ಳವರಾಗಿದ್ದರೆ–ಹೊಗಳಿಕೆಗಳಿಂದಲೂ, ನನ್ನ ಅಭಿಪ್ರಾಯವನ್ನು ಸೂಚಿಸುವ ಚೇಷ್ಟೆಗಳಿಂದಲೂ ಅವರಿಗೆ ನನ್ನ ಮೇಲೆ ವಿಶ್ವಾಸವು ಹುಟ್ಟುವಂತೆ ಮಾಡು. ಅನಂತರ ನೀನು ನನ್ನ ಕಡೆಗೆ ತಿರುಗಿನಿಂತು ಧನುರ್ಧಾರಿಗಳಾದ ಅವರನ್ನು ಈ ಅರಣ್ಯಕ್ಕೆ ಬಂದ ಕಾರಣವನ್ನು ಪ್ರಶ್ನಿಸು. ಅವರೇನಾದರೂ ಶುದ್ಧಾತ್ಮರೇ ಎಂಬುದನ್ನು ನೀನು ತಿಳಿದುಕೊ. ಅವರಾಡುವ ಮಾತುಗಳಿಂದಲೂ, ಅವರ ಮುಖಭಾವದಿಂದಲೂ ಅವರಲ್ಲಿ ದುಷ್ಟಭಾವವು ಇರುವುದೇ, ಇಲ್ಲವೇ – ಎಂಬುದನ್ನು ತಿಳಿದುಕೊಳ್ಳಬೇಕು."

ಹೀಗೆ ಕಪಿರಾಜನಾದ ಸುಗ್ರೀವನಿಂದ ನಿರ್ದೇಶಿಸಲ್ಪಟ್ಟ ಮಾರುತಿಯು ರಾಮ-ಲಕ್ಷ್ಮಣರಿದ್ದ ಸ್ಥಳಕ್ಕೆ ಹೋಗಲು ನಿಶ್ಚಯಿಸಿದನು.

ಮಹಾನುಭಾವನಾದ, ಕಪಿಶ್ರೇಷ್ಠನಾದ ಹನುಮಂತನು ವಸ್ತುತಃ ದುರಾಸದನಾಗಿದ್ದರೂ ಪ್ರಕೃತಸಮಯದಲ್ಲಿ ಅತ್ಯಂತಭಯಗೊಂಡಿದ್ದ ಸುಗ್ರೀವನ ಮಾತನ್ನು ಗೌರವಿಸಿದನು. ಹಾಗೆಯೇ ಆಗಲೆಂದು ಹೇಳಿ ಲಕ್ಷ್ಮಣನೊಡನಿದ್ದ ಮಹಾಬಲಿಷ್ಠನಾದ ಶ್ರೀರಾಮನ ಬಳಿಗೆ ತೆರಳಿದನು.

೨ನೆಯ ಸರ್ಗವು ಮುಗಿಯಿತು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



## ಹನುಮಂತನು ರಾಮ-ಲಕ್ಷ್ಮಣರ ಬಳಿಗೆ ಹೋಗಿ ಅವರು ಅರಣ್ಯಕ್ಕೆ ಆಗಮಿಸಿರುವ ಕಾರಣವನ್ನು ಕೇಳಿದುದು : ತನ್ನನ್ನೂ ಮತ್ತು ಸುಗ್ರೀವನನ್ನೂ ಪರಿಚಯಿಸಿಕೊಂಡುದು : ಶ್ರೀರಾಮನು ಹನುಮಂತನ ಮಾತನ್ನು ಪ್ರಶಂಸಿಸುತ್ತಾ ಲಕ್ಷ್ಮಣನಿಗೆ ಹನುಮಂತನೊಡನೆ ಮಾತನಾಡಲು ಹೇಳಿದುದು : ಲಕ್ಷ್ಮಣನು ತನ್ನ ಪ್ರಾರ್ಥನೆಯನ್ನು ಅಂಗೀಕರಿಸಲು ಹನುಮಂತನು ಪ್ರಸನ್ನನಾದುದು

ವಚೋ ವಿಜ್ಞಾಯ ಹನುಮಾನ್ಸುಗ್ರೀವಸ್ಯ ಮಹಾತ್ಮನಃ ।
ಪರ್ವತಾದೃಶ್ಯಮೂಕಾತ್ತು ಪುಪ್ಲುವೇ ಯತ್ರ ರಾಘವೌ ॥೧॥

ಮಹಾತ್ಮನಾದ ಸುಗ್ರೀವನ ಮಾತನ್ನು ಗ್ರಹಿಸಿದ ಹನುಮಂತನು ಋಷ್ಯಮೂಕಪರ್ವತದಿಂದ ರಾಮ-ಲಕ್ಷ್ಮಣರಿದ್ದೆಡೆಗೆ ಹಾರಿದನು.

ಆ ವಾಯುಪುತ್ರನಾದ ಹನುಮಂತನು, ಬುದ್ಧಿಯ ಚಾತುರ್ಯದಿಂದ ಕಪಿಯ ರೂಪದಲ್ಲಿದ್ದರೆ ಯಾರಿಗೂ ನಂಬಿಕೆಯನ್ನು ಹುಟ್ಟಿಸಲು ಸಾಧ್ಯವಾಗಲಾರದೆಂದು ಯೋಚಿಸಿ, ಕಪಿಯ ರೂಪವನ್ನು ಪರಿತ್ಯಜಿಸಿ ಭಿಕ್ಷುರೂಪವನ್ನು ತಾಳಿದನು. ಅನಂತರ ಹನುಮಂತನು ವಿನೀತನಂತೆ ರಾಮ-ಲಕ್ಷ್ಮಣರ ಬಳಿಗೆ ಹೋಗಿ ತಲೆಬಾಗಿ ನಮಸ್ಕರಿಸಿ ಅವರೊಡನೆ ಮನೋಜ್ಞವಾದ ಮತ್ತು ಸುಮಧುರವಾದ ಮಾತುಗಳನ್ನಾಡಿದನು. ವೀರರಿಬ್ಬರ ಪ್ರಶಂಸೆಯನ್ನೂ ಯಥಾವತ್ತಾಗಿ ಮಾಡಿದನು.* ವಾನರಶ್ರೇಷ್ಠನಾದ ಹನುಮಂತನು ಸುಗ್ರೀವನ ಅಭಿಮತದಂತೆ ವೀರರಾದ ಸತ್ಯಪರಾಕ್ರಮರಾದ ರಾಮ-ಲಕ್ಷ್ಮಣರನ್ನು ಯಥಾವಿಧಿಯಾಗಿ ಸಂಪೂಜಿಸಿ ಮೃದುವಾಗಿ ಮಾತನಾಡಲು ಪ್ರಾರಂಭಿಸಿದನು.[1]

---

* ಪರಿಶಿಷ್ಟದಲ್ಲಿ ಕೊಡಲಾಗಿದೆ.

1 ಈ ಶ್ಲೋಕದಲ್ಲಿ ಭಿಕ್ಷುರೂಪಂ ತತೋ ಭೇಜೇ ಶಠಬುದ್ಧಿತಯಾ ಕಪಿಃ ॥ ಎಂದು ಉತ್ತರಾರ್ಧವಿದೆ. ಶಠ ಎಂಬುದಕ್ಕೆ ಧೂರ್ತ, ವಂಚಕ, ಮೋಸಗಾರ ಮುಂತಾದ ಅರ್ಥಗಳು ಪ್ರಸಿದ್ಧವಾಗಿವೆ. ಅರ್ಥಾತ್ ಧೂರ್ತಬುದ್ಧಿಯ ಕಾರಣದಿಂದ ಹನುಮಂತನು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

"ಆರ್ಯರೇ! ರಾಜರ್ಷಿಗಳಂತಿರುವ, ದೇವಸದೃಶರಾಗಿರುವ, ತಪಸ್ವಿಗಳ ವೇಷವನ್ನು ಧರಿಸಿರುವ, ಕಠೋರವಾದ ವ್ರತಾನುಷ್ಠಾನಗಳಲ್ಲಿ ತೊಡಗಿರುವ, ಸುಂದರವಾದ ಶರೀರಕಾಂತಿಯಿಂದ ಬೆಳಗುತ್ತಿರುವ ನೀವು ಈ ಪ್ರದೇಶಕ್ಕೆ ಹೇಗೆ ಬಂದಿರಿ? ತಾಪಸವೇಷಧಾರಿಗಳಾಗಿದ್ದರೂ ನೀವು ಧನುರ್ಬಾಣಗಳನ್ನೂ ಕತ್ತಿಯನ್ನೂ ಹಿಡಿದು ಸಂಚರಿಸುತ್ತಿರುವುದರಿಂದ ಮೃಗಗಳ ಸಮೂಹಗಳನ್ನೂ–ಅರಣ್ಯದಲ್ಲಿ ಸಂಚರಿಸುವ ಇತರ ಪ್ರಾಣಿಗಳನ್ನೂ ಭಯಪಡಿಸುತ್ತಿರುವಿರಿ. ಪಂಪಾತೀರದ ಸುತ್ತಲೂ ಇರುವ ವೃಕ್ಷಗಳ ಸೊಬಗನ್ನು ನೋಡುತ್ತಾ ಬರುತ್ತಿರುವಿರಿ. ವೇಗವಂತರಾದ ನೀವು ಶುಭಜಲಳಾದ ಈ ಪಂಪಾಸರೋವರವನ್ನು ನಿಮ್ಮ ಸಾನ್ನಿಧ್ಯದಿಂದ ಶೋಭೆಗೊಳಿಸುತ್ತಿರುವಿರಿ. ಮಹಾಧೈರ್ಯಶಾಲಿಗಳಂತೆ ಕಾಣುತ್ತಿರುವಿರಿ. ಚಿನ್ನದ ಕಾಂತಿಯಿಂದ ಬೆಳಗುತ್ತಿರುವಿರಿ. ನಾರುಮಡಿಗಳನ್ನುಟ್ಟಿರುವಿರಿ. ನೀವು ಯಾರು? ಇಲ್ಲಿಗೆ ಏಕೆ ಬಂದಿರಿ? ಹೇಗೆ ಬಂದಿರಿ? ಯಾವುದೋ ಯೋಚನೆಯಲ್ಲಿ ಮುಳುಗಿರುವಂತೆ ದೀರ್ಘವಾಗಿ ನಿಟ್ಟುಸಿರುಬಿಡುತ್ತಿರುವಿರಿ. ಸುಂದರವಾದ ತೋಳುಗಳನ್ನು ಹೊಂದಿರುವಿರಿ. ಅರಣ್ಯದಲ್ಲಿರುವ ಮೃಗ-ಪಕ್ಷಿಗಳನ್ನು ಪೀಡಿಸುತ್ತಿರುವಿರಿ. ಸಿಂಹದಂತೆ ನೋಟವುಳ್ಳವರಾಗಿರುವಿರಿ. ಮಹಾಬಲರೂ ಪರಾಕ್ರಮಿಗಳೂ ಆಗಿರುವಿರಿ. ಶತ್ರುನಾಶಕರಾದ ನೀವು ಇಂದ್ರನ ಧನುಸ್ಸಿನಂತೆಯೇ ಇರುವ ಧನುಸ್ಸುಗಳನ್ನು ಹಿಡಿದಿರುವಿರಿ. ಕಾಂತಿಯಿಂದ ಶ್ರೀಮಂತರಾಗಿರುವಿರಿ. ಸ್ಫುರದ್ರೂಪಿಗಳಾಗಿರುವಿರಿ. ಶ್ರೇಷ್ಠವಾದ ಗೂಳಿಯಂತೆ ನಡಿಗೆಯುಳ್ಳವರಾಗಿರುವಿರಿ. ಆನೆಯ ಸೊಂಡಿಲಿಗೆ ಸಮಾನವಾದ ಉದ್ದವಾದ ಭುಜಗಳನ್ನು ಹೊಂದಿರುವಿರಿ. ಮಹಾತೇಜಸ್ವಿಗಳಾಗಿರುವಿರಿ. ಶ್ರೇಷ್ಠಪರ್ವತಗಳ

---

ಭಿಕ್ಷುರೂಪವನ್ನು ಧರಿಸಿದನು–ಎಂದು ಅರ್ಥವಾಗುತ್ತದೆ. ಹನುಮಂತನಿಗೆ ವಾಸ್ತವವಾಗಿ ಧೂರ್ತತೆಯಿಲ್ಲ. ಇರಲು ಸಾಧ್ಯವಿಲ್ಲ. ವಾನರರೂಪದಲ್ಲಿ ಹೋದರೆ ನಂಬಿಕೆಯಾಗಲಾರದೆಂಬ ಭಾವನೆಯಿರಲು ಸಾಧ್ಯ. ಆದುದರಿಂದ ಇದಕ್ಕೆ ಒಬ್ಬ ವ್ಯಾಖ್ಯಾನಕಾರರು ಅಶಠಬುದ್ಧಿತಯಾ ಎಂದು ಪದವಿಭಾಗ ಮಾಡಿರುತ್ತಾರೆ. ಇದನ್ನು ಅವರು ಸಮರ್ಥಿಸುತ್ತಾ, ಕಪಿಗಳಿಗೆ ಸ್ವಾಭಾವಿಕವಾಗಿಯೇ ಶಠಬುದ್ಧಿಯಿರುತ್ತದೆ. ಕಪಿಯ ರೂಪದಲ್ಲಿಯೇ ಹೋದರೆ ಕಪಿಗಳಿಗೆ ಶಠಬುದ್ಧಿಯಿರುವುದೆಂಬುದಾಗಿ ಶ್ರೀರಾಮನು ಮಾತನಾಡದೆಯೇ ಇರಬಹುದು. ಆದುದರಿಂದ ಅಶಠಬುದ್ಧಿತಯಾ = ವಾನರತ್ವಸೂಚಿತಶಠಬುದ್ಧಿತ್ವಾಭಾವೇ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಶ್ಲೋಂದಾದ ಈ ಋಷ್ಯಮೂಕಪರ್ವತವು ನಿಮ್ಮ ದಿವ್ಯಪ್ರಭೆಯಿಂದ ದೇದೀಪ್ಯಮಾನವಾಗಿ ಬೆಳಗುತ್ತಿದೆ. ದೇವಸದೃಶರಾಗಿರುವ ನೀವು ರಾಜ್ಯಾಡಳಿತವನ್ನು ನಿರ್ವಹಿಸಲು ಸಮರ್ಥರಾಗಿರುವಿರಿ. ಇಂತಹ ಅತುಲವಿಕ್ರಮರಾದ ನೀವು ಇಲ್ಲಿಗೆ ಹೇಗೆ ಬಂದಿರಿ ? ಏಕೆ ಬಂದಿರಿ ? ಕಮಲದ ದಳಗಳಂತೆ ವಿಶಾಲವಾದ ಕಣ್ಣುಗಳನ್ನು ಹೊಂದಿರುವಿರಿ. ಒಬ್ಬರಿಗೊಬ್ಬರು ಅನುರೂಪರಾಗಿರುವಿರಿ. ನಿಮ್ಮಿಬ್ಬರಲ್ಲಿ ಯಾವ ವ್ಯತ್ಯಾಸವೂ ಕಾಣುವುದಿಲ್ಲ. ದೇವಲೋಕದಿಂದಲೇ ಬಂದಿರುವಿರೋ ಎಂಬಂತೆ ಕಾಣುತ್ತಿರುವಿರಿ. ನೀವಿಬ್ಬರೂ ಇಲ್ಲಿಗೆ ಬಂದಿರುವುದನ್ನು ನೋಡಿದರೆ ಸೂರ್ಯ-ಚಂದ್ರರೇನಾದರೂ ನೆಲಕ್ಕಿಳಿದು ಬಂದಿರುವರೋ ಎಂಬಂತೆ ಭಾಸವಾಗುತ್ತಿದೆ. ನಿಮ್ಮ ಹೃದಯವು ವಿಶಾಲವಾಗಿದೆ. ದೇವರೂಪಿಗಳಾದ ಮನುಷ್ಯರಾಗಿರುವಿರಿ. ಸಿಂಹದ ಹೆಗಲಿನಂತಹ ಹೆಗಲುಗಳು ನಿಮಗಿವೆ. ನೀವು ಉತ್ಸಾಹಶಾಲಿಗಳಾಗಿರುವಿರಿ. ಮದಿಸಿದ ಹೋರಿಗಳಂತೆ ಕಾಣುತ್ತಿರುವಿರಿ. ಹೀಗಿರುವ ನೀವು ಯಾರೆಂಬುದನ್ನು ಹೇಳಿರಿ. ನಿಮ್ಮ ತೋಳುಗಳು ನೀಳವಾಗಿಯೂ ದುಂಡಾಗಿಯೂ ಇವೆ. ಪರಿಘಾಯುಧಕ್ಕೆ ಸಮಾನವಾಗಿವೆ. ಎಲ್ಲ ವಿಧವಾದ ಆಭರಣಗಳನ್ನು ತೊಡಲು ಯೋಗ್ಯವಾಗಿವೆ. ಆದರೂ ನೀವು ನಿಮ್ಮ ತೋಳುಗಳನ್ನು ಸಿಂಗರಿಸಿಕೊಂಡಿಲ್ಲ. ಸಾಗರಾರಣ್ಯಗಳಿಂದ ಕೂಡಿರುವ ವಿಂಧ್ಯ-ಮೇರುಗಳಿಂದ ಸುಭೂಷಿತವಾಗಿರುವ ಈ ಸಮಗ್ರಭೂಮಂಡಲವನ್ನೂ ಪರಿಪಾಲಿಸಲು ನೀವಿಬ್ಬರೂ ಸಮರ್ಥರಾಗಿರುವಿರೆಂದು ನಾನು ಭಾವಿಸುತ್ತೇನೆ. ನೀವು ಕೈಗಳಲ್ಲಿ ಹಿಡಿದಿರುವ ಧನುಸ್ಸುಗಳು ಚಿತ್ರಗಂಧದಿಂದ ಲೇಪಿತವಾಗಿವೆ. ಇವು ಸುವರ್ಣಭೂಷಿತವಾದ ಇಂದ್ರನ ವಜ್ರಾಯುಧದಂತೆಯೇ ಪ್ರಕಾಶಮಾನವಾಗಿ ಕಾಣುತ್ತಿವೆ. ನೀವು ಧರಿಸಿರುವ ಸುಂದರವಾದ ಬತ್ತಳಿಕೆಗಳಲ್ಲಿ ಶತ್ರುಗಳನ್ನು ನಿರ್ಮೂಲ

---

ನೋಪಲಕ್ಷಿತೋ ಮಾರುತಾತ್ಮಜೋ ಹನುಮಾನ್ ಕಪಿರೂಪಂ ಪರಿತ್ಯಜ್ಯ ಭಿಕ್ಷುರೂಪಂ ಭೇಜೇ–ಹನುಮಂತನು ವಾನರಸೂಚಕವಾದ ಶಠಭಾವವಿಲ್ಲದವನಾಗಿದ್ದನು. ಆದರೆ ಶಠ ಪದಕ್ಕೆ ಮಧ್ಯವರ್ತಿ ಎಂಬ ಅರ್ಥವೂ ಇದೆ. ಚತುರ, ಬುದ್ಧಿವಂತ, ನಿಪುಣ–ಎಂಬ ಅರ್ಥಗಳೂ ಇವೆ. ಶಠೋ ಮಧ್ಯಸ್ಥಪುರುಷೇ ಧೂರ್ತಧುಸ್ತೂರಯೋರಪಿ ಮಧ್ಯಸ್ಥ ಬುದ್ಧಿಯವನಾದುದರಿಂದ ಚತುರಬುದ್ಧಿಯವನಾದುದರಿಂದ ಎಂಬ ಅರ್ಥವನ್ನೇ ಹೇಳಬಹುದಾಗಿದೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಮಾಡುವ, ಸರ್ಪಗಳೋಪಾದಿಯಲ್ಲಿರುವ, ಅತಿಘೋರವಾಗಿರುವ, ಪ್ರಜ್ವಲಿಸುವ ನಿಶಿತವಾದ ಬಾಣಗಳು ತುಂಬಿವೆ. ನೀವು ಒರೆಯಲ್ಲಿಟ್ಟುಕೊಂಡಿರುವ ಕತ್ತಿಗಳು ಪೊರೆಯನ್ನು ಬಿಟ್ಟಿರುವ ಹಾವುಗಳಂತೆಯೇ ಪ್ರಕಾಶಿಸುತ್ತಿದ್ದು ಪುಟಕ್ಕೆ ಹಾಕಿದ ಚಿನ್ನದ ಹಿಡಿಗಳಿಂದ ಸುಭೂಷಿತವಾಗಿ ನೀಳವಾಗಿಯೂ ಅಗಲವಾಗಿಯೂ ಇವೆ. ಪುರುಷಶ್ರೇಷ್ಠರೇ! ನಾನು ಇಷ್ಟೆಲ್ಲಾ ಹೇಳುತ್ತಿದ್ದರೂ ನೀವು ಯಾವ ಮಾತನ್ನೂ ಆಡುತ್ತಲೇ ಇಲ್ಲವಲ್ಲಾ?

ಸುಗ್ರೀವನೆಂಬ ಹೆಸರಿನ ಧರ್ಮಾತ್ಮನಾದ ಒಬ್ಬ ವಾನರಶ್ರೇಷ್ಠನು ತನ್ನಣ್ಣನಿಂದ ವಂಚಿತನಾಗಿ ಅತಿದುಃಖದಿಂದ ಭೂಮಿಯಲ್ಲಿ ಅಲೆದಾಡುತ್ತಿದ್ದಾನೆ. ವಾನರಾಧಿಪತಿಯಾದ ಮಹಾತ್ಮನಾದ ಸುಗ್ರೀವನು ನನ್ನನ್ನು ಇಲ್ಲಿಗೆ ಕಳುಹಿಸಿದ್ದಾನೆ. ನಾನು ಹನುಮಂತನೆಂಬ ಹೆಸರಿನ ವಾನರನು. ಧರ್ಮಾತ್ಮನಾದ ಸುಗ್ರೀವನು ನಿಮ್ಮೊಡನೆ ಗೆಳೆತನವನ್ನು ಬಯಸಿದ್ದಾನೆ. ವಾಯುಪುತ್ರನಾದ ನನ್ನನ್ನು ಅವನ ಅಮಾತ್ಯನೆಂದು ತಿಳಿಯಿರಿ. ಸುಗ್ರೀವನಿಗೆ ಪ್ರಿಯವನ್ನುಂಟುಮಾಡಬೇಕೆಂಬ ಆಶಯದಿಂದ ಇಚ್ಛೆಬಂದಲ್ಲಿಗೆ ಹೋಗಬಲ್ಲ ಇಷ್ಟಬಂದಂತೆ ರೂಪವನ್ನು ಬದಲಾಯಿಸಬಲ್ಲ ನಾನು ಭಿಕ್ಷುವೇಷವನ್ನು ಧರಿಸಿ ಋಷ್ಯಮೂಕಪರ್ವತದಿಂದ ಇಲ್ಲಿಗೆ ಬಂದಿರುವೆನು."

ಯಾರೊಡನೆ ಹೇಗೆ ಮಾತನಾಡಬೇಕೆಂಬುದನ್ನು ತಿಳಿದಿದ್ದ, ಮಾತನಾಡುವುದರಲ್ಲಿ ಕುಶಲನಾಗಿದ್ದ ಹನುಮಂತನು ರಾಮ-ಲಕ್ಷ್ಮಣರಿಗೆ ಹೀಗೆ ಹೇಳಿ ಮೌನವಾದನು.

ಶ್ರೀಮಂತನಾದ ಶ್ರೀರಾಮನು ಹನುಮಂತನು ಹೇಳಿದ ಮಾತುಗಳನ್ನು ಕೇಳಿ ನಗುಮೊಗದಿಂದ ಪಕ್ಕದಲ್ಲಿದ್ದ ಲಕ್ಷ್ಮಣನಿಗೆ ಹೇಳಿದನು:

"ಲಕ್ಷ್ಮಣ! ಇವನು ಕಪಿರಾಜನಾದ ಸುಗ್ರೀವನ ಸಚಿವನು. ಸುಗ್ರೀವನನ್ನು ಕಾಣುವ ಆಕಾಂಕ್ಷೆಯಿಂದಲೇ ನಾವಿಲ್ಲಿಗೆ ಬಂದಿರುವೆವು. ಅವನ ಸಚಿವನೇ ಈಗ ನಮ್ಮಲ್ಲಿಗೆ ಬಂದಿರುವನು.

ಲಕ್ಷ್ಮಣ! ವಾಕ್ಯಜ್ಞನಾದ, ಸುಗ್ರೀವನ ಸಚಿವನಾದ, ಶತ್ರುಹಂತಕ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ನಾದ, ನಮ್ಮ ವಿಷಯದಲ್ಲಿ ಸ್ನೇಹಭಾವದಿಂದಿರುವ ಈ ವಾನರನನ್ನು ಮಧುರ ವಾದ ವಾಕ್ಯಗಳಿಂದ ಮಾತನಾಡಿಸು.*

ನಾನೃಗ್ವೇದವಿನೀತಸ್ಯ ನಾಯಜುರ್ವೇದಧಾರಿಣಃ ।
ನಾಸಾಮವೇದವಿದುಷಃ ಶಕ್ಯಮೇವಂ ಪ್ರಭಾಷಿತುಮ್ ॥೨೮॥

ಸೌಮಿತ್ರೇ ! ಋಗ್ವೇದ. ಯಜುರ್ವೇದ ಮತ್ತು ಸಾಮವೇದ–ಈ ಮೂರು ವೇದಗಳನ್ನೂ ಅಧ್ಯಯನಮಾಡಿ ಶಿಕ್ಷಣಪಡೆಯದವನಿಗೆ ಹೀಗೆ ಮಾತನಾಡಲು ಸಾಧ್ಯವಿಲ್ಲ.[1] ಇವನು ವ್ಯಾಕರಣಶಾಸ್ತ್ರವನ್ನು ಸಂಪೂರ್ಣ ವಾಗಿ ಹಲವಾರು ಬಾರಿ ಅಧ್ಯಯನ ಮಾಡಿರಬೇಕು. ಏಕೆಂದರೆ : ಇಷ್ಟು ದೀರ್ಘವಾಗಿ ಮಾತನಾಡಿದ್ದರಲ್ಲಿ ಒಂದೇ ಒಂದು ಅಪಶಬ್ದವೂ ಇವನ ಬಾಯಿಂದ ಬರಲಿಲ್ಲ. ಮಾತನಾಡುವಾಗ ಇವನ ಮುಖದಲ್ಲಾಗಲೀ, ಕಣ್ಣು ಗಳಲ್ಲಾಗಲೀ, ಹಣೆಯಲ್ಲಾಗಲೀ, ಹುಬ್ಬುಗಳಲ್ಲಾಗಲೀ, ಮತ್ತಾವುದೇ

---

* ಇಲ್ಲಿ ಶ್ರೀರಾಮನು ರಾಜನೀತಿಗೆ ಅನುಗುಣವಾಗಿ ವ್ಯವಹರಿಸಿದ್ದಾನೆಂದು ಭಾವಿಸ ಬಹುದಾಗಿದೆ. ಈಗಲೂ ಸಹ ಈ ನೀತಿಯನ್ನೇ ಸಾಮಾನ್ಯವಾಗಿ ಅನುಸರಿಸಲಾಗುತ್ತಿದೆ. ವಿದೇಶಗಳಿಂದ ರಾಜರೋ ಅಥವಾ ರಾಷ್ಟ್ರಾಧ್ಯಕ್ಷರೋ ಬಂದರೆ ನಮ್ಮ ರಾಷ್ಟ್ರಪತಿಗಳೇ ಅವರನ್ನು ಸ್ವಾಗತಿಸುತ್ತಾರೆ. ವಿದೇಶಗಳ ಮುಖ್ಯಮಂತ್ರಿಗಳನ್ನು ನಮ್ಮ ದೇಶದ ಮುಖ್ಯಮಂತ್ರಿಗಳೇ ಸ್ವಾಗತಿಸುತ್ತಾರೆ. ವಿದೇಶಗಳಿಂದ ಬರುವವರ ಅಧಿಕಾರಕ್ಕೆ ಅನುಗುಣವಾದ ಅಧಿಕಾರವನ್ನು ಹೊಂದಿರುವವರೇ ಸ್ವಾಗತಿಸುವ ರೂಢಿಯು ಬೆಳೆದು ಬಂದಿದೆ. ಈ ರೂಢಿಯು ಬಹಳ ಹಿಂದಿನಿಂದಲೂ ಬೆಳೆದುಬಂದಿರುವುದೆಂದು ಈ ಪ್ರಕರಣದಿಂದ ಹೇಳಬಹುದಾಗಿದೆ. ಶ್ರೀರಾಮನು ರಾಜ. ಹನುಮಂತನು ಒಬ್ಬ ರಾಜನ ಸಚಿವ. ಸಚಿವನೊಡನೆ ಮತ್ತೊಬ್ಬ ಸಚಿವನೇ ಮಾತನಾಡುವುದು ಸೂಕ್ತವೆಂದು ಭಾವಿಸಿದ ಶ್ರೀರಾಮನು ಲಕ್ಷ್ಮಣನಿಗೆ ಹನುಮಂತನೊಡನೆ ಮಾತನಾಡಲು ಹೇಳುತ್ತಾನೆ. ವ್ಯಾಖ್ಯಾನಕಾರರೂ ಇದೇ ಅಭಿಪ್ರಾಯವನ್ನೇ ಪ್ರತಿಪಾದಿಸಿದ್ದಾರೆ. ಮನ್ತ್ರಿಣಾ ಸ್ವಾಮಿನೋ ವಚನಂ ನ ನೀತಿರಿತಿ ಸೌಮಿತ್ರಿಂ ನಿಯೋಜಯತಿ–ಮಂತ್ರಿಯೊಡನೆ ರಾಜ ನಾದವನು ಮಾತನಾಡುವುದು ರಾಜನೀತಿಯಲ್ಲವೆಂದು ಶ್ರೀರಾಮನು ಲಕ್ಷ್ಮಣನನ್ನು ಹನುಮಂತನೊಡನೆ ಮಾತನಾಡಲು ನಿಯೋಜಿಸುತ್ತಾನೆ.

1 ಈ ಶ್ಲೋಕದಲ್ಲಿ ವಿನೀತ, ಧಾರೀ ಮತ್ತು ವಿತ್–ಎಂಬ ಮೂರು ಶಬ್ದಗಳನ್ನು ಮೂರು ವೇದಗಳಿಗೂ ಪ್ರತ್ಯೇಕವಾಗಿ ಬಳಸಿದ್ದಾರೆ. ವಿನೀತಸ್ಯ ಎಂಬುದಕ್ಕೆ–ಶಿಕ್ಷಿತಸ್ಯ–ಶಿಕ್ಷಿತನಾದವನ ಎಂದು ವ್ಯಾಖ್ಯಾನಕಾರರು ಅರ್ಥಮಾಡಿರುತ್ತಾರೆ. ವಿನೀತ, ಧಾರೀ ಮತ್ತು ವಿತ್ ಎಂಬುದಕ್ಕೆ ಸಾಮಾನ್ಯವಾಗಿ ಸಾಂಗವಾಗಿ ಅಧ್ಯಯನಮಾಡಿದವನು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಅವಯವಗಳಲ್ಲಾಗಲೀ–ಯಾವ ವಿಧವಾದ ದೋಷವೂ ಕಂಡುಬರಲಿಲ್ಲ.* ಇವನು ಮಾತನಾಡುವಾಗ ವಿಷಯ ನಿರೂಪಣೆಯನ್ನು ಹೆಚ್ಚು ವಿಸ್ತಾರಮಾಡಿ ಹೇಳಲಿಲ್ಲ. ಸಮಯಕ್ಕೆ ಎಷ್ಟು ಹೇಳಬೇಕೋ ಅಷ್ಟುಮಾತ್ರವೇ ಹೇಳಿರುವೆನು. ಸಂಶಯಕ್ಕೆಡೆಕೊಡುವ ಯಾವ ಮಾತನ್ನೂ ಹೇಳಿಲ್ಲ. ಸ್ಪಷ್ಟವಾದ ಅಭಿಪ್ರಾಯದಿಂದ ಕೂಡಿರುವ ಮಾತನ್ನೇ ಆಡಿದ್ದಾನೆ. ಮಾತನ್ನು ವಿಳಂಬವಾಗಿಯೇ ಆಗಲೀ–ಅವಸರವಾಗಿಯೇ ಆಗಲೀ ಆಡಲಿಲ್ಲ. ಹೃದಯದಿಂದ ಹೊರಟು ಕಂಠದಿಂದ ಹೊರಬಿದ್ದ ಇವನ ಮಾತು ಮಧ್ಯಸ್ವರದಲ್ಲಿದ್ದಿತು. ವ್ಯಾಕರಣದಿಂದ ಸಂಸ್ಕೃತವಾದ ಶಬ್ದಗಳಿಂದಲೂ – ಯಥಾನುಕ್ರಮವಾದ ವಾಕ್ಯಗಳಿಂದಲೂ ಕೂಡಿರುವ ಮಾತುಗಳನ್ನೇ ಆಡಿದ್ದಾನೆ. ಕೇಳುವವರ ಮನಸ್ಸಿಗೆ ಹರ್ಷವನ್ನುಂಟುಮಾಡುವ ಶುಭಕರವಾದ ಮಾತುಗಳನ್ನೇ ಆಡಿದ್ದಾನೆ.

**ಅನಯಾ ಚಿತ್ರಯಾ ವಾಚಾ ತ್ರಿಸ್ಥಾನವ್ಯಞ್ಜನಸ್ಥಯಾ ।**
**ಕಸ್ಯ ನಾರಾಧ್ಯತೇ ಚಿತ್ತಮುದ್ಯತಾಸೇರರೇರಪಿ ॥೩೨॥**

ಹೃದಯ, ಕಂಠ ಮತ್ತು ಶಿರಸ್ಸುಗಳೆಂಬ ಮೂರು ಸ್ಥಾನಗಳಿಂದ ಹೊರಬರುವ ಇಂತಹ ವಿಚಿತ್ರವಾದ ಮಾತುಗಳಿಂದ ಯಾವನ ಮನಸ್ಸು

---

ಎಂದು ಅರ್ಥಮಾಡಬಹುದಾಗಿದೆ. ನಾಲ್ಕನೆಯ ವೇದವಾದ ಅಥರ್ವಣವೇದದ ಅಧ್ಯಯನಕ್ಕೆ ನಿಯಮಾದಿಗಳಿಲ್ಲವಾದುದರಿಂದ ಅದನ್ನಿಲ್ಲಿ ಹೇಳಿಲ್ಲವೆಂದು ವ್ಯಾಖ್ಯಾನಕಾರರು ಹೇಳಿದ್ದಾರೆ. ಒಬ್ಬ ವ್ಯಾಖ್ಯಾನಕಾರರು ಮೂರು ವೇದಗಳ ಅಧ್ಯಯನದಲ್ಲಿರುವ ಕಷ್ಟವನ್ನು ನಿರೂಪಿಸುತ್ತಾ ಹೀಗೆ ಹೇಳಿದ್ದಾರೆ. " ಋಗ್ವೇದದಲ್ಲಿ ಪ್ರತಿವರ್ಗವೂ ಸ್ವರಭೂಯಿಷ್ಠವೇ ಆಗಿರುವುದರಿಂದ ಆ ವೇದವನ್ನು ಮನೋನಿಯಮದಿಂದಲೂ ಸಾವಧಾನದಿಂದಲೂ ಉಚ್ಚರಿಸಬೇಕು. ಅದುದರಿಂದ ಋಗ್ವೇದದ ವಿಷಯದಲ್ಲಿ ವಿನೀತಶಬ್ದವನ್ನು ಪ್ರಯೋಗಿಸಲಾಗಿದೆ. ಯಜುರ್ವೇದದಲ್ಲಿ ಪ್ರತಿಯೊಂದು ಅನುವಾಕವನ್ನೂ ಇತರ ಅನುವಾಕಗಳಿಗೆ ಸಾಂಕರ್ಯವುಂಟಾಗದಂತೆ ಉಚ್ಚರಿಸುವುದನ್ನು ತಿಳಿಯಬೇಕಾದುದರಿಂದ ಧಾರಣಪಟುತ್ವವು ಅತ್ಯಾವಶ್ಯಕ. ಆದುದರಿಂದ ಯಜುರ್ವೇದದ ವಿಷಯ

---

* ಮಾತನಾಡುವಾಗ ಕೆಲವರು ಕೃತಕವಾಗಿ ನಗುತ್ತಾ ಮಾತನಾಡುತ್ತಾರೆ. ಮತ್ತೆ ಕೆಲವರು ಹುಬ್ಬುಗಳನ್ನು ಹಾರಿಸುತ್ತಿರುತ್ತಾರೆ. ರೆಪ್ಪೆಗಳನ್ನು ಅಸ್ವಾಭಾವಿಕವಾಗಿ ಮಿಟುಕಿಸುತ್ತಿರುತ್ತಾರೆ. ಕೈಗಳನ್ನು ಅಳ್ಳಾಡಿಸುತ್ತಿರುತ್ತಾರೆ. ಕಾಲಿನಿಂದ ನೆಲವನ್ನು


CC-0. Bhagavad Ramanuja National Research Institute, Melukote Collection.

 Funding: Tattva Heritage Foundation,Kolkata. Digitization: eGangotri.

ತಾನೇ ಪ್ರಸನ್ನವಾಗುವುದಿಲ್ಲ? ಕೊಲ್ಲಲು ಕತ್ತಿಯನ್ನೇ ಮೇಲೆತ್ತಿರುವ ಶತ್ರುವೂ ಇಂತಹ ಸೊಗಸಾದ ಮಾತುಗಳನ್ನು ಕೇಳಿದೊಡನೆಯೇ ಪ್ರಸನ್ನನಾಗಿ ಬಿಡುವನು.*

ಇಂತಹ ದೂತನು ಯಾವ ರಾಜನಿಗೆ ಇರುವುದಿಲ್ಲವೋ – ಅಂತಹವನ ಕಾರ್ಯಗಳಾದರೂ ಹೇಗೆ ತಾನೇ ಸಿದ್ಧಿಸುವುವು? ಇಂತಹ ಮಹಾಗುಣ ಸಂಪನ್ನರಾದ ಕಾರ್ಯಸಾಧಕರಾದ ದೂತರು ಯಾವ ರಾಜನಿಗೆ ಇರುವರೋ– ಅಂತಹ ರಾಜನ ಮನೋರಥಗಳೆಲ್ಲವೂ ಆ ದೂತನಾಡುವ ಮಾತುಗಳಿಂದಲೇ ಪೂರ್ಣವಾಗುತ್ತವೆ."

ಶ್ರೀರಾಮನು ಹೀಗೆ ಹೇಳಲು ವಾಕ್ಯಜ್ಞನಾದ ಲಕ್ಷ್ಮಣನು ವಾಕ್ಯಕೋವಿದನಾದ, ಸುಗ್ರೀವನ ಸಚಿವನಾದ, ವಾಯುಪುತ್ರನಾದ ಹನುಮಂತನಿಗೆ ಹೇಳಿದನು :

"ವಿದ್ವಾಂಸನೇ! ಮಹಾತ್ಮನಾದ ಸುಗ್ರೀವನ ಗುಣಗಳು ನಮಗೆ

---

ದಲ್ಲಿ ಧಾರಣಶಬ್ದವನ್ನು ಪ್ರಯೋಗಿಸಿದ್ದಾರೆ. ಸಾಮವೇದವು 'ಊಹ'–'ರಹಸ್ಯ'ಗಳಿಂದ ಪರಿಪೂರ್ಣವಾಗಿ ಗಾನರೂಪವಾಗಿರುವುದರಿಂದಲೂ–ಅವುಗಳನ್ನು ತಿಳಿಯುವುದು ಸುಲಭಸಾಧ್ಯವಲ್ಲದುದರಿಂದಲೂ ಸಾಮವೇದದ ವಿಷಯದಲ್ಲಿ ಜ್ಞಾನಾರ್ಥಕವಾದ ವಿದ–ಧಾತುವನ್ನು ಪ್ರಯೋಗಿಸಿದ್ದಾರೆ.

---

ಕೆರೆಯುತ್ತಿರುತ್ತಾರೆ. ಹೀಗೆ ಅನೇಕವಿಧವಾದ ಅಂಗಚೇಷ್ಟೆಗಳನ್ನು ಮಾಡುತ್ತಿರುತ್ತಾರೆ. ಸರಳವಾಗಿ, ಸ್ನೇಹಪೂರ್ವಕವಾಗಿ ಮಾತನಾಡುವಾಗ ಈ ವಿಧವಾದ ಅಂಗಚೇಷ್ಟೆಗಳನ್ನು ಮಾಡಕೂಡದೆಂದು ಹೇಳುತ್ತಾರೆ. ಶಾಸ್ತ್ರದಲ್ಲಿ ಈ ಆರು ಮಂದಿಗಳೂ ಪಾಠಕಾಧಮರೆಂದು ಪರಿಗಣಿಸಲ್ಪಟ್ಟಿದ್ದಾರೆ. ಗೀತೀ ಶೀಘ್ರೀ ಶಿರಃಕಮ್ಪೀ ತಥಾ ಲಿಖಿತಪಾಠಕಃ । ಅನರ್ಥಜ್ಞೋಽಲ್ಪಕಣ್ಠಶ್ಚ ಷಡೇತೇ ಪಾಠಕಾಧಮಾಃ ॥ ರಾಗವಾಗಿ ಹೇಳುವವನು; ಅವಸರದಿಂದ ಹೇಳುವವನು; ತಲೆದೂಗುತ್ತಾ ಹೇಳುವವನು;

---

* ತ್ರಿಸ್ಥಾನವ್ಯಞ್ಜನಸ್ಥಯಾ = ಮೂರು ಸ್ಥಾನಗಳಿಂದ ಅಭಿವ್ಯಕ್ತವಾಗುವ; ಮೂರು ಸ್ಥಾನಗಳು ಯಾವುವೆಂದು ಹೇಳಿಲ್ಲ. ಹಿಂದೆ ೩೦ನೆಯ ಶ್ಲೋಕದಲ್ಲಿ ಉರಃಸ್ಥಂ ಕಣ್ಠಗಂ ವಾಕ್ಯಂ ಎಂದು ಹೇಳಿರುವುದರಿಂದ ಹೃದಯ-ಕಂಠಗಳು ವಾಕ್ಯದ ಸ್ಥಾನಗಳೆಂಬುದು ಸ್ಪಷ್ಟವಾಗಿದೆ. ವ್ಯಾಖ್ಯಾನಕಾರರು ಸಾಮಾನ್ಯವಾಗಿ ಮೂರನೆಯ ಸ್ಥಾನವು ಶಿರಸ್ಸೆಂದು ಹೇಳಿರುತ್ತಾರೆ. ಇದಕ್ಕೆ ಆಧಾರಭೂತವಾಗಿ ಇವರು ಉದಾತ್ತ-ಅನುದಾತ್ತ, ಸ್ವರಿತ–ಈ

CC-0. Bhagavad Ramanuja National Research Institute, Melukote Collection.

ಈಗಾಗಲೇ ತಿಳಿದಿವೆ. ಪ್ಲವಗಶ್ರೇಷ್ಠನಾದ ಅವನನ್ನೇ ಹುಡುಕಿಕೊಂಡು ಬರುತ್ತಿದ್ದೇವೆ. ಸಾಧುಶಿರೋಮಣಿಯೇ ! ನೀನು ಸುಗ್ರೀವನ ಅಜ್ಞಾನುಸಾರವಾಗಿ ಇಲ್ಲಿಗೆ ಬಂದು ಪರಸ್ಪರಮೈತ್ರಿಯ ವಿಷಯವಾಗಿ ಯಾವ ಮಾತನ್ನಾಡಿದೆಯೋ–ಆ ಮಾತನ್ನು ನಾವು ಅಂಗೀಕರಿಸಿದ್ದೇವೆ. ನೀನು ಹೇಳಿದಂತೆಯೇ ನಾವು ಮಾಡುತ್ತೇವೆ."

ಲಕ್ಷ್ಮಣನ ಅಂಗೀಕಾರಸೂಚಕವಾದ ನೈಪುಣ್ಯದ ಮಾತನ್ನು ಕೇಳಿ ಹನುಮಂತನಿಗೆ ಆನಂದವಾಯಿತು. ಸುಗ್ರೀವನ ವಿಜಯದ ಸಿದ್ಧಿಯಲ್ಲಿ ಮನಸ್ಸನ್ನು ಕೇಂದ್ರೀಕರಿಸಿ ರಾಮ-ಸುಗ್ರೀವರ ನಡುವೆ ಮೈತ್ರಿಯನ್ನು ಬೆಳೆಸಲು ಇಚ್ಛಿಸಿದನು.

೩ನೆಯ ಸರ್ಗವು ಮುಗಿಯಿತು.

---

ಬರೆದುದನ್ನು ಓದುವವನು ; ಅರ್ಥವನ್ನು ತಿಳಿಯದೇ ಹೇಳುವವನು ; ಕಿರುದನಿಯುಳ್ಳವನು–ಈ ಆರು ಮಂದಿಗಳೂ ಪಾಠಕಾಧಮರೆಂದು ಪರಿಗಣಿತರಾಗಿದ್ದಾರೆ. ನ ಶಿರಃ ಕಮ್ಪಯೇದ್ಗಾತ್ರಂ ಭ್ರುವೌ ಚಾಕ್ಷಿಣೀ ತಥಾ| ತೈಲಪೂರ್ಣಮಿವಾತ್ಮಾನಂ ತತ್ತದ್ವರ್ಣೇ ಪ್ರಯೋಜಯೇತ್ ॥ ತಲೆಯನ್ನೂ, ಶರೀರವನ್ನೂ, ಹುಬ್ಬುಗಳನ್ನೂ, ಕಣ್ಣುಗಳನ್ನೂ ಅಳ್ಳಾಡಿಸಬಾರದು. ತಲೆಯ ಮೇಲೆ ತೈಲಪೂರ್ಣವಾದ ಗಡಿಗೆಯಿದೆಯೆಂಬ ಭಾವನೆಯಿಂದ ಮನಸ್ಸನ್ನು ಆಯಾ ವರ್ಣದಲ್ಲಿ ಯೋಜಿಸಿ ಸ್ಪಷ್ಟವಾಗಿ ಉಚ್ಚರಿಸಬೇಕು.

---

ಮೂರರ ಸ್ಥಾನಗಳೇ ತ್ರಿಸ್ಥಾನವೆಂದೂ ಹೇಳಿದ್ದಾರೆ. ಅನುದಾತ್ತೋ ಹೃದಿ ಜ್ಞೇಯೋ ಮೂರ್ಧ್ನ್ಯುದಾತ್ತ ಉದಾಹೃತಃ | ಸ್ವರಿತಃ ಕಣ್ಠಮೂಲೀಯಃ ಪಾರ್ಶ್ವಸ್ಯೇ ಪ್ರಚಯಸ್ಯ ತು ॥ ಅನುದಾತ್ತವು ಹೃದಯದಲ್ಲಿಯೂ, ಉದಾತ್ತವು ತಲೆಯಲ್ಲಿಯೂ ಮತ್ತು ಸ್ವರಿತವು ಕಂಠದ ಮೂಲದಲ್ಲಿಯೂ ಇದೆಯೆಂದು ತಿಳಿಯಬೇಕು. ಆದರೆ ಈ ಸಂದರ್ಭದಲ್ಲಿ ಉದಾತ್ತಾನುದಾತ್ತಸ್ವರಿತಸ್ವರಗಳ ಪ್ರಕರಣವಿಲ್ಲದೇ ಇರುವುದರಿಂದ ಹೃದಯ-ಕಂಠ-ಮುಖಗಳ ಮೂಲಕವಾಗಿ ಅಭಿವ್ಯಕ್ತವಾದ ವಾಣಿ–ಎಂದು ಅರ್ಥಮಾಡಿದರೂ ಸಮಂಜಸವಾಗಿ ಕಾಣುತ್ತದೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


**ತಾವು ಕಾಡಿಗೆ ಬಂದುದರ ಕಾರಣವನ್ನೂ ಮತ್ತು ಅರಣ್ಯದಲ್ಲಿ ಸೀತೆಯು ಅಪಹೃತಳಾದುದನ್ನೂ ಲಕ್ಷ್ಮಣನು ಹನುಮಂತನಿಗೆ ಹೇಳಿದುದು: ಸೀತೆಯನ್ನು ಹುಡುಕಲು ಸುಗ್ರೀವನ ಸಹಕಾರವನ್ನು ಅಪೇಕ್ಷಿಸಿದುದು: ಹನುಮಂತನು ಸೀತಾನ್ವೇಷಣೆಯ ವಿಷಯದಲ್ಲಿ ರಾಮ-ಲಕ್ಷ್ಮಣರಿಗೆ ಆಶ್ವಾಸನೆಯನ್ನಿತ್ತು ಅವರನ್ನು ತನ್ನ ಜೊತೆಯಲ್ಲಿ ಕರೆದುಕೊಂಡು ಹೊರಟುದು**

ತತಃ ಪ್ರಹೃಷ್ಟೋ ಹನುಮಾನ್ಕೃತ್ಯವಾನಿತಿ ತದ್ವಚಃ ।
ಶ್ರುತ್ವಾ ಮಧುರಸಂಭಾಷಂ ಸುಗ್ರೀವಂ ಮನಸಾ ಗತಃ ॥೧॥

'ತಮೇವ ಚಾವಾಂ ಮಾರ್ಗಾವಃ = ಸುಗ್ರೀವನನ್ನೇ ನಾವೂ ಹುಡುಕುತ್ತಿದ್ದೇವೆ'-ಎಂಬ ಲಕ್ಷ್ಮಣನ ಆ ಮಾತನ್ನು ಕೇಳಿ ಸುಗ್ರೀವನ ವಿಷಯದಲ್ಲಿ ಅವರು ತೋರಿದ ಮಧುರಭಾವವನ್ನು ಗಮನಿಸಿ, ರಾಮನಿಗೂ ಸುಗ್ರೀವನಿಂದ ಆಗಲೇಬೇಕಾದ ಕೆಲಸವಿರುವುದೆಂಬುದನ್ನು ಮನಗಂಡು ಪ್ರಹೃಷ್ಟನಾದ ಹನುಮಂತನು ಸುಗ್ರೀವನನ್ನು ಮನಸ್ಸಿನಲ್ಲಿಯೇ ಸ್ಮರಿಸಿದನು.

"ಈ ಸಮಯದಲ್ಲಿ ಮಹಾತ್ಮನಾದ ಸುಗ್ರೀವನಿಗೆ ರಾಜ್ಯಪ್ರಾಪ್ತಿಯು ಆಗಿಯೇ ತೀರುತ್ತದೆ. ಮಹಾನುಭಾವರಾದ ಇವರು ಯಾವ ಪ್ರಯೋಜನವನ್ನಾಶಿಸಿ ಬಂದಿರುವರೋ–ಆ ಕಾರ್ಯವು ಸುಗ್ರೀವನ ಸಹಾಯದಿಂದಲೇ ಸಿದ್ಧಿಸಬೇಕಾಗಿದೆ."–ಹೀಗೆ ಯೋಚಿಸಿ ಪರಮಹೃಷ್ಟನಾದ ಪ್ಲವಗಶ್ರೇಷ್ಠನಾದ ಹನುಮಂತನು ವಾಕ್ಯವಿಶಾರದನಾದ ಶ್ರೀರಾಮನಿಗೆ ಹೇಳಿದನು: *

"ಮಹಾನುಭಾವನೇ ! ಪಂಪಾತೀರದ ಕಾಡುಗಳಿಂದ ಸಮಲಂಕೃತ

---

* ಈ ಶ್ಲೋಕದಲ್ಲಿ ಬರುವ 'ಪ್ಲವಗೋತ್ತಮಃ' ಎಂಬ ಪದದಲ್ಲಿರುವ 'ಗ' ಕಾರವು ಗಾಯತ್ರೀಮಹಾಮಂತ್ರದ ಹತ್ತನೆಯ ಅಕ್ಷರವೆಂದೂ ಇಲ್ಲಿಗೆ ಒಂಬತ್ತು ಸಾವಿರ ಶ್ಲೋಕಗಳು ಮುಗಿದುವೆಂದೂ ಒಬ್ಬ ವ್ಯಾಖ್ಯಾನಕಾರರು ಹೇಳಿದ್ದಾರೆ. ಆದರೆ ಗಾಯತ್ರೀರಾಮಾಯಣಾನುಸಾರವಾಗಿ ಅರಣ್ಯಕಾಂಡದ ೭೩ನೇ ಸರ್ಗದಲ್ಲಿರುವ 'ಗಚ್ಛ ಶೀಘ್ರಮಿತೋ ರಾಮ' ಎಂಬ ಶ್ಲೋಕಕ್ಕೇ ಒಂಬತ್ತು ಸಾವಿರ ಶ್ಲೋಕಗಳು ಮುಗಿದಿವೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ವಾಗಿರುವ, ನಾನಾವಿಧವಾದ ವಿಷಜಂತುಗಳಿಂದಲೂ ಮತ್ತು ಮೃಗಗಳಿಂದಲೂ ನಿಬಿಡವಾಗಿರುವ, ದುರ್ಗಮವಾದ ಮತ್ತು ಘೋರವಾದ ಈ ಅರಣ್ಯಕ್ಕೆ ತಮ್ಮ ನೊಡನೆ ಬಂದಿರುವ ಕಾರಣವೇನು ? "

ಹನುಮಂತನ ಆ ಮಾತನ್ನು ಕೇಳಿ ಲಕ್ಷ್ಮಣನು ಅಣ್ಣನಿಂದ ಪ್ರೇರಿತನಾಗಿ ಮಹಾತ್ಮನಾದ ಶ್ರೀರಾಮನ ವಿಷಯವಾಗಿ ಹೇಳತೊಡಗಿದನು :

" ಕಪಿವೀರನೇ ! ಮಹಾತೇಜಸ್ವಿಯೂ, ಧರ್ಮವತ್ಸಲನೂ ಆಗಿದ್ದ ದಶರಥನೆಂಬ ರಾಜನಿದ್ದನು. ಕ್ಷತ್ರಿಯಧರ್ಮದ ಅನುಸಾರವಾಗಿ ನಾಲ್ಕು ವರ್ಣಗಳವರನ್ನೂ ಧರ್ಮದಿಂದ ಪರಿಪಾಲಿಸುತ್ತಿದ್ದನು. ಧರ್ಮಾತ್ಮನಾದ ದಶರಥನನ್ನು ದ್ವೇಷಿಸುವವರು ಯಾರೂ ಇರಲಿಲ್ಲ. ಅವನೂ ಕೂಡ ಯಾರನ್ನೂ ದ್ವೇಷಿಸುತ್ತಿರಲಿಲ್ಲ. ಎಲ್ಲ ಪ್ರಾಣಿಗಳ ವಿಷಯದಲ್ಲಿಯೂ ಮತ್ತೊಬ್ಬ ಪಿತಾಮಹನಂತೆಯೇ ಇದ್ದನು. ಅವನು ಯಥೇಚ್ಛವಾದ ದಕ್ಷಿಣೆಗಳಿಂದ ಸಾಧ್ಯವಾಗುವ ಅಗ್ನಿಷ್ಟೋಮವೇ ಮುಂತಾದ ಯಜ್ಞಗಳನ್ನು ಮಾಡಿ ದೇವತೆಗಳನ್ನು ತೃಪ್ತಿಗೊಳಿಸಿದ್ದನು.

ಜನರಲ್ಲಿ ರಾಮನೆಂಬ ಹೆಸರಿನಿಂದ ವಿಖ್ಯಾತನಾಗಿರುವ ಇವನು ಮಹಾತ್ಮನಾದ ದಶರಥನ ಹಿರಿಯ ಮಗನು. ಇವನು ಎಲ್ಲ ಪ್ರಾಣಿಗಳಿಗೂ ಆಶ್ರಯಭೂತನಾಗಿರುವನು. ತಂದೆಯ ಆಜ್ಞಾಪರಿಪಾಲಕನು. ಮಹಾವೀರನು. ದಶರಥನ ಮಕ್ಕಳಲ್ಲಿಯೇ ಇವನು ಅತ್ಯಂತಗುಣಶಾಲಿಯು. ರಾಜಲಕ್ಷಣಗಳಿಂದ ಸಂಪನ್ನನಾಗಿರುವ ಇವನು ಯೌವರಾಜ್ಯಪದವಿಯಲ್ಲಿ ಅಭಿಷಿಕ್ತನಾಗುವುದರಲ್ಲಿದ್ದನು. ಆದರೆ ಒಂದು ಅನಿವಾರ್ಯವಾದ ಕಾರಣದಿಂದ ರಾಜ್ಯಭ್ರಷ್ಟನಾಗಿ ಅರಣ್ಯದಲ್ಲಿ ವಾಸಮಾಡಲು ನನ್ನೊಡನೆ ಇಲ್ಲಿಗೆ ಬಂದಿರುವನು. ಸಾಯಂಕಾಲದ ಸಮಯದಲ್ಲಿ ಪ್ರಭಾದೇವಿಯು ಮಹಾತೇಜಸ್ವಿಯಾದ ಸೂರ್ಯನನ್ನು ಅನುಸರಿಸಿ ಹೋಗುವಂತೆ–ಇವನನ್ನನುಸರಿಸಿ ಇವನ ಭಾರ್ಯೆಯಾದ ಸೀತೆಯೂ ಅರಣ್ಯಕ್ಕೆ ಬಂದಳು.

ನಾನು ಇವನ ತಮ್ಮ. ಲಕ್ಷ್ಮಣನೆಂದು ನನ್ನ ಹೆಸರು. ಇವನಲ್ಲಿರುವ ಅನಂತವಾದ ಸದ್ಗುಣಗಳಿಂದ ನಾನು ಇವನಿಗೆ ದಾಸನಾಗಿದ್ದೇನೆ. ಇವನು ಅಪಾರಗುಣಸಂಪನ್ನನು. ಅತ್ಯಲ್ಪವಾದ ಉಪಕಾರವನ್ನೂ ಬಾರಿ-ಬಾರಿಗೂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಸ್ಮರಿಸುವವನು. ಅನೇಕ ವಿಷಯಗಳನ್ನು ತಿಳಿದಿರುವವನು. ಸುಖಾರ್ಹನು. ಮಹೈಶ್ವರ್ಯಕ್ಕೆ ಒಡೆಯನಾಗಲು ಯೋಗ್ಯನಾದವನು. ಸರ್ವಪ್ರಾಣಿಗಳ ಹಿತವನ್ನೇ ಬಯಸತಕ್ಕವನು. ಈಗ ಮಾತ್ರ ಐಶ್ವರ್ಯಹೀನನಾಗಿ ಅರಣ್ಯದ ಆಶ್ರಯವನ್ನು ಪಡೆದಿರುತ್ತಾನೆ. ಇಂತಹ ಸಕಲಗುಣಸಂಪನ್ನನಾದ ಈ ನಮ್ಮ ಅಣ್ಣನಿಗೆ ನಾನು ದಾಸನಾಗಿದ್ದೇನೆ.

ನಾವಿಬ್ಬರೂ ಆಶ್ರಮದಲ್ಲಿಲ್ಲದಿದ್ದಾಗ ಕಾಮರೂಪಿಯಾದ ರಾಕ್ಷಸನೊಬ್ಬನು ಇವನ ಭಾರ್ಯೆಯಾದ ಸೀತೆಯನ್ನು ಅಪಹರಿಸಿಕೊಂಡು ಹೊರಟು ಹೋದನು. ಅವಳನ್ನು ಅಪಹರಿಸಿರುವ ರಾಕ್ಷಸನಾರೆಂಬುದು ಇನ್ನೂ ನಮಗೆ ಖಚಿತವಾಗಿ ತಿಳಿದಿಲ್ಲ.

ದಿತಿಯ ಮಗನಾದ ದನುವೆಂಬುವನು ಶಾಪದಿಂದ ಘೋರರೂಪಿಯಾದ ರಾಕ್ಷಸನಾಗಿದ್ದನು. ಶಾಪದ ವಿಮೋಚನೆಯಾದನಂತರ ಆ ಕಬಂಧ ರಾಕ್ಷಸನೇ ನಮಗೆ ಸುಗ್ರೀವನ ವಿಷಯವನ್ನು ಹೇಳಿದನು. "ಸಮರ್ಥನಾದ ವಾನರರ ಅಧಿಪತಿಯಾದ ಸುಗ್ರೀವನು ನಿನ್ನ ಭಾರ್ಯೆಯನ್ನು ಅಪಹರಿಸಿರುವವನ ವಿಷಯವನ್ನು ತಿಳಿದಿರುತ್ತಾನೆ"-ಎಂದು ನಮ್ಮ ಅಣ್ಣನಿಗೆ ಹೇಳಿ ಆ ರಾಕ್ಷಸನು ವಿರಾಜಮಾನವಾಗಿ ಅನಾಯಾಸವಾಗಿ ಸ್ವರ್ಗಕ್ಕೆ ಹೋದನು.

ಹನುಮಂತ! ನೀನು ಕೇಳಿದ ಪ್ರಶ್ನೆಗೆ ನಾನು ಯಥಾವತ್ತಾಗಿ ಉತ್ತರಿಸಿರುವೆನು. ಈ ಸಮಯದಲ್ಲಿ ನಾವಿಬ್ಬರೂ ಸುಗ್ರೀವನನ್ನೇ ಆಶ್ರಯಿಸಲು ಬಂದಿರುತ್ತೇವೆ. ಈ ನಮ್ಮ ಅಣ್ಣನು ಹಿಂದೆ ಅಪಾರವಾದ ಸಂಪತ್ತನ್ನು ದಾನಮಾಡಿ ಅನುಪಮವಾದ ಯಶಸ್ಸನ್ನು ಗಳಿಸಿ ಲೋಕನಾಥನೇ ಆಗಿದ್ದನು. ಅಂತಹವನೀಗ ಸುಗ್ರೀವನನ್ನು ನಾಥನನ್ನಾಗಿ ಮಾಡಿಕೊಳ್ಳಲು ಬಯಸಿ ಬಂದಿದ್ದಾನೆ.

ಪಿತಾ ಯಸ್ಯ ಪುರಾ ಹ್ಯಾಸೀಚ್ಛರಣ್ಯೋ ಧರ್ಮವತ್ಸಲಃ ।
ತಸ್ಯ ಪುತ್ರಃ ಶರಣ್ಯಸ್ಯ ಸುಗ್ರೀವಂ ಶರಣಂ ಗತಃ ॥೧೯॥

ದಶರಥಮಹಾರಾಜನು ಸಕಲಲೋಕಶರಣ್ಯನೂ ಧರ್ಮವತ್ಸಲನೂ ಆಗಿದ್ದನು. ಅಂತಹ ಲೋಕಶರಣ್ಯನಾದ ದಶರಥನ ಹಿರಿಯ ಮಗನಾದ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಶ್ರೀರಾಮನಿಂದು ಸುಗ್ರೀವನನ್ನು ಶರಣ್ಯನನ್ನಾಗಿ ಹೊಂದಲು ಬಯಸಿ ಬಂದಿರುವನು.

ಸರ್ವಲೋಕಸ್ಯ ಧರ್ಮಾತ್ಮಾ ಶರಣ್ಯಃ ಶರಣಂ ಪುರಾ ।
ಗುರುರ್ಮೇ ರಾಘವಃ ಸೋಽಯಂ ಸುಗ್ರೀವಂ ಶರಣಂ ಗತಃ॥ ೨೦॥

ಧರ್ಮಾತ್ಮನಾದ ಯಾವ ಶ್ರೀರಾಮನು ಈ ಹಿಂದೆ ಸಕಲಲೋಕಶರಣ್ಯನಾಗಿದ್ದನೋ–ಎಲ್ಲರಿಗೂ ಆಶ್ರಯಭೂತನಾಗಿದ್ದನೋ–ನನ್ನ ಗುರುವಾದ ಈ ರಾಘವನೇ ಇಂದು ಸುಗ್ರೀವನನ್ನು ಆಶ್ರಯಿಸಲು ಬಂದಿರುವನು.

ಯಸ್ಯ ಪ್ರಸಾದೇ ಸತತಂ ಪ್ರಸೀದೇಯುರಿಮಾಃ ಪ್ರಜಾಃ ।
ಸ ರಾಮೋ ವಾನರೇನ್ದ್ರಸ್ಯ ಪ್ರಸಾದಮಭಿಕಾಂಕ್ಷತೇ ॥೨೧॥

ಯಾವನ ಪ್ರಸನ್ನತೆಯಿಂದ ಎಲ್ಲ ಪ್ರಜೆಗಳೂ ಸರ್ವದಾ ಪ್ರಸನ್ನಚಿತ್ತರಾಗಿರುತ್ತಿದ್ದರೋ–ಅಂತಹ ಶ್ರೀರಾಮನೀಗ ವಾನರೇಂದ್ರನಾದ ಸುಗ್ರೀವನ ಅನುಗ್ರಹವನ್ನು ಬಯಸಿ ಬಂದಿದ್ದಾನೆ.

ದಶರಥರಾಜನು ಪ್ರಪಂಚದಲ್ಲಿರುವ ಸರ್ವಗುಣಸಂಪನ್ನರಾದ ಎಲ್ಲ ರಾಜರನ್ನೂ ಸತತವಾಗಿ ಸಮ್ಮಾನಿಸುತ್ತಿದ್ದನು. ಅಂತಹ ಉದಾರಿಯಾದ ದಶರಥನ ಹಿರಿಯಮಗನೇ ಈ ಶ್ರೀರಾಮನು. ಮೂರು ಲೋಕಗಳಲ್ಲಿಯೂ ವಿಖ್ಯಾತನಾಗಿರುವ, ಮಹಾನುಭಾವನಾದ ಈತನಿಂದು ಸುಗ್ರೀವನಿಗೆ ಶರಣಾಗಿ ಬಂದಿರುತ್ತಾನೆ. ಇಂತಹ ಶ್ರೀರಾಮನಿಗೆ ಸುಗ್ರೀವನು ತನ್ನ ಸೇನಾಪತಿಗಳೊಡನೆ ಇವನಿಗೆ ಆಶ್ರಯವನ್ನು ನೀಡಬೇಕು."

ದೀನನಾಗಿ ಕಣ್ಣೀರಿಡುತ್ತಾ ಹೀಗೆ ಹೇಳಿದ ಲಕ್ಷ್ಮಣನಿಗೆ ಮಾತನಾಡುವುದರಲ್ಲಿ ಚತುರನಾದ ಹನುಮಂತನು ಹೇಳಿದನು :

ಈದೃಶಾ ಬುದ್ಧಿಸಂಪನ್ನಾ ಜಿತಕ್ರೋಧಾ ಜಿತೇನ್ದ್ರಿಯಾಃ ।
ದ್ರಷ್ಟವ್ಯಾ ವಾನರೇನ್ದ್ರೇಣ ದಿಷ್ಟ್ಯಾ ದರ್ಶನಮಾಗತಾಃ ॥೨೬॥

"ಬುದ್ಧಿಸಂಪನ್ನರಾದ, ಕ್ರೋಧವನ್ನು ಜಯಿಸಿರುವ ಇಂತಹ ಮಹಾಪುರುಷರನ್ನು ವಾನರೇಂದ್ರನಾದ ಸುಗ್ರೀವನು ಸಂದರ್ಶಿಸಲೇಬೇಕು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಹೀಗಿರುವಾಗ ಅಂತಹವರೇ ಅವನನ್ನು ನೋಡಲು ಬಂದಿರುವುದು ಸೌಭಾಗ್ಯವೇ ಸರಿ.

ಸುಗ್ರೀವನೂ ಈಗ ರಾಜ್ಯಭ್ರಷ್ಟನೇ ಆಗಿದ್ದಾನೆ. ಅಣ್ಣನಾದ ವಾಲಿಯೊಡನೆ ವೈರವನ್ನು ಕಟ್ಟಿಕೊಂಡಿರುವನು. ಅಣ್ಣನಿಂದ ವಂಚಿತನಾಗಿರುವ ಅವನೂ ಪತ್ನಿಯನ್ನು ಕಳೆದುಕೊಂಡಿದ್ದಾನೆ. ಅವನಣ್ಣನೇ ಸುಗ್ರೀವನ ಪತ್ನಿಯನ್ನು ಬಲಾತ್ಕಾರಪೂರ್ವಕವಾಗಿ ಅಪಹರಿಸಿದ್ದಾನೆ. ಅಣ್ಣನಿಗೆ ಭಯಗೊಂಡು ಈಗವನು ಅರಣ್ಯದಲ್ಲೇ ಇದ್ದಾನೆ. ಆದರೆ ಸೀತೆಯನ್ನು ಹುಡುಕಲು ನಿಮಗೆ ಸಹಾಯಮಾಡುವುದರಲ್ಲಿ ಯಾವ ಸಂಶಯವೂ ಇಲ್ಲ. ಸೀತೆಯನ್ನು ಹುಡುಕಲು ಸೂರ್ಯನ ಮಗನಾದ ಸುಗ್ರೀವನು ನಮ್ಮೊಡನೆ ಸೇರಿ ನಿಮಗೆ ಖಂಡಿತವಾಗಿಯೂ ಸಹಾಯಮಾಡುತ್ತಾನೆ."

ಹನುಮಂತನು ಮಧುರವಾದ ವಾಣಿಯಿಂದ ಲಕ್ಷ್ಮಣನಿಗೆ ಹೀಗೆ ಹೇಳಿ 'ಸಾಧು ಗಚ್ಛಾಮಃ ಸುಗ್ರೀವಂ–ಒಳ್ಳೆಯದು. ನಾವಿನ್ನು ಸುಗ್ರೀವನ ಬಳಿಗೆ ಹೋಗೋಣ'–ಎಂದು ರಾಮನಿಗೆ ವಿನೀತನಾಗಿ ಹೇಳಿದನು. ಹೀಗೆ ಹೇಳಿದ ಹನುಮಂತನನ್ನು ಮಹಾತ್ಮನಾದ ಲಕ್ಷ್ಮಣನು ಯಥೋಚಿತವಾಗಿ ಸನ್ಮಾನಿಸಿ ಶ್ರೀರಾಮನಿಗೆ ಹೇಳಿದನು :

ಕಪಿಃ ಕಥಯತೇ ಹೃಷ್ಟೋ ಯಥಾಯಂ ಮಾರುತಾತ್ಮಜಃ ।
ಕೃತ್ಯವಾನ್ಸೋಽಪಿ ಸಂಪ್ರಾಪ್ತಃ ಕೃತಕೃತ್ಯೋಽಸಿ ರಾಘವ ॥೩೧॥

"ರಾಘವ! ವಾಯುಪುತ್ರನಾದ ಹನುಮಂತನು ನಮ್ಮ ಸಮಾಗಮದಿಂದ ಪರಮಹೃಷ್ಟನಾಗಿ ಹೇಳುತ್ತಿರುವ ರೀತಿಯಿಂದ ನಮ್ಮಿಂದ ಸಹಾಯವನ್ನು ಅಪೇಕ್ಷಿಸುತ್ತಿರುವವನೇ ಈಗ ನಮಗೆ ಸಿಕ್ಕಿದ್ದಾನೆ. ಆದುದರಿಂದ ನೀನೂ ಕೃತಕೃತ್ಯನಾದೆ. ನಿನ್ನ ಕಾರ್ಯವು ಸಿದ್ಧಿಸಿತೆಂದು ಭಾವಿಸು.

ಪವನತನಯನು ಪ್ರಸನ್ನವಾದ ಮುಖಭಾವದಿಂದ ಕೂಡಿದ್ದಾನೆ. ನಮ್ಮ ಸಮಾಗಮದಿಂದ ಪರಮಸಂತುಷ್ಟನಾಗಿ ನಮ್ಮೊಡನೆ ಸ್ಪಷ್ಟವಾಗಿ ಮಾತನಾಡುತ್ತಿದ್ದಾನೆ. ಇವನು ನಮ್ಮೊಡನೆ ಸುಳ್ಳನ್ನು ಹೇಳುತ್ತಿಲ್ಲವೆಂದು ಭಾವಿಸಬಹುದಾಗಿದೆ. ಆದುದರಿಂದ ಹನುಮಂತನು ಪ್ರಾರ್ಥಿಸುತ್ತಿರುವಂತೆ ಇವನ ಜೊತೆಯಲ್ಲಿ ನಾವು ಸುಗ್ರೀವನ ಬಳಿಗೆ ಹೋಗಬಹುದಾಗಿದೆ."

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಲಕ್ಷ್ಮಣನ ಆ ಮಾತಿಗೆ ಶ್ರೀರಾಮನು ಸಮ್ಮತಿಸಿದನು. ಒಡನೆಯೇ ಮಹಾಪ್ರಾಜ್ಞನಾದ ವಾಯುಪುತ್ರನು ತಾತ್ಕಾಲಿಕವಾಗಿ ಹೊಂದಿದ್ದ ಬ್ರಹ್ಮಚಾರಿಯ ರೂಪವನ್ನು ಪರಿತ್ಯಜಿಸಿ ವಾನರರೂಪವನ್ನೇ ಧರಿಸಿ ವೀರರಾದ ಆ



ಇಬ್ಬರು ಸಹೋದರರನ್ನೂ ಬೆನ್ನಮೇಲೆ ಕುಳ್ಳಿರಿಸಿಕೊಂಡು ಕಪಿರಾಜನಾದ ಸುಗ್ರೀವನ ಬಳಿಗೆ ಹೊರಟನು. ಅಪಾರವಾದ ಯಶಸ್ಸನ್ನು ಗಳಿಸಿದ್ದ, ಅಮಿತವಿಕ್ರಮನಾದ, ಶುಭಮತಿಯಾದ ಹನುಮಂತನು ಕಾರ್ಯಸಿದ್ಧಿಯನ್ನು ಪಡೆದವನಂತೆಯೇ ಅತ್ಯಂತ ಪ್ರಹೃಷ್ಟನಾಗಿ ರಾಮ-ಲಕ್ಷ್ಮಣರೊಡನೆ ಋಶ್ಯಮೂಕಪರ್ವತಕ್ಕೆ ಹೋದನು.

ಳನೆಯ ಸರ್ಗವು ಮುಗಿಯಿತು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



## ಶ್ರೀರಾಮ-ಸುಗ್ರೀವರ ಮೈತ್ರಿ : ವಾಲಿಯನ್ನು ಸಂಹರಿಸುವುದಾಗಿ ಶ್ರೀರಾಮನ ಪ್ರತಿಜ್ಞೆ



ಋಶ್ಯಮೂಕಾತ್ತು ಹನುಮಾನ್ಗತ್ವಾ ತಂ ಮಲಯಂ ಗಿರಿಮ್ ।
ಆಚಚಕ್ಷೇ ತದಾ ವೀರೌ ಕಪಿರಾಜಾಯ ರಾಘವೌ ॥೧॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಹನುಮಂತನು ಋಶ್ಯಮೂಕಪರ್ವತದಲ್ಲಿ ರಾಮ-ಲಕ್ಷ್ಮಣರನ್ನು ಬಿಟ್ಟು ಆ ಪರ್ವತದ ಸಾಲಿನಲ್ಲಿಯೇ ಇದ್ದ ಮಲಯಪರ್ವತಕ್ಕೆ ಹೋಗಿ ರಾಜಕುಮಾರರು ಆಗಮಿಸಿರುವ ಸಮಾಚಾರವನ್ನು ಸುಗ್ರೀವನಿಗೆ ನಿವೇದಿಸಿದನು :

"ಮಹಾರಾಜ ! ನಾವು ಹಿಂದೆ ಪರ್ವತದ ಸಮೀಪದಲ್ಲಿ ನೋಡಿದ್ದ, ಸತ್ಯವಿಕ್ರಮನಾದ, ಮಹಾಪ್ರಾಜ್ಞನಾದ, ರಾಮನು ಲಕ್ಷ್ಮಣನೊಡನೆ ಆಗಮಿಸಿದ್ದಾನೆ. ಇಕ್ಷ್ವಾಕುವಂಶದಲ್ಲಿ ಹುಟ್ಟಿರುವ ಇವನು ದಶರಥನ ಮಗನು. ಸ್ವಧರ್ಮಾಚರಣೆಯಲ್ಲಿ ಪ್ರಸಿದ್ಧನಾದವನು. ತಂದೆಯ ನಿರ್ದೇಶನದಂತೆ ನಡೆಯತಕ್ಕವನು. ದಶರಥನಾದರೋ ರಾಜಸೂಯಾಶ್ವಮೇಧಗಳಿಂದ ಯಜ್ಞೇಶ್ವರನನ್ನು ತೃಪ್ತಿಗೊಳಿಸಿರತಕ್ಕವನು. ಆ ಮಹಾಯಜ್ಞಗಳಲ್ಲಿ ನೂರಾರು ಸಾವಿರಾರು ಗೋವುಗಳನ್ನು ಬ್ರಾಹ್ಮಣರಿಗೆ ದಕ್ಷಿಣಾರೂಪವಾಗಿ ಕೊಟ್ಟಿರತಕ್ಕವನು. ತಪಸ್ಸಿನಿಂದಲೂ* ಮತ್ತು ಸತ್ಯನಿಷ್ಠೆಯಿಂದಲೂ ದಶರಥನು ರಾಜ್ಯವನ್ನು ಪರಿಪಾಲಿಸುತ್ತಿದ್ದನು. ಸ್ತ್ರೀನಿಮಿತ್ತವಾಗಿ ಆವನ ಜ್ಯೇಷ್ಠಪುತ್ರನಾದ ರಾಮನೀಗ ಕಾಡಿಗೆ ಬಂದಿದ್ದಾನೆ. ಈ ಆರಣ್ಯದಲ್ಲಿ ನಿಯತವಾದ ವ್ರತಾನುಷ್ಠಾನಗಳನ್ನು ಮಾಡುತ್ತಾ ಕಾಲಕಳೆಯುತ್ತಿದ್ದ ಮಹಾತ್ಮನಾದ ಇವನ ಭಾರ್ಯೆಯನ್ನು ರಾವಣನು ಅಪಹರಿಸಿಕೊಂಡು ಹೋಗಿರುತ್ತಾನೆ. ಸೀತೆಯ ಅನ್ವೇಷಣೆಯಲ್ಲಿ ನಿನ್ನ ಸಹಾಯವನ್ನು ಬಯಸಿರುವ ಇವನು ನಿನ್ನನ್ನೇ ಆಶ್ರಯಿಸಿ ಬಂದಿರುತ್ತಾನೆ. ಸೋದರರಾದ ಆ ರಾಮ-ಲಕ್ಷ್ಮಣರು ನಿನ್ನೊಡನೆ ಗೆಳೆತನವನ್ನು ಬೆಳೆಸುವ ಆಶಯವುಳ್ಳವರಾಗಿದ್ದಾರೆ. ಪೂಜನೀಯತಮರಾಗಿರುವ ಆ ಇಬ್ಬರನ್ನೂ ನೀನು ಯಥೋಚಿತವಾಗಿ ಸತ್ಕರಿಸು."

ಹನುಮಂತನ ಮಾತನ್ನು ಕೇಳಿ ವಾನರರಾಜನಾದ ಸುಗ್ರೀವನು ಸಂತುಷ್ಟಾಂತರಂಗನಾಗಿ ರಾಮನ ಸಂಬಂಧವಾಗಿ ಮನಸ್ಸಿನಲ್ಲಿ ನೆಲೆಗೊಂಡಿದ್ದ ಘೋರವಾದ ಭಯವನ್ನು ಬಿಟ್ಟು ನಿಶ್ಚಿಂತನಾದನು. ಬಳಿಕ ಸುಗ್ರೀವನು

---

* ತಪಸಾ = ತಪಸ್ಸೆಂದರೆ ಸಾಮಾನ್ಯವಾಗಿ ಧ್ಯಾನ ಎಂದು ಅರ್ಥವಾಗುತ್ತದೆ. ದಶರಥನು ರಾಜ್ಯಪರಿಪಾಲನಾರೂಪವಾದ ತಪಸ್ಸನ್ನು ಆಚರಿಸುತ್ತಿದ್ದನೆಂಬ ಅಭಿಪ್ರಾಯ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.


ಅತಿಸುಂದರನಾದ ಮನುಷ್ಯನ ರೂಪವನ್ನು ಧರಿಸಿ ಶ್ರೀರಾಮನ ಬಳಿಗೆ ಹೋಗಿ ಪರಮಪ್ರೀತಿಯಿಂದ ಹೇಳಿದನು :

"ರಾಘವ ! ನೀನು ಧರ್ಮದ ವಿಷಯದಲ್ಲಿ ಅತ್ಯಂತವಿನೀತನಾಗಿ ನಡೆಯತಕ್ಕವನೆಂದೂ, ಮಹಾಪರಾಕ್ರಮಿಯೆಂದೂ, ಎಲ್ಲರ ವಿಷಯದಲ್ಲಿಯೂ ಪ್ರೀತ್ಯಾದರಗಳುಳ್ಳವನೆಂದೂ ವಾಯುಪುತ್ರನಾದ ಹನುಮಂತನು ನಿನ್ನ ಕಲ್ಯಾಣಗುಣಗಳನ್ನು ಯಥಾವತ್ತಾಗಿ ಹೇಳಿರುವನು. ಪ್ರಭುವೇ ! ವಾನರನಾದ ನನ್ನೊಡನೆ ನೀನು ಸೌಹಾರ್ದವನ್ನು ಅಪೇಕ್ಷಿಸಿರುವುದು ನನ್ನನ್ನು ಬಹಳವಾಗಿ ಸನ್ಮಾನಿಸಿದಂತಾಗಿದೆ. ಇದು ನನಗೆ ಅತ್ಯಂತ ಲಾಭಕರವೂ ಆಗಿದೆ.

ರೋಚತೇ ಯದಿ ವಾ ಸಖ್ಯಂ ಬಾಹುರೇಷ ಪ್ರಸಾರಿತಃ ।
ಗೃಹ್ಯತಾಂ ಪಾಣಿನಾ ಪಾಣಿರ್ಮರ್ಯಾದಾ ಬಧ್ಯತಾಂ ಧ್ರುವಾ ॥

ರಾಘವ ! ಇದೋ ನನ್ನ ತೋಳನ್ನು ಮುಂದಕ್ಕೆ ಚಾಚಿದ್ದೇನೆ. ನನ್ನೊಡನೆ ಗೆಳೆತನಬೆಳೆಸುವುದು ನಿನಗೆ ಇಷ್ಟವಾಗಿದ್ದರೆ ನಿನ್ನ ಕೈಯಿಂದ ಈ ನನ್ನ ಕೈಯನ್ನು ಹಿಡಿ. ನಮ್ಮಿಬ್ಬರ ಸ್ನೇಹಬಂಧನವು ಶಾಶ್ವತವಾಗಿ ಉಳಿಯಲಿ."

ಸುಗ್ರೀವನು ಹೇಳಿದ ಸೂಕ್ತಿರೂಪವಾದ ಆ ಮಾತನ್ನು ಕೇಳಿ ಆನಂದ ಭರಿತನಾದ ಶ್ರೀರಾಮನು ಸುಗ್ರೀವನ ಕೈಯನ್ನು ಹಿಡಿದುಕೊಂಡನು. ಸುಗ್ರೀವನೊಡನೆ ಸೌಹಾರ್ದವನ್ನು ಅಪೇಕ್ಷಿಸಿ, ವಾಲಿಯಿಂದ ಪೀಡಿತನಾಗಿದ್ದ ಅವನನ್ನು ಗಾಢವಾಗಿ ಆಲಿಂಗಿಸಿಕೊಂಡನು.

ಹಿಂದೆಯೇ ಹೇಳಿದಂತೆ ಬ್ರಹ್ಮಚಾರಿಯ ರೂಪವನ್ನು ಪರಿತ್ಯಜಿಸಿ ನಿಜಸ್ವರೂಪದಲ್ಲಿದ್ದ ಶತ್ರುಹಂತಕನಾದ ಹನುಮಂತನು ಎರಡು ಕಟ್ಟಿಗೆಗಳನ್ನು ಕಡೆದು ಅಗ್ನಿಯನ್ನು ಉಂಟುಮಾಡಿದನು. ಬಳಿಕ ಪ್ರಜ್ವಲಿಸುತ್ತಿದ್ದ ಅಗ್ನಿಯನ್ನು ಪುಷ್ಪಗಳಿಂದ ಪೂಜಿಸಿ ಸಂಸ್ಕೃತನಾದ ಯಜ್ಞೇಶ್ವರನನ್ನು ರಾಮ-ಸುಗ್ರೀವರ ಮಧ್ಯದಲ್ಲಿರಿಸಿದನು. ರಾಮ-ಸುಗ್ರೀವರು ಪ್ರಕಾಶಮಾನವಾಗಿ ಪ್ರಜ್ವಲಿಸುತ್ತಿದ್ದ ಅಗ್ನಿಯನ್ನು ಪ್ರದಕ್ಷಿಣೆಮಾಡಿದರು. ಅದರಿಂದ ಇಬ್ಬರೂ ಪರಸ್ಪರವಾಗಿ ಸ್ನೇಹಿತರಾದರು. ಸುಪ್ರೀತವಾದ ಮನಸ್ಸಿನಿಂದ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಕೂಡಿದ್ದ ರಾಮ-ಸುಗ್ರೀವರು ಒಬ್ಬರನ್ನೊಬ್ಬರು ದಿಟ್ಟಿಸಿ ನೋಡಿದರು. ಎಷ್ಟು ಹೊತ್ತು ನೋಡಿದರೂ ಇಬ್ಬರಿಗೂ ತೃಪ್ತಿಯೇ ಆಗಲಿಲ್ಲ. ಸುಗ್ರೀವನು ಅತ್ಯಂತ ಸಂತೋಷಗೊಂಡು ಶ್ರೀರಾಮನಿಗೆ ಹೇಳಿದನು :

ತ್ವಂ ವಯಸ್ಯೋಽಸಿ ಮೇ ಹೃದ್ಯೋ ಹ್ಯೇಕಂ ದುಃಖಂ ಸುಖಂ
ಚ ನೌ ॥೧೮॥

"ರಾಘವ ! ನೀನು ನನಗೆ ಅತ್ಯಂತಪ್ರಿಯನಾದ ಗೆಳೆಯನಾಗಿರುವೆ. ಇಬ್ಬರ ಸುಖ-ದುಃಖಗಳೂ ಒಂದೇ ಆಗಿವೆ. ನಿನ್ನ ದುಃಖವೇ ನನ್ನ ದುಃಖ; ನನ್ನ ದುಃಖವೇ ನಿನ್ನ ದುಃಖ; ನನ್ನ ಸುಖವೇ ನಿನ್ನ ಸುಖ; ನಿನ್ನ ಸುಖವೇ ನನ್ನ ಸುಖ—ಹೀಗೆ ಇಬ್ಬರೂ ಭಾವಿಸಿಕೊಳ್ಳೋಣ."

ಬಳಿಕ ಸುಗ್ರೀವನು ದಟ್ಟವಾದ ಎಲೆಗಳಿಂದ ಕೂಡಿದ್ದ ಹೂಗಳಿಂದ ತುಂಬಿದ್ದ ಸಾಲವೃಕ್ಷದ ರೆಂಬೆಯೊಂದನ್ನು ಮುರಿದು ಅದರ ಎಲೆಗಳನ್ನೂ ಹೂಗಳನ್ನೂ ನೆಲದ ಮೇಲೆ ಹರಡಿ ಶ್ರೀರಾಮನೊಡನೆ ಕುಳಿತುಕೊಂಡನು. ಅದನ್ನು ನೋಡಿ ಆನಂದಭರಿತನಾದ ಹನುಮಂತನು ಪುಷ್ಪಗಳಿಂದ ಸಮೃದ್ಧವಾಗಿದ್ದ ಗಂಧದ ಮರದ ರೆಂಬೆಯೊಂದನ್ನು ಮುರಿದು ಲಕ್ಷ್ಮಣನಿಗೆ ಕುಳಿತುಕೊಳ್ಳಲು ಕೊಟ್ಟನು. ಅನಂತರ ಹರ್ಷದಿಂದ ವ್ಯಾಕುಲಗೊಂಡ* ಕಣ್ಣುಗಳನ್ನು ಹೊಂದಿದ್ದ, ಶ್ರೀರಾಮನ ಸಖ್ಯದಿಂದ ಪ್ರಹೃಷ್ಟನಾದ ಸುಗ್ರೀವನು ಮಧುರವಾದ ಮತ್ತು ಪ್ರೀತಿಯುಕ್ತವಾದ ಈ ಮಾತುಗಳನ್ನು ಹೇಳಿದನು :

"ರಾಘವ ! ನಾನು ನಮ್ಮ ಅಣ್ಣನಾದ ವಾಲಿಯಿಂದ ಓಡಿಸಲ್ಪಟ್ಟು ಹೆಂಡತಿಯನ್ನೂ ಕಳೆದುಕೊಂಡು ಭಯಪೀಡಿತನಾಗಿ ಈ ಅರಣ್ಯದಲ್ಲಿ ತಿರುಗಾಡುತ್ತಿದ್ದೇನೆ. ಉದ್ವಿಗ್ನಚಿತ್ತನಾಗಿರುವ ನಾನು ಈ ದುರ್ಗವನ್ನು ಆಶ್ರಯಿಸಿದ್ದೇನೆ. ಅಣ್ಣನಿಂದ ವಂಚಿತನಾಗಿ ಅವನೊಡನೆ ವೈರವನ್ನೂ ಕಟ್ಟಿಕೊಂಡು ಭಯಪೀಡಿತನಾಗಿ ಈ ದುರ್ಗದಲ್ಲಿ ವಾಸಮಾಡುತ್ತಿದ್ದೇನೆ.

---

* ಹರ್ಷವ್ಯಾಕುಲಲೋಚನಃ = ಹರ್ಷ ಮತ್ತು ವ್ಯಾಕುಲಶಬ್ದಗಳು ಪರಸ್ಪರ ವಿರುದ್ಧಪದಗಳು. ಹರ್ಷದಿಂದ ವ್ಯಾಕುಲಗೊಂಡ ಕಣ್ಣುಗಳುಳ್ಳವನೆಂದು ಬಹಳ ಸ್ವಾರಸ್ಯಕರವಾದ ವಿಶೇಷಣವನ್ನಿಲ್ಲಿ ಹೇಳಿದ್ದಾರೆ. ಹರ್ಷದಿಂದ ಹೊರಟ ಬಾಷ್ಪಗಳಿಂದ ಕಣ್ಣುಗಳು ತುಂಬಿ ಕ್ಲೇಶಗೊಂಡುವು. ಇದು ಸಂತೋಷಕರವಾದ ಕ್ಲೇಶ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.
ವಾಲಿಯ ಭಯದಿಂದ ಪೀಡಿತನಾಗಿರುವ ನನಗೆ ಅಭಯದಾನಮಾಡು. ನನ್ನ ಭಯವನ್ನು ಹೋಗಲಾಡಿಸುವುದು ನಿನಗೆ ಉಚಿತವಾಗಿದೆ."

ಸುಗ್ರೀವನು ಹೀಗೆ ಹೇಳಲು ತೇಜಸ್ವಿಯಾದ, ಧರ್ಮಜ್ಞನಾದ, ಧರ್ಮವತ್ಸಲನಾದ ಕಾಕುತ್ಸ್ಥನು ನಗುತ್ತಿರುವನೋ ಎಂಬ ಮುಖಭಾವದಿಂದ ಕೂಡಿದವನಾಗಿ ಸುಗ್ರೀವನಿಗೆ ಹೇಳಿದನು :

"ಮಹಾಕಪಿಯೇ ! ಗೆಳೆತನಕ್ಕೆ ಉಪಕಾರವೇ ಫಲವೆಂಬುದನ್ನು ನಾನು ತಿಳಿದಿರುತ್ತೇನೆ. ಆದುದರಿಂದ ನಾನು ನಿನಗೆ ಉಪಕಾರಮಾಡುತ್ತೇನೆ. ನಿನ್ನ ಪತ್ನಿಯನ್ನು ಅಪಹರಿಸಿರುವ ವಾಲಿಯನ್ನು ನಾನು ಸಂಹರಿಸುತ್ತೇನೆ. ಸುಗ್ರೀವ ! ಸೂರ್ಯನ ಕಿರಣಸದೃಶವಾಗಿರುವ ಈ ನನ್ನ ನಿಶಿತವಾದ ಬಾಣಗಳು ಯಾವಾಗಲೂ ವ್ಯರ್ಥವಾಗತಕ್ಕವುಗಳಲ್ಲ. ರಣಹದ್ದಿನ ರೆಕ್ಕೆಗಳಿಂದ ನಿಬದ್ಧವಾದ, ವಜ್ರಾಯುಧಸದೃಶವಾದ, ತೀಕ್ಷ್ಣವಾದ ಅಗ್ರಭಾಗಗಳಿಂದ ಕೂಡಿರುವ, ನೇರವಾದ ಗಿಣ್ಣುಗಳನ್ನು ಹೊಂದಿರುವ ಈ ನನ್ನ ಬಾಣಗಳು ಕೋಪಗೊಂಡ ಸರ್ಪಗಳೋಪಾದಿಯಲ್ಲಿ ದುರಾಚಾರಿಯಾದ ವಾಲಿಯ ಮೇಲೆ ಅತಿವೇಗದಿಂದ ಬೀಳುತ್ತವೆ. ಇಂದ್ರನ ವಜ್ರಾಯುಧದಿಂದ ಪ್ರಹೃತವಾದ ಪರ್ವತವು ಛಿನ್ನ-ಭಿನ್ನವಾಗಿ ಕೆಳಕ್ಕೆ ಬೀಳುತ್ತಿದ್ದಂತೆ–ವಿಷಸರ್ಪಸದೃಶವಾದ, ತೀಕ್ಷ್ಣವಾದ ನನ್ನ ಬಾಣಗಳಿಂದ ಪ್ರಹತನಾಗುವ ವಾಲಿಯು ನೆಲದ ಮೇಲೆ ಬೀಳುವುದನ್ನು ನೀನೀಗಲೇ ಕಾಣಲಿರುವೆ"

ತನಗೆ ಪರಮಹಿತಕರವಾಗಿರುವ ಶ್ರೀರಾಮನ ಮಾತನ್ನು ಕೇಳಿ ಸುಗ್ರೀವನು ಪರಮಪ್ರೀತನಾಗಿ ಮಹತ್ತ್ವಪೂರ್ಣವಾದ ಈ ಮಾತನ್ನು ಹೇಳಿದನು :

"ನರಶ್ರೇಷ್ಠನೇ ! ನಿನ್ನ ಮಾತಿನಲ್ಲಿ ನನಗೆ ಅಪಾರವಾದ ವಿಶ್ವಾಸವುಂಟಾಗಿದೆ. ನಿನ್ನ ಪ್ರಸನ್ನತೆಯಿಂದ ನಾನು ನನ್ನ ಪ್ರಿಯಪತ್ನಿಯನ್ನೂ ರಾಜ್ಯವನ್ನೂ ಪುನಃ ಪಡೆದುಕೊಳ್ಳುವೆನು. ವೈರಿಯಾದ ಆ ನನ್ನ ಅಣ್ಣನು ಪುನಃ ನನ್ನನ್ನು ಹಿಂಸೆಮಾಡಲು ಸಾಧ್ಯವಾಗದಂತೆ ನೀನು ಕಾರ್ಯಮಾಡಬೇಕಾಗಿದೆ."

ವಾಲ್ಮೀಕಿಗಳು ಹೇಳುತ್ತಾರೆ :

ಸೀತಾಕಪೀನ್ದ್ರಕ್ಷಣದಾಚರಾಣಾಂ
 ರಾಜೀವಹೇಮಜ್ವಲನೋಪಮಾನಿ ।

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಸುಗ್ರೀವರಾಮಪ್ರಣಯಪ್ರಸಙ್ಗೇ
ವಾಮಾನಿ ನೇತ್ರಾಣಿ ಸಮಂ ಸ್ಫುರನ್ತಿ ॥೩೨॥

ರಾಮನಿಗೂ ಸುಗ್ರೀವನಿಗೂ ನಡೆದ ಗೆಳೆತನದ ಸನ್ನಿವೇಶದಲ್ಲಿ ಸೀತೆಯ ಕಮಲದಳಸದೃಶವಾದ ಎಡಗಣ್ಣು, ವಾಲಿಯ ಹೊಂಬಣ್ಣದ ಎಡಗಣ್ಣು ಮತ್ತು ರಾವಣನ ಅಗ್ನಿಸದೃಶವಾದ ಎಡಗಣ್ಣು–ಈ ಮೂರೂ ಏಕಕಾಲದಲ್ಲಿ ಮಿಡಿದುವು.*

೫ನೆಯ ಸರ್ಗವು ಮುಗಿಯಿತು.

ಕಿಷ್ಕಿಂಧಾಕಾಂಡ ೬ನೆಯ ಸರ್ಗ

## ಸುಗ್ರೀವನು ಶ್ರೀರಾಮನಿಗೆ ಸೀತಾದೇವಿಯ ಆಭರಣಗಳನ್ನು ತೋರಿಸಿದುದು : ಶ್ರೀರಾಮನ ಶೋಕ

ಪುನರೇವಾಬ್ರವೀತ್ಪ್ರೀತೋ ರಾಘವಂ ರಘುನನ್ದನಮ್ ।
ಅಯಮಾಖ್ಯಾತಿ ತೇ ರಾಮ ಸಚಿವೋ ಮನ್ತ್ರಿಸತ್ತಮಃ ।
ಹನೂಮಾನ್ಯನ್ನಿಮಿತ್ತಂ ತ್ವಂ ನಿರ್ಜನಂ ವನಮಾಗತಃ ॥೧॥

ಸುಪ್ರೀತನಾದ ಸುಗ್ರೀವನು ಪುನಃ ಶ್ರೀರಾಮನಿಗೆ ಹೇಳಿದನು :

"ರಾಘವ ! ಯಾವ ಕಾರಣಕ್ಕಾಗಿ ನೀನು ಜನಶೂನ್ಯವಾದ ಈ ಅರಣ್ಯಕ್ಕೆ ಬಂದಿರುವೆಯೆಂಬ ವಿಷಯವನ್ನು ಅಮಾತ್ಯಶ್ರೇಷ್ಠನಾದ ಹನುಮಂತನು ಸಮಗ್ರವಾಗಿ ಹೇಳಿರುವನು.

'ಲಕ್ಷ್ಮಣನೊಡನೆಯೂ ಮತ್ತು ಸೀತೆಯೊಡನೆಯೂ ನೀನು ಅರಣ್ಯದಲ್ಲಿ ವಾಸಮಾಡುತ್ತಿದ್ದಾಗ ನೀವಿಬ್ಬರೂ ಆಶ್ರಮದಲ್ಲಿ ಇಲ್ಲದಿರುವ ಸಮಯ

---

* ರಾಮ-ಸುಗ್ರೀವರ ಸಖ್ಯಪ್ರಸಂಗವು ಸೀತಾದೇವಿಗೆ ಶುಭದಾಯಕವೂ, ವಾಲಿ ಮತ್ತು ರಾವಣರಿಗೆ ಅಶುಭದಾಯಕವೂ ಆಗಿದ್ದಿತು. ಹೆಂಗಸರಿಗೆ ಎಡಗಣ್ಣು ಅದುರಿದರೆ ಶುಭವೆಂದೂ–ಗಂಡಸರಿಗೆ ಎಡಗಣ್ಣು ಅದುರಿದರೆ ಅಶುಭವೆಂದೂ ಹೇಳುತ್ತಾರೆ. ಸಖ್ಯದ ಸಮಯದಲ್ಲಿ ಸೀತೆ, ವಾಲಿ ಮತ್ತು ರಾಕ್ಷಸರಿಗೆ ಏಕಕಾಲದಲ್ಲಿ ಎಡಗಣ್ಣುಗಳು ಅದುರುತ್ತಿದ್ದುದರಿಂದ ಆ ಕಾಲವು ಸೀತಾದೇವಿಗೆ ಶುಭಸೂಚಕವೂ, ವಾಲಿ-ರಾವಣರಿಗೆ ಅಶುಭಸೂಚಕವೂ ಆಗಿದ್ದಿತು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ವನ್ನೇ ನಿರೀಕ್ಷಿಸುತ್ತಿದ್ದ ರಾಕ್ಷಸನು ರೋದನಮಾಡುತ್ತಿದ್ದ ನಿನ್ನ ಭಾರ್ಯೆಯಾದ ವೈದೇಹಿಯನ್ನು ಬಲಾತ್ಕಾರವಾಗಿ ಅಪಹರಿಸಿಕೊಂಡು ಹೋಗಿರುವುದನ್ನು, ತಡೆಯಲು ಬಂದ ಜಟಾಯುವನ್ನು ಆ ರಾಕ್ಷಸನು ಸಂಹಾರಮಾಡಿ ನಿನಗೆ ಭಾರ್ಯಾವಿಯೋಗವನ್ನುಂಟುಮಾಡಿದನೆಂಬ ವಿಷಯವನ್ನೂ ಹನುಮಂತನು ನನಗೆ ವಿವರಿಸಿ ಹೇಳಿದ್ದಾನೆ. ಭಾರ್ಯಾವಿಯೋಗದುಃಖದಿಂದ ನೀನು ಬಹಳ ಬೇಗ ಪಾರಾಗುವೆ. 'ಅಹಂ ತಾಮಾನಯಿಷ್ಯಾಮಿ ನಷ್ಟಾಂ ವೇದಶ್ರುತೀಮಿವ।' ಅಪಹೃತವಾಗಿಹೋಗಿದ್ದ ವೇದರೂಪವಾದ ಶ್ರುತಿಯನ್ನು ಮಹಾವಿಷ್ಣುವು ಹೊರತಂದಂತೆ-ಅಪಹೃತಳಾಗಿರುವ ನಿನ್ನ ಭಾರ್ಯೆಯನ್ನು ನಾನು ಕರೆತರುತ್ತೇನೆ." *

ಅರಿಂದಮನೇ! ನಿನ್ನ ಪತ್ನಿಯು ರಸಾತಲದಲ್ಲಿಯೇ ಇರಲಿ; ಅಂತರಿಕ್ಷದಲ್ಲಿಯೇ ಇರಲಿ-ನಾನವಳನ್ನು ಕರೆತಂದು ನಿನಗೊಪ್ಪಿಸುತ್ತೇನೆ. ಈ ನನ್ನ ಮಾತನ್ನು ನಿಜವಾದ ಮಾತೆಂದು ಭಾವಿಸು. ಇಂದ್ರಸಹಿತರಾದ ದೇವ-ದಾನವರಿಂದಲೂ ಅವಳನ್ನು ವಶಪಡಿಸಿಕೊಳ್ಳಲು ಸಾಧ್ಯವಾಗುವುದಿಲ್ಲ.

ತವ ಭಾರ್ಯಾ ಮಹಾಬಾಹೋ ಭಕ್ಷ್ಯಂ ವಿಷಕೃತಂ ಯಥಾ ।
ತ್ಯಜ ಶೋಕಂ ಮಹಾವೀರ ತಾಂ ಕಾನ್ತಾಮಾನಯಾಮಿ ತೇ ॥೮॥

"ನಿನ್ನ ಭಾರ್ಯೆಯು ವಿಷಬೆರೆಸಿದ ಭಕ್ಷ್ಯದಂತೆ. ವಿಷಬೆರೆತ ಭಕ್ಷ್ಯವನ್ನು ತಿಂದವನು ಯಾವ ರೀತಿಯಲ್ಲಿ ಜೀವಿಸಿರುವುದಿಲ್ಲವೋ-ಹಾಗೆಯೇ ನಿನ್ನ ಭಾರ್ಯೆಯನ್ನು ಅಪಹರಿಸಿಕೊಂಡು ಹೋಗಿರುವವನು ಖಂಡಿತವಾಗಿಯೂ ಹೆಚ್ಚುಕಾಲ ಜೀವಿಸಿರುವುದಿಲ್ಲ. ನೀನಿನ್ನು ಶೋಕವನ್ನು ಪರಿತ್ಯಜಿಸು. ಆ ನಿನ್ನ ಕಾಂತೆಯನ್ನು ನಾನು ನಿನಗೆ ತಂದೊಪ್ಪಿಸುತ್ತೇನೆ.

---

*ನಷ್ಟಾಂ ದೇವಶ್ರುತೀಮಿವ-ನಷ್ಟಾಂ ವೇದಶ್ರುತೀಮಿವ ಎಂದು ಎರಡು ಪಾಠಗಳಿವೆ. ದೇವಶ್ರುತೀಮಿವ ಎಂಬ ಪಾಠಕ್ಕೆ ವ್ಯಾಖ್ಯಾನಕಾರರು ಹೀಗೆ ಹೇಳಿದ್ದಾರೆ: ನ ಚಿರಾನ್ನಷ್ಟಾಂ ಮಧುಕೈಟಭಾಪಹೃತಾಂ ದೇವಸ್ಯ ಪರ್ಮಸ್ಯ ಬ್ರಹ್ಮಣಶ್ಚ ಜ್ಞಾನಸಾಧನಭೂತಾ ಶ್ರುತಿಸ್ತ್ರಯೀ ತಾಮಿವ= ಮಧು-ಕೈಟಭರಿಂದ ಅಪಹೃತವಾಗಿ ಸ್ವಲ್ಪಕಾಲ ಮಾತ್ರವೇ ನಷ್ಟವಾಗಿದ್ದ ಬ್ರಹ್ಮನ ಜ್ಞಾನಸಾಧನಭೂತವಾದ ಮೂರು ವೇದಗಳಂತೆ (೨) ವೇದಶ್ರುತೀಮಿವ= ಶ್ರೂಯತೇ ಇತಿ ಶ್ರುತಿಃ= ಶಬ್ದ, ವೇದರೂಪಶ್ರುತೀಮಿವ= ವೇದಾಕ್ಷರದಂತೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.


ಸ್ವಲ್ಪದಿವಸಗಳ ಹಿಂದೆ ಭಯಂಕರನಾದ ರಾಕ್ಷಸನೊಬ್ಬನು ಸ್ತ್ರೀಯೊಬ್ಬಳನ್ನು ಬಲಾತ್ಕಾರದಿಂದ ಸೆಳೆದುಕೊಂಡು ಆಕಾಶಮಾರ್ಗದಲ್ಲಿ ಹೋಗುತ್ತಿದ್ದುದನ್ನು ನಾನು ಕಂಡೆನು. ಸಾಂದರ್ಭಿಕವಾದ ಕಾರಣಗಳಿಂದ ಅವಳೇ ಮೈಥಿಲಿಯಿರಬಹುದೆಂದು ಈಗ ನಾನು ಊಹಿಸುತ್ತೇನೆ. ಅವಳೇ ನಿನ್ನ ಪತ್ನಿಯೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ಹೆಣ್ಣು ಹಾವಿನಂತೆ ರಾವಣನ ತೊಡೆಯ ಮೇಲೆ ಚಡಪಡಿಸುತ್ತಾ 'ಹಾ ರಾಮ! ಹಾ ಲಕ್ಷ್ಮಣ!'– ಎಂದು ವಿಕಾರಸ್ವರದಿಂದ ಕಿರಿಚಿಕೊಳ್ಳುತ್ತಾ ರೋದನಮಾಡುತ್ತಿದ್ದ ಸೀತೆಯನ್ನು ನಾನು ನೋಡಿದೆನು. ನಾನೂ ಸೇರಿ ಐವರು ವಾನರರು ಪರ್ವತದ ಶಿಖರದಲ್ಲಿ ಕುಳಿತಿರುವುದನ್ನು ನೋಡಿ ಸೀತೆಯು ಉತ್ತರೀಯವನ್ನೂ ಮತ್ತು ಸುಂದರವಾದ ಕೆಲವು ಆಭರಣಗಳನ್ನೂ ಕೆಳಕ್ಕೆ ಹಾಕಿದಳು. ಅವುಗಳೆಲ್ಲವನ್ನೂ ಎಚ್ಚರಿಕೆಯಿಂದ ಸಂಗ್ರಹಿಸಿ ಜೋಪಾನವಾಗಿಟ್ಟಿದ್ದೇನೆ. ಅವುಗಳೆಲ್ಲವನ್ನೂ ನಾನೀಗಲೇ ತರುತ್ತೇನೆ. ಅವು ಸೀತೆಯವೇ-ಅಲ್ಲವೇ? ಎಂಬುದನ್ನು ನೀನೇ ಗುರುತಿಸುವೆಯಂತೆ."

ಇಂತಹ ಪ್ರಿಯವಾದ ಮಾತುಗಳನ್ನಾಡಿದ ಸುಗ್ರೀವನಿಗೆ ಶ್ರೀರಾಮನು ಹೇಳಿದನು: "ಸುಗ್ರೀವ! ಸಾವಕಾಶವೇಕೆ? ಬೇಗನೇ ಆ ಆಭರಣಗಳನ್ನು ತೆಗೆದುಕೊಂಡು ಬಾ."

ಶ್ರೀರಾಮನು ಹೀಗೆ ಅವಸರಪಡಿಸಲು ಅವನಿಗೆ ಪ್ರಿಯವನ್ನುಂಟುಮಾಡುವ ಬಯಕೆಯಿಂದ ಸುಗ್ರೀವನು ಅತ್ಯಂತಗಹನವಾಗಿದ್ದ ಗುಹೆಯನ್ನು ಹೊಕ್ಕು ಉತ್ತರೀಯವನ್ನೂ ಶುಭಾವಹವಾದ ಆಭರಣಗಳನ್ನೂ ತೆಗೆದುಕೊಂಡುಬಂದು – 'ಇವುಗಳನ್ನು ನೋಡು' ಎಂದು – ಹೇಳಿ ಶ್ರೀರಾಮನ ಮುಂದಿಟ್ಟನು. ಅವುಗಳನ್ನು ಶ್ರೀರಾಮನು ಕೈಗೆತ್ತಿಕೊಂಡು ಬಹಳವಾಗಿ ರೋದಿಸಿದನು. ಮಂಜುಮುಸುಕಿದ ಚಂದ್ರನಂತೆ ಶ್ರೀರಾಮನು ಕಣ್ಣೀರಿನಿಂದಲೇ ಸಂಪೂರ್ಣವಾಗಿ ತೋಯ್ದುಹೋದನು. ಸೀತೆಯ ಮೇಲಿನ ಅತುಲವಾದ ಅನುರಾಗದಿಂದಾಗಿ ಶ್ರೀರಾಮನ ಎರಡು ಕಣ್ಣುಗಳಿಂದಲೂ ಕಣ್ಣೀರು ಧಾರಾಕಾರವಾಗಿ ಪ್ರವಹಿಸತೊಡಗಿತು. ಅದರಿಂದ ಅವನ ಮುಖ


CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

ಮತ್ತು ವಕ್ಷಃಸ್ಥಳಗಳು ಪೂರ್ಣವಾಗಿ ನೆನೆದುಹೋದುವು. 'ಹಾ ಪ್ರಿಯೇ! ಹಾ ಸೀತೇ! ಹಾ ಜನಕನಂದಿನಿ! ಈಗ ನೀನೆಲ್ಲಿರುವೆ?'–ಎನ್ನುತ್ತಾ ಗಟ್ಟ



ಯಾಗಿ ಅಳುತ್ತಿದ್ದನು. ಅವನಲ್ಲಿದ್ದ ಧೈರ್ಯ-ಸಾಹಸಗಳೆಲ್ಲವೂ ಉಡುಗಿಯೇ ಹೋಗಿದ್ದುವು. ಕಂಗೆಟ್ಟ ರಾಮನು ಭೂಮಿಯ ಮೇಲೆ ಬಿದ್ದನು. ಮರು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಕ್ಷಣದಲ್ಲಿಯೇ ಮೇಲೆದ್ದು ಆಭರಣಗಳನ್ನೂ, ಉತ್ತರೀಯವನ್ನೂ ಹಲವಾರು ಬಾರಿ ಎದೆಗವಚಿಕೊಳ್ಳುತ್ತಾ, ರೋಷಪರೀತನಾಗಿ ಬಿಲದಲ್ಲಿರುವ ವಿಷಸರ್ಪದಂತೆ–ದೀರ್ಘವಾಗಿ ನಿಟ್ಟುಸಿರು ಬಿಡುತ್ತಿದ್ದನು. ಆ ರೋಷವೂ ಅವನಲ್ಲಿ ಹೆಚ್ಚುಕಾಲ ಉಳಿಯಲಿಲ್ಲ. ಪುನಃ ದುಃಖವೇ ಆವರಿಸಿತು. ಸತತವಾಗಿ ಮತ್ತು ವೇಗವಾಗಿ ಕಂಬನಿಗರೆಯುತ್ತಿದ್ದ ಶ್ರೀರಾಮನು ಪಕ್ಕದಲ್ಲಿದ್ದ ಲಕ್ಷ್ಮಣನನ್ನು ನೋಡಿ ದೈನ್ಯಭಾವದಿಂದ ವಿಲಪಿಸತೊಡಗಿದನು :

"ರಾಕ್ಷಸರಿಂದ ಒಯ್ಯಲ್ಪಡುತ್ತಿದ್ದಾಗ ಸೀತೆಯು ಕಳಚಿ ಕೆಳಕ್ಕೆ ಹಾಕಿರುವ ಈ ಆಭರಣಗಳನ್ನೂ, ಉತ್ತರೀಯವನ್ನೂ ನೋಡು, ಲಕ್ಷ್ಮಣ! ಈ ಆಭರಣಗಳನ್ನು ಅವಳು ಹಚ್ಚನೆಯ ಹುಲ್ಲಿರುವ ಸ್ಥಳದಲ್ಲಿಯೇ ಹಾಕಿರುವಳು. ಮೇಲಿಂದ ಕೆಳಕ್ಕೆ ಬಿದ್ದರೂ ಈ ಆಭರಣಗಳು ಭಗ್ನವಾಗಿಲ್ಲ ಮತ್ತು ಬಣ್ಣವೂ ಮಸುಕಾಗಿಲ್ಲ."

ಶ್ರೀರಾಮನು ಹೀಗೆ ಹೇಳಲು ಲಕ್ಷ್ಮಣನು ಆಭರಣಗಳನ್ನು ಗುರುತಿಸಲು ತನ್ನ ಅಸಾಮರ್ಥ್ಯವನ್ನು ವ್ಯಕ್ತಪಡಿಸುತ್ತಾ ಹೇಳಿದನು :

ನಾಭಿಜಾನಾಮಿ ಕೇಯೂರೇ ನ ಚ ಪಶ್ಯಾಮಿ ಕುಂಡಲೇ ।
ನೂಪುರೇ ತ್ವಭಿಜಾನಾಮಿ ನಿತ್ಯಂ ಪಾದಾಭಿವಂದನಾತ್ ॥೨೨॥

"ಅಣ್ಣ! ಅತ್ತಿಗೆಯ ಕಡಗಗಳು ಹೇಗಿದ್ದುವೆಂಬುದು ನನಗೆ ತಿಳಿಯದು. ಅವಳ ಕುಂಡಲಗಳನ್ನೂ ನಾನು ಕಂಡವನೇ ಅಲ್ಲ. ಆದರೆ ನಾನು ನಿತ್ಯವೂ ಅತ್ತಿಗೆಯ ಕಾಲುಗಳಿಗೆ ನಮಸ್ಕಾರಮಾಡುತ್ತಿದ್ದುದರಿಂದ ಅವಳ ಕಾಲಂದುಗೆಗಳನ್ನು ಮಾತ್ರ ಚೆನ್ನಾಗಿ ನೋಡಿದ್ದೇನೆ. ಅವುಗಳನ್ನು ನಾನು ಗುರುತಿಸಬಲ್ಲೆನು."*

---

*ಈ ಶ್ಲೋಕದಲ್ಲಿ ಲಕ್ಷ್ಮಣನ ವಿಶೇಷಗುಣವು ಹೇಳಲ್ಪಟ್ಟಿದೆ. ತನ್ಮೂಲಕವಾಗಿ ನಮ್ಮ ಪವಿತ್ರಭಾರತಭೂಮಿಯಲ್ಲಿ ಸ್ತ್ರೀಯರ ವಿಷಯದಲ್ಲಿ ಹೇಗೆ ನಡೆದುಕೊಳ್ಳುತ್ತಿದ್ದರೆಂಬುದಕ್ಕೂ ಈ ಶ್ಲೋಕವು ಆಧಾರಭೂತವಾಗಿದೆ. ರಾಮನೊಡನೆ ಕಾಡಿಗೆ ಬಂದ ಲಕ್ಷ್ಮಣನು ಅವರ ಜೊತೆಯಲ್ಲಿಯೇ ಅನೇಕವರ್ಷಗಳನ್ನು ಕಳೆದುಬಿಟ್ಟಿದ್ದಾನೆ. ಅಷ್ಟು ವರ್ಷಗಳು ಅವರ ಸೇವೆಯನ್ನು ಮಾಡಿಕೊಂಡಿದ್ದರೂ ಲಕ್ಷ್ಮಣನು ಸೀತೆಯ ಮುಖವನ್ನಾಗಲೀ ಇತರ ಅವಯವಗಳನ್ನಾಗಲೀ–ದೃಷ್ಟಿಸಿ ನೋಡಿಲ್ಲ. ಪಾದಾರವಿಂದಗಳನ್ನು ಮಾತ್ರವೇ ನೋಡಿದ್ದಾನೆ. ಅನುದಿನವೂ ನಮಸ್ಕಾರಮಾಡುತ್ತಿದ್ದುದರಿಂದ ಪಾದಾರ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಬಳಿಕ ರಾಮನು ದೀನನಾಗಿ ಸುಗ್ರೀವನಿಗೆ ಹೇಳಿದನು :

"ಸುಗ್ರೀವ! ಭಯಂಕರರೂಪನಾದ ಆ ರಾಕ್ಷಸನು ನನ್ನ ಪ್ರಾಣಗಳಿಗಿಂತಲೂ ಪ್ರಿಯಳಾದ ಸೀತೆಯನ್ನು ಸೆಳೆದುಕೊಂಡು ಹೋಗುತ್ತಿದ್ದಾಗ ಯಾವ ಸ್ಥಳದಲ್ಲಿ ನೀನವಳನ್ನು ಕಂಡೆ? ಕ್ರೂರಿಯಾದ ಆ ರಾಕ್ಷಸನು ಅವಳನ್ನೆಲ್ಲಿಗೆ ಕರೆದೊಯ್ದನು? ನನಗೆ ಮಹಾವ್ಯಸನವನ್ನು ತಂದೊಡ್ಡಿರುವ ಆ ರಾಕ್ಷಸನು ಈಗೆಲ್ಲಿ ವಾಸವಾಗಿದ್ದಾನೆ? ನನಗೆ ಅಪರಾಧವನ್ನೆಸಗಿರುವ ಆ ಒಬ್ಬ ರಾಕ್ಷಸನ ನಿಮಿತ್ತವಾಗಿ ನಾನು ರಾಕ್ಷಸರ ಕುಲವನ್ನೇ ಧ್ವಂಸಮಾಡುತ್ತೇನೆ. ಮೈಥಿಲಿಯನ್ನು ಅಪಹರಿಸಿರುವ ಅವನು ನನ್ನನ್ನು ಅತ್ಯಂತಕುಪಿತನನ್ನಾಗಿ ಮಾಡಿದ್ದಾನೆ. ತನ್ನ ಜೀವಿತದ ಅಂತ್ಯಕ್ಕಾಗಿಯೇ ಅವನು ಮೃತ್ಯುದೇವತೆಯ ಬಾಗಿಲನ್ನು ತೆರೆದುಕೊಂಡಿದ್ದಾನೆ. ವಯಸ್ಯ! ಅರಣ್ಯದಲ್ಲಿದ್ದ ನನ್ನ ಪ್ರಿಯತಮೆಯನ್ನು ರಾಕ್ಷಸನೊಬ್ಬನು ಬಲಾತ್ಕಾರಪೂರ್ವಕವಾಗಿ ಅಪಹರಿಸಿಕೊಂಡು ಹೋಗಿದ್ದಾನೆ. ಅವನಾರು ಮತ್ತು ಎಲ್ಲಿದ್ದಾನೆಂಬುದನ್ನು ಹೇಳು. ಅವನನ್ನು ನಾನೀಗಲೇ ಯಮನ ಸಾನ್ನಿಧ್ಯಕ್ಕೆ ಕಳುಹಿಸಿಬಿಡುತ್ತೇನೆ."

ಓನೆಯ ಸರ್ಗವು ಮುಗಿಯಿತು.

---

ವಿಂದಗಳ ಮತ್ತು ಪಾದಗಳನ್ನು ಅಲಂಕರಿಸಿದ್ದ ಅಂಗಾಂಗಗಳ ಪರಿಚಯವು ಮಾತ್ರ ಲಕ್ಷ್ಮಣನಿಗಿದೆ. ಎಂತಹ ಪರಮೋತ್ಕೃಷ್ಟವಾದ ಚಾರಿತ್ರ್ಯ! ಸ್ತ್ರೀಯರ ವಿಷಯದಲ್ಲಿ ನಮ್ಮ ಹಿಂದಿನವರು ಹೇಗೆ ನಡೆದುಕೊಳ್ಳುತ್ತಿದ್ದರೆಂಬುದಕ್ಕೆ ಇದೊಂದು ನಿದರ್ಶನವಾಗಿದೆ. ಅತ್ತಿಗೆಯ ವಿಷಯದಲ್ಲಿ ಲಕ್ಷ್ಮಣನಿಗೆ ತಾಯಿಯೆಂಬ ಅಭಿಪ್ರಾಯವೇ ಇದ್ದಿತು. ವನವಾಸಕ್ಕೆ ಹೊರಡುವಾಗ 'ಮಾಂ ವಿದ್ಧಿ ಜನಕಾತ್ಮಜಾಮ್' ಎಂದು ಸುಮಿತ್ರೆಯು ಹೇಳಿಕಳುಹಿಸಿದ್ದಳು. ತಾಯಿಯ ಮುಖವನ್ನು ನೋಡಬಾರದೇ ?–ಎಂಬ ಪ್ರಶ್ನೆಯು ಇಲ್ಲಿಗೆ ಅನ್ವಯಿಸುವುದಿಲ್ಲ. ಅತ್ತಿಗೆಯ ವಿಷಯದಲ್ಲಿ ತಾಯಿ ಎಂಬ ಭಾವನೆಯು ಇರಬೇಕಾದ್ದೇ. ಜೊತೆಗೆ ಅವಳು ಪರಸ್ತ್ರೀಯೂ ಹೌದು. ಈ ಕಾರಣದಿಂದ ಲಕ್ಷ್ಮಣನು ಸೀತಾದೇವಿಯ ಮುಖವನ್ನು ನೋಡಿರಲಿಲ್ಲವೆಂಬ ವಿಷಯದಲ್ಲಿ ಆಶ್ಚರ್ಯವೇನಿಲ್ಲ. ಆದರೆ ಇಂದಿನ ವಾತಾವರಣಕ್ಕೆ ಇದು ಅಚ್ಚರಿಯಾಗಿ ಕಾಣಬಹುದು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



## ಸುಗ್ರೀವನು ಶ್ರೀರಾಮನನ್ನು ಸಮಾಧಾನಗೊಳಿಸಿದುದು : ಸುಗ್ರೀವನ ಕಾರ್ಯವು ಸಿದ್ಧಿಸುವುದೆಂದು ಶ್ರೀರಾಮನು ಆಶ್ವಾಸನೆಯನ್ನಿತ್ತುದು

ಏವಮುಕ್ತಸ್ತು ಸುಗ್ರೀವೋ ರಾಮೇಣಾರ್ತೇನ ವಾನರಃ ।
ಅಬ್ರವೀತ್ಪ್ರಾಞ್ಜಲಿರ್ವಾಕ್ಯಂ ಸಬಾಷ್ಪಂ ಬಾಷ್ಪಗದ್ಗದಃ ॥೧॥

ಶೋಕಪೀಡಿತನಾಗಿದ್ದ ರಾಮನು ಹೀಗೆ ಹೇಳಲು ಸುಗ್ರೀವನು ಕೈಮುಗಿದುಕೊಂಡು ಕಣ್ಣೀರ್ಗರೆಯುತ್ತಾ ಗದ್ಗದಧ್ವನಿಯಿಂದ ರಾಮನಿಗೆ ಹೇಳಿದನು :

ನ ಜಾನೇ ನಿಲಯಂ ತಸ್ಯ ಸರ್ವಥಾ ಪಾಪರಕ್ಷಸಃ ।
ಸಾಮರ್ಥ್ಯಂ ವಿಕ್ರಮಂ ವಾಪಿ ದೌಷ್ಕುಲೇಯಸ್ಯ ವಾ ಕುಲಮ್ ॥

"ರಾಘವ! ಪಾಪಿಷ್ಠನಾದ ಆ ರಾಕ್ಷಸನ ವಾಸಸ್ಥಾನವು ಯಾವುದೆಂಬುದು ನನಗೂ ಸ್ವಲ್ಪವೂ ತಿಳಿಯದು. ದುಷ್ಕುಲಪ್ರಸೂತನಾದ ಅವನ ಕುಲವನ್ನಾಗಲೀ ಸಾಮರ್ಥ್ಯವನ್ನಾಗಲೀ ನಾನು ತಿಳಿದಿರುವುದಿಲ್ಲ.*

ಅರಿಂದಮನೇ! ನಿನ್ನ ಶೋಕವನ್ನು ಪರಿತ್ಯಜಿಸು. ಮೈಥಿಲಿಯನ್ನು ಪುನಃ ನೀನು ಪಡೆದುಕೊಳ್ಳುವ ರೀತಿಯಲ್ಲಿ ನಾನು ಪ್ರಯತ್ನಿಸುತ್ತೇನೆ. ಈ ಮಾತನ್ನು ನಾನು ಸತ್ಯದ ಮೇಲೆ ಆಣೆಯಿಟ್ಟು ಹೇಳುತ್ತಿದ್ದೇನೆ. ನೀನು

---

* ಇಲ್ಲಿ ಸುಗ್ರೀವನು ಶ್ರೀರಾಮನಿಗೆ ಸ್ವಾರ್ಥಸಾಧನೆಗಾಗಿ ಸುಳ್ಳುಹೇಳಿರುವನೆಂದು ಕೆಲವು ವ್ಯಾಖ್ಯಾನಕಾರರ ಅಭಿಪ್ರಾಯವಾಗಿದೆ. ಏಕೆಂದರೆ: ಮುಂದೆ ಸುಗ್ರೀವನು ಸೀತಾನ್ವೇಷಣೆಗಾಗಿ ವಾನರರನ್ನು ಕಳುಹಿಸಿಕೊಡುವಾಗ ದ್ವೀಪಸ್ತಸ್ಯಾಪರೇ ಶತಯೋಜನಮಾಯತಃ । ಅಗಮ್ಯೋ ಮಾನುಷ್ಯೈರ್ದೀಪ್ತಸ್ತಂ ಮಾರ್ಗಧ್ವಂ ಸಮನ್ತತಃ । ಸ ಹಿ ದೇಶಸ್ತು ವಧ್ಯಸ್ಯ ರಾವಣಸ್ಯ ದುರಾತ್ಮನಃ । ರಾಕ್ಷಸಾಧಿಪತೇರ್ವಾಸಃ ಸಹಸ್ರಾಕ್ಷಸಮದ್ಯುತೇಃ (ಸರ್ಗ ೪೧ ಶ್ಲೋ ೩೪-೩೫)—ಹೀಗೆ ಹೇಳಿರುವುದರಿಂದ ಸುಗ್ರೀವನಿಗೆ ರಾವಣನ ಪಟ್ಟಣವು ತಿಳಿದಿತ್ತು. ಸುಳ್ಳುಹೇಳಲು ಕಾರಣವೇನೆಂದರೆ: ಮೊದಲೇ ರಾವಣನ ವಿಷಯವನ್ನು ಹೇಳಿಬಿಟ್ಟರೆ ಶ್ರೀರಾಮನು ರಾವಣನ ವಧೆಯಲ್ಲಿ ಆಸಕ್ತಿವಹಿಸುವನೇ ಹೊರತು ವಾಲಿಯ ವಧೆಯಲ್ಲಿ ಆಸಕ್ತಿಯನ್ನು ವಹಿಸುವುದಿಲ್ಲ—ಎಂಬ ಸಂಶಯ. ವ್ಯಾಖ್ಯಾನಕಾರರ ವಿವರಣೆಯು ಹೀಗಿದೆ: ಯದಿ ರಾವಣವೃತ್ತಾನ್ತೋ ಮಯಾ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ನನ್ನ ವಿಷಯದಲ್ಲಿ ಬಹಳ ಬೇಗ ಸುಪ್ರೀತನಾಗುವಂತೆ ನನ್ನ ಪೌರುಷವನ್ನು ಪ್ರದರ್ಶಿಸಿ ಪರಿವಾರಮೇತನಾಗಿ ರಾವಣನನ್ನು ಸಂಹರಿಸಿ ನಿನ್ನನ್ನು ಸಂತೋಷ ಗೊಳಿಸುತ್ತೇನೆ. ನೀನಿನ್ನು ವ್ಯಾಕುಲಪಡಬೇಡ. ನೀನೆಂತಹ ಧೈರ್ಯಶಾಲಿ ಯೆಂಬುದನ್ನು ಸ್ಮರಿಸು. ಇಂತಹ ದುರ್ಬಲವಾದ ಬುದ್ಧಿಯನ್ನು ಹೊಂದು ವುದು ನಿನ್ನಂತಹ ಧೀರರಿಗೆ ಯುಕ್ತವೆನಿಸುವುದಿಲ್ಲ. ಭಾರ್ಯೆಯ ಅಪಹರಣ ದಿಂದಾಗಿ ನನಗೂ ಮಹಾದುಃಖವೇ ಉಂಟಾಗಿದೆ. ಆದರೆ ನಾನು ಮಾತ್ರ ನಿನ್ನಂತೆ ವಿಲಪಿಸುವುದಿಲ್ಲ. ಧೈರ್ಯವನ್ನು ನಾನು ಇದುವರೆಗೂ ಕಳೆದುಕೊಂಡಿಲ್ಲ. ನಾನು ಸಾಮಾನ್ಯನಾದ ವಾನರನಾಗಿದ್ದೇನೆ. ಹೀಗಿ ದ್ದರೂ ನಾನೇ ನನ್ನ ಪತ್ನಿಯ ವಿಷಯವಾಗಿ ಶೋಕಿಸುತ್ತಿಲ್ಲ. ಹೀಗಿರುವಾಗ ಮಹಾತ್ಮನಾದ, ಸುಶಿಕ್ಷಿತನಾದ, ಧೃತಿಮಂತನಾದ ನೀನು ದುಃಖಪಡುವುದ ರಲ್ಲಿ ಅರ್ಥವೇನಿದೆ? ವಿರಹದುಃಖದ ಪರಿಣಾಮವಾಗಿ ಸುರಿಯುತ್ತಿರುವ ಕಣ್ಣೀರನ್ನು ಧೈರ್ಯದಿಂದ ತಡೆಹಿಡಿಯುವುದು ನಿನಗೆ ಯೋಗ್ಯವಾಗಿದೆ. ಸತ್ತ್ವಶಾಲಿಗಳ ಮರ್ಯಾದಾರೂಪವಾದ ಧೃತಿಯನ್ನು ಕಳೆದುಕೊಳ್ಳುವುದು ನಿನಗೆ ಯೋಗ್ಯವಾಗಿ ಕಾಣುವುದಿಲ್ಲ.

ವ್ಯಸನೇ ವಾರ್ಥಕೃಚ್ಛ್ರೇ ವಾ ಭಯೇ ವಾ ಜೀವಿತಾನ್ತಕೇ ।
ವಿಮೃಶನ್ವೈ ಸ್ವಯಾ ಬುದ್ಧ್ಯಾ ಧೃತಿಮಾನ್ನಾವಸೀದತಿ ॥೯॥

---

ಜ್ಞಾತ ಇತ್ಯುಕ್ತೇ ಸ್ಯಾತ್ ಅತಿವ್ಯಸನೀ ರಾಮೋಽಯಂ ಸೀತಾನ್ವೇಷಣೇ ಪ್ರಥಮಂ ಮಾಂ ಪ್ರವರ್ತಯೇತ್ । ತಚ್ಚಾಯುಕ್ತಂ ವಾನರಾಣಾಂ ವಾಲಿವಶಂವದತ್ವೇನ ಅಸ್ಮದ ಧೀನತ್ವಾಭಾವಾತ್ । ಕಥಂಚಿತ್ ಕೇಷಾಂಚಿದ್ವಶೀಕರಣೇಽಪಿ ರಾವಣೇನ ಕೃತಸಖ್ಯೋ ವಾಲೀ ಚ ಅಸ್ಮನ್ಮನೋರಥಾನುರೂಪಾಂ ಪ್ರವೃತ್ತಿಂ ಕಥಂ ಸಹೇತ । ತಥಾ ಚ ಉಭಯ ಕಾರ್ಯಭಂಗಃ ಇತಿ ಅಜ್ಞಾನವನ್ನುಭಿಸೀತವಾನ್ ಸುಮತಿಃ ಸುಗ್ರೀವಃ । ನಾನೇನಾದರೂ ರಾವಣನ ವೃತ್ತಾಂತವು ನನಗೆ ಗೊತ್ತಿದೆ ಎಂದು ಹೇಳಿಬಿಟ್ಟರೆ-ಅತಿವ್ಯಸನಿಯಾಗಿರುವ ರಾಮನು ಮೊದಲು ಸೀತಾನ್ವೇಷಣೆಯಲ್ಲಿ ನನ್ನನ್ನು ಯೋಜಿಸಬಹುದು. ಅದು ಸರಿಯಾಗ ಲಾರದು. ಏಕೆಂದರೆ: ವಾನರರೆಲ್ಲರೂ ವಾಲಿಯ ಅಧೀನದಲ್ಲಿರುವರೇ ಹೊರತು ನನ್ನ ವಶದಲ್ಲಿಲ್ಲ. ಹಾಗೂ ಕೆಲವರನ್ನು ನಮ್ಮ ಅಧೀನದಲ್ಲಿಟ್ಟುಕೊಂಡರೂ ರಾವಣನ ಸ್ನೇಹಿ ತನೇ ಆದ ವಾಲಿಯು ನಮ್ಮ ಪ್ರವೃತ್ತಿಯನ್ನು ಅದೆಂತು ಸಹಿಸುವನು? ಹೀಗಾಗಿ ಇಬ್ಬರ ಕಾರ್ಯಗಳೂ ಕೈಗೂಡುವುದಿಲ್ಲ. ಸುಮತಿಯಾದ ಸುಗ್ರೀವನು ಹೀಗೆ ಯೋಚಿಸಿ ರಾಮನ ನಿವಾಸವು ತಿಳಿಯದೆಂದು ನಟಿಸಿದನು-ಎಂದು ಆವರು ಅಭಿಪ್ರಾಯಪಡುತ್ತಾರೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri


ಪ್ರಿಯರ ವಿಯೋಗದಿಂದುಂಟಾಗುವ ವ್ಯಸನದಲ್ಲಿಯೂ, ಐಶ್ವರ್ಯವು ನಷ್ಟವಾದಾಗಲೂ, ಪ್ರಾಣಹಾನಿಯಾಗುವ ಸಮಯದಲ್ಲಿಯೂ-ಧೈರ್ಯಶಾಲಿಯಾದವನು ಬುದ್ಧಿಯಿಂದ ದುಃಖದ ನಿವಾರಣೋಪಾಯವನ್ನು ಚೆನ್ನಾಗಿ ವಿಮರ್ಶಿಸಿ ಕಾರ್ಯಮಾಡಿದರೆ ವಿನಾಶಹೊಂದುವುದಿಲ್ಲ.

ಬಾಲಿಶಸ್ತು ನರೋ ನಿತ್ಯಂ ವೈಕ್ಲವ್ಯಂ ಯೋಽನುವರ್ತತೇ ।
ಸ ಮಜ್ಜತ್ಯವಶಃ ಶೋಕೇ ಭಾರಾಕ್ರಾಂತೇವ ನೌರ್ಜಲೇ ॥೧೦॥

ಬಾಲಬುದ್ಧಿಯವನಾದ (ಮೂರ್ಖನಾದ), ಮನಸ್ಸನ್ನು ಹತೋಟಿಯಲ್ಲಿಟ್ಟುಕೊಳ್ಳದ, ಅನುದಿನವೂ ವ್ಯಾಕುಲಿತವಾದ ಬುದ್ಧಿಯನ್ನೇ ಹೊಂದಿರುವ ಮನುಷ್ಯನು-ಹೆಚ್ಚು ಭಾರವನ್ನು ಹೊತ್ತಿರುವ ಹಡಗು ಸಮುದ್ರದಲ್ಲಿ ಮುಳುಗಿಹೋಗುವಂತೆ-ವಿನಾಶಹೊಂದುತ್ತಾನೆ.

ರಾಘವ! ಇದೋ ಈ ಎರಡು ಕೈಗಳನ್ನೂ ಜೋಡಿಸಿ ನಮಸ್ಕಾರ ಮಾಡುತ್ತಾ ಕೇಳಿಕೊಳ್ಳುತ್ತೇನೆ. ಪೌರುಷವನ್ನು ಆಶ್ರಯಿಸು. ದುಃಖಕ್ಕೆ ಎಡೆಗೊಡುವುದು ಯೋಗ್ಯವಲ್ಲ.

ಯೇ ಶೋಕಮನುವರ್ತನ್ತೇ ನ ತೇಷಾಂ ವಿದ್ಯತೇ ಸುಖಮ್ ।
ತೇಜಶ್ಚ ಕ್ಷೀಯತೇ ತೇಷಾಂ ನ ತ್ವಂ ಶೋಚಿತುಮರ್ಹಸಿ ॥೧೨॥

ಯಾರು ಯಾವಾಗಲೂ ದುಃಖಪಡುತ್ತಲೇ ಇರುವರೋ-ಅಂತಹವರಿಗೆ ಸುಖವೆಂಬುದೇ ಇಲ್ಲವಾಗುತ್ತದೆ. ಅನುಕ್ರಮವಾಗಿ ಅವರು ತೇಜಸ್ಸಿನಿಂದಲೂ ವಿಹೀನರಾಗುತ್ತಾರೆ. ಆದುದರಿಂದ ಸತತವಾಗಿ ದುಃಖಿಸುವುದು ನಿನಗೆ ಯೋಗ್ಯವಾಗಿ ಕಾಣುವುದಿಲ್ಲ.

---

ಮತ್ತೊಬ್ಬ ವ್ಯಾಖ್ಯಾನಕಾರರು: ನಿಲಯಂ = ಗುಪ್ತವಾಸಸ್ಥಾನಂ – ಗುಪ್ತವಾಸಸ್ಥಾನವನ್ನು ನಾನು ತಿಳಿದವನಾಗಿಲ್ಲ. (ವಾಸಸ್ಥಾನವೇನೋ ಲಂಕೆಯೆಂಬುದು ಗೊತ್ತಿದೆ. ಆದರೆ ಗುಪ್ತಸ್ಥಾನವು ತಿಳಿಯದು.) ಹೀಗೆ ಅರ್ಥಮಾಡಿ ಮುಂದೆ ಹೇಳುವುದಕ್ಕೂ ಇದಕ್ಕೂ ವಿರೋಧಾಭಾಸವಿಲ್ಲವೆಂದು ಸಮರ್ಥಿಸಿದ್ದಾರೆ. ಮತ್ತೊಬ್ಬರು: ಸರ್ವಥಾ ನ ಜಾನೇ = ಸರ್ವಪ್ರಕಾರೇಣ ನ ಜಾನೇ-ಅವನ ವಿಷಯವು ಸಂಪೂರ್ಣವಾಗಿ ತಿಳಿದಿಲ್ಲ. ಸಾಮಾನ್ಯತೋ ಜಾನೇ = ಸಾಮಾನ್ಯವಾಗಿ ತಿಳಿದುಕೊಂಡಿದ್ದೇನೆ-ಎಂದು ಅರ್ಥಮಾಡಿ ಹೀಗೆ ಹೇಳಿದುದರಿಂದ ಸುಳ್ಳನ್ನು ಹೇಳಿದಂತಾಗಲಿಲ್ಲ-ಎಂದು ಸುಗ್ರೀವನ ಮಾತನ್ನು ಸಮರ್ಥಿಸಿದ್ದಾರೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

ಶೋಕೇನಾಭಿಪ್ರಪನ್ನಸ್ಯ ಜೀವಿತೇ ಚಾಪಿ ಸಂಶಯಃ ।
ಸ ಶೋಕಂ ತ್ಯಜ ರಾಜೇನ್ದ್ರ ಧೈರ್ಯಮಾಶ್ರಯ ಕೇವಲಮ್ ॥

ಶೋಕಾಭಿಭೂತನಾದವನಿಗೆ ಜೀವನದಲ್ಲಿಯೇ ಸಂಶಯವುಂಟಾಗುತ್ತದೆ. ತನ್ನ ಜೀವಿತವೇ ವ್ಯರ್ಥವೆಂಬ ಭಾವನೆಯುಂಟಾಗುತ್ತದೆ. ಆದುದರಿಂದ, ರಾಜೇಂದ್ರ ! ಶೋಕವನ್ನು ಸಂಪೂರ್ಣವಾಗಿ ತ್ಯಜಿಸು. ಅತಿಶಯವಾದ ಧೈರ್ಯವನ್ನು ಆಶ್ರಯಿಸು.

ನಾನು ನಿನಗೆ ಸ್ನೇಹಭಾವದಿಂದ ಹಿತಕರವಾದ ಮಾತನ್ನು ಹೇಳುತ್ತಿರುವೆನೇ ಹೊರತು ಉಪದೇಶಮಾಡುತ್ತಿಲ್ಲ. ನಿನಗೆ ಉಪದೇಶಿಸುವ ಸಾಮರ್ಥ್ಯವೂ ನನಗಿಲ್ಲ. ನನ್ನೊಡನೆ ಮಾಡಿಕೊಂಡಿರುವ ಮೈತ್ರಿಯನ್ನು ಗೌರವಿಸಲಾದರೂ ನೀನು ದುಃಖವನ್ನು ಬಿಡುವುದು ಉಚಿತವಾಗಿದೆ."

ಸುಗ್ರೀವನು ಹೀಗೆ ಸುಮಧುರವಾದ ಮಾತುಗಳಿಂದ ಸಂತೈಸಿದನಂತರ ಶ್ರೀರಾಮನು ಕಣ್ಣೀರಿನಿಂದ ಸಂಪೂರ್ಣವಾಗಿ ತೋಯ್ದುಹೋಗಿದ್ದ ಮುಖವನ್ನು ವಸ್ತ್ರದ ಅಂಚಿನಿಂದ ಒರೆಸಿಕೊಂಡನು. ಸುಗ್ರೀವನ ಮಾತಿನಿಂದ ಸ್ವಸ್ಥಚಿತ್ತನಾದ ಪ್ರಭುವು ಆತನನ್ನು ಗಾಢವಾಗಿ ಆಲಿಂಗಿಸಿಕೊಂಡು ಹೇಳಿದನು :

"ಸುಗ್ರೀವ ! ಸ್ನೇಹಿತನೂ ಹಿತೈಷಿಯೂ ಆಗಿರುವ ವಯಸ್ಯನು ತನ್ನ ಗೆಳೆಯನಿಗಾಗಿ ಯಾವ ಕಾರ್ಯವನ್ನು ಮಾಡುವನೋ–ಅದಕ್ಕೆ ಅನುರೂಪವಾದ ಮತ್ತು ಯೋಗ್ಯವಾದ ಕಾರ್ಯವನ್ನೇ ನೀನು ಮಾಡಿರುವೆ. ಪ್ರಿಯಸಖನೇ ! ನಿನ್ನಿಂದ ಸಮಾಧಾನಗೊಳಿಸಲ್ಪಟ್ಟ ನಾನು ಈಗ ನನ್ನ ಸಹಜಗುಣವನ್ನು ಪಡೆದುಕೊಂಡಿರುತ್ತೇನೆ. ದುಃಖವನ್ನು ದೂರಮಾಡಿದ್ದೇನೆ. ನಿನ್ನಂತಹ ಬಂಧುವು ಸಿಕ್ಕುವುದು ದುರ್ಲಭವೇ ಸರಿ. ಅದರಲ್ಲಿಯೂ ವಿಶೇಷವಾಗಿ ಇಂತಹ ಕಷ್ಟಸಮಯದಲ್ಲಿ ಸಿಕ್ಕುವುದು ಅತಿವಿರಳ.

ಭಯಂಕರನಾದ ಮತ್ತು ದುರಾತ್ಮನಾದ ರಾವಣನು ಎಲ್ಲಿರುವನೆಂಬುದನ್ನು ತಿಳಿಯುವುದೂ ಮತ್ತು ಸೀತೆಯು ಎಲ್ಲಿರುವಳೆಂಬುದನ್ನು ಹುಡುಕುವುದೂ ನಿನ್ನ ಕರ್ತವ್ಯವಾಗಿರುತ್ತದೆ. ನಿನ್ನಲ್ಲಿ ಸಂಪೂರ್ಣವಾಗಿ ವಿಶ್ವಾಸವನ್ನಿಟ್ಟಿರುವ ನಾನು ನಿನಗಾಗಿ ಯಾವ ಕಾರ್ಯವನ್ನು ಮಾಡಬೇಕೆಂಬುದನ್ನು

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

ಹೇಳು. ವರ್ಷಾಕಾಲದಲ್ಲಿ ಉತ್ತು ಹಸನುಮಾಡಿದ ಕ್ಷೇತ್ರದಲ್ಲಿ ಬಿತ್ತಿದ ಬೀಜಗಳು ಫಲನೀಡುವಂತೆ–ನೀನು ಹೇಳುವ ಎಲ್ಲ ಕಾರ್ಯಗಳೂ ಕೈಗೂಡುತ್ತವೆ. 'ವಾಲಿನಂ ತಂ ಹನಿಷ್ಯಾಮಿ–ವಾಲಿಯನ್ನು ನಾನು ಸಂಹರಿಸುತ್ತೇನೆ'–ಎಂದು ಅಭಿಮಾನಪೂರ್ವಕವಾಗಿ ಯಾವ ಮಾತನ್ನಾಡಿದೆನೋ–ಅದನ್ನು ನೀನು ಸತ್ಯವೆಂದೇ ಭಾವಿಸು. ಹಿಂದೆ ಯಾವಾಗಲೂ ಸುಳ್ಳನ್ನು ಹೇಳಿದವನಲ್ಲ. ಮುಂದೆಯೂ ಹೇಳುವುದಿಲ್ಲ. ಸತ್ಯದ ಮೇಲೆ ಆಣೆಯಿಟ್ಟು ಈ ಮಾತನ್ನು ನಿನಗೆ ಹೇಳುತ್ತಿದ್ದೇನೆ."

ಶ್ರೀರಾಮನ ಮಾತನ್ನು, ಅದರಲ್ಲಿಯೂ ವಾಲಿಯನ್ನು ಸಂಹರಿಸುವೆನೆಂದು ಪುನಃ ಪ್ರತಿಜ್ಞೆ ಮಾಡಿರುವುದನ್ನು ಕೇಳಿ, ಅಮಾತ್ಯರಿಂದಲೂ ವಾನರರಿಂದಲೂ ಪರಿವೃತನಾಗಿದ್ದ ಸುಗ್ರೀವನು ಪರಮಹೃಷ್ಟನಾದನು. ಹೀಗೆ ಏಕಾಂತದಲ್ಲಿ ಸೇರಿದ್ದ ಆ ಇಬ್ಬರು ನರ-ವಾನರರು ಪರಸ್ಪರವಾಗಿ ತಮ್ಮ ಸುಖ-ದುಃಖಗಳಿಗೆ ಸಂಬಂಧಿಸಿದ ಮಾತುಗಳನ್ನಾಡಿಕೊಂಡರು.

ರಾಜೇಂದ್ರನಾದ ಮಹಾನುಭಾವನಾದ ಶ್ರೀರಾಮನ ಪ್ರತಿಜ್ಞಾವಚನವನ್ನು ಕೇಳಿ ವಿದ್ವಾಂಸನಾದ, ಕಪಿವೀರಮುಖ್ಯನಾದ ಸುಗ್ರೀವನು ತಾನು ಕೃತಕೃತ್ಯನಾದೆನೆಂದು ಭಾವಿಸಿಕೊಂಡನು.

೭ನೆಯ ಸರ್ಗವು ಮುಗಿಯಿತು.

ಕಿಷ್ಕಿಂಧಾಕಾಂಡ ೮ನೆಯ ಸರ್ಗ

## ಸುಗ್ರೀವನು ಶ್ರೀರಾಮನಲ್ಲಿ ತನ್ನ ದುಃಖವನ್ನು ಹೇಳಿಕೊಂಡುದು : ಶ್ರೀರಾಮನು ಸುಗ್ರೀವನಿಗೆ ಆಶ್ವಾಸನೆಯನ್ನಿತ್ತು ಅಣ್ಣನೊಡನೆ ವೈರಕ್ಕೆ ಕಾರಣವನ್ನು ಹೇಳಿದುದು

ಪರಿತುಷ್ಟಸ್ತು ಸುಗ್ರೀವಸ್ತೇನ ವಾಕ್ಯೇನ ವಾನರಃ ।
ಲಕ್ಷ್ಮಣಸ್ಯಾಗ್ರಜಂ ಶೂರಮಿದಂ ವಚನಮಬ್ರವೀತ್ ॥೧॥

ವಾನರಶ್ರೇಷ್ಠನಾದ ಸುಗ್ರೀವನು ಶ್ರೀರಾಮನು ಹೇಳಿದ ಆ ಮಾತಿನಿಂದ ಸಂತೋಷಗೊಂಡು ಶೂರನಾದ ಲಕ್ಷ್ಮಣಾಗ್ರಜನಿಗೆ ಹೇಳಿದನು :

"ರಾಜೇಂದ್ರನೇ! ದೇವತೆಗಳು ನನ್ನ ಮೇಲೆ ಅಪಾರವಾದ ಕೃಪೆ

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

ದೋರಿದ್ದಾರೆ. ಇದರಲ್ಲಿ ಸಂಶಯವೇ ಇಲ್ಲ. ನಿನ್ನಂತಹ ಸಕಲಗುಣಪರಿಪೂರ್ಣನಾದ ಮಹಾಪುರುಷನು ನನಗೆ ಮಿತ್ರನಾಗಿರುವನಲ್ಲವೇ ? ನಿನ್ನನ್ನು ಸಹಾಯಕನನ್ನಾಗಿ ಮಾಡಿಕೊಂಡರೆ-ದೇವತೆಗಳ ರಾಜ್ಯವನ್ನಾದರೂ ಸ್ವಾಧೀನಪಡಿಸಿಕೊಳ್ಳಲು ಸಾಧ್ಯವಾಗುತ್ತದೆ. ಹೀಗಿರುವಾಗ ನನ್ನ ರಾಜ್ಯದ ವಿಷಯದಲ್ಲಿ ಹೇಳತಕ್ಕದ್ದೇನಿದೆ ? ರಘುವಂಶಸಂಭೂತನಾದ ಶ್ರೀರಾಮನನ್ನು ಅಗ್ನಿಸಾಕ್ಷಿಯಾಗಿ ಮಿತ್ರನನ್ನಾಗಿ ಮಾಡಿಕೊಂಡಿರುವ ನಾನಿಂದು ಬಂಧುಗಳ ಮತ್ತು ಸುಹೃದರ ಅಪಾರವಾದ ಮನ್ನಣೆಗೆ ಪಾತ್ರನಾಗಿದ್ದೇನೆ. ನಾನು ನಿನಗೆ ಯೋಗ್ಯನಾದ ವಯಸ್ಯನೇ ಆಗಿರುವೆನು. ಈ ವಿಷಯವನ್ನು ನೀನು ಸ್ವಲ್ಪದಿವಸಗಳಲ್ಲಿಯೇ ಮನಗಾಣಲಿರುವೆ. ನನ್ನಲ್ಲಿರುವ ಗುಣಗಳನ್ನು ನಾನೇ ಹೇಳಿಕೊಳ್ಳಲು ಸಮರ್ಥನಲ್ಲ; ಹಾಗೆ ಹೇಳುವುದು ಉಚಿತವೂ ಅಲ್ಲ.

ಮಹಾತ್ಮರಾದ ಜಿತೇಂದ್ರಿಯರಾದ, ನಿನ್ನಂತಹವರಿಗೆ ಆತ್ಮಜ್ಞಾನಿಗಳಂತೆ-ಧೈರ್ಯವೂ ಅಧಿಕವಾಗಿರುತ್ತದೆ. ಆರ್ತರ ವಿಷಯದಲ್ಲಿ ಪ್ರೀತಿಯೂ ನಿಶ್ಚಲವಾಗಿರುತ್ತದೆ.

ಬೆಳ್ಳಿಯನ್ನಾಗಲೀ, ಚಿನ್ನವನ್ನಾಗಲೀ, ವಸ್ತ್ರವನ್ನಾಗಲೀ, ಶುಭಕರವಾದ ಆಭರಣಗಳನ್ನಾಗಲೀ – ಅವಿಭಾಜ್ಯವಾದುವೆಂದೂ, ತಮ್ಮಲ್ಲಿರುವುದಕ್ಕಿಂತಲೂ ಬೇರೆಯದಲ್ಲವೆಂದೂ ಸುಹೃದರು ಭಾವಿಸುತ್ತಾರೆ. ತಮ್ಮಲ್ಲಿರುವುದಕ್ಕೂ ತಮ್ಮ ಮಿತ್ರರಲ್ಲಿರುವುದಕ್ಕೂ ಭೇದವನ್ನೆಣಿಸುವುದಿಲ್ಲ. ತಮ್ಮಲ್ಲಿರುವ ಐಶ್ವರ್ಯಕ್ಕೆ ತಮ್ಮ ಮಿತ್ರರೂ ಸಹಭಾಗಿಗಳೆಂದು ಸತ್ಪುರುಷರು ಭಾವಿಸುತ್ತಾರೆ.

ಆಢ್ಯೋ ವಾಪಿ ದರಿದ್ರೋ ವಾ ದುಃಖಿತಃ ಸುಖಿತೋಽಪಿ ವಾ ।
ನಿರ್ದೋಷೋ ವಾ ಸದೋಷೋ ವಾ ವಯಸ್ಯಃ ಪರಮಾ ಗತಿಃ ॥

ಐಶ್ವರ್ಯವಂತನೇ ಆಗಿದ್ದರೂ, ದರಿದ್ರನೇ ಆಗಿದ್ದರೂ, ಸುಖಿಯೇ ಆಗಿದ್ದರೂ, ದುಃಖಿಯೇ ಆಗಿದ್ದರೂ, ನಿರ್ದೋಷಿಯೇ ಆಗಿದ್ದರೂ, ದೋಷಯುಕ್ತನೇ ಆಗಿದ್ದರೂ–ವಯಸ್ಯನೇ ಶ್ರೇಷ್ಠವಾದ ಆಶ್ರಯನಾಗುತ್ತಾನೆ. ಅಂತಹ ಸ್ನೇಹವು ಇಬ್ಬರಲ್ಲಿಯೂ ಇರುವುದೆಂಬುದನ್ನು ಕಂಡುಕೊಂಡನಂತರ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಸ್ನೇಹಿತನ ಸಲುವಾಗಿ ಧನತ್ಯಾಗ, ಸುಖತ್ಯಾಗ, ದೇಶತ್ಯಾಗಗಳನ್ನೂ ಮಾಡ ಬೇಕಾಗುತ್ತದೆ."*

ಇಂದ್ರನ ಕಾಂತಿಗೆ ಸಮಾನವಾದ ಕಾಂತಿಯಿಂದ ಬೆಳಗುತ್ತಿದ್ದ, ಧೀಮಂತನಾದ ಲಕ್ಷ್ಮಣನ ಸಮ್ಮುಖದಲ್ಲಿ ಹೀಗೆ ಹೇಳಿದ ಪ್ರಿಯದರ್ಶನನಾದ ಸುಗ್ರೀವನಿಗೆ ರಾಮನು 'ತತ್ತಥಾ ಅದು ಹಾಗೆಯೇ'–ಎಂದನು. ರಾಮ-ಲಕ್ಷ್ಮಣರಿಬ್ಬರೂ ನಿಂತೇ ಇರುವುದನ್ನು ಗಮನಿಸಿದ ಸುಗ್ರೀವನು ಚಂಚಲ ವಾಗಿದ್ದ ತನ್ನ ಕಣ್ಣುಗಳನ್ನು ಅರಣ್ಯದ ಸುತ್ತಲೂ ಹಾಯಿಸಿದನು. ಹಾಗೆ ಸುತ್ತಲೂ ನೋಡುತ್ತಿದ್ದ ಸುಗ್ರೀವನಿಗೆ ಹೂಗಳಿಂದ ತುಂಬಿದ್ದ, ಚಿಗುರೆಲೆಗಳಿಂದ ಕೂಡಿದ್ದ, ದುಂಬಿಗಳಿಂದ ಶೋಭಾಯಮಾನವಾಗಿ ಕಾಣುತ್ತಿದ್ದ ಸಾಲವೃಕ್ಷವೊಂದು ಹತ್ತಿರದಲ್ಲಿಯೇ ಕಂಡಿತು. ಅ ವುರದಲ್ಲಿಯೇ ಹೆಚ್ಚು ಎಲೆಗಳಿಂದ ಕೂಡಿದ್ದು ಶೋಭಾಯಮಾನವಾಗಿ ಕಾಣು ತ್ತಿದ್ದ ರೆಂಬೆಯೊಂದನ್ನು ಮುರಿದು ಶ್ರೀರಾಮನಿಗೆ ಕುಳಿತುಕೊಳ್ಳಲು ಅಣಿ ಮಾಡಿಕೊಟ್ಟು, ತಾನೂ ಅವನ ಜೊತೆಯಲ್ಲಿಯೇ ಕುಳಿತುಕೊಂಡನು. ಶ್ರೀರಾಮ-ಸುಗ್ರೀವರಿಬ್ಬರೂ ಕುಳಿತುದನ್ನು ಕಂಡು ಹನುಮಂತನು ಎಲೆ ಗಳಿಂದ ಸಮೃದ್ಧವಾಗಿದ್ದ ಸಾಲವೃಕ್ಷದ ಮತ್ತೊಂದು ರೆಂಬೆಯನ್ನು ಮುರಿದು ಅವರ ಮೇಲೆ ಲಕ್ಷ್ಮಣನನ್ನು ಕೂರಿಸಿದನು.[1] ಶ್ರೀರಾಮನು ಫಲ-ಪುಷ್ಪ

---

* ಆಪತ್ತಿನಲ್ಲಿರುವ ಸ್ನೇಹಿತನನ್ನು ಪಾರುಮಾಡುವ ಸಲುವಾಗಿ ಆಪ್ತನಾದ ಸ್ನೇಹಿತನು ಧನವನ್ನೂ ವ್ಯಯಿಸುತ್ತಾನೆ. ಕಷ್ಟಪಡುತ್ತಾನೆ. ದೇಶವನ್ನಾದರೂ ಬಿಟ್ಟುಹೋಗು ತ್ತಾನೆ. ದೇಹತ್ಯಾಗೋಽಪಿ ವಾ ಪುನಃ ಎಂಬ ಪಾಠಾಂತರದ ಪ್ರಕಾರ ದೇಹತ್ಯಾಗವನ್ನೇ ಮಾಡಿಯಾದರೂ ಮಿತ್ರನನ್ನು ಆಪತ್ತಿನಿಂದ ಪಾರುಮಾಡುವ ಪ್ರಯತ್ನವನ್ನು ನಿಷ್ಠಾ ವಂತನಾದ ಸ್ನೇಹಿತನು ಮಾಡುತ್ತಾನೆ.

1 ೫ನೆಯ ಸರ್ಗದ ೧೯ ಮತ್ತು ೨೦ನೆಯ ಶ್ಲೋಕಗಳಲ್ಲಿಯೂ ಈ ವಿಷಯವೇ ಬಂದಿರುತ್ತವೆ. ತತಃ ಸುಪರ್ಣಬಹುಲಾಂ ಭಙ್ಕ್ತ್ವಾ ಶಾಖಾಂ ಸುಪುಷ್ಪಿತಾಮ್ | ಸಾಲ ಸ್ಯಾಸ್ತೀರ್ಯ ಸುಗ್ರೀವೋ ನಿಷಸಾದ ಸರಾಘವಃ (೧೯) ಲಕ್ಷ್ಮಣಾಯಾಥ ಸಂಹೃಷ್ಟೋ ಹನೂಮಾನ್ಮಾರುತಾತ್ಮಜಃ | ಶಾಖಾಂ ಚನ್ದನವೃಕ್ಷಸ್ಯ ದದೌ ಪರಮಪುಷ್ಪಿತಾಮ್ (೨೦) ಸುಗ್ರೀವನು ಆಭರಣಗಳನ್ನು ತರಲು ಹೋಗುತ್ತಾನೆ. ಸೀತೆಯ ಆಭರಣಗಳನ್ನು ನೋಡಿದೊಡನೆಯೇ ಶ್ರೀರಾಮನು ಮೂರ್ಛಿತನಾಗಿ ಭೂಮಿಯ ಮೇಲೆ ಬೀಳುತ್ತಾನೆ. ಹಾ ಪ್ರಿಯೇತಿ ರುದನ್ಧೈರ್ಯಮುತ್ಸೃಜ್ಯ ನ್ಯಪತತ್ಕ್ಷಿತೌ || ಸರ್ಗ ೬-ಶ್ಲೋ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಗಳಿಂದ ಸಮೃದ್ಧವಾಗಿದ್ದ ಶ್ರೇಷ್ಠವಾದ ಆ ಋಶ್ಯಮೂಕಪರ್ವತದ ಶಿಖರದಲ್ಲಿ ಶಾಂತವಾದ ಸಮುದ್ರದಂತೆ ಗಾಂಭೀರ್ಯದ ಮುಖಮುದ್ರೆಯನ್ನು ಹೊಂದಿ ಕುಳಿತಿರುವುದನ್ನು ಸುಗ್ರೀವನು ಗಮನಿಸಿದನು. ಅದರಿಂದ ಪ್ರಹೃಷ್ಟನಾದ ಸುಗ್ರೀವನು ಶುಭಾಸಹವಾದ ಮತ್ತು ಮೃದುಪೂರ್ವವಾದ ಮಾತಿನಿಂದ ರಾಮನೊಡನೆ ಸಂಭಾಷಣೆಯನ್ನು ಪ್ರಾರಂಭಿಸಿದನು. ಆದರೆ ಸಂತೋಷಾಧಿಕ್ಯ ದಿಂದಾಗಿ ಸುಗ್ರೀವನ ಬಾಯಲ್ಲಿ ಮಾತುಗಳು ಸ್ಪಷ್ಟವಾಗಿ ಹೊರಬರು ತ್ತಿರಲಿಲ್ಲ. ಹರ್ಷದಿಂದ ವ್ಯಾಕುಲಿತವಾದ ಅಕ್ಷರಗಳಿಂದಲೇ ಕೂಡಿದ್ದ ವಾಕ್ಯಗಳಿಂದ ಪ್ರೀತಿಪೂರ್ವಕವಾಗಿ ಮಾತನಾಡಲು ಉಪಕ್ರಮಿಸಿದನು :

"ರಾಘವ ! ನಾನು ನಮ್ಮ ಅಣ್ಣನಾದ ವಾಲಿಯಿಂದ ವಂಚಿತ ನಾದೆನು. ಪತ್ನಿಯನ್ನೂ ಕಳೆದುಕೊಂಡು ಅತ್ಯಂತದುಃಖದಿಂದ ಈ ಪರ್ವತ ದಲ್ಲಿ ಅಲೆಯುತ್ತಿದ್ದೇನೆ. ಅವನ ಭಯದಿಂದಲೂ ಪೀಡಿತನಾಗಿದ್ದೇನೆ. ಸರ್ವಲೋಕಗಳಿಗೂ ಅಭಯದಾಯಕನೇ ! ವಾಲಿಯ ಕಾರಣದಿಂದಾಗಿ ಭಯ ಗೊಂಡಿರುವ ಅನಾಥನಾದ ನನ್ನ ವಿಷಯದಲ್ಲಿ ಕೃಪೆದೋರು."

---

೧೭. ಆ ಸಂದರ್ಭದಲ್ಲಿ ರಾಮ-ಸುಗ್ರೀವರಿಬ್ಬರೂ ನಿಂತುಕೊಂಡೇ ಮಾತನಾಡುತ್ತಿರು ತ್ತಾರೆ. ಅವರಂತೆಯೇ ಹನುಮ-ಲಕ್ಷ್ಮಣರೂ ನಿಂತಿರುವುದು ಸ್ವಾಭಾವಿಕವಾಗಿಯೇ ಇದೆ. ಮುಂದೆ ಶ್ರೀರಾಮನು ಆ ರೆಂಬೆಯ ಮೇಲೆ ಪುನಃ ಕುಳಿತುಕೊಳ್ಳಲು ಹೋಗುವು ದಿಲ್ಲ. ನಿಂತುಕೊಂಡೇ ಮಾತನಾಡುತ್ತಿರುತ್ತಾನೆ. ತತೋ ರಾಮಂ ಸ್ಥಿತಂ ದೃಷ್ಟ್ವಾ ಲಕ್ಷ್ಮಣಂ ಚ ಮಹಾಬಲಮ್ – ರಾಮ-ಲಕ್ಷ್ಮಣರಿಬ್ಬರೂ ನಿಂತಿರುವುದನ್ನು ನೋಡಿ ಸುಗ್ರೀವನು ಸಾಲವೃಕ್ಷದ ಮತ್ತೊಂದು ರೆಂಬೆಯನ್ನು ಮುರಿದು ಅವರ ಮೇಲೆ ಶ್ರೀರಾಮ ನನ್ನು ಕುಳ್ಳಿರಿಸಿ ತಾನೂ ಕುಳಿತುಕೊಳ್ಳುತ್ತಾನೆ. ಹನುಮಂತನೂ ಸುಗ್ರೀವನಂತೆಯೇ ಬೇರೊಂದು ಶಾಖೆಯನ್ನು ಮುರಿದು ಲಕ್ಷ್ಮಣನಿಗೆ ಕುಳಿತುಕೊಳ್ಳಲು ಅನುವುಮಾಡಿಕೊಡು ತ್ತಾನೆ. ಈ ಪ್ರಕರಣವನ್ನು ಹೀಗೆ ನಯನಮಾಡಬಹುದಾಗಿದೆ. ವ್ಯಾಖ್ಯಾನಕಾರರೂ ಇದನ್ನೇ ಗಮನಿಸಿ : ಸಮೀಚೀನಶಾಖಾಲಾಭಾರ್ಥಂ – ಹಿಂದೆ ಇದ್ದುದಕ್ಕಿಂತಲೂ ಉತ್ತಮವಾದ ರೆಂಬೆಯನ್ನು ತರಬೇಕೆಂಬ ಆಶಯದಿಂದ ಸುತ್ತಲೂ ನೋಡಿದನು- ಎಂದು ಅರ್ಥಮಾಡಿರುತ್ತಾರೆ. ಮತ್ತೊಬ್ಬ ವ್ಯಾಖ್ಯಾನಕಾರರು : ಪೂರ್ವದತ್ತ ಶಾಖಾಸನಯೋಃ ಅತಿಸುಖಪ್ರದತ್ವಂ ನ ಇತಿ ಧ್ವನಿತಮ್–ಹಿಂದೆ ಕೊಟ್ಟಿದ್ದ ರೆಂಬೆಯು ಕುಳಿತುಕೊಳ್ಳಲು ಹೆಚ್ಚು ಸುಖದಾಯಕವಾಗಿರಲಿಲ್ಲ. ಆದುದರಿಂದ ಸುಗ್ರೀವನು ಮತ್ತೊಂದು ರೆಂಬೆಯನ್ನು ಮುರಿದು ಕುಳಿತುಕೊಳ್ಳಲು ಕೊಟ್ಟನು – ಎಂಬ ಅಭಿ ಪ್ರಾಯವು ಇಲ್ಲಿ ಕಾಣುತ್ತದೆ–ಎಂದಿದ್ದಾರೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಸುಗ್ರೀವನು ಹೀಗೆ ಹೇಳಲು ತೇಜಸ್ವಿಯಾದ, ಸಕಲಧರ್ಮಗಳನ್ನೂ ತಿಳಿದಿದ್ದ, ಧರ್ಮದ ಮೇಲೆ ಅತ್ಯಂತಪ್ರೀತಿಯುಳ್ಳವನಾಗಿದ್ದ ಶ್ರೀರಾಮನು ನಗುತ್ತಿರುವನೋ ಎಂಬ ಮುಖಭಾವದಿಂದ ಸುಗ್ರೀವನಿಗೆ ಹೇಳಿದನು :

" ಸುಗ್ರೀವ ! ಗೆಳೆತನಕ್ಕೆ ಉಪಕಾರವೇ ಮುಖ್ಯವಾದ ಪ್ರಯೋಜನ. ಅಪಕಾರಮಾಡುವುದು ಶತ್ರುವಿನ ಲಕ್ಷಣವಾಗಿರುತ್ತದೆ. ಇದು ಲೋಕನ್ಯಾಯ. ನಿನ್ನ ಭಾರ್ಯೆಯನ್ನು ಅಪಹರಿಸಿರುವ ಆ ವಾಲಿಯನ್ನು ನಾನು ಈಗಲೇ ಸಂಹರಿಸುತ್ತೇನೆ. ಸುತೀಕ್ಷ್ಣವಾದ ತೇಜಸ್ಸಿನಿಂದ ಕೂಡಿರುವ, ಶರವಣದಲ್ಲಿ ಹುಟ್ಟಿರುವ ಕಾಂಡಗಳಿರುವ, ಸುವರ್ಣಭೂಷಿತವಾಗಿರುವ, ರಣಹದ್ದಿನ ರೆಕ್ಕೆಗಳಿಂದ ಮುಚ್ಚಲ್ಪಟ್ಟಿರುವ, ಇಂದ್ರನ ವಜ್ರಾಯುಧಕ್ಕೆ ಸಮಾನವಾಗಿರುವ, ಸುಂದರವಾದ ಗಿಣ್ಣುಗಳನ್ನು ಹೊಂದಿರುವ, ತೀಕ್ಷ್ಣವಾದ ಅಗ್ರಭಾಗಗಳಿರುವ, ಮಹಾವೇಗಶಾಲಿಗಳಾದ, ಕೋಪಗೊಂಡ ಸರ್ಪಗಳಂತೆಯೇ ಇರುವ ಇವೇ ನನ್ನ ಬಾಣಗಳು. ನಿನ್ನ ವಿಷಯದಲ್ಲಿ ಅಪರಾಧವನ್ನೆಸಗಿರುವ ಅಣ್ಣನ ರೂಪದಲ್ಲಿರುವ ನಿನ್ನ ಶತ್ರುವು ವಜ್ರಾಘಾತದಿಂದ ಚೆಲ್ಲಾಪಿಲ್ಲಿಯಾಗಿ ಬಿದ್ದಿರುವ ಪರ್ವತದಂತೆ–ಈ ಬಾಣಗಳಿಂದಲೇ ಹತನಾಗಿ ಬೀಳುವುದನ್ನು ನೀನು ನೋಡಲಿರುವೆ."

ರಾಘವನ ಆ ಮಾತುಗಳನ್ನು ಕೇಳಿ ವಾನರವಾಹಿನೀಪತಿಯಾದ ಸುಗ್ರೀವನು ಅಮಿತವಾದ ಆನಂದವನ್ನು ಹೊಂದಿದನು. ' ಸಾಧು ! ರಾಘವ ! ಸಾಧು !'–ಎಂದು ಶ್ರೀರಾಮನನ್ನು ಬಹಳವಾಗಿ ಪ್ರಶಂಸೆಮಾಡಿದನು.

ರಾಮ ಶೋಕಾಭಿಭೂತೋಽಹಂ ಶೋಕಾರ್ತಾನಾಂ ಭವಾನ್ಗತಿಃ ।
ವಯಸ್ಯ ಇತಿ ಕೃತ್ವಾ ಹಿ ತ್ವಯ್ಯಹಂ ಪರಿದೇವಯೇ ॥೨೩॥

" ರಾಘವ ! ನಾನು ಶೋಕಾಭಿಭೂತನಾಗಿದ್ದೇನೆ. ನೀನಾದರೋ ಶೋಕದಿಂದ ಪೀಡಿತರಾದವರಿಗೆ ಶರಣ್ಯನಾಗಿರುವೆ. ನೀನು ನನ್ನ ಆಪ್ತಮಿತ್ರನಾಗಿರುವುದರಿಂದ ನಿನ್ನಲ್ಲಿ ನನ್ನ ದುಃಖವನ್ನು ತೋಡಿಕೊಳ್ಳುತ್ತಿದ್ದೇನೆ. ಹಸ್ತಲಾಘವವನ್ನಿತ್ತು ಅಗ್ನಿಸಾಕ್ಷಿಯಾಗಿ ನನಗೆ ಮಿತ್ರನಾಗಿರುವೆ. ಇದರಿಂದ ನೀನು ನನ್ನ ಪ್ರಾಣಗಳಿಗಿಂತಲೂ ಅಧಿಕನಾಗಿರುವೆ. ಈ ಮಾತನ್ನು ನಾನು ನಿನಗೆ ಸತ್ಯದ ಮೇಲೆ ಆಣೆಯಿಟ್ಟು ಹೇಳುತ್ತಿದ್ದೇನೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ನಿನ್ನನ್ನು ಮಿತ್ರನನ್ನಾಗಿ ಮಾಡಿಕೊಂಡು ನಿನ್ನ ಮೇಲೆ ಸಂಪೂರ್ಣವಾಗಿ ನಂಬಿಕೆಯನ್ನಿಟ್ಟು ಈ ಮಾತನ್ನು ಹೇಳುತ್ತಿದ್ದೇನೆ. ಹೃದಯಾಂತರಾಳದಲ್ಲಿ ಅಡಗಿರುವ ದುಃಖವು ನನ್ನ ಮನಸ್ಸನ್ನು ಪ್ರತಿದಿನವೂ ಘಾಸಿಗೊಳಿಸುತ್ತಿದೆ."

ಹೀಗೆ ಹೇಳುತ್ತಿರುವಾಗಲೇ ಸುಗ್ರೀವನ ಕಣ್ಣುಗಳಲ್ಲಿ ನೀರುತುಂಬಿ ಕೊಂಡಿತು. ಬಿಕ್ಕಿ-ಬಿಕ್ಕಿ ಅಳುತ್ತಿದ್ದುದರಿಂದ ಅವನಿಗೆ ಗಟ್ಟಿಯಾಗಿ ಮಾತ ನಾಡಲೂ ಸಾಧ್ಯವಾಗಲಿಲ್ಲ. ರಾಮನ ಸನ್ನಿಧಿಯಲ್ಲಿದ್ದ ಸುಗ್ರೀವನು ನದಿಯ ಪ್ರವಾಹದಂತೆ ಉಕ್ಕಿಯುಕ್ಕಿ ಬರುತ್ತಿದ್ದ ಕಣ್ಣೀರನ್ನು ಧೈರ್ಯವನ್ನವ ಲಂಬಿಸಿ ಬಹಳ ಬೇಗ ತಡೆದು, ಶುಭಲಕ್ಷಣಗಳಿಂದ ಕೂಡಿದ್ದ ಎರಡು ಕಣ್ಣು ಗಳನ್ನೂ ಚೆನ್ನಾಗಿ ತೊಳೆದುಕೊಂಡು ನಿಟ್ಟುಸಿರುಬಿಡುತ್ತಾ ಶ್ರೀರಾಮನಿಗೆ ಹೇಳಿದನು :

"ರಾಘವ! ಹಿಂದೆ ಬಲಿಷ್ಠನಾದ ವಾಲಿಯು ನನ್ನ ವಿಷಯದಲ್ಲಿ ಅತಿ ನಿಷ್ಠುರವಾದ ಮಾತುಗಳನ್ನು ಆಡಿದ್ದಲ್ಲದೇ ನನ್ನನ್ನು ರಾಜ್ಯದಿಂದಲೂ ಓಡಿಸಿ ಬಿಟ್ಟನು. ಪ್ರಾಣಗಳಿಗಿಂತಲೂ ಪ್ರಿಯಳಾಗಿದ್ದ ನನ್ನ ಭಾರ್ಯೆಯನ್ನೂ ಅಪಹರಿಸಿದನು. ನನ್ನ ಸುಹೃದರೆಲ್ಲರನ್ನೂ ಬಂಧನದಲ್ಲಿರಿಸಿದನು. ಇಷ್ಟು ಮಾತ್ರವಲ್ಲ. ಆ ದುಷ್ಟಾತ್ಮನಾದ ವಾಲಿಯು ನನ್ನನ್ನು ವಿನಾಶಗೊಳಿಸಲು ಈಗಲೂ ಪ್ರಯತ್ನಿಸುತ್ತಲೇ ಇರುವನು. ನನ್ನನ್ನು ಸಂಹರಿಸುವ ಸಲುವಾಗಿ ವಾಲಿಯು ಕಳುಹಿಸಿದ್ದ ಅನೇಕವಾನರರನ್ನು ನಾನು ಸಂಹರಿಸಿರುವೆನು. ನನ್ನನ್ನು ಸಂಹರಿಸಲು ವಾಲಿಯೇ ಮತ್ತಾರನ್ನಾದರೂ ಕಳುಹಿಸಿರಬಹುದೆಂಬ ಸಂದೇಹದಿಂದಲೇ ನಾನು ನಿನ್ನನ್ನು ನೋಡಿದಾಗಲೂ ಈ ಸ್ಥಳವನ್ನು ಬಿಟ್ಟು ಕದಲಲಿಲ್ಲ. ಭಯೇ ಸರ್ವೇ ಹಿ ಬಿಭ್ಯತಿ! ಭಯದ ಸನ್ನಿವೇಶವಿದ್ದಾಗ ಎಲ್ಲರೂ ಭಯಪಡುತ್ತಾರಲ್ಲವೇ? ಹನುಮಂತನೇ ಮೊದಲಾದ ಈ ಪ್ರಮುಖ ವಾನರರು ಮಾತ್ರವೇ ಈ ಸಮಯದಲ್ಲಿ ನನಗೆ ಸಹಾಯಕರಾಗಿದ್ದಾರೆ. ನಾನು ಅತ್ಯಂತಕಷ್ಟದಲ್ಲಿಯೇ ಇದ್ದರೂ ಇವರ ಸಹಾಯದಿಂದಾಗಿ ಪ್ರಾಣ ಗಳನ್ನು ಇದುವರೆಗೂ ಉಳಿಸಿಕೊಂಡಿರುತ್ತೇನೆ. ಸ್ನೇಹಪರರಾದ ಈ ಕಪಿ ಶ್ರೇಷ್ಠರೇ ಸರ್ವಪ್ರಕಾರಗಳಲ್ಲಿಯೂ ನನ್ನನ್ನು ರಕ್ಷಿಸುತ್ತಿದ್ದಾರೆ. ನಾನು ಎಲ್ಲಿಗಾದರೂ ಹೋಗಬೇಕಾದಾಗ ಇವರು ನನ್ನೊಡನೆ ಬರುತ್ತಾರೆ. ನಾನು ನಿಂತಲ್ಲಿಯೇ ಇವರೂ ನಿಂತಿರುತ್ತಾರೆ. ರಾಘವ! ಇದು ನನ್ನ ಸಂಕ್ಷಿಪ್ತ

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri


ವಾದ ಚರಿತ್ರೆ. ಇನ್ನೂ ವಿಸ್ತಾರವಾಗಿ ಹೇಳುವುದರಿಂದ ಪ್ರಯೋಜನವೇನೂ ಇಲ್ಲ. ವಿಖ್ಯಾತವಿಕ್ರಮನಾದ ಅಣ್ಣನಾದ ವಾಲಿಯೇ ನನಗೆ ಪರಮಶತ್ರುವಾಗಿದ್ದಾನೆ. ಅವನು ವಿನಾಶವಾದನಂತರವೇ ನನ್ನ ದುಃಖವೂ ಕೊನೆಗೊಳ್ಳುತ್ತದೆ. ನನ್ನ ಸುಖ ಮತ್ತು ಜೀವಿತಗಳು ಅವನ ವಿನಾಶವನ್ನೇ ಅವಲಂಬಿಸಿವೆ. ಶೋಕಪೀಡಿತನಾಗಿರುವ ನಾನು ನನ್ನ ದುಃಖವು ಕೊನೆಗೊಳ್ಳುವ ಬಗೆಯನ್ನು ಹೇಳಿದ್ದೇನೆ.

ದುಃಖಿತಃ ಸುಖಿತೋ ವಾಪಿ ಸಖ್ಯುರ್ನಿತ್ಯಂ ಸಖಾ ಗತಿಃ ॥೪೦॥

"ಸುಖಿಯೇ ಆಗಿರಲಿ; ದುಃಖಿಯೇ ಆಗಿರಲಿ–ಮಿತ್ರನಿಗೆ ಮಿತ್ರನೇ ಸರ್ವಕಾಲದಲ್ಲಿಯೂ ಆಶ್ರಯನಾಗಿರುತ್ತಾನೆ."

ಸುಗ್ರೀವನು ಹೀಗೆ ಹೇಳಲು ಶ್ರೀರಾಮನು ಪುನಃ ಪ್ರಶ್ನಿಸಿದನು :

"ಸುಗ್ರೀವ! ನಿಮ್ಮಿಬ್ಬರಲ್ಲಿ ಹಗೆತನವು ಯಾವ ಕಾರಣದಿಂದ ಉಂಟಾಯಿತು? ಈ ವಿಷಯವನ್ನು ನಾನು ಯಥಾವತ್ತಾಗಿ ಕೇಳಬೇಕೆಂದಿರುವೆನು. ನಿನಗೂ ಮತ್ತು ನಿನ್ನ ಅಣ್ಣನಿಗೂ ಉಂಟಾಗಿರುವ ವೈರದ ಕಾರಣವನ್ನು ತಿಳಿದನಂತರ ನಿಮ್ಮಿಬ್ಬರ ಬಲಾಬಲಗಳನ್ನು ತೂಗಿ ನೋಡಿ ನಿನಗೆ ಸುಖವನ್ನುಂಟುಮಾಡಲು ಉಪಾಯವನ್ನು ಯೋಚಿಸುತ್ತೇನೆ. ನಿನ್ನ ಅಣ್ಣನು ನಿನ್ನನ್ನು ರಾಜ್ಯಾಪಹಾರದಿಂದಲೂ, ಭಾರ್ಯಾಪಹಾರದಿಂದಲೂ ಅವಮಾನಿಸಿದ ವಿಷಯವನ್ನು ಕೇಳಿ ನನ್ನ ಕೋಪವು–ವರ್ಷಾಕಾಲದಲ್ಲಿ ಬಹಳ ವೇಗವಾಗಿ ಬರುವ ಮಹಾಪೂರದಂತೆ–ಹೃದಯವನ್ನು ಕಂಪನಗೊಳಿಸುತ್ತಾ ಕ್ಷಣ-ಕ್ಷಣಕ್ಕೂ ವರ್ಧಿಸುತ್ತಲೇ ಇದೆ. ಸುಗ್ರೀವ! ಹೃಷ್ಟನಾಗು. ನನ್ನ ಮೇಲೆ ವಿಶ್ವಾಸವನ್ನಿಟ್ಟು ವೈರದ ಕಾರಣವನ್ನು ತಿಳಿಸು. ಧನುಸ್ಸಿನಲ್ಲಿ ಬಾಣವನ್ನು ಆರೋಪಿಸುವುದರೊಳಗಾಗಿ ಎಲ್ಲವನ್ನೂ ಹೇಳಿಬಿಡು. ಬಾಣವನ್ನು ಬಿಟ್ಟೊಡನೆಯೇ ನಿನ್ನ ಶತ್ರುವು ಕೆಳಗುರುಳುತ್ತಾನೆ."

ಮಹಾತ್ಮನಾದ ಶ್ರೀರಾಮನು ಹೀಗೆ ಹೇಳಲು ಸುಗ್ರೀವನು ತನ್ನ ನಾಲ್ಕು ಮಂದಿ ಅಮಾತ್ಯರೊಡನೆ ಅಮಿತವಾದ ಆನಂದವನ್ನು ಹೊಂದಿದನು. ಪ್ರಹೃಷ್ಟವಾದ ಮುಖಭಾವದಿಂದ ಕೂಡಿದ್ದ ಸುಗ್ರೀವನು ಲಕ್ಷ್ಮಣಾಗ್ರಜನ

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

ಸಮ್ಮುಖದಲ್ಲಿ ತನಗೂ ತನ್ನ ಅಣ್ಣನಿಗೂ ಉಂಟಾದ ವೈರದ ಕಾರಣವನ್ನು ಯಥಾವತ್ತಾಗಿ ಹೇಳಲು ಉಪಕ್ರಮಿಸಿದನು.

೮ನೆಯ ಸರ್ಗವು ಮುಗಿಯಿತು.



## ಸುಗ್ರೀವನು ಶ್ರೀರಾಮನಿಗೆ ವಾಲಿಯೊಡನೆ ದ್ವೇಷದ ಕಾರಣವನ್ನು ವಿವರಿಸಿ ಹೇಳಿದುದು

ವಾಲೀ ನಾಮ ಮಮ ಭ್ರಾತಾ ಜ್ಯೇಷ್ಠಃ ಶತ್ರುನಿಷೂದನಃ ।
ಪಿತುರ್ಬಹುಮತೋ ನಿತ್ಯಂ ಮಮ ಚಾಪಿ ತಥಾ ಪುರಾ ॥೧॥

"ರಾಘವ! ಶತ್ರುಗಳ ವಿಧ್ವಂಸಕನಾದ, ವಾಲೀ ಎಂದು ಪ್ರಸಿದ್ಧನಾದ ನನ್ನ ಅಣ್ಣನು ನಮ್ಮ ತಂದೆಯಾದ ಋಕ್ಷರಜಸನಿಗೆ ಬಹಳ ಪ್ರಿಯನಾಗಿದ್ದನು. ಹಗೆತನವುಂಟಾಗುವುದಕ್ಕೆ ಮೊದಲು ನನಗೂ ಅವನು ಆದರಣೀಯನೇ ಆಗಿದ್ದನು. ತಂದೆಯು ವಿರಕ್ತನಾಗಿ ಕಾಡಿಗೆ ಹೋದ ಮೇಲೆ ಸರ್ವಸಮ್ಮತನೂ ಮತ್ತು ಜ್ಯೇಷ್ಠನೂ ಆಗಿರುವ ವಾಲಿಯನ್ನು ಮಂತ್ರಿಗಳು ಕಪಿರಾಜ್ಯಕ್ಕೆ ರಾಜನನ್ನಾಗಿ ಮಾಡಿದರು. ಪಿತೃ-ಪಿತಾಮಹರ ಕಾಲದಿಂದಲೂ ಬಂದಿರುವ ಮಹಾರಾಜ್ಯವನ್ನು ವಾಲಿಯು ಆಳುತ್ತಿದ್ದಾಗ ನಾನು ಎಲ್ಲ ಕಾಲಗಳಲ್ಲಿಯೂ ಭೃತ್ಯನಂತೆ ವಿನೀತನಾಗಿಯೇ ನಡೆದುಕೊಳ್ಳುತ್ತಿದ್ದೆನು. ಸುಪ್ರಸಿದ್ಧನಾದ ದುಂದುಭಿರಾಕ್ಷಸನ ಅಣ್ಣನಾದ ಮಯಾಸುರನ ಮಗ ಮಾಯಾವೀ ಎಂಬುವವನು ಅತ್ಯಂತಬಲಿಷ್ಠನಾಗಿದ್ದನು. ಹೆಂಗಸೊಬ್ಬಳ ಕಾರಣದಿಂದ ಮಾಯಾವಿಗೂ–ವಾಲಿಗೂ ಮಹಾವೈರವುಂಟಾಯಿತು. ಪ್ರಜೆಗಳೆಲ್ಲರೂ ರಾತ್ರಿಯಲ್ಲಿ ಮಲಗಿ ನಿದ್ರಿಸುತ್ತಿದ್ದಾಗ ಕ್ರುದ್ಧನಾದ ಮಾಯಾವಿಯು ಕಿಷ್ಕಿಂಧಾಪಟ್ಟಣದ ಮಹಾದ್ವಾರಕ್ಕೆ ಬಂದು ಗಟ್ಟಿಯಾಗಿ ಗರ್ಜನೆಮಾಡುತ್ತಾ ವಾಲಿಯನ್ನು ಯುದ್ಧಕ್ಕೆ ಆಹ್ವಾನಿಸಿದನು. ಮಲಗಿ ನಿದ್ರಿಸುತ್ತಿದ್ದ ನಮ್ಮಣ್ಣನು ಅವನ ಭಯಂಕರವಾದ ಗರ್ಜನೆಯ ಧ್ವನಿಯನ್ನು ಕೇಳಿ ಎಚ್ಚರಗೊಂಡನು. ಅದನ್ನು ಸಹಿಸಿಕೊಳ್ಳಲು ನಮ್ಮ ಅಣ್ಣನಿಗೆ ಸಾಧ್ಯವಾಗಲಿಲ್ಲ. ಒಡನೆಯೇ ಅವನು ಮಾಯಾವಿಯ ಮೇಲೆ ಬೀಳಲು ರಭಸದಿಂದ ಧಾವಿಸಿದನು. ಅಸುರಶ್ರೇಷ್ಠನಾದ ಮಾಯಾವಿಯನ್ನು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.
ಸಂಹರಿಸಲೆಂದೇ ನಮ್ಮಣ್ಣನು ಅರಮನೆಯಿಂದ ಹೊರಬಿದ್ದನು. ಆ ಸಮಯದಲ್ಲಿ ಅರಮನೆಯಲ್ಲಿದ್ದ ಸ್ತ್ರೀಯರು ಅವನನ್ನು ಹೋಗದಂತೆ ತಡೆದರು. ನಾನು ಕೂಡ ಅತ್ಯಂತವಿನೀತನಾಗಿ – ಈ ಸಮಯದಲ್ಲಿ ರಾಕ್ಷಸನೊಡನೆ ಯುದ್ಧಕ್ಕೆ ಹೋಗುವುದು ಉಚಿತವಲ್ಲವೆಂದು–ಹೇಳಿದೆನು. ಆದರೆ ಮಹಾಬಲಿಷ್ಠನಾದ ವಾಲಿಯು ನಮ್ಮೆಲ್ಲರನ್ನೂ ಹಿಂದಕ್ಕೆ ಸರಿಸಿ ರಭಸದಿಂದ ಹೊರಟೇಬಿಟ್ಟನು. ಸೌಹಾರ್ದದ ಕಾರಣದಿಂದ ನಾನೂ ನಮ್ಮಣ್ಣನನ್ನು ಹಿಂಬಾಲಿಸಿದೆನು. ಮಾಯಾವಿಯು ನಮ್ಮಣ್ಣನನ್ನೂ ಮತ್ತು ನನ್ನನ್ನೂ ದೂರದಿಂದಲೇ ನೋಡಿ ಭಯಗೊಂಡು ಪಲಾಯನಮಾಡಿದನು. ನಾವೂ ಕೂಡ ವೇಗವಾಗಿ ಅವನ ಬೆನ್ನಟ್ಟಹೋದೆವು. ಆ ವೇಳೆಗೆ ಚಂದ್ರನು ಉದಯಿಸಿ ಮೇಲಕ್ಕೆ ಬಂದಿದ್ದನಾದ್ದರಿಂದ ರಾಕ್ಷಸನು ಹೋಗುತ್ತಿದ್ದ ಮಾರ್ಗವು ನಮಗೆ ಚೆನ್ನಾಗಿ ಕಾಣುತ್ತಿದ್ದಿತು. ಮಾಯಾವಿಯು ಹುಲ್ಲಿನಿಂದ ಮುಚ್ಚಿರುವ, ದುರ್ಗಮವಾಗಿದ್ದ, ದೊಡ್ಡದಾದ ಬಿಲವೊಂದನ್ನು ವೇಗವಾಗಿ ಪ್ರವೇಶಿಸಿದನು. ನಾವೂ ವೇಗವಾಗಿಯೇ ಆ ಮಹಾಬಿಲದ ಸಮೀಪಕ್ಕೆ ಹೋಗಿ ದ್ವಾರದಲ್ಲಿ ನಿಂತೆವು. ಶತ್ರುವು ದೊಡ್ಡದಾದ ಬಿಲವನ್ನು ಪ್ರವೇಶಿಸಿದುದನ್ನು ಕಂಡು ಪರಮಕ್ರುದ್ಧನಾದ ವಾಲಿಯು ಉದ್ವೇಗಗೊಂಡ ಮನಸ್ಸಿನಿಂದ ನನ್ನೊಡನೆ–"ಸುಗ್ರೀವ! ನಾನು ಈ ಬಿಲವನ್ನು ಹೊಕ್ಕು ಮಾಯಾವಿಯನ್ನು ಸಂಹರಿಸಿ ಹೊರಬರುವವರೆಗೂ ನೀನು ಏಕಾಗ್ರಚಿತ್ತನಾಗಿ ಈ ಬಿಲದ ಬಾಗಿಲಿನಲ್ಲಿಯೇ ನಿಂತಿರು"– ಎಂದು ಹೇಳಲು, ನಾನೂ ಜೊತೆಯಲ್ಲೇ ಬರುವೆನೆಂದು ನಮ್ಮಣ್ಣನನ್ನು ಬಹಳವಾಗಿ ಪ್ರಾರ್ಥಿಸಿಕೊಂಡೆನು. ಆದರೆ ನಮ್ಮಣ್ಣನು ನನ್ನಿಂದ ತನ್ನ ಕಾಲುಗಳ ಮೇಲೆ ಆಣೆಯಿಡಿಸಿ ಅಲ್ಲೇ ನಿಂತಿರುವೆನೆಂದು ಪ್ರತಿಜ್ಞೆಯನ್ನು ಮಾಡಿಸಿ ಬಿಲವನ್ನು ಪ್ರವೇಶಿಸಿದನು. ವಾಲಿಯು ಬಿಲದೊಳಕ್ಕೆ ಹೋಗಿ ಒಂದು ಪೂರ್ಣವರ್ಷವೇ ಕಳೆದುಹೋಯಿತು. ಬಿಲದ್ವಾರದಲ್ಲಿ ನಿಂತುಕೊಂಡೇ ನಾನು ಆ ಸಮಯವನ್ನು ಕಳೆದೆನು. ಒಂದು ವರ್ಷವಾದರೂ ನಮ್ಮಣ್ಣನು ಬಿಲದಿಂದ ಹೊರಕ್ಕೆ ಬಾರದೇ ಇದ್ದುದರಿಂದ ಅವನು ನಾಶಹೊಂದಿರಬಹುದೆಂದೇ ನಾನು ಭಾವಿಸಿದೆನು. ನನಗೆ ಅಣ್ಣನ ಮೇಲಿದ್ದ ಅತಿಯಾದ ವಾತ್ಸಲ್ಯದ ಕಾರಣದಿಂದಾಗಿ ವ್ಯಾಕುಲವುಂಟಾಯಿತು.



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ನನ್ನ ಮನಸ್ಸಿನಲ್ಲಿ ಅವನು ಸತ್ತುಹೋಗಿರಲೂಬಹುದೆಂಬ ಸಂದೇಹವುಂಟಾಯಿತು. ಸ್ವಲ್ಪದಿನಗಳ ಬಳಿಕ ನೊರೆಯಿಂದ ಕೂಡಿದ ರಕ್ತವು ಆ ಬಿಲದಿಂದ ಹರಿದುಕೊಂಡು ಹೊರಬಂದಿತು. ಅದನ್ನು ನೋಡಿ ನಾನು ಅತಿದುಃಖಿತನಾದೆನು. ಗರ್ಜನೆಮಾಡುತ್ತಿದ್ದ ರಾಕ್ಷಸನ ಭಯಂಕರವಾದ ಧ್ವನಿಯೂ ನನ್ನ ಕಿವಿಗಳಿಗೆ ಕೇಳಿಸುತ್ತಿದ್ದಿತು. ನಾನು ಅಣ್ಣನ ಹೆಸರನ್ನು ಹಿಡಿದು ಕೂಗಿಕೊಂಡರೂ ಯುದ್ಧದಲ್ಲಿ ತೊಡಗಿದ್ದ ನಮ್ಮ ಅಣ್ಣನಿಂದ ಯಾವ ಉತ್ತರವೂ ಬರಲಿಲ್ಲ. ಅವನ ಧ್ವನಿಯು ಕೂಡ ನನಗೆ ಕೇಳಿಸಲಿಲ್ಲ. ನೊರೆಗೂಡಿದ ರಕ್ತವು ಗುಹೆಯೊಳಗಿನಿಂದ ಹೊರಕ್ಕೆ ಹರಿದುಬಂದುದರಿಂದಲೂ, ಗುಹೆಯಲ್ಲಿ ರಾಕ್ಷಸರ ಶಬ್ದವು ಮಾತ್ರವೇ ಕೇಳಿಸುತ್ತಿದ್ದುದರಿಂದಲೂ, ಎಷ್ಟು ಕೂಗಿಕೊಂಡರೂ ನಮ್ಮಣ್ಣನು ಉತ್ತರಿಸದೇ ಇದ್ದುದರಿಂದಲೂ – ಅವನು ಹತನಾದನೆಂದೇ ಭಾವಿಸಿದೆನು. ಬಿಲದಲ್ಲಿಯೇ ಉಳಿದುಕೊಂಡಿರುವ ಮಾಯಾವಿಯು ಪುನಃ ಹೊರಕ್ಕೆ ಬರಕೂಡದೆಂಬ ಆಶಯದಿಂದ ಪರ್ವತೋಪಮವಾದ ಬಂಡೆಯಿಂದ ಬಿಲದ ದ್ವಾರವನ್ನು ಮುಚ್ಚಿಬಿಟ್ಟೆನು. ಅಣ್ಣನ ಮರಣದಿಂದ ಶೋಕಪೀಡಿತನಾಗಿದ್ದ ನಾನು ಅವನಿಗೆ ಜಲತರ್ಪಣವನ್ನಿತ್ತು ಕಿಷ್ಕಿಂಧೆಗೆ ಹಿಂದಿರುಗಿದೆನು. ವಾಲಿಯ ಮರಣವಾರ್ತೆಯನ್ನು ಯಾರಿಗೂ ತಿಳಿಸಬಾರದೆಂದು ನಾನು ಬಹಳವಾಗಿಯೇ ಪ್ರಯತ್ನಿಸಿದೆನು. ಆದರೆ ಮಂತ್ರಿಗಳು ಪ್ರಯತ್ನಪೂರ್ವಕವಾಗಿ ಆ ವಿಷಯವನ್ನು ನನ್ನಿಂದ ತಿಳಿದುಕೊಂಡರು. ಬಳಿಕ ಅವರೆಲ್ಲರೂ ನನ್ನ ಬಳಿಗೆ ಬಂದು ಯುಕ್ತಿಯುಕ್ತವಾದ ಮಾತುಗಳಿಂದ ನನ್ನನ್ನು ರಾಜನಾಗಲೊಪ್ಪಿಸಿ ನನಗೆ ಪಟ್ಟಾಭಿಷೇಕಮಾಡಿದರು. ನಾನು ನ್ಯಾಯಸಮ್ಮತವಾದ ರೀತಿಯಲ್ಲಿ ವಾಲಿಯ ರಾಜ್ಯವನ್ನು ಆಳುತ್ತಿರುವಾಗ ವಾಲಿಯು ಶತ್ರುವಾದ ರಾಕ್ಷಸನನ್ನು ಸಂಹರಿಸಿ ಕಿಷ್ಕಿಂಧಾಪಟ್ಟಣಕ್ಕೆ ಆಗಮಿಸಿದನು. ಆ ವೇಳೆಗೆ ನಾನು ಪಟ್ಟಾಭಿಷಿಕ್ತನಾಗಿದ್ದುದನ್ನು ಕಂಡ ವಾಲಿಯು ಕೋಪದಿಂದ ಕೆಂಗಣ್ಣನಾಗಿ ನನ್ನ ಕಡೆಯ ಮಂತ್ರಿಗಳೆಲ್ಲರನ್ನೂ ಒಡನೆಯೇ ಬಂಧನದಲ್ಲಿರಿಸಿ ನನ್ನೊಡನೆ ಕರ್ಣಕಠೋರವಾದಂತಹ ಮಾತುಗಳನ್ನಾಡಿದನು. ಆ ಸಮಯದಲ್ಲಿ ನಾನು ರಾಜನಾಗಿದ್ದುದರಿಂದ ಪಾಪಿಷ್ಠನಾದ ವಾಲಿಯನ್ನು ನಿಗ್ರಹಿಸುವ ಸಾಮರ್ಥ್ಯವಿದ್ದಿತು. ಆದರೂ ಅಣ್ಣನ ವಿಷಯದಲ್ಲಿ ಅತ್ಯಂತ ಗೌರವವನ್ನಿಟ್ಟುಕೊಂಡಿದ್ದ ನಾನು ಅವನನ್ನು ಎದುರಿಸಿ ನಿಲ್ಲಲಿಲ್ಲ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri

ನನ್ನ ಬುದ್ಧಿಯು ಹಾಗೆ ಮಾಡಲು ಸಮ್ಮತಿಸಲಿಲ್ಲ. ಶತ್ರುವನ್ನು ಸಂಹಾರ ಮಾಡಿ, ಮಹಾತ್ಮನಾದ ನಮ್ಮಣ್ಣನು ಪಟ್ಟಣಕ್ಕೆ ಬಂದಾಗ ಅವನನ್ನು ಯಥೋಚಿತವಾದ ರೀತಿಯಲ್ಲಿ ಗೌರವಿಸಿ ಅಭಿವಾದನಮಾಡಿದೆನು. ಆದರೆ ವಾಲಿಯು ನನ್ನ ಅಭಿವಾದನಕ್ಕೆ ಪ್ರತಿಯಾಗಿ ಪ್ರಹೃಷ್ಟವಾದ ಮನಸ್ಸಿನಿಂದ ನನ್ನನ್ನು ಆಶೀರ್ವದಿಸಲಿಲ್ಲ. ತಲೆಯ ಮೇಲಿದ್ದ ನನ್ನ ಕಿರೀಟವನ್ನು ಅವನೆರಡು ಪಾದಗಳಿಗೂ ತಾಕಿಸಿ ನಮಸ್ಕರಿಸಿದೆನು. ಆದರೂ ವಾಲಿಯು ನನ್ನ ಮೇಲಿನ ಕೋಪದಿಂದಾಗಿ ಪ್ರಸನ್ನನಾಗಲೇ ಇಲ್ಲ.

೯ನೆಯ ಸರ್ಗವು ಮುಗಿಯಿತು.

ಕಿಷ್ಕಿಂಧಾಕಾಂಡ ೧೦ನೆಯ ಸರ್ಗ

## ವಾಲಿಯೊಡನೆ ವೈರಕ್ಕೆ ಕಾರಣವನ್ನು ಸುಗ್ರೀವನು ಶ್ರೀರಾಮನಿಗೆ ಹೇಳಿದುದು

ತತಃ ಕ್ರೋಧಸಮಾವಿಷ್ಟಂ ಸಂರಬ್ಧಂ ತಮುಪಾಗತಮ್ ।
ಅಹಂ ಪ್ರಸಾದಯಾಂಚಕ್ರೇ ಭ್ರಾತರಂ ಹಿತಕಾಮ್ಯಯಾ ॥೧॥

ರಾಘವ! ನಗರಕ್ಕೆ ಆಗಮಿಸಿದ ಕ್ರುದ್ಧನಾಗಿದ್ದ ಮತ್ತು ಉದ್ವಿಗ್ನನಾಗಿದ್ದ ನಮ್ಮಣ್ಣನನ್ನು ಅವನಿಗೆ ಹಿತವನ್ನುಂಟುಮಾಡುವ ಇಚ್ಛೆಯಿಂದ ಪುನಃ ಸಮಾಧಾನಗೊಳಿಸಲು ಪ್ರಯತ್ನಿಸಿದೆನು.

"ನಮ್ಮೆಲ್ಲರ ಅದೃಷ್ಟದ ಕಾರಣದಿಂದಲೇ ನೀನು ಶತ್ರುವನ್ನು ಸಂಹರಿಸಿ ನಗರಕ್ಕೆ ಆಗಮಿಸಿರುವೆ. ಅನಾಥನಾಗಿದ್ದ ನನಗೆ ಪುನಃ ನಾಥನು ಲಭಿಸಿದಂತಾಯಿತು. ನೀನೊಬ್ಬನೇ ನನ್ನಂತಹ ಅನಾಥನಿಗೆ ಸಂತೋಷವನ್ನುಂಟುಮಾಡತಕ್ಕವನಾಗಿರುವೆ. ಉದಿಸಿದ ಪೂರ್ಣಚಂದ್ರನಂತಿರುವ, ಹಲವಾರು ಕಬ್ಬಿಣದ ಕಡ್ಡಿಗಳಿಂದ ಯುಕ್ತವಾಗಿರುವ ಈ ಶ್ವೇತಚ್ಛತ್ರವನ್ನು ನಿನ್ನ ತಲೆಯ ಮೇಲೆ ಹಿಡಿಯುತ್ತೇನೆ. ಈ ಚಾಮರಗಳಿಂದ ಬೀಸುತ್ತೇನೆ. ದಯಮಾಡಿ ನನ್ನ ಈ ಸೇವೆಯನ್ನು ಪ್ರತಿಗ್ರಹಿಸು.

ನೀನು ಬಿಲದೊಳಕ್ಕೆ ರಾಕ್ಷಸನನ್ನು ಹಿಂಬಾಲಿಸಿ ಹೋದಬಳಿಕ ದುಃಖಪೀಡಿತನಾಗಿದ್ದ ನಾನು ನಿನ್ನ ಆಜ್ಞೆಯಂತೆ ಬಿಲದ ದ್ವಾರದಲ್ಲಿ ಒಂದು ವರ್ಷ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಪೂರ್ತಿಯಾಗಿ ನಿಂತೇ ಇದ್ದೆನು. ಇದ್ದಕ್ಕಿದ್ದಂತೆಯೇ ನೊರೆಯಿಂದ ಕೂಡಿದ್ದ ರಕ್ತವು ಬಿಲದಿಂದ ಹೊರಕ್ಕೆ ಹರಿದುಬಂದಿತು. ಬಿಲದ್ವಾರದಲ್ಲಿ ರಕ್ತವನ್ನು ನೋಡಿದ ನಾನು ನೀನೇ ಮರಣಹೊಂದಿರಬಹುದೆಂದು ಭಾವಿಸಿ ದುಃಖದಿಂದ ಉದ್ವಿಗ್ನನಾದೆನು. ನನ್ನ ಇಂದ್ರಿಯಗಳೆಲ್ಲವೂ ಬಹಳವಾಗಿ ವ್ಯಾಕುಲಗೊಂಡುವು. ರಾಕ್ಷಸನು ಹೊರಬಂದಾನೆಂಬ ಭಯದಿಂದ ನಾನು ಅಲ್ಲಿಯೇ ಇದ್ದ ಪರ್ವತದ ಕೋಡುಗಲ್ಲಿನಿಂದ ಬಿಲದ ದ್ವಾರವನ್ನು ಮುಚ್ಚಿ ಕಿಷ್ಕಿಂಧೆಗೆ ಹಿಂದಿರುಗಿದೆನು. ಜೊತೆಯಲ್ಲಿ ಹೋಗಿದ್ದ ನೀನು ಬಾರದೇ ನಾನೊಬ್ಬನೇ ಪಟ್ಟಣಕ್ಕೆ ಹಿಂದಿರುಗಿದುದನ್ನು ನೋಡಿ ಪಟ್ಟಣಿಗರೂ ಮತ್ತು ಮಂತ್ರಿಗಳೂ ಬಹಳ ವಿಷಾದಗೊಂಡವರಾಗಿ ನನಗೆ ಕಿಷ್ಕಿಂಧಾರಾಜ್ಯದ ಪಟ್ಟಾಭಿಷೇಕಮಾಡಿದರು. ನಾನು ಅಪೇಕ್ಷೆಪಟ್ಟು ಈ ರಾಜ್ಯಕ್ಕೆ ರಾಜನಾಗಲಿಲ್ಲ. ನಿನ್ನ ಬಗೆಗೆ ಸರಿಯಾದ ತಿಳಿವಳಿಕೆಯಿಲ್ಲದಿದ್ದ ಕಾರಣ ನಾನು ರಾಜನಾಗಬೇಕಾಯಿತು. ಇದಕ್ಕಾಗಿ ನೀನು ನನ್ನನ್ನು ಕ್ಷಮಿಸುವುದು ಯೋಗ್ಯವಾಗಿದೆ. ಈಗಲೂ ನೀನೇ ರಾಜನು. ಹಿಂದಿನಂತೆಯೇ ನಾನು ಯಾವಾಗಲೂ ನಿನ್ನ ದಾಸನಾಗಿಯೇ ಇರುವೆನು. ನಿನ್ನ ಬಹಳ ಕಾಲದ ನಿರ್ಗಮನದಿಂದಾಗಿ ರಾಜ್ಯದಲ್ಲಿ ರಾಜನೇ ಇಲ್ಲದಿರಲು ರಾಜನ ಕರ್ತವ್ಯವನ್ನು ನಾನು ಇದುವರೆಗೂ ನಿರ್ವಹಿಸುತ್ತಿದ್ದೆನು. ಅಮಾತ್ಯರಿಂದಲೂ, ಪಟ್ಟಣಿಗರಿಂದಲೂ, ನಗರಗಳಿಂದಲೂ ಯುಕ್ತವಾಗಿರುವ – ಯಾವ ವಿಧವಾದ ಈತಿಬಾಧೆಗಳೂ ಇಲ್ಲದಿರುವ–ನನ್ನಲ್ಲಿ ನಿಕ್ಷೇಪರೂಪದಲ್ಲಿ ಇಡಲ್ಪಟ್ಟಿದ್ದ ಈ ಸಾಮ್ರಾಜ್ಯವನ್ನು ಪುನಃ ನಿನಗೆ ಅರ್ಪಿಸುತ್ತಿದ್ದೇನೆ. ಸೌಮ್ಯನೇ ! ನನ್ನ ಮೇಲೆ ಕೋಪಗೊಳ್ಳಬೇಡ. ಕೈಗಳೆರಡನ್ನೂ ಜೋಡಿಸಿ ತಲೆಬಾಗಿ ನಿನ್ನನ್ನು ಬೇಡಿಕೊಳ್ಳುತ್ತೇನೆ. ರಾಜನಿಲ್ಲದೇ ಶೂನ್ಯವಾಗಿರುವ ದೇಶವನ್ನು ಶತ್ರುರಾಜರು ಜಯಿಸಲು ಬಂದಾರೆಂಬ ಶಂಕೆಯಿಂದ ಮಂತ್ರಿಗಳು ಮತ್ತು ಪಟ್ಟಣಿಗರು ನನ್ನನ್ನು ಬಲಾತ್ಕಾರಪೂರ್ವಕವಾಗಿ ರಾಜನನ್ನಾಗಿ ಮಾಡಿದರು. ರಾಜ್ಯದಾಸೆಯಿಂದ ನಾನು ರಾಜನಾಗಲಿಲ್ಲ. ದಯಮಾಡಿ ಕ್ಷಮಿಸು."

ರಾಘವ ! ಹೀಗೆ ನಾನು ಸ್ನೇಹಪೂರ್ವಕವಾಗಿ ಮಾತನಾಡುತ್ತಿದ್ದರೂ ವಾಲಿಯು ನನ್ನನ್ನು ಗದರಿಸುತ್ತಾ–' ಧಿಕ್ತ್ವಾಂ ನಿನಗೆ ಧಿಕ್ಕಾರವಿರಲಿ '– ಎಂದು ಮೂದಲಿಸುತ್ತಾ ನನ್ನನ್ನು ಬಹಳವಾಗಿ ನಿಂದಿಸಿ ಮಾತನಾಡಿದನು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಪಟ್ಟಣಿಗರನ್ನೂ ಸರ್ವಸಮ್ಮತರಾದ ಮಂತ್ರಿಗಳನ್ನೂ ಆಹ್ವಾನಿಸಿ ಆ ಸತ್ಪುರುಷರ ಮಧ್ಯದಲ್ಲಿ ನನ್ನ ಬಗೆಗೆ ಅತಿನಿಂದ್ಯವಾದ ಮಾತುಗಳನ್ನು ಹೇಳಿದನು :

" ಪ್ರಜೆಗಳೇ ! ಅಮಾತ್ಯರೇ ! ಅಂದಿನ ರಾತ್ರಿ ಕ್ರುದ್ಧನಾಗಿದ್ದ ಮತ್ತು ಯುದ್ಧಾಕಾಂಕ್ಷಿಯಾಗಿದ್ದ ಮಹಾಸುರನಾದ ಮಾಯಾವಿಯು ನನ್ನನ್ನು ಯುದ್ಧಕ್ಕೆ ಆಹ್ವಾನಿಸಿದ ವಿಷಯವು ನಿಮ್ಮೆಲ್ಲರಿಗೂ ತಿಳಿದೇ ಇದೆ. ಮಹಾಸುರನ ಆಹ್ವಾನವನ್ನು ಕೇಳಿ ಅರಮನೆಯಿಂದ ಹೊರಬಿದ್ದೆನು. ಮಹಾಕ್ರೂರಿಯಾದ ಈ ನನ್ನ ತಮ್ಮನೂ ಅತಿಶೀಘ್ರವಾಗಿ ನನ್ನನ್ನೇ ಹಿಂಬಾಲಿಸಿದನು. ಆ ರಾತ್ರಿಯಲ್ಲಿ ಮಹಾಬಲನಾದ ಆ ಮಾಯಾವಿಯು ನಾವಿಬ್ಬರೂ ಜೊತೆಗೂಡಿ ಹೋಗುತ್ತಿದ್ದುದನ್ನೂ-ಅತ್ಯಲ್ಪಸಮಯದಲ್ಲಿಯೇ ತನ್ನ ಸಮೀಪಕ್ಕೆ ಬಂದುದನ್ನೂ ನೋಡಿ ಭಯದಿಂದ ನಡುಗುತ್ತಾ ಪಲಾಯನಮಾಡಿದನು. ಆಗಲೂ ನಾವು ಅವನನ್ನು ಹಿಂಬಾಲಿಸಿದೆವು. ಮಾಯಾವಿಯು ಓಡುತ್ತೋಡುತ್ತಾ ಅಲ್ಲಿದ್ದ ಬಿಲವನ್ನು ಹೊಕ್ಕನು. ಮಾಯಾವಿಯು ಅತಿಭಯಂಕರವಾಗಿದ್ದ ಸುರಂಗವನ್ನು ಪ್ರವೇಶಿಸಿದುದನ್ನು ನೋಡಿ ನಾನು ಕ್ರೂರಿಯಾದ ಇವನಿಗೆ ಹೇಳಿದೆನು :

" ಸುಗ್ರೀವ ! ಈ ಮಾಯಾವಿಯನ್ನು ಸಂಹರಿಸದೇ ಇಲ್ಲಿಂದ ಕಿಷ್ಕಿಂಧಾಪಟ್ಟಣಕ್ಕೆ ಹೋಗಲು ನನಗೆ ಸ್ವಲ್ಪವೂ ಆಸಕ್ತಿಯಿಲ್ಲ. ನಾನು ಈ ರಾಕ್ಷಸನನ್ನು ಸಂಹರಿಸಿ ಹೊರಬರುವವರೆಗೂ ನೀನಿಲ್ಲಿಯೇ ನಿಂತಿದ್ದು ನನ್ನ ಆಗಮನವನ್ನು ಪ್ರತೀಕ್ಷಿಸುತ್ತಿರು."

ಹೀಗೆ ಹೇಳಿ ನಾನು ದುರಾಸದವಾದ ಆ ಸುರಂಗವನ್ನು ಪ್ರವೇಶಿಸಿದೆನು. ನಾನು ಹೊರಬರುವವರೆಗೂ ನನ್ನ ತಮ್ಮನು ಬಿಲದ್ವಾರದಲ್ಲಿಯೇ ಇರುವನೆಂದು ನಾನು ಭಾವಿಸಿದ್ದೆನು. ಆ ಮಹಾಸುರಂಗದಲ್ಲಿ ಮಾಯಾವಿಯನ್ನು ಹುಡುಕುವುದರಲ್ಲಿಯೇ ಒಂದು ವರ್ಷವು ಕಳೆದುಹೋಯಿತು. ಅನಂತರ ಭಯಂಕರನಾಗಿದ್ದ ಆ ನನ್ನ ಶತ್ರುವು ಬಹಳ ಸುಲಭವಾಗಿಯೇ ಸಿಕ್ಕಿಬಿದ್ದನು. ಒಡನೆಯೇ ನಾನು ಅವನನ್ನು ಬಂಧುಗಳ ಸಹಿತ ಸಂಹರಿಸಿದೆನು. ಘೋರವಾಗಿ ಶಬ್ದಮಾಡುತ್ತಾ ನೆಲದ ಮೇಲುರುಳಿದ ಆ ರಾಕ್ಷಸನ ಮುಖದಿಂದ ರಕ್ತದ ಕೋಡಿಯೇ ಹರಿದು ಆ ಮಹಾಬಿಲವೂ ರಕ್ತದಿಂದ ತುಂಬಿಹೋಯಿತು. ಅದನ್ನು ದಾಟಿಬರಲು ಸಾಧ್ಯವಾಗಲೇ ಇಲ್ಲ. ಮಹಾ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಪರಾಕ್ರಮಿಯನ್ನು ಬಹಳ ಸುಲಭವಾಗಿಯೇ ಸಂಹರಿಸಿದ ನಾನು ಬಿಲದಿಂದ ಹೊರಬರಲು ಹಾದಿಯನ್ನೇ ಕಾಣಲಿಲ್ಲ. ಸುರಂಗದ ಬಾಗಿಲು ಮುಚ್ಚಿ ಬಿಟ್ಟದ್ದಿತು. ಆ ಸಮಯದಲ್ಲಿ ನಾನು-'ಸುಗ್ರೀವ! ಸುಗ್ರೀವ!'-ಎಂದು ಕೂಗಿಕೊಂಡರೂ ಉತ್ತರವೇ ಬರಲಿಲ್ಲ. ಅದರಿಂದ ನಾನು ಬಹಳ ದುಃಖಿತ ನಾದೆನು. ಅನಂತರ ನಾನು ಕಾಲುಗಳಿಂದಲೇ ಬಿಲಕ್ಕೆ ಮುಚ್ಚಿದ್ದ ಪರ್ವತ ಶಿಖರವನ್ನು ಒದೆದು ಚೂರು-ಚೂರುಮಾಡಿ ಹೊರಬರಲು ಹಾದಿಯನ್ನು ಮಾಡಿಕೊಂಡು ರಾಜಧಾನಿಗೆ ಆಗಮಿಸಿದೆನು. ಈ ಕಿಷ್ಕಿಂಧಾರಾಜ್ಯವನ್ನು ತನ್ನ ವಶಕ್ಕೆ ತೆಗೆದುಕೊಳ್ಳಬೇಕೆಂಬ ದುರಾಸೆಯಿಂದಲೇ ಭ್ರಾತೃವಾತ್ಸಲ್ಯ ವನ್ನೂ ಮರೆತ ಕ್ರೂರಿಯಾದ ಈ ಸುಗ್ರೀವನು ನನ್ನನ್ನು ಬಿಲದಲ್ಲಿ ಬಂಧಿ ಸಿದ್ದನು."

ರಾಘವ! ಭಯರಹಿತನಾದ ವಾಲಿಯು ತುಂಬಿದ ಸಭೆಯಲ್ಲಿ ಹೀಗೆ ಹೇಳಿ ಉಟ್ಟಿದ್ದ ಒಂದೇ ಬಟ್ಟೆಯಲ್ಲಿಯೇ ನನ್ನನ್ನು ಹೊರಕ್ಕಟ್ಟಿದನು. ಇಷ್ಟು ಮಾತ್ರವಲ್ಲ. ನನ್ನನ್ನು ಬಲವಾಗಿ ಪ್ರಹರಿಸಿದನು. ನನ್ನ ಪತ್ನಿ ಯನ್ನೂ ಅಪಹರಿಸಿದನು. ಅವನ ಭಯದಿಂದಲೇ ನಾನು ನಿಂತಲ್ಲಿ ನಿಲ್ಲದೇ ಅರಣ್ಯಗಳಿಂದ ಯುಕ್ತವಾಗಿರುವ ಮತ್ತು ಸಮುದ್ರಗಳಿಂದ ಪರಿವೃತ ವಾಗಿರುವ ಭೂಮಂಡಲದ ಎಲ್ಲ ಕಡೆಗಳಲ್ಲಿಯೂ ಅಲೆದಾಡುತ್ತಿದ್ದೇನೆ. ಭಾರ್ಯೆಯನ್ನು ಕಳೆದುಕೊಂಡು ಬಹಳ ದುಃಖಿತನಾದ ನಾನು ಕಾರಣಾಂತರ ದಿಂದ ವಾಲಿಯು ಪ್ರವೇಶಿಸಲು ಸಾಧ್ಯವಾಗದಿರುವ ಶ್ರೇಷ್ಠವಾದ ಈ ಋಷ್ಯಮೂಕಪರ್ವತವನ್ನು ಆಶ್ರಯಿಸಿದೆನು. ರಾಮಭದ್ರ! ನಮ್ಮಿಬ್ಬರ ವೈರಕ್ಕೆ ಸಂಬಂಧಿಸಿದ ಎಲ್ಲ ವಿಷಯಗಳನ್ನೂ ನಿನಗೆ ಹೇಳಿದ್ದೇನೆ. ನಿರಪರಾಧಿ ಯಾದ ನನಗೆ ಎಂತಹ ಮಹಾವ್ಯಸನವು ಬಂದಿರುವುದೆಂಬುದನ್ನು ನೀನೇ ಗಮನಿಸು. ಸರ್ವಲೋಕಗಳ ಭಯವನ್ನೂ ಹೋಗಲಾಡಿಸತಕ್ಕವನೇ! ವೀರನೇ! ರಾಮಚಂದ್ರ! ವಾಲಿಯ ಭಯದಿಂದ ಪೀಡಿತನಾಗಿರುವ ನನಗೆ ಅವನನ್ನು ನಿಗ್ರಹಿಸುವುದರ ಮೂಲಕ ಅನುಗ್ರಹಮಾಡಲು ನೀನು ಯೋಗ್ಯ ನಾಗಿರುವೆ."

ಸುಗ್ರೀವನು ಹೀಗೆ ಹೇಳಲು ತೇಜಸ್ವಿಯಾದ, ಧರ್ಮಜ್ಞನಾದ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಶ್ರೀರಾಮನು ನಗುತ್ತಿರುವನೋ ಎಂಬಂತೆ ಸುಗ್ರೀವನಿಗೆ ಧರ್ಮಾರ್ಥಯುಕ್ತವಾದ ಈ ಮಾತುಗಳನ್ನು ಹೇಳಿದನು :

"ಸುಗ್ರೀವ! ಯಾವಾಗಲೂ ವ್ಯರ್ಥವಾಗದಿರುವ, ಸೂರ್ಯಸದೃಶವಾದ, ನಿಶಿತವಾದ ಈ ನನ್ನ ಬಾಣಗಳು ದುರಾಚಾರಿಯಾದ ಆ ವಾಲಿಯ ಮೇಲೆ ಬಹಳ ವೇಗವಾಗಿ ಬೀಳಲಿವೆ. ನಿನ್ನ ಪತ್ನಿಯನ್ನು ಅಪಹರಿಸಿರುವ, ದುಶ್ಚರಿತನಾದ, ಮಹಾಪಾಪಿಷ್ಠನಾದ ಅವನನ್ನು ನಾನು ಎಂದಿನವರೆಗೆ ನೋಡುವುದಿಲ್ಲವೋ–ಅಂದಿನವರೆಗೆ ಮಾತ್ರವೇ ಅವನು ಬದುಕಿರಲು ಸಾಧ್ಯವಾಗುತ್ತದೆ. ಭಾರ್ಯೆಯನ್ನು ಕಳೆದುಕೊಂಡು ನಾನು ದುಃಖಿಸುತ್ತಿರುವಂತೆಯೇ ನೀನೂ ದುಃಖಿಸುತ್ತಿರುವೆಯೆಂಬುದನ್ನು ತಿಳಿದೆನು. ನಿನ್ನನ್ನು ಈ ದುಃಖಸಾಗರದಿಂದ ಪಾರುಮಾಡುವೆನು. ಅನಂತರ ನೀನು ಪುಷ್ಕಲವಾದ ಸಕಲಕಾಮನೆಗಳನ್ನೂ ಪಡೆದುಕೊಳ್ಳುವೆ."

ತನಗೆ ಹಿತಕರವಾಗಿರುವ ಶ್ರೀರಾಮನ ಆ ಮಾತುಗಳನ್ನು ಕೇಳಿ ಸುಗ್ರೀವನು ಪರಮಪ್ರೀತನಾಗಿ ಮಹಾರ್ಥಯುಕ್ತವಾದ ಮಾತನ್ನು ಹೇಳತೊಡಗಿದನು.

೧೦ನೆಯ ಸರ್ಗವು ಮುಗಿಯಿತು.

ಕಿಷ್ಕಿಂಧಾಕಾಂಡ ೧೧ನೆಯ ಸರ್ಗ

ಸುಗ್ರೀವನು ವಾಲಿಯ ಪರಾಕ್ರಮವನ್ನು ರಾಮನಿಗೆ ವರ್ಣಿಸುತ್ತಾ ವಾಲಿಗೆ ಒದಗಿದ ಮತಂಗರ ಶಾಪವೃತ್ತಾಂತವನ್ನು ತಿಳಿಸಿದುದು : ಶ್ರೀರಾಮನು ದುಂದುಭಿಯ ಅಸ್ಥಿಸಮೂಹವನ್ನು ಕಾಲಿನಿಂದ ಚಿಮ್ಮಿದುದು : ಸುಗ್ರೀವನು ರಾಮನಿಗೆ ಸಾಲವೃಕ್ಷವನ್ನು ಭೇದಿಸಲು ಹೇಳಿದುದು

ರಾಮಸ್ಯ ವಚನಂ ಶ್ರುತ್ವಾ ಹರ್ಷಪೌರುಷವರ್ಧನಮ್ ।
ಸುಗ್ರೀವಃ ಪೂಜಯಾಂಚಕ್ರೇ ರಾಘವಂ ಪ್ರಶಶಂಸ ಚ ॥೧॥

ಹರ್ಷ ಮತ್ತು ಪರಾಕ್ರಮಗಳನ್ನು ಹೆಚ್ಚಿಸುವ ಪ್ರೋತ್ಸಾಹಕರವಾದ ಶ್ರೀರಾಮನ ಮಾತುಗಳನ್ನು ಕೇಳಿ ಸುಗ್ರೀವನು ಅವನನ್ನು ಯಥೋಚಿತವಾಗಿ ಸತ್ಕರಿಸಿ ಪ್ರಶಂಸೆಮಾಡಿದನು :

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


"ರಾಘವ! ನೀನೇನಾದರೂ ಕೋಪಗೊಂಡೆಯಾದರೆ ಪ್ರಜ್ವಲಿಸುವ ಮತ್ತು ತೀಕ್ಷ್ಣವಾದ ಬಾಣಗಳಿಂದ ಪ್ರಳಯಕಾಲದ ಸೂರ್ಯನಂತೆಯೇ ಎಲ್ಲ ಲೋಕಗಳನ್ನೂ ನಿಸ್ಸಂದೇಹವಾಗಿ ಸುಟ್ಟುಬಿಡುವೆ. ಆದರೆ ವಾಲಿಯಲ್ಲಿರುವ ಪೌರುಷ, ವೀರ್ಯ ಮತ್ತು ಧೈರ್ಯಗಳನ್ನು ಏಕಾಗ್ರತೆಯಿಂದ ಕೇಳು. ಅನಂತರ ಮಾಡಬೇಕಾದ ಕಾರ್ಯವನ್ನು ಮಾಡು. ವಾಲಿಯು ಪ್ರತಿದಿನ ಸೂರ್ಯೋದಯಕ್ಕೂ ಮೊದಲೇ ಎದ್ದು ಪಶ್ಚಿಮಸಮುದ್ರದಿಂದ ಪೂರ್ವ ಸಮುದ್ರಕ್ಕೆ ಹಾರಿ, ಅಲ್ಲಿಂದ ದಕ್ಷಿಣಸಮುದ್ರಕ್ಕೂ, ದಕ್ಷಿಣಸಮುದ್ರದಿಂದ ಉತ್ತರಸಮುದ್ರಕ್ಕೂ ಸ್ವಲ್ಪವೂ ಆಯಾಸವೇ ಇಲ್ಲದೇ ಹಾರುತ್ತಾನೆ. ಮಹಾವೀರ್ಯನಾದ ವಾಲಿಯು ಪರ್ವತಶಿಖರಗಳು ಎಷ್ಟೇ ಎತ್ತರದಲ್ಲಿದ್ದರೂ ಅವುಗಳ ಮೇಲೆ ಹತ್ತಿ ಆ ಶಿಖರಗಳನ್ನು ಮೇಲಕ್ಕೆಸೆದು ಪುನಃ ಹಿಡಿದು ಕೊಳ್ಳುತ್ತಾನೆ. ತನ್ನಲ್ಲಿ ಬಲವಿಷ್ಟಿರುವುದೆಂಬುದನ್ನು ಪ್ರಸಿದ್ಧಿಪಡಿಸುವ ಸಲುವಾಗಿ ಅರಣ್ಯಗಳಲ್ಲಿದ್ದ ನಾನಾವಿಧವಾದ ಮತ್ತು ಸಾರವತ್ತಾದ ಅನೇಕ ವೃಕ್ಷಗಳನ್ನು ಧ್ವಂಸಗೊಳಿಸಿದ್ದಾನೆ. ಹಿಂದೆ ಕೋಣನ ಆಕಾರವನ್ನು ಹೊಂದಿದ್ದ, ಕೈಲಾಸಶಿಖರದ ಪ್ರಭೆಗೆ ಸಮಾನವಾದ ಪ್ರಭೆಯಿಂದ ಬೆಳಗು ತ್ತಿದ್ದ, ಮಹಾವೀರ್ಯವಂತನಾದ ದುಂದುಭಿ ಎಂಬ ರಾಕ್ಷಸನು ಸಾವಿರ ಆನೆಗಳ ಬಲವನ್ನು ಹೊಂದಿದ್ದನು. ದುಷ್ಟಾತ್ಮನಾದ ಮತ್ತು ಮಹಾ ಕಾಯನಾದ ಆ ರಾಕ್ಷಸನು ತಾನೇ ಮಹಾಪರಾಕ್ರಮಿಯೆಂಬ ಗರ್ವದಿಂದಲೂ, ಮತ್ತು ಪಡೆದುಕೊಂಡಿದ್ದ ವರದಿಂದಲೂ ವಿಮೋಹಿತನಾಗಿ ನದಿಗಳಿಗೆ ಒಡೆಯನಾದ ಸಮುದ್ರರಾಜನ ಬಳಿಗೆ ಹೋದನು. ರತ್ನಾಕರನಾದ, ತೆರೆ ಗಳಿಂದ ಸುಶೋಭಿಸುತ್ತಿದ್ದ ಸಮುದ್ರರಾಜನನ್ನು ಆಕ್ರಮಿಸಿ ಗುಡುಗಿದನು.

"ಮಹ್ಯಂ ಯುದ್ಧಂ ಪ್ರಯಚ್ಛ! ನನಗೆ ಯುದ್ಧದ ಆತಿಥ್ಯ ವನ್ನು ನೀಡು."

ಕಾಲಚೋದಿತನಾಗಿ ಬಂದಿದ್ದ ದುಂದುಭಿಯು ಮಾತನ್ನು ಕೇಳಿ ಧರ್ಮಾತ್ಮನಾದ ಮಹಾಬಲನಾದ ಸಮುದ್ರರಾಜನು ಮೇಲೆದ್ದು ಮಹಾಸುರ ನಿಗೆ ಹೇಳಿದನು :

"ಯುದ್ಧವಿಶಾರದನೇ! ಮಹಾಸುರನೇ! ಸಮರ್ಥೋ ನಾಸ್ಮಿ ತೇ ದಾತುಂ ಯುದ್ಧಂ – ನಾನು ನಿನಗೆ ಯುದ್ಧದ ಆತಿಥ್ಯವನ್ನು ನೀಡಲು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಸಮರ್ಥನಾಗಿಲ್ಲ. ಆದರೆ ನಿನ್ನೊಡನೆ ಯುದ್ಧಮಾಡಲು ಸಮರ್ಥರಾರೆಂಬು ದನ್ನು ಹೇಳುವೆನು; ಕೇಳು. ತಪಸ್ವಿಗಳಿಗೆ ಆಶ್ರಯನಾದ, ಈಶ್ವರನಿಗೆ ಮಾವನಾದ, ಶ್ರೇಷ್ಠನಾದ, ಪರ್ವತರಾಜನಾದ ಹಿಮವಂತನು ಮಹಾರಣ್ಯದ ನಡುವೆ ಇದ್ದಾನೆ. ಅವನಲ್ಲಿ ದೊಡ್ಡ-ದೊಡ್ಡ ಚಿಲುಮೆಗಳೂ ಕಂದರ-ನಿರ್ಝರಗಳೂ ಇವೆ. ಅವನು ಯುದ್ಧದ ಮೂಲಕವಾಗಿ ನಿನ್ನನ್ನು ತೃಪ್ತಿಗೊಳಿಸಲು ಸಮರ್ಥನಾಗಿರುತ್ತಾನೆ."

ಅದನು ಕೇಳಿ ದುಂದುಭಿಯು – ಸಮುದ್ರನು ತನ್ನೊಡನೆ ಯುದ್ಧಮಾಡಲು ಭಯಪಟ್ಟಿರುವನೆಂದೇ ಭಾವಿಸಿ – ಧನುಸ್ಸಿನಿಂದ ಹೊರಬಂದ ಬಾಣದಂತೆ–ಮಹಾವೇಗವಾಗಿ ಅರಣ್ಯದ ಮಧ್ಯದಲ್ಲಿದ್ದ ಹಿಮವಂತನ ಬಳಿಗೆ ಧಾವಿಸಿದನು. ಹಿಮವತ್ಪರ್ವತದಲ್ಲಿದ್ದ ಗಜರಾಜನ ಗಾತ್ರದಲ್ಲಿದ್ದ ಬಿಳಿಯ ಕಲ್ಲುಗಳನ್ನು (ಹಿಮಗೆಡ್ಡೆಗಳನ್ನು) ಕಿತ್ತು ಭೂಮಿಯ ಕಡೆಗೆ ಬಿಸುಡುತ್ತಾ ಗಟ್ಟಿಯಾಗಿ ಗರ್ಜನೆಮಾಡಿದನು. ಬಿಳಿಯ ಮೇಘದಂತೆ ಆಕಾರವುಳ್ಳವನಾಗಿದ್ದ, ಸೌಮ್ಯನಾಗಿದ್ದ, ಪ್ರೀತಿಯನ್ನು ಹುಟ್ಟಿಸುವಂತಹ ಸುಂದರವಾದ ಆಕಾರವನ್ನು ಹೊಂದಿದ್ದ ಹಿಮವಂತನು ತನ್ನ ಶಿಖರದ ಮೇಲೆ ನಿಂತಿದ್ದ ರಾಕ್ಷಸನಿಗೆ ಹೇಳಿದನು :

" ದುಂದುಭಿಯೇ ! ಧರ್ಮವತ್ಸಲನೇ ! ನೀನು ನನ್ನನ್ನು ಈ ಪರಿಯಲ್ಲಿ ಕ್ಲೇಶಗೊಳಿಸುವುದು ಯೋಗ್ಯವಾಗಿ ಕಾಣುವುದಿಲ್ಲ. ನಾನು ಯುದ್ಧದಲ್ಲಿ ಪರಿಣತನಲ್ಲ. ಸತ್ತ್ವಗುಣಪ್ರಧಾನರಾದ ತಪಸ್ವಿಗಳಿಗೆ ಆಶ್ರಯವನ್ನಿತ್ತಿದ್ದೇನೆ."

ಧೀಮಂತನಾದ ಹಿಮವಂತನು ಹೀಗೆ ಹೇಳಲು ದುಂದುಭಿಗೆ ಕೋಪವು ಉಕ್ಕಿಬಂದಿತು. ಕೆಂಗಣ್ಣನಾಗಿ ಹಿಮವಂತನಿಗೆ ಹೇಳಿದನು :

" ಹಿಮವಂತ ! ನನ್ನೊಡನೆ ಯುದ್ಧಮಾಡಲು ನಿನಗೆ ಸಾಮರ್ಥ್ಯವಿಲ್ಲದಿದ್ದರೆ–ನನ್ನ ಭಯದಿಂದ ನೀನು ಯುದ್ಧೋದ್ಯಮವೇ ಬೇಡವೆನ್ನುವುದಾದರೆ–ಸಮಾನಬಲರೊಡನೆ ಯುದ್ಧಮಾಡಬೇಕೆಂಬ ಉತ್ಕಟವಾದ ಇಚ್ಛೆಯಿಂದ ಹೊರಟಿರುವ ನನ್ನೊಡನೆ ಯುದ್ಧಮಾಡಲು ಸಮರ್ಥನಾದವನು ಯಾವನಿದ್ದಾನೆಂಬುದನ್ನಾದರೂ ಹೇಳು."

ದುಂದುಭಿಯು ಹೇಳಿದ ಮಾತನ್ನು ಕೇಳಿ ಹಿಮವಂತನು ಕುಪಿತ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ನಾದನು. ಅವನೊಂದಿಗೆ ಹಿಂದೆ ಯಾರೂ ಇಂತಹ ಮಾತನ್ನಾಡಿರಲಿಲ್ಲ. ವಾಕ್ಯ ವಿಶಾರದನಾದ ಹಿಮವಂತನು ಅಸುರಶ್ರೇಷ್ಠನಾದ ದುಂದುಭಿಗೆ ಹೇಳಿದನು :

"ಮಹಾಪ್ರಾಜ್ಞನೇ! ಇಂದ್ರನ ಮಗನಾದ, ಪ್ರಭಾವಶಾಲಿಯಾದ ವಾಲೀ ಎಂಬ ಹೆಸರಿನ ವಾನರನಿದ್ದಾನೆ. ಶ್ರೀಮಂತನಾದ ಅವನು ಮಹಾ ಪ್ರಭೆಯಿಂದ ಕೂಡಿರುವ ಕಿಷ್ಕಿಂಧಾ ಎಂಬ ಪಟ್ಟಣವನ್ನು ಆಳುತ್ತಿದ್ದಾನೆ. ಮಹಾಪ್ರಾಜ್ಞನಾಗಿಯೂ, ಯುದ್ಧ ವಿಶಾರದನಾಗಿಯೂ ಇರುವ ವಾಲಿಯು-ಇಂದ್ರನು ನಮುಚಿಗೆ ಯುದ್ಧದ ಅತಿಥ್ಯವನ್ನು ನೀಡಿದ್ದಂತೆ-ನಿನಗೂ ದ್ವಂದ್ವಯುದ್ಧದ ಆತಿಥ್ಯವನ್ನು ನೀಡಬಲ್ಲನು. ನೀನು ಈ ಲೋಕದಲ್ಲಿ ಯಾರೊಡನೆಯಾದರೂ ಯುದ್ಧವನ್ನು ಮಾಡಲೇಬೇಕೆಂಬ ಉತ್ಕಟೇಚ್ಛೆ ಯುಳ್ಳವನಾಗಿದ್ದರೆ - ಈ ಕ್ಷಣವೇ ಅವನ ಬಳಿಗೆ ಹೋಗು. ಅಜೇಯನಾದ ವಾಲಿಯು ಸಮರಕ್ರಿಯೆಯಲ್ಲಿ ಪರಿಣತನೆಂದೂ ಮಹಾಶೂರನೆಂದೂ ವಿಖ್ಯಾತ ನಾಗಿದ್ದಾನೆ."

ರಾಘವ! ಹಿಮವಂತನ ಮಾತನ್ನು ಕೇಳಿ ಕ್ರುದ್ಧನಾಗಿದ್ದ ದುಂದುಭಿಯು ವಾಲಿಯ ಪಟ್ಟಣವಾದ ಕಿಷ್ಕಿಂಧೆಗೆ ಹೋದನು. ವರ್ಷಾಕಾಲದಲ್ಲಿ ಆಗಸದಲ್ಲಿ ಕಾಣಿಸಿಕೊಳ್ಳುವ ಜಲಸಮೃದ್ಧವಾದ ಕಾರ್ಮುಗಿಲಿನಂತೆ-ದುಂದುಭಿಯು-ಭಯವನ್ನುಂಟುಮಾಡುವ, ತೀಕ್ಷ್ಣವಾದ ಕೊಂಬುಗಳಿಂದ ಕೂಡಿರುವ, ಕಪ್ಪುಬಣ್ಣದ ಕೋಣದ ರೂಪವನ್ನು ಧರಿಸಿದ್ದನು. ಬಳಿಕ ಅವನು ಕಿಷ್ಕಿಂಧೆಯ ಮಹಾದ್ವಾರಕ್ಕೆ ಬಂದು ಭೂಮಿಯನ್ನೇ ನಡುಗಿಸುತ್ತಾ-ಬಾರಿಸುತ್ತಿರುವ ನಗಾರಿಯಂತೆ-ಗರ್ಜಿಸಿದನು. ಆ ಸಮಯದಲ್ಲಿ ಕೋಣನ ರೂಪವನ್ನು ಧರಿಸಿದ್ದ ದುಂದುಭಿಯು ಸುತ್ತಲೂ ಇದ್ದ ಅನೇಕ ವೃಕ್ಷಗಳನ್ನು ಧ್ವಂಸಮಾಡಿದನು. ಗೊರಸುಗಳಿಂದ ಭೂಮಿಯನ್ನೇ ಸೀಳಿದನು. ಆನೆಯಂತೆ ಕೋರೆದಾಡೆಗಳಿಂದ ಮಹಾದ್ವಾರವನ್ನು ತಿವಿಯುತ್ತಿದ್ದನು. ಅಂತಃಪುರದಲ್ಲಿದ್ದ ವಾಲಿಯು ದುಂದುಭಿಯ ಘೋರಗರ್ಜನೆಯನ್ನು ಕೇಳಿ ಸಹಿಸಲಾರದೇ - ನಕ್ಷತ್ರಗಳಿಂದ ಕೂಡಿರುವ ಚಂದ್ರನಂತೆ ಅಂತಃಪುರದ ಸ್ತ್ರೀಯರೊಡನೆ ಹೊರಕ್ಕೆ ಬಂದನು. ಎಲ್ಲ ವನಚಾರಿಗಳಿಗೂ ಮತ್ತು ಕಪಿಗಳಿಗೂ ಸ್ವಾಮಿಯಾಗಿದ್ದ ವಾಲಿಯು ಮಿತವೂ, ಹಿತವೂ, ಸ್ಪಷ್ಟವೂ ಆಗಿದ್ದ ಮಾತುಗಳನ್ನು ದುಂದುಭಿಗೆ ಹೇಳಿದನು :

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


"ರಾಕ್ಷಸನೇ! ಯಾವ ಕಾರಣದಿಂದಾಗಿ ನೀನು ನನ್ನ ಪಟ್ಟಣದ ಮಹಾದ್ವಾರವನ್ನು ಮುತ್ತಿ ಗರ್ಜಿಸುತ್ತಿರುವೆ? ಮಹಾಬಲನೇ! ನೀನು ಯಾರೆಂಬುದು ನನಗೆ ಚೆನ್ನಾಗಿ ತಿಳಿದಿದೆ. ನಿನ್ನ ಪ್ರಾಣಗಳ ರಕ್ಷಣೆಯನ್ನು ಮಾಡಿಕೊ. ವೃಥಾ ನನ್ನೊಡನೆ ಯುದ್ಧ ಮಾಡಲು ಬರಬೇಡ."

ಧೀಮಂತನಾದ ವಾನರೇಂದ್ರನಾದ ವಾಲಿಯ ಮಾತನ್ನು ಕೇಳಿ ಕೋಪದಿಂದ ಕೆಂಗಣ್ಣನಾಗಿದ್ದ ದುಂದುಭಿಯು ವಾಲಿಗೆ ಹೇಳಿದನು:

"ವೀರನೇ! ಹೆಂಗಸರ ಮುಂದೆ-'ಪ್ರಾಣಗಳನ್ನು ರಕ್ಷಿಸಿಕೊ'-ಎಂಬ ಪರಾಕ್ರಮದ ಮಾತನ್ನು ಹೇಳಬಾರದು. ಹೀಗೆ ಹೇಳುವುದು ನಿನ್ನಂತಹ ವೀರನಿಗೆ ಯೋಗ್ಯವಾಗಿ ಕಾಣುವುದಿಲ್ಲ. ನನಗೆ ಯುದ್ಧದ ಆತಿಥ್ಯವನ್ನು ನೀಡು. ಅನಂತರವೇ ನನಗೆ ನಿನ್ನಲ್ಲಿ ಬಲವೆಷ್ಟಿದೆಯೆಂಬುವರ ಅರಿವಾಗುತ್ತದೆ. ಅಥವಾ ನೀನು ಹೀಗೂ ಮಾಡಬಹುದಾಗಿದೆ. ನನಗೆ ಉಕ್ಕಿಬಂದಿರುವ ಕೋಪವನ್ನು ತಾತ್ಕಾಲಿಕವಾಗಿ ತಡೆಹಿಡಿಯುತ್ತೇನೆ. ಬೆಳಗಾಗುವವರೆಗೆ ಸ್ವೇಚ್ಛೆಯಿಂದ ಕಾಮೋಪಭೋಗಗಳಲ್ಲಿ ಆಸಕ್ತನಾಗಿರು. ನೀನು ಎಲ್ಲ ಶಾಖಾಮೃಗಗಳಿಗೂ ಸ್ವಾಮಿಯಾಗಿರುವೆ. ನಿನಗೆ ಅತ್ಯಂತಪ್ರಿಯರಾಗಿರುವ ವಾನರರನ್ನು ಆಲಿಂಗಿಸಿಕೊಂಡು ಅವರಿಗೆ ಕೊಡಬೇಕಾದ ಪಾರಿತೋಷಿಕಗಳನ್ನೂ ಕೊಟ್ಟುಬಿಡು. ಸುಹೃಜ್ಜನರನ್ನೂ ಸಮ್ಮಾನಿಸು. ಕಿಷ್ಕಿಂಧಾಪಟ್ಟಣವನ್ನೂ ಒಮ್ಮೆ ಚೆನ್ನಾಗಿ ನೋಡಿಬಿಡು. ನಿನಗೆ ಸಮಾನನಾದವನೊಬ್ಬನನ್ನು ಕಿಷ್ಕಿಂಧಾಪಟ್ಟಣದಲ್ಲಿ ರಾಜನನ್ನಾಗಿ ನಿಯಮಿಸು. ಬೆಳಗಾಗುವವರೆಗೂ ಸ್ತ್ರೀಯರೊಡನೆ ಯಥೇಚ್ಛವಾಗಿ ವಿಹರಿಸು. ಅನಂತರ ನಾನು ನಿನ್ನಲ್ಲಿರುವ ದರ್ಪವನ್ನು ವಿನಾಶಗೊಳಿಸುತ್ತೇನೆ.

ಯೋ ಹಿ ಮತ್ತಂ ಪ್ರಮತ್ತಂ ವಾ ಸುಪ್ತಂ ವಾ ರಹಿತಂ ಭೃಶಮ್ ।
ಹನ್ಯಾತ್ಸ ಭ್ರೂಣಹಾ ಲೋಕೇ ತ್ವದ್ವಿಧಂ ಮದಮೋಹಿತಮ್ ॥

ಮದ್ಯಪಾನದಿಂದ ಮತ್ತನಾಗಿರುವವನನ್ನೂ, ಎಚ್ಚರದಪ್ಪಿರುವವನನ್ನೂ, ಆಯುಧಗಳನ್ನು ಹಿಡಿಯದವನನ್ನೂ, ಮಲಗಿರುವವನನ್ನೂ, ಕೃಶನಾಗಿರುವವನನ್ನೂ, ನಿನ್ನಂತೆ ಮದನಪೀಡಿತನಾಗಿರುವವನನ್ನೂ ಸಂಹರಿಸುವವನು ಲೋಕದಲ್ಲಿ ಭ್ರೂಣಹತ್ಯೆಯನ್ನು ಮಾಡಿದವನಿಗೆ ಸಮಾನನೆಂದು ಹೇಳುತ್ತಾರೆ."

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ರಾಕ್ಷಸನ ಆ ಮಾತನ್ನು ಕೇಳಿದೊಡನೆಯೇ ವಾಲಿಯು ತಾರೆಯೇ ಮೊದಲಾದ ಎಲ್ಲ ಸ್ತ್ರೀಯರನ್ನೂ ಹಿಂದಕ್ಕಟ್ಟಿ ಕೋಪದಿಂದ ಗಹಗಹಿಸಿ ನಗುತ್ತಾ ಮೂಢನಾದ ರಾಕ್ಷಸನಿಗೆ ಮೆಲ್ಲನೆ ಹೇಳಿದನು :

"ರಾಕ್ಷಸ! ನೀನು ಯುದ್ಧಕ್ಕೆ ಹೆದರದೇ ಇರುವವನಾಗಿದ್ದರೆ–'ಇವನು ಮತ್ತನು ; ಮದ್ಯಪಾನ ಮಾಡಿದ್ದಾನೆ' – ಎಂದು ಭಾವಿಸಿ ಯುದ್ಧವನ್ನು ನಿಲ್ಲಿಸಬೇಕಾಗಿಲ್ಲ. ನಾನು ಮಾಡಿರುವ ಸುರಾಪಾನವನ್ನು ಯುದ್ಧದ ಮೊದಲಿನಲ್ಲಿ ಉತ್ಸಾಹವೃದ್ಧಿಗಾಗಿ ಯೋಧರು ಕುಡಿಯುವ ವೀರಪಾನವೆಂದು ತಿಳಿ."

ರಾಘವ! ಹೀಗೆ ನನ್ನಣ್ಣನು ಆ ರಾಕ್ಷಸನಿಗೆ ಹೇಳಿ, ತಂದೆಯಾದ ಮಹೇಂದ್ರನು ಕೊಟ್ಟಿರುವ ಸುವರ್ಣಮಾಲೆಯನ್ನು ಧರಿಸಿ ಯುದ್ಧಕ್ಕೆ ಸಜ್ಜಾಗಿ ನಿಂತನು.

ಕಪಿಶ್ರೇಷ್ಠನಾದ ವಾಲಿಯು ಪರ್ವತೋಪಮವಾಗಿದ್ದ ಕೋಣನ ಆಕಾರವನ್ನು ಹೊಂದಿದ್ದ ದುಂದುಭಿರಾಕ್ಷಸನ ಎರಡು ಕೊಂಬುಗಳನ್ನೂ ಹಿಡಿದು ಗರ್ಜಿಸುತ್ತಾ ಗರಗರನೆ ತಿರುಗಿಸಿ ನೆಲಕ್ಕೆ ಅಪ್ಪಳಿಸಿ ಗಟ್ಟಿಯಾಗಿ ಗರ್ಜಿಸಿದನು. ರಾಕ್ಷಸನ ಕಿವಿಗಳಿಂದ ರಕ್ತದ ಕೋಡಿಯೇ ಹರಿಯತೊಡಗಿತು. ದುಂದುಭಿಯು ಚಡಪಡಿಸುತ್ತಾ ಕ್ರೋಧಾವೇಶದಿಂದ ಮೇಲೆದ್ದು ಕೊಂಬುಗಳಿಂದ ವಾಲಿಯನ್ನು ತಿವಿಯಲು ಹೋದನು. ಪರಸ್ಪರವಾಗಿ ವಿಜಯಗಳಿಸಲು ಹವಣಿಸುತ್ತಿದ್ದ ವಾಲಿ-ದುಂದುಭಿಗಳ ನಡುವೆ ಭಯಂಕರವಾದ ಯುದ್ಧವು ನಡೆಯಿತು. ತಂದೆಯಾದ ಇಂದ್ರನ ಪರಾಕ್ರಮಕ್ಕೆ ಅನುಗುಣವಾದ ಪರಾಕ್ರಮವನ್ನು ಹೊಂದಿದ್ದ ವಾಲಿಯು ಆ ಸಮಯದಲ್ಲಿ ಮುಷ್ಟಿಗಳಿಂದಲೂ, ಮಂಡಿಗಳಿಂದಲೂ, ಕಾಲುಗಳಿಂದಲೂ, ಕಲ್ಲುಬಂಡೆಗಳಿಂದಲೂ, ವೃಕ್ಷಗಳಿಂದಲೂ ದುಂದುಭಿಯೊಡನೆ ಹೋರಾಡಿದನು. ಪರಸ್ಪರವಾಗಿ ಪ್ರಹರಿಸುತ್ತಾ ಇಬ್ಬರೂ ಯುದ್ಧಮಾಡುತ್ತಿರುವಾಗ ರಾಕ್ಷಸನ ಬಲವು ಕ್ರಮೇಣ ಕುಗ್ಗತೊಡಗಿತು. ನನ್ನ ಅಣ್ಣನ ಬಲವು ವರ್ಧಿಸತೊಡಗಿತು. ಯುದ್ಧೋದ್ಯಮ-ವೀರ್ಯ-ಧೈರ್ಯ-ಪರಾಕ್ರಮಗಳಿಂದ ವಾಲಿಯು ಕ್ಷಣ-ಕ್ಷಣಕ್ಕೂ ಕ್ಷೀಣಿಸುತ್ತಿದ್ದ ದುಂದುಭಿಯನ್ನು ಪುನಃ ಮೇಲಕ್ಕೆತ್ತಿ ರಭಸದಿಂದ ನೆಲಕ್ಕೆ ಅಪ್ಪಳಿಸಿದನು. ಪ್ರಾಣಾಪಹಾರಕವಾದ ಆ ಘೋರಯುದ್ಧದಲ್ಲಿ ವಾಲಿಯು ದುಂದುಭಿಯನ್ನು ಮಾಂಸದ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಮುದ್ದೆಯನ್ನಾಗಿ ಮಾಡಿಬಿಟ್ಟನು. ರಾಕ್ಷಸನ ಕಿವಿ-ಮೂಗು-ಬಾಯಿ-ಗಳಿಂದ ಧಾರಾಕಾರವಾಗಿ ರಕ್ತವು ಹರಿಯತೊಡಗಿತು. ಮಹಾಕಾಯನಾದ-ದುಂದುಭಿಯು ಭೂಮಿಯಲ್ಲಿ ಬಿದ್ದು ಪ್ರಾಣಗಳನ್ನು ತೊರೆದನು. ಮಹಾ-ಬಲಿಷ್ಠನಾದ ವಾಲಿಯು ಪ್ರಜ್ಞೆಯನ್ನೂ ಪ್ರಾಣಗಳನ್ನೂ ಕಳೆದುಕೊಂಡಿದ್ದ ದುಂದುಭಿಯನ್ನು ಎರಡು ತೋಳುಗಳಿಂದಲೂ ಹಿಡಿದೆತ್ತಿ ಹಿಂದಕ್ಕೂ-ಮುಂದಕ್ಕೂ ಜಗ್ಗಿಸುತ್ತಾ ಒಂದೇಬಾರಿಗೆ ಒಂದು ಯೋಜನದಷ್ಟು ದೂರಕ್ಕೆಸೆ-ದನು. ವೇಗದಿಂದ ಎಸೆಯಲ್ಪಟ್ಟ ದುಂದುಭಿಯ ಮುಖದ ಗಾಯಗಳಿಂದ ಚಿಮ್ಮಿದ ರಕ್ತದ ತೊಟ್ಟುಗಳು ಗಾಳಿಯಿಂದ ಒಯ್ಯಲ್ಪಟ್ಟು ಮತಂಗ-ಮಹರ್ಷಿಗಳ ಆಶ್ರಮಭೂಮಿಯಲ್ಲಿ ಬಿದ್ದುವು. ತಮ್ಮ ಪವಿತ್ರವಾದ ಆಶ್ರಮಭೂಮಿಯಲ್ಲಿ ರಕ್ತದ ತೊಟ್ಟುಗಳು ಬಿದ್ದುದನ್ನು ಕಂಡು ಮಹಾ-ಭಾಗರಾದ ಮತಂಗರು ಕ್ರುದ್ಧರಾಗಿ ಇದಕ್ಕೆ ಕಾರಣರಾರೆಂಬುದನ್ನು ಯೋಚಿಸತೊಡಗಿದರು.

“ಯಾವ ದುರಾತ್ಮನು ನನ್ನನ್ನು ಅಪವಿತ್ರವಾದ ಈ ರಕ್ತದ ಮೂಲಕ-ವಾಗಿ ಮುಟ್ಟಿದನು? ಮೂಢನಾದ, ದುರಾತ್ಮನಾದ, ದುರ್ಬುದ್ಧಿಯಾದ, ಜಿತೇಂದ್ರಿಯನಲ್ಲದ ಆ ಮೂರ್ಖನು ಯಾರಾಗಿರಬಹುದು?”

ಮತಂಗರು ಹೀಗೆ ಯೋಚಿಸುತ್ತಾ ಆಶ್ರಮದಿಂದ ಹೊರಬಂದರು. ಅಲ್ಲಿಯೇ ಪ್ರಾಣತೊರೆದು ಪರ್ವತಾಕಾರವಾಗಿ ಬಿದ್ದಿದ್ದ ಮಹಿಷರೂಪ-ನಾಗಿದ್ದ ದುಂದುಭಿಯನ್ನು ನೋಡಿದರು. ತಮ್ಮ ತಪಃಪ್ರಭಾವದಿಂದ ಇದು ವಾನರಶ್ರೇಷ್ಠನಾದ ವಾಲಿಯು ಮಾಡಿರುವ ಕೃತ್ಯವೆಂದೂ ತಿಳಿದು-ಕೊಂಡರು. ಮಹಾಮಹಿಷನನ್ನು ಕೊಂದು ತಮ್ಮ ಪವಿತ್ರವಾದ ಆಶ್ರಮ-ಭೂಮಿಯ ಕಡೆಗೆ ಬಿಸುಟಿದ್ದ ವಾಲಿಯನ್ನು ಉದ್ದೇಶಿಸಿ ಮಹಾಶಾಪವನ್ನು ಉಸುರಿದರು:

ಇಹ ತೇನಾಪ್ರವೇಷ್ಟವ್ಯಂ ಪ್ರವಿಷ್ಟಸ್ಯ ವಧೋ ಭವೇತ್ ।
ವನಂ ಮತ್ಸಂಶ್ರಯಂ ಯೇನ ದೂಷಿತಂ ರುಧಿರಸ್ರವೈಃ ॥೫೩॥

“ಯಾವನು–ನನ್ನ ಆಶ್ರಯಸ್ಥಾನವಾಗಿರುವ ಈ ಪವಿತ್ರವಾದ ತಪೋ-ಭೂಮಿಯನ್ನು ರಕ್ತದ ಬಿಂದುಗಳಿಂದ ಅಪವಿತ್ರಗೊಳಿಸಿರುವನೋ–ಅವನು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.
ಇನ್ನು ಮುಂದೆ ಈ ಆಶ್ರಮಪ್ರದೇಶಕ್ಕೆ ಬರಬಾರದು. ಒಂದು ವೇಳೆ ಅವನೇನಾದರೂ ಇಲ್ಲಿಗೆ ಆಗಮಿಸಿದರೆ ಇಲ್ಲಿಯೇ ಅವನು ಸತ್ತುಹೋಗುತ್ತಾನೆ.

ದುಷ್ಟನಾದ ಆ ವಾಲಿಯು ನನ್ನ ಈ ಪವಿತ್ರವಾದ ಆಶ್ರಮಭೂಮಿಗೆ ಪರ್ವತೋಪಮವಾದ ರಾಕ್ಷಸನ ದೇಹವನ್ನು ಬಿಸುಟು ಇಲ್ಲಿದ್ದ ವೃಕ್ಷಗಳೆಲ್ಲವನ್ನೂ ಧ್ವಂಸಮಾಡಿರುವನು. ದುರ್ಬುದ್ಧಿಯಾದ ಅವನೇನಾದರೂ ಈ ಆಶ್ರಮದಿಂದ ಒಂದು ಯೋಜನದ ಸುತ್ತಳತೆಯಲ್ಲಿ ಈ ಪ್ರದೇಶವನ್ನು ಪ್ರವೇಶಿಸಿದ್ದೇ ಆದರೆ ಅವನು ಖಂಡಿತವಾಗಿಯೂ ಉಳಿಯಲಾರನು. ಅವನ ಮಂತ್ರಿಗಳಲ್ಲಿ ಯಾರಾದರೂ ಈ ಆಶ್ರಮಪ್ರದೇಶದಲ್ಲಿ ಆಶ್ರಯವನ್ನು ಪಡೆದಿದ್ದರೆ ಮುಂದೆ ಅವರೂ ಇಲ್ಲಿ ವಾಸಮಾಡಬಾರದು. ಈ ನನ್ನ ಆಜ್ಞೆಯನ್ನು ಕೇಳಿದ ಕೂಡಲೇ ಅವರು ಸುಖವಾಗಿ ಈ ಆಶ್ರಮಭೂಮಿಯಿಂದ ಹೊರಟು ಹೋಗಲಿ. ಪುತ್ರನಂತೆಯೇ ಅಕ್ಕರೆಯಿಂದ ಬೆಳೆಸಿರುವ ಈ ನನ್ನ ವನದಲ್ಲಿ ಎಲೆಗಳ, ಚಿಗುರುಗಳ, ಫಲಗಳ ಮತ್ತು ಗೆಡ್ಡೆ-ಗೆಣಸುಗಳ ವಿನಾಶಾರ್ಥವಾಗಿ ಅವರೇನಾದರೂ ಇಲ್ಲಿ ಉಳಿದುಕೊಂಡುದೇ ಆದರೆ–ಅವರಿಗೂ ನಾನು ಶಾಪವನ್ನು ಕೊಡುತ್ತೇನೆ. ಈ ಆಶ್ರಮಪ್ರದೇಶದಿಂದ ಹೊರಟುಹೋಗಲು ಆ ವಾನರರಿಗೆ ಒಂದು ದಿವಸದ ಅವಕಾಶವು ಮಾತ್ರವೇ ಇರುತ್ತದೆ. ಅದು ತೀರಿದನಂತರ ನಾನೇನಾದರೂ ಪವಿತ್ರವಾದ ನನ್ನ ಈ ಆಶ್ರಮಪ್ರದೇಶದಲ್ಲಿ (ವಾಲಿಯ ಅನುಚರನಾದ) ಯಾವ ವಾನರನನ್ನಾದರೂ ನೋಡಿದ್ದೇ ಆದರೆ–ಅವನು ಹಲವಾರು ಸಾವಿರ ವರ್ಷಗಳ ಕಾಲ ಕಲ್ಲಿನ ರೂಪವಾಗಿ ಬಿಡುವನು."

ಮತಂಗಮಹರ್ಷಿಗಳು ಹೇಳಿದ ಆ ಮಾತನ್ನು ಕೇಳಿ ಅವರ ಆಶ್ರಮಪ್ರದೇಶದಲ್ಲಿದ್ದ ವಾನರರೆಲ್ಲರೂ ಒಡನೆಯೇ ಅಲ್ಲಿಂದ ಹೊರಟು ವಾಲಿಯ ಬಳಿಗೆ ಬಂದರು. ತನ್ನ ಬಳಿಗೆ ಬಂದ ವಾನರರನ್ನು ವಾಲಿಯು ಪ್ರಶ್ನಿಸಿದನು :

"ವಾನರಶ್ರೇಷ್ಠರೇ! ಮತಂಗಮಹರ್ಷಿಗಳ ಆಶ್ರಮದಲ್ಲಿ ಸುಖವಾಗಿ ವಾಸಮಾಡಿಕೊಂಡಿದ್ದ ನೀವೆಲ್ಲರೂ ಒಟ್ಟಾಗಿ ಆಶ್ರಮಪ್ರದೇಶವನ್ನು ತೊರೆದು ನನ್ನ ಬಳಿಗೇಕೆ ಬಂದಿರುವಿರಿ? ಅರಣ್ಯವಾಸಿಗಳೆಲ್ಲರೂ ಕುಶಲಿಗಳಾಗಿರುವರಲ್ಲವೇ?"

ಹೀಗೆ ಪ್ರಶ್ನಿಸಿದ ಸುವರ್ಣಮಾಲೆಯನ್ನು ಧರಿಸಿದ್ದ ವಾಲಿಗೆ ತಾವು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.
ಮತಂಗರ ಆಶ್ರಮವನ್ನು ಪರಿತ್ಯಜಿಸಿ ಬಂದುದಕ್ಕೆ ಕಾರಣವನ್ನು ವಿಶದೀಕರಿಸುತ್ತಾ ಮಹರ್ಷಿಗಳು ಶಾಪವಿತ್ತುದನ್ನೂ ಹೇಳಿದರು. ವಾನರರು ಹೇಳಿದ ಆ ಮಾತನ್ನು ಕೇಳಿ ವಾಲಿಯು ಒಡನೆಯೇ ಮತಂಗಮಹರ್ಷಿಗಳ ಬಳಿಗೆ ಹೋಗಿ ಕೈಜೋಡಿಸಿಕೊಂಡು ಶಾಪವಿಮೋಚನೆಗಾಗಿ ಪ್ರಾರ್ಥಿಸಿದನು. ಆದರೆ ಕುಪಿತರಾಗಿದ್ದ ಮಹರ್ಷಿಗಳು ಅವನ ಪ್ರಾರ್ಥನೆಯನ್ನು ತಿರಸ್ಕರಿಸಿ ಆಶ್ರಮದೊಳಕ್ಕೆ ಹೊರಟುಹೋದರು. ಮಹರ್ಷಿಗಳ ಆ ಶಾಪದ ಕಾರಣದಿಂದ ವಾಲಿಯು ಭೀತನೂ ದುಃಖಿತನೂ ಆದನು. ಅಲ್ಲಿಂದ ಮುಂದೆ ಶಾಪದ ಪರಿಣಾಮವನ್ನು ನೆನೆದು ಬಹಳವಾಗಿ ಭಯಪಡುತ್ತಿದ್ದ ವಾಲಿಯು ಋಶ್ಯಮೂಕಮಹಾಪರ್ವತವನ್ನು ಪ್ರವೇಶಿಸಲು ಅಥವಾ ಅದರ ಕಡೆ ನೋಡಲೂ ಕೂಡ ಇಚ್ಛಿಸುವುದಿಲ್ಲ. ಹೀಗೆ ಮತಂಗಮಹರ್ಷಿಗಳ ಶಾಪದಿಂದಾಗಿ ಈ ಆಶ್ರಮಪ್ರದೇಶವು ವಾಲಿಗೂ ಮತ್ತು ಅವನ ಅನುಚರರಿಗೂ ನಿಷೇಧಿಸಲ್ಪಟ್ಟದೆ. ಅವನಿಲ್ಲಿಗೆ ಪ್ರವೇಶಮಾಡುವುದಿಲ್ಲವೆಂಬುದನ್ನು ತಿಳಿದೇ ನಾನು ಯಾವ ವಿಧವಾದ ಭಯವೂ ಇಲ್ಲದೇ ಮಂತ್ರಿಗಳೊಡನೆ ಈ ಅರಣ್ಯದಲ್ಲಿ ಸಂಚರಿಸುತ್ತೇನೆ. ವಾಲಿಯ ವೀರ್ಯಾತಿಶಯದಿಂದ ಇಲ್ಲಿಗೆ ಎಸೆಯಲ್ಪಟ್ಟ ಪರ್ವತಶಿಖರೋಪಮವಾದ ದುಂದುಭಿಯ ಮೂಳೆಗಳ ದೊಡ್ಡದಾದ ರಾಶಿಯು ಇದೋ ಇಲ್ಲಿಯೇ ಪ್ರಕಾಶಿಸುತ್ತಿದೆ.

ಇಮೇ ಚ ವಿಪುಲಾಃ ಸಾಲಾಃ ಸಪ್ತ ಶಾಖಾಪಲಮ್ಬಿನಃ ।
ಯತ್ರೈಕಂ ಘಟತೇ ವಾಲೀ ನಿಷ್ಪತ್ರಯಿತುಮೋಜಸಾ ॥ ೬೭॥

ಇಲ್ಲಿ ಕಾಣುತ್ತಿರುವುವೇ ಏಳು ಸಾಲವೃಕ್ಷಗಳು. ನೀನು ನೋಡುತ್ತಿರುವಂತೆ ಈ ಸಾಲವೃಕ್ಷಗಳು ಹಲವಾರು ಕೊಂಬೆಗಳಿಂದ ಕೂಡಿದ್ದು ವಿಶಾಲವಾಗಿವೆ. ಈ ಏಳು ಸಾಲವೃಕ್ಷಗಳಲ್ಲಿ ಯಾವ ವೃಕ್ಷವನ್ನಾದರೂ ತನ್ನ ಪರಾಕ್ರಮದಿಂದ ಎಲೆಗಳಿಲ್ಲದಂತೆ ಮಾಡಲು ವಾಲಿಯು ಸಮರ್ಥನಾಗಿದ್ದಾನೆ. *

*ವಾಲಿಯ ಭುಜಬಲವೆಷ್ಟೆಂಬುದನ್ನು ಶ್ರೀರಾಮನಿಗೆ ಮನಗಾಣಿಸುವ ಶ್ಲೋಕವಿದಾಗಿದೆ. ಚಂಡಮಾರುತವು ಬಲವಾಗಿ ಬೀಸಿ ಮರಗಳನ್ನು ಉರುಳಿಸಬಹುದು. ಆದರೆ ಮರದಲ್ಲಿರುವ ಹಸಿರೆಲೆಗಳನ್ನು ಉದುರಿಸಲು ಚಂಡಮಾರುತನಿಂದಲೂ ಸಾಧ್ಯವಾಗುವುದಿಲ್ಲ. ತರಗೆಲೆಗಳು ಅಥವಾ ಹಣ್ಣೆಲೆಗಳು ಮಾತ್ರ ಉದುರಬಹುದು. ಆದರೆ ವಾಲಿಯು ಸಾಲ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ರಾಘವ! ಇದು ನಮ್ಮಣ್ಣನಾದ ವಾಲಿಯ ಅತುಲವಾದ ಪರಾಕ್ರಮ. ಇದನ್ನು ನಾನು ನಿನಗೆ ವಿಶದವಾಗಿ ಹೇಳಿದ್ದೇನೆ. ಇಂತಹ ಅತುಲಪರಾಕ್ರಮಿಯಾದ ವಾಲಿಯನ್ನು ಸಂಹರಿಸಲು ನಿನಗೆ ಹೇಗೆ ಶಕ್ಯವಾಗುತ್ತದೆ ? "

ಹೀಗೆ ಹೇಳಿದ ಸುಗ್ರೀವನ ಮುಖವನ್ನು ನೋಡಿ ಲಕ್ಷ್ಮಣನು ನಗುತ್ತಾ ಹೇಳಿದನು :

" ಸುಗ್ರೀವ! ಶ್ರೀರಾಮನು ಯಾವ ಕಾರ್ಯವನ್ನು ಮಾಡಿದರೆ ವಾಲಿಯ ವಧೆಯ ವಿಷಯದಲ್ಲಿ ನಿನಗೆ ನಂಬಿಕೆಯುಂಟಾಗುವುದು ? ಹೇಳು."

ಹೀಗೆ ಪ್ರಶ್ನಿಸಿದ ಲಕ್ಷ್ಮಣನಿಗೆ ಸುಗ್ರೀವನು ಹೇಳಿದನು.

" ಲಕ್ಷ್ಮಣ! ಈ ಏಳು ಸಾಲವೃಕ್ಷಗಳಲ್ಲಿ ವಾಲಿಯು ಒಂದೊಂದನ್ನೂ ಹಲವಾರು ಬಾರಿ ಧ್ವಂಸಮಾಡಿದ್ದಾನೆ. ರಾಮನೇನಾದರೂ ಈ ಏಳು ಸಾಲವೃಕ್ಷಗಳಲ್ಲಿ ಒಂದು ಸಾಲವೃಕ್ಷವನ್ನು ಒಂದೇ ಬಾಣದಿಂದ ಸೀಳಿದನಾದರೆ ಅವನ ಪರಾಕ್ರಮವನ್ನು ನೋಡಿ ನಾನು ವಾಲಿಯು ಹತನಾದನೆಂದೇ ಭಾವಿಸುತ್ತೇನೆ. ಪರ್ವತೋಪಮವಾಗಿ ಬಿದ್ದಿರುವ ಮಹಿಷರಾಕ್ಷಸನ ಮೂಳೆಗಳ ರಾಶಿಯನ್ನು ಒಂದೇ ಕಾಲಿನಿಂದ ಚಿಮ್ಮಿ ಎರಡು ನೂರು ಬಿಲ್ಲುಗಳ ಅಂತರಕ್ಕೆ ಎಸೆಯಬೇಕು. ಈ ಎರಡು ಸಾಹಸಕಾರ್ಯಗಳನ್ನು ರಾಮನು

---

ವೃಕ್ಷದ ಬುಡವನ್ನು ಹಿಡಿದು ಅಳ್ಳಾಡಿಸುತ್ತಲೇ ಅದರ ಎಲೆಗಳೆಲ್ಲವನ್ನೂ ಉದುರಿಸುತ್ತಿದ್ದನು – ಎಂದರೆ ಅವನು ವೃಕ್ಷವನ್ನು ಎಷ್ಟು ಬಲವಾಗಿ ಅಳ್ಳಾಡಿಸುತ್ತಿದ್ದನು– ಎಂಬುದರ ಅರಿವಾಗುತ್ತದೆ. ಬಿರುಗಾಳಿಯು ಬಡಿತಕ್ಕೂ ಉದುರಿಹೋಗದ ಸಾಲವೃಕ್ಷದ ಹಸಿರೆಲೆಗಳು ವಾಲಿಯ ಭುಜಬಲದ ಪ್ರಭಾವದಿಂದ ಉದುರಿಹೋಗುತ್ತಿದ್ದುವು. ಮರಗಳ ರೆಂಬೆಗಳನ್ನು ಮುರಿದು ಅದೇ ರೆಂಬೆಗಳನ್ನು ನೆಲದ ಮೇಲೆ ಅಪ್ಪಳಿಸಿ ಹಸಿರೆಲೆಗಳನ್ನು ಉದುರಿಸುವುದು ಅಂತಹ ಕಷ್ಟಸಾಧ್ಯವಾದ ಕಾರ್ಯವಲ್ಲ. ವೃಕ್ಷದ ಬುಡವನ್ನು ತಬ್ಬಿಕೊಂಡು ವೃಕ್ಷವನ್ನು ಅಳ್ಳಾಡಿಸುತ್ತಲೇ ಎಲೆಗಳೆಲ್ಲವನ್ನೂ ಉದುರಿಸುವುದು ಬಹಳ ಸಾಹಸದ ಕಾರ್ಯವೇ ಸರಿ. ಆದುದರಿಂದಲೇ ಒಬ್ಬ ವ್ಯಾಖ್ಯಾನಕಾರರು ವಾಯೋರಪ್ಯಧಿಕಂ ಬಲಂ ಸೂಚಿತಂ = ವಾಯುವಿಗಿಂತಲೂ ವಾಲಿಯು ಹೆಚ್ಚು ಬಲಿಷ್ಠನೆಂಬುದನ್ನು ಇದು ಸೂಚಿಸುತ್ತದೆ–ಎಂದಿದ್ದಾರೆ. ಈ ಅರ್ಥವು ಸರಸವಾಗಿ ಕಾಣುತ್ತದೆ. ಧನುಸ್ಸಿನ ಸಹಾಯವೇ ಇಲ್ಲದೇ ಬಾಹುಬಲದಿಂದಲೇ ಬಾಣವನ್ನು ರೆಕ್ಕೆಗಳ ಸಮೇತವಾಗಿ ವೃಕ್ಷದೊಳಗೆ ಸುಸುಳಿಸಬಲ್ಲನು–ಎಂದು ಒಬ್ಬ

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.



ಮಾಡಿ ತೋರಿಸಿದಲ್ಲಿ ವಾಲಿಯ ಸಂಹಾರಕ್ಕೆ ರಾಮನು ಸಮರ್ಥನೆಂದು ನಾನು ಭಾವಿಸುತ್ತೇನೆ."

ಕೆಂಪಾದ ಕಡೆಗಣ್ಣಿನಿಂದ ಕೂಡಿದ್ದ ಸುಗ್ರೀವನು ಲಕ್ಷ್ಮಣನಿಗೆ ಹೀಗೆ ಹೇಳಿ ಮುಹೂರ್ತಕಾಲ – ಶ್ರೀರಾಮನು ವಾಲಿಯನ್ನು ಸಂಹರಿಸಲು ಸಮರ್ಥನೇ ?–ಎಂಬುದನ್ನೇ ಯೋಚಿಸುತ್ತಿದ್ದು ಪುನಃ ರಾಮನಿಗೆ ಹೇಳಿದನು :

" ರಾಮ ! ವಾಲಿಯು ಮಹಾಶೂರನು. ತನ್ನಂತೆಯೇ ಶೂರರಾದವರನ್ನು ಗೌರವಿಸತಕ್ಕವನು. ಶೂರರಿಂದ ಗೌರವಿಸಲ್ಪಡತಕ್ಕವನು. ಮಹಾಬಲಿಷ್ಠನು. ಬಲ-ಪೌರುಷಗಳಲ್ಲಿ ಅಸಮಾನನೆಂಬ ಖ್ಯಾತಿಯನ್ನು ಗಳಿಸಿದ್ದಾನೆ. ಯುದ್ಧಗಳಲ್ಲಿ ಅವನು ಎಂದಿಗೂ ಪರಾಜಿತನಾದವನೇ ಅಲ್ಲ. ದೇವತೆಗಳಿಂದಲೂ ಮಾಡಲು ಸಾಧ್ಯವಾಗಲಾರದ ಸಾಹಸಕಾರ್ಯಗಳನ್ನು ವಾಲಿಯು ಮಾಡಿದ್ದಾನೆ. ಅವನು ಮಾಡಿರುವ ಸಾಹಸಕಾರ್ಯಗಳು ಪ್ರತ್ಯಕ್ಷವಾಗಿಯೇ ಕಾಣುತ್ತಿವೆ. ಪರಮಾದ್ಭುತವಾದ ಆ ಕಾರ್ಯಗಳನ್ನೇ ಯೋಚಿಸುತ್ತಾ ನಾನು ಬಹಳ ಭೀತನಾಗಿ ಅವನಿಂದ ಪ್ರವೇಶಿಸಲು ಸಾಧ್ಯವಾಗದಿರುವ ಈ ಋಷ್ಯಮೂಕಪರ್ವತವನ್ನು ಆಶ್ರಯಿಸಿದ್ದೇನೆ. ನನ್ನಿಂದ ಎದುರಿಸಲು ಮತ್ತು ಜಯಿಸಲು ಅಸಾಧ್ಯನಾದ, ಮಹಾಕೋಪಿಷ್ಠನಾದ,

---

ವ್ಯಾಖ್ಯಾನಕಾರರು ಅರ್ಥಮಾಡಿರುತ್ತಾರೆ. ಯತ್ರ ಸಾಲೇಷು ಏಕಂ ಸಾಲಂ ಓಜಸಾ ನ ತು ಧನುಷಾ ನಿಷ್ಪತ್ರಯಿತುಂ ನಿರ್ಗತಶರಪತ್ರಂ ಕರ್ತುಂ ಘಟತೇ ಶಕ್ನೋತಿ. ಏಕಂ ಸಾಲಂ ಭಿತ್ತ್ವಾ ಶರೋ ನಿಷ್ಪತ್ರಂ ಯಥಾ ತಥಾ ವೃಕ್ಷಾನ್ತರಾಸಕ್ತಮೂಲಂ ಗಚ್ಛತಿ ತಥಾ ವೇದ್ಧುಂ ಸಮರ್ಥಃ = ವಾಲಿಯು ಬಾಣದಿಂದ ಒಂದು ಸಾಲವನ್ನು ಭೇದಿಸಿದರೆ ಆ ಬಾಣವು ಆ ಸಾಲವನ್ನು ಭೇದಿಸಿಕೊಂಡು ಹೊರಬಂದು ಉಳಿದ ಸಾಲವೃಕ್ಷಗಳನ್ನೂ ಭೇದಿಸುತ್ತಿತ್ತು. ಇಂತಹ ಸಾಮರ್ಥ್ಯವು ವಾಲಿಗಿತ್ತು–ಎಂದು ವ್ಯಾಖ್ಯಾನಮಾಡಿದ್ದಾರೆ. ಮತ್ತೊಬ್ಬ ವ್ಯಾಖ್ಯಾನಕಾರರು ಏಕಂ ತರುಂ ನಿಷ್ಪತ್ರಯಿತುಂ ಪತ್ರವಿಹೀನಂ ಕರ್ತುಂ = ಒಂದು ಸಾಲವೃಕ್ಷವನ್ನು ಎಲೆಗಳಿಂದ ರಹಿತವನ್ನಾಗಿ ಮಾಡಲು, ಓಜಸಾ = ಓಜೋಹೇತುಕಮೂಲಗ್ರಹಣಪೂರ್ವಕಕಮ್ಪನೇನ = ಬುಡವನ್ನು ಹಿಡಿದು ಅಲ್ಲಾಡಿಸುವ ಭುಜಶಕ್ತಿಯ ಮೂಲಕವಾಗಿ, ವಾಲೀ ಘಟತೇ = ವಾಲಿಯು ಪ್ರಯತ್ನಿಸುತ್ತಾನೆ–ಎಂದು ವ್ಯಾಖ್ಯಾನಿಸಿದ್ದಾರೆ. ಕಡೆಯ ಈ ಅರ್ಥವೇ ಸಮಂಜಸವಾಗಿ ಕಾಣುತ್ತದೆ.



CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

ವಾನರೇಂದ್ರನಾದ ವಾಲಿಯನ್ನು ನಿರಂತರವಾಗಿ ಚಿಂತಿಸುತ್ತಿರುವ ನಾನು ಈ ಪರ್ವತವನ್ನು ಬಿಟ್ಟು ಹೋಗುತ್ತಲೇ ಇಲ್ಲ. ವಾಲಿಯ ವಿಷಯದಲ್ಲಿ ಭಯ ಗೊಂಡಿರುವ ನಾನು ಪರಿಚಯವಿಲ್ಲದ ಯಾರನ್ನೇ ಕಂಡರೂ ಸಂದೇಹಪಡುತ್ತಾ ನನ್ನ ವಿಷಯದಲ್ಲಿ ಹೆಚ್ಚು ಅನುರಕ್ತರಾಗಿರುವ ಹನುಮಂತನೇ ಮೊದಲಾದ ಅಮಾತ್ಯಪ್ರಮುಖರೊಡನೆ ಈ ಮಹಾರಣ್ಯದಲ್ಲಿ ಸಂಚರಿಸುತ್ತಿದ್ದೇನೆ. ಮಿತ್ರ ವತ್ಸಲನೇ ! ಪುರುಷಸಿಂಹನೇ ! ನಾನು ಇಂತಹ ದುರವಸ್ಥೆಯಲ್ಲಿರುವಾಗ ಪರಮಶ್ಲಾಘ್ಯನಾದ ಸನ್ಮಿತ್ರನು ನನಗೆ ಸಿಕ್ಕಿದ್ದಾನೆ. ಮಹರ್ಷಿಗಳು ಪರ್ವತ ಶ್ರೇಷ್ಠನಾದ ಹಿಮವಂತನನ್ನು ಆಶ್ರಯಿಸುವಂತೆ–ನಾನು ನಿನ್ನನ್ನು ಆಶ್ರಯಿ ಸಿದ್ದೇನೆ. ದುಷ್ಟನಾದ ನಮ್ಮಣ್ಣನ ಬಲವೆಷ್ಟೆಂಬುದನ್ನು ನಾನು ತಿಳಿ ದಿದ್ದೇನೆ. ಆದರೆ ಯುದ್ಧದಲ್ಲಿ ನಿನ್ನ ಪರಾಕ್ರಮವೆಷ್ಟೆಂಬುದನ್ನು ನಾನು ಪ್ರತ್ಯಕ್ಷವಾಗಿ ಕಂಡಿಲ್ಲ. ನಾನು ಹೀಗೆ ಹೇಳುತ್ತಿರುವುದು ನಿನ್ನ ಬಲವನ್ನು ಪರೀಕ್ಷಿಸಬೇಕೆಂಬ ಇಚ್ಛೆಯಿಂದಲ್ಲ. ನಿನ್ನನ್ನು ಅವಮಾನಗೊಳಿಸಲು ನಾನು ಈ ಮಾತುಗಳನ್ನಾಡುತ್ತಿಲ್ಲ. ಅಥವಾ ವಾಲಿಯು ಅತುಲಪರಾಕ್ರಮಿಯೆಂದು ವರ್ಣಿಸಿ ನಿನ್ನನ್ನು ಭಯಗೊಳಿಸುವ ಆಶಯವೂ ನನ್ನದಲ್ಲ. ಆದರೆ ನಮ್ಮಣ್ಣನು ಮಾಡಿರುವ ಭಯಂಕರವಾದ ಸಾಹಸಕಾರ್ಯಗಳನ್ನು ನಾನು ಪ್ರತ್ಯಕ್ಷವಾಗಿಯೇ ನೋಡಿರುವೆನಾದಕಾರಣ ನನ್ನ ಮನಸ್ಸಿನಲ್ಲಿ ಈ ವಿಧವಾದ ಕಾತರವುಂಟಾಗಿದೆ. ವಾಲಿಯ ವಧೆಯನ್ನು ಮಾಡುವೆನೆಂಬ ನಿನ್ನ ಅಭಯದ ವಚನವೇ ನನಗೆ ಸಾಕು. ಅದೇ ನನಗೆ ನೀನು ವಾಲಿಗಿಂತಲೂ ಬಲಿಷ್ಠನೆಂಬುದಕ್ಕೆ ಪ್ರಮಾಣ. ನಿನ್ನ ಮಾತು, ಧೈರ್ಯ ಮತ್ತು ಸ್ವರೂಪ ಗಳು ಬೂದಿಮುಚ್ಚಿದ ಕೆಂಡದಂತಿರುವ ನಿನ್ನ ಶ್ರೇಷ್ಠವಾದ ತೇಜಸ್ಸನ್ನು ಹೊರಗೆಡಹುತ್ತವೆ."

ಮಹಾತ್ಮನಾದ ಸುಗ್ರೀವನ ಆ ಮಾತನ್ನು ಕೇಳಿ ಶ್ರೀರಾಮನು ನಸು ನಗುತ್ತಾ ಹೇಳಿದನು :

" ವಾನರಶ್ರೇಷ್ಠನೇ ! ನನ್ನ ಪರಾಕ್ರಮದ ವಿಷಯದಲ್ಲಿ ನಿನಗೆ ಈಗ ನಂಬಿಕೆಯಿಲ್ಲದಿದ್ದರೆ ಮುಂದೆ ನನಗೂ ವಾಲಿಗೂ ನಡೆಯಲಿರುವ ಯುದ್ಧದಲ್ಲಿ ನನ್ನ ಪರಾಕ್ರಮವೆಷ್ಟೆಂಬುದನ್ನು ತೋರಿ ನಿನಗೆ ಪ್ರಶಂಸನೀಯವಾದ ವಿಶ್ವಾ ಸವು ಹುಟ್ಟುವಂತೆ ಮಾಡುವೆನು."

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.


ಲಕ್ಷ್ಮಣಾಗ್ರಜನಾದ ಮಹಾಬಾಹುವಾದ ಶ್ರೀರಾಮನು ಹೀಗೆ ಸುಗ್ರೀವನನ್ನು ಸಂತಯಿಸಿ ಶುಷ್ಕವಾಗಿ ಹೋಗಿದ್ದ, ಪರ್ವತೋಪಮವಾಗಿದ್ದ ದುಂದುಭಿಯ ಮೂಳೆಗಳ ರಾಶಿಯನ್ನು ಬಲಗಾಲಿನ ಹೆಬ್ಬೆರಳಿನಿಂದ ಮೇಲೆತ್ತಿ ಲೀಲೆಯಿಂದಲೇ ಅದನ್ನು ಹಿಂದಕ್ಕೂ ಮುಂದಕ್ಕೂ ತೂಗಾಡಿಸುತ್ತಾ ಹತ್ತು ಯೋಜನಗಳಷ್ಟು ದೂರಕ್ಕೆ ಎಸೆದುಬಿಟ್ಟನು. ಹಾಗೆ ಲೀಲಾಜಾಲವಾಗಿ ಎಸೆದುದನ್ನು ನೋಡಿ ಸುಗ್ರೀವನು ಲಕ್ಷ್ಮಣನ ಮತ್ತು ವಾನರರ ಸಮ್ಮುಖದಲ್ಲಿ ಸೂರ್ಯನಂತೆಯೇ ಮಹಾತೇಜಸ್ಸಿನಿಂದ ಬೆಳಗುತ್ತಿದ್ದ ವೀರನಾದ ಶ್ರೀರಾಮನಿಗೆ ಅರ್ಥವತ್ತಾದ ಈ ಮಾತನ್ನು ಹೇಳಿದನು :

ಆರ್ದ್ರಃ ಸಮಾಂಸಃ ಪ್ರತ್ಯಗ್ರಃ ಕ್ಷಿಪ್ತಃ ಕಾಯಃ ಪುರಾ ಸಖೇ ।
ಪರಿಶ್ರಾನ್ತೇನ ಮತ್ತೇನ ಭ್ರಾತ್ರಾ ಮೇ ವಾಲಿನಾ ತದಾ ॥೮೬॥

ಲಘುಃ ಸಂಪ್ರತಿ ನಿರ್ಮಾಂಸಸ್ತೃಣಭೂತಶ್ಚ ರಾಘವ ।
ಕ್ಷಿಪ್ತಮೇವಂ ಪ್ರಹರ್ಷೇಣ ಭವತಾ ರಘುನನ್ದನ ॥೮೭॥

ನಾತ್ರ ಶಕ್ಯಂ ಬಲಂ ಜ್ಞಾತುಂ ತವ ವಾ ತಸ್ಯ ವಾಧಿಕಮ್ ।
ಆರ್ದ್ರಂ ಶುಷ್ಕಮಿತಿ ಹ್ಯೇತತ್ಸುಮಹದ್ರಾಘವಾನ್ತರಮ್ * ॥೮೮॥

"ರಾಘವ! ನಮ್ಮಣ್ಣನು ದುಂದುಭಿಯ ಈ ಪರ್ವತೋಪಮವಾದ ಶರೀರವನ್ನು ಎಸೆದ ಸಮಯದಲ್ಲಿ ಅದು ಹಸಿಯಾಗಿದ್ದಿತು. ರಕ್ತದಿಂದಲೂ ತುಂಬಿದ್ದಿತು. ಮಾಂಸಭರಿತವಾಗಿದ್ದಿತು. ಹೊಸದಾಗಿದ್ದಿತು. ಮೇಲಾಗಿ ಆ ಸಮಯದಲ್ಲಿ ವಾಲಿಯು ಆಯಾಸಗೊಂಡಿದ್ದನು. ನಿದ್ರೆಯಿಂದ ಮತ್ತನಾಗಿದ್ದನು. ಆಯಾಸಗೊಂಡಿದ್ದ ಸಮಯದಲ್ಲಿಯೇ ವಾಲಿಯು ಪುಷ್ಟವಾಗಿದ್ದ ರಾಕ್ಷಸನ ಶರೀರವನ್ನು ಅಷ್ಟು ದೂರದವರೆಗೆ ಎಸೆದಿದ್ದನು. ಆದರೆ ಈಗ ಮಾಂಸದಿಂದ ವಿಹೀನವಾಗಿರುವ ರಾಕ್ಷಸನ ಶರೀರವು ಒಣಗಿ ಹುಲ್ಲಿನಂತೆಯೇ ಬಹಳ ಹಗುರವಾಗಿಬಿಟ್ಟಿದೆ. ಈ ಕಾರಣದಿಂದಲೇ ಸಂತೋಷದಿಂದ ನೀನು ರಾಕ್ಷಸನ ಅಸ್ಥಿಪರ್ವತವನ್ನು ಲೀಲಾಜಾಲವಾಗಿ ಬಹಳ ದೂರದವರೆಗೂ

---

*ಸಂಶಯವೆಂಬ ಭೂತವು ಅಂಟಿಕೊಂಡುಬಿಟ್ಟರೆ ಅದರಿಂದ ಪಾರಾಗುವುದು ಯಾರಿಗಾದರೂ ಬಹಳ ಕಷ್ಟವೇ ಸರಿ. ಶ್ರೀರಾಮನ ಬಲವನ್ನು ವಾಲಿಯ ಬಲದೊಡನೆ ಅಳೆಯಲು ಈ ಮೊದಲು ಸುಗ್ರೀವನೇ ದುಂದುಭಿಯ ಶರೀರವನ್ನು ಎರಡು ನೂರು ಧನುಸ್ಸು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಎಸೆದಿರುವೆ. ಹಸಿಯಾಗಿರುವುದಕ್ಕೂ ಮತ್ತು ಸಂಪೂರ್ಣವಾಗಿ ಒಣಗಿ ಹೋಗಿರುವುದಕ್ಕೂ ಭಾರದಲ್ಲಿ ಬಹಳ ವ್ಯತ್ಯಾಸವಿರುತ್ತದೆ. ಆದುದರಿಂದ ನಿನ್ನ ಈ ಕಾರ್ಯದಿಂದ ನನಗೆ ಬಲದಲ್ಲಿ ನೀನೇ ವಾಲಿಗಿಂತಲೂ ಅಧಿಕನೋ ಅಥವಾ ನಿನಗಿಂತಲೂ ಬಲದಲ್ಲಿ ವಾಲಿಯೇ ಅಧಿಕನೋ-ಎಂಬುದನ್ನು ತಿಳಿಯಲು ಶಕ್ಯವಾಗುವುದಿಲ್ಲ. ನಿಮ್ಮಿಬ್ಬರ ಬಲದಲ್ಲಿ ಈ ಒಂದು ಸಂಶಯವೇ ನನ್ನನ್ನು ಬಾಧಿಸುತ್ತಿದೆ. ಆದುದರಿಂದ ಈ ಸಮಯದಲ್ಲಿ ನೀನು ಸಾಲವೃಕ್ಷವೊಂದನ್ನು ಭೇದಿಸಿದೆಯಾದರೆ - ನಿಮ್ಮಿಬ್ಬರ ಬಲದಲ್ಲಿ ತಾರತಮ್ಯವು ನನಗೆ ಪ್ರತ್ಯಕ್ಷವಾಗಿ ತಿಳಿಯುತ್ತದೆ. ರಾಘವ! ನಿನ್ನ ಬಳಿಯಲ್ಲಿರುವ ಈ ಧನುಸ್ಸು ಆನೆಯ ಸೊಂಡಿಲಿನಂತೆಯೇ ವಿಶಾಲವಾಗಿದೆ. ಈ ಧನುಸ್ಸನ್ನು ಹೆದೆಯೇರಿಸಿ ಬಾಣವನ್ನು ಹೂಡಿ ಕಿವಿಯವರೆಗೂ ಸೆಳೆದು ಸಾಲವೃಕ್ಷದ ಮೇಲೆ ಪ್ರಯೋಗಿಸು. ನೀನು ಬಿಡುವ ಆ ಬಾಣವು ಸಾಲವೃಕ್ಷವನ್ನು ಭೇದಿಸಿಯೇ ತೀರುತ್ತದೆ. ಇದರಲ್ಲಿ ಸಂದೇಹವೇ ಇಲ್ಲ. 'ಆದುದರಿಂದ ಪುನಃ ಈ ಕಾರ್ಯವನ್ನು ಮಾಡಬೇಕೇ ?'-ಎಂದು ವಿಮರ್ಶಿಸಹೋಗಬೇಡ. ನಾನು ಶಪಥಮಾಡಿ ಹೇಳುತ್ತಿದ್ದೇನೆ. ನನಗೆ ಪ್ರಿಯವಾದ ಈ ಕಾರ್ಯವನ್ನು ನೀನು ಅವಶ್ಯವಾಗಿ ಮಾಡಲೇಬೇಕು.

ಯಥಾ ಹಿ ತೇಜಃಸು ವರಃ ಸದಾ ರವಿ-
ರ್ಯಥಾ ಹಿ ಶೈಲೋ ಹಿಮವಾನ್ಮಹಾದ್ರಿಷು ।
ಯಥಾ ಚತುಷ್ಪಾತ್ಸು ಚ ಕೇಸರೀ ವರ-
ಸ್ತಥಾ ನರಾಣಾಮಸಿ ವಿಕ್ರಮೇ ವರಃ ॥೯೨॥

ತೇಜಸ್ಸುಗಳಲ್ಲಿ ಸೂರ್ಯನು ಹೇಗೆ ಶ್ರೇಷ್ಠನೋ, ಪರ್ವತಗಳಲ್ಲಿ ಹಿಮವಂತನು ಹೇಗೆ ಶ್ರೇಷ್ಠನೋ, ನಾಲ್ಕು ಕಾಲುಗಳಿರುವ ಪ್ರಾಣಿಗಳಲ್ಲಿ ಸಿಂಹವು

---

ಗಳ ಅಂತರಕ್ಕೆ ಒಂದೇ ಕಾಲಿನಿಂದ ಎಸೆಯಬೇಕೆಂದು ಹೇಳಿದ್ದನು. ಶ್ರೀರಾಮನು ಆ ಶರೀರವನ್ನು ಹತ್ತು ಯೋಜನ ದೂರದವರೆಗೆ ಎಸೆದರೂ ಸುಗ್ರೀವನ ಸಂಶಯವು ಮಾತ್ರ ಪರಿಹಾರವಾಗಲೇ ಇಲ್ಲ. ಸಂಶಯವು ನೀಗದಿರುವುದಕ್ಕೆ ಕಾರಣವನ್ನು ಸುಗ್ರೀವನು ಮುಂದೆ ಹೇಳುತ್ತಾನೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಹೇಗೆ ಶ್ರೇಷ್ಠವಾದ ಪ್ರಾಣಿಯೋ-ಹಾಗೆಯೇ ನೀನು ಪರಾಕ್ರಮದಲ್ಲಿ ಮನುಷ್ಯರಲ್ಲಿಯೇ ಶ್ರೇಷ್ಠನಾಗಿರುವೆ."

೧೧ನೆಯ ಸರ್ಗವು ಮುಗಿಯಿತು.

ಕಿಷ್ಕಿಂಧಾಕಾಂಡ

೧೨ನೆಯ ಸರ್ಗ

ಶ್ರೀರಾಮನು ಏಳು ಸಾಲವೃಕ್ಷಗಳನ್ನೂ ಭೇದಿಸಿದುದು: ಶ್ರೀರಾಮನ ಆಜ್ಞೆಯಂತೆ ಸುಗ್ರೀವನು ವಾಲಿಯನ್ನು ಯುದ್ಧಕ್ಕೆ ಆಹ್ವಾನಿಸಿದುದು: ಯುದ್ಧದಲ್ಲಿ ಸುಗ್ರೀವನ ಪರಾಜಯ: ಸುಗ್ರೀವನಿಗೆ ಶ್ರೀರಾಮನ ಆಶ್ವಾಸನೆ: ಗುರುತಿಗಾಗಿ ಸುಗ್ರೀವನು ನಾಗಪುಷ್ಪೀಲತೆಯನ್ನು ಕತ್ತಿನಲ್ಲಿ ಹಾಕಿಕೊಂಡು ಪುನಃ ವಾಲಿಯೊಡನೆ ಯುದ್ಧಕ್ಕೆ ಹೋದುದು

ಏತಚ್ಚ ವಚನಂ ಶ್ರುತ್ವಾ ಸುಗ್ರೀವೇಣ ಸುಭಾಷಿತಮ್ ।
ಪ್ರತ್ಯಯಾರ್ಥಂ ಮಹಾತೇಜಾ ರಾಮೋ ಜಗ್ರಾಹ ಕಾರ್ಮುಕಮ್॥

ಸುಗ್ರೀವನು ಹೇಳಿದ ಒಳ್ಳೆಯ ಮಾತುಗಳನ್ನು ಕೇಳಿ ಮಹಾತೇಜಸ್ವಿಯಾದ ಶ್ರೀರಾಮನು ಸುಗ್ರೀವನಿಗೆ ವಿಶ್ವಾಸವನ್ನು ಹುಟ್ಟಿಸಲು ಧನುಸ್ಸನ್ನೆತ್ತಿಕೊಂಡನು. ಮಾನದನಾದ ಶ್ರೀರಾಮನು ಸುಘೋರವಾಗಿದ್ದ ಧನುಸ್ಸನ್ನೂ ಒಂದು ಬಾಣವನ್ನೂ ತೆಗೆದುಕೊಂಡು ನಾಣಿನ ಟಂಕಾರಶಬ್ದದಿಂದ ಎಲ್ಲ ದಿಕ್ಕುಗಳನ್ನೂ ಮುಚ್ಚುತ್ತಾ ಸಾಲವೃಕ್ಷವನ್ನು ಲಕ್ಷ್ಯವನ್ನಾಗಿಟ್ಟುಕೊಂಡು ಆ ಮಹಾಶರವನ್ನು ಪ್ರಯೋಗಿಸಿದನು.

ಸ ವಿಸೃಷ್ಟೋ ಬಲವತಾ ಬಾಣಃ ಸ್ವರ್ಣಪರಿಷ್ಕೃತಃ ।
ಭಿತ್ತ್ವಾ ಸಾಲಾನ್ಗಿರಿಪ್ರಸ್ಥೇ ಸಪ್ತ ಭೂಮಿಂ ವಿವೇಶ ಹ ॥೩॥
ಪ್ರವಿಷ್ಟಸ್ತು ಮುಹೂರ್ತೇನ ಧರಾಂ ಭಿತ್ತ್ವಾ ಮಹಾಜವಃ ।
ನಿಷ್ಪತ್ಯ ಚ ಪುನಸ್ತೂರ್ಣಂ ಸ್ವತೂಣೀಂ ಪುನರಾವಿಶತ್ ॥೪॥

ಮಹಾಬಲಿಷ್ಠನಾದ ಶ್ರೀರಾಮನು ಬಿಟ್ಟ ಸುವರ್ಣಮಯವಾದ ರೆಕ್ಕೆಗಳನ್ನು ಹೊಂದಿದ್ದ ಆ ಬಾಣವು ಪರ್ವತದ ತಪ್ಪಲುಪ್ರದೇಶದಲ್ಲಿದ್ದ ಏಳು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸಾಲವೃಕ್ಷಗಳನ್ನೂ ಏಕಕಾಲದಲ್ಲಿ ಭೇದಿಸಿ ಭೂಮಿಯಲ್ಲಿ ನಾಟಿಕೊಂಡಿತು. ಮಹಾವೇಗಯುಕ್ತವಾಗಿದ್ದ ಆ ಬಾಣವು ಹಾಗೆ ಮುಹೂರ್ತಮಾತ್ರದಲ್ಲಿ ಭೂಮಿಯನ್ನೂ ಭೇದಿಸಿಕೊಂಡು ಹೊರಬಂದು ಪುನಃ ಶ್ರೀರಾಮನ ಬತ್ತಳಿಕೆಯನ್ನೇ ಸೇರಿತು.

ಶ್ರೀರಾಮನ ಬಾಣವೇಗದಿಂದ ಏಳು ಸಾಲವೃಕ್ಷಗಳೂ ಏಕಕಾಲದಲ್ಲಿ ಕತ್ತರಿಸಲ್ಪಟ್ಟುದನ್ನು ಕಂಡು ವಾನರಶ್ರೇಷ್ಠನಾದ ಸುಗ್ರೀವನು ಅತ್ಯಂತ ವಿಸ್ಮಿತನಾದನು. ಆದರಿಂದ ಸುಪ್ರೀತನಾದ ಸುಗ್ರೀವನು ಕೈಮುಗಿದುಕೊಂಡು ಕುತ್ತಿಗೆಯಲ್ಲಿ ಧರಿಸಿದ್ದ ರತ್ನಹಾರಗಳು ತೂಗಾಡುತ್ತಿರುವಂತೆ ತಲೆಬಾಗಿ ಶ್ರೀರಾಮನಿಗೆ ಅಡ್ಡಬಿದ್ದನು. ಶ್ರೀರಾಮನು ತೋರಿದ ಸಾಹಸಕಾರ್ಯದಿಂದ ಸುಗ್ರೀವನು ಪರಮಹರ್ಷಿತನಾಗಿ ಧರ್ಮಜ್ಞನಾದ, ಅಸ್ತ್ರವಿದರಲ್ಲಿ ಶ್ರೇಷ್ಠನಾದ, ಮಹಾಶೂರನಾದ, ತನ್ನ ಸಮೀಪದಲ್ಲಿಯೇ ನಿಂತಿದ್ದ ಶ್ರೀರಾಮನಿಗೆ ಹೇಳಿದನು :

"ಪ್ರಭುವೇ ! ಯುದ್ಧದಲ್ಲಿ ಇಂದ್ರಸಹಿತರಾದ ಸಕಲದೇವತೆಗಳನ್ನೂ ಬಾಣಗಳಿಂದ ಸಂಹಾರಮಾಡಲು ನೀನು ಸಮರ್ಥನಾಗಿರುವೆ. ಹೀಗಿರುವಾಗ ವಾಲಿಯ ವಿಷಯದಲ್ಲಿ ಹೇಳತಕ್ಕದ್ದೇನಿದೆ ? ಏಳು ಸಾಲವೃಕ್ಷಗಳನ್ನೂ, ಪರ್ವತವನ್ನೂ ಮತ್ತು ಭೂಮಿಯನ್ನೂ ಒಂದೇ ಬಾಣದಲ್ಲಿ ಏಕಕಾಲದಲ್ಲಿ ಭೇದಿಸಿರುವ ನಿನ್ನ ಸಮ್ಮುಖದಲ್ಲಿ ನಿಂತು ಯುದ್ಧಮಾಡುವವರು ಯಾರಿದ್ದಾರೆ ? ಮಹೇಂದ್ರ-ವರುಣರಿಗೆ ಸಮಾನನಾದ ನಿನ್ನನ್ನು ಗೆಳೆಯನನ್ನಾಗಿ ಮಾಡಿಕೊಂಡಿರುವ ನನ್ನ ದುಃಖವು ಈಗ ದೂರವಾಯಿತು. ಈಗ ನನಗೆ ನಿನ್ನ ಮೇಲಿನ ಪ್ರೀತಿಯು ಅತ್ಯಧಿಕವಾಗಿದೆ. ಇದೋ ನಾನು ನಿನ್ನ ಮುಂದೆ ಕೈಮುಗಿದುಕೊಂಡು ನಿಂತು ಬೇಡಿಕೊಳ್ಳುತ್ತೇನೆ. ನನ್ನ ಪ್ರೀತಿಗಾಗಿ ನೀನು–ಪರಮಶತ್ರುವಾಗಿ ಅಣ್ಣನ ರೂಪದಲ್ಲಿರುವ ವಾಲಿಯನ್ನು ಈಗಲೇ ಸಂಹರಿಸು."

ಸುಗ್ರೀವನು ಹೀಗೆ ಹೇಳಲು ಮಹಾಪ್ರಾಜ್ಞನಾದ ಶ್ರೀರಾಮನು ಪ್ರಿಯದರ್ಶನನಾದ ಸುಗ್ರೀವನನ್ನು ಗಾಢವಾಗಿ ಆಲಿಂಗಿಸಿಕೊಂಡು ಲಕ್ಷ್ಮಣನಿಗೂ ಸಮ್ಮತವಾಗುವಂತೆ ಹೇಳಿದನು :

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


"ಸುಗ್ರೀವ ! ಇಲ್ಲಿಂದ ನಾವು ಕಿಷ್ಕಿಂಧೆಗೆ ಹೋಗೋಣ. ನೀನು ಶೀಘ್ರವಾಗಿ ಮುಂದೆ ಹೋಗು. ಹೆಸರಿಗೆ ಮಾತ್ರ ಅಣ್ಣನಾಗಿರುವ ವಾಲಿಯನ್ನು ಯುದ್ಧಕ್ಕೆ ಆಹ್ವಾನಿಸು."

ಶ್ರೀರಾಮನು ಹೀಗೆ ಹೇಳಿದೊಡನೆಯೇ ಸುಗ್ರೀವನೂ, ಅವನ ಎಲ್ಲ ಸಚಿವರೂ ವಾಲಿಯ ಪಟ್ಟಣವಾಗಿದ್ದ ಕಿಷ್ಕಿಂಧೆಯ ಸಮೀಪಕ್ಕೆ ಹೋಗಿ, ಗಹನವಾದ ಅರಣ್ಯದಲ್ಲಿದ್ದ ವೃಕ್ಷಗಳಿಂದ ಶರೀರಗಳನ್ನು ಮರೆಮಾಡಿಕೊಂಡು ಕುಳಿತರು. ಬಲದ ವೃದ್ಧಿಗಾಗಿ ನಡುಕಟ್ಟನ್ನು ಬಿಗಿದುಕೊಂಡಿದ್ದ ಸುಗ್ರೀವನು ವಾಲಿಯನ್ನು ಯುದ್ಧಕ್ಕೆ ಆಹ್ವಾನಿಸುವ ಆಶಯದಿಂದ ಆಕಾಶವನ್ನೇ ಭೇದಿಸಿಬಿಡುವನೋ ಎಂಬಂತೆ ಭಯಂಕರವಾಗಿ ಗರ್ಜಿಸಿದನು. ತಮ್ಮನು ಮಾಡಿದ ಘೋರವಾದ ರಣಗರ್ಜನೆಯನ್ನು ಕೇಳಿ ಮಹಾಬಲಿಷ್ಠನಾದ ವಾಲಿಯು ಅತ್ಯಂತಕ್ರುದ್ಧನಾಗಿ–ಅಸ್ತಾಚಲದಿಂದ ಸೂರ್ಯನು ಕೆಳಗೆ ಬೀಳುವಂತೆ ಯುದ್ಧೋತ್ಸಾಹದಿಂದ ನೆಗೆದುಬಂದನು.* ಅಂತರಿಕ್ಷದಲ್ಲಿ ಬುಧ-ಅಂಗಾರಕರಿಗೆ ಪರಸ್ಪರವಾಗಿ ಘೋರವಾದ ಯುದ್ಧವು ನಡೆಯುವಂತೆ ವಾಲಿ-ಸುಗ್ರೀವರ ನಡುವೆ ಅತ್ಯಂತಭಯಂಕರವಾದ ಯುದ್ಧವು ನಡೆಯಿತು. ಕ್ರೋಧಾಭಿಭೂತರಾಗಿದ್ದ ಆ ವಾನರಸಹೋದರರು ಸಿಡಿಲಿಗೆ ಸಮಾನವಾಗಿ ಶಬ್ದವಾಗುತ್ತಿದ್ದ ಅಂಗೈಗಳ ಪ್ರಹಾರಗಳಿಂದಲೂ, ವಜ್ರಾಯುಧದ ಪ್ರಹಾರಕ್ಕೆ ಅನುರೂಪವಾದ ಮುಷ್ಟಿಗಳ ಪ್ರಹಾರಗಳಿಂದಲೂ ಪರಸ್ಪರವಾಗಿ ಬಡಿದಾಡುತ್ತಿದ್ದರು. ಆ ಸಮಯದಲ್ಲಿ ಶ್ರೀರಾಮನು ಧನುಸ್ಸನ್ನು ಹಿಡಿದು ಇಬ್ಬರನ್ನೂ ನೋಡುತ್ತಲೇ ನಿಂತಿದ್ದನು. ಆದರೆ ಅವರಿಬ್ಬರಲ್ಲಿ ಶ್ರೀರಾಮನಿಗೆ ಯಾವವಿಧವಾದ ವ್ಯತ್ಯಾಸವೂ ಕಾಣಿಸಲೇ ಇಲ್ಲ. ಇಬ್ಬರಲ್ಲಿ ವಾಲಿಯು ಯಾರು ? ಸುಗ್ರೀವನು ಯಾರು ?–ಎಂಬುದೇ ರಾಮನಿಗೆ ತಿಳಿಯದಾಯಿತು. ಇಬ್ಬರೂ ಅಶ್ವಿನೀದೇವತೆಗಳಂತೆಯೇ ಕಡುಚೆಲುವರಾಗಿ ಪರಸ್ಪರವಾಗಿ

---

* ಭಾಸ್ಕರಃ ಅಸ್ತತಟಾದಿವ= ಅಸ್ತಾಚಲದ ಅಂಚಿನಿಂದ ಸೂರ್ಯನು ಕೆಳಗೆ ಬೀಳುವಂತೆ–ಎಂದು ಅರ್ಥವಾಗುತ್ತದೆ. ಕೆಳಕ್ಕೆ ಬಿದ್ದು ಕಾಣಿಸುವುದಿಲ್ಲವಾದುದರಿಂದ ವಾಲಿಯು ಸ್ವವಿನಾಶಾರ್ಥವಾಗಿಯೇ ಅಲ್ಲಿಗೆ ಬಂದು ಬಿದ್ದನೆಂದು ಒಬ್ಬರು ವ್ಯಾಖ್ಯಾನ ಮಾಡಿರುತ್ತಾರೆ. ಯಥಾ ಸೂರ್ಯಃ ಅಸ್ತತಟಾದವತರನ್ನದೃಷ್ಟರಶ್ಮಿರ್ಭವತಿ ತಥೇದಾನೀಂ ಕಿಷ್ಕಿನ್ಧಾನಿರ್ಗಮನಂ ವಾಲಿನೋಽಲ್ಪಕಾಲೇನ ನಾಶಹೇತುರಿತಿದ್ಯೋತನಾರ್ಥಂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಒಬ್ಬರು ಮತ್ತೊಬ್ಬರನ್ನು ಸಂಪೂರ್ಣವಾಗಿ ಹೋಲುತ್ತಿದ್ದರು. ಎಷ್ಟೇ ದಿಟ್ಟಿಸಿ ನೋಡಿದರೂ ವ್ಯತ್ಯಾಸವು ಶ್ರೀರಾಮನಿಗೆ ತಿಳಿಯಲೇ ಇಲ್ಲ. ಆದುದರಿಂದ ಆಗ ಪ್ರಾಣಾಂತಕರವಾದ ಬಾಣವನ್ನು ಬಿಡಲು ಶ್ರೀರಾಮನು ಮನಸ್ಸು ಮಾಡಲಿಲ್ಲ.

ಈ ಮಧ್ಯದಲ್ಲಿ ವಾಲಿಯಿಂದ ಬಲವಾಗಿ ಪೆಟ್ಟುತಿಂದ ಸುಗ್ರೀವನು ತನ್ನನ್ನು ರಕ್ಷಿಸಲು ಬಂದ ಶ್ರೀರಾಮನನ್ನು ಕಾಣದೇ ಶರೀರಾದ್ಯಂತವಾಗಿ ರಕ್ತದಿಂದ ತೋಯ್ದವನಾಗಿ ಹೆಚ್ಚು ಬಳಲಿದವನಾಗಿ ಋಷ್ಯಮೂಕಪರ್ವತಕ್ಕೆ ಓಡಿಹೋದನು. ವಾಲಿಯು ಕೋಪದಿಂದ ಸುಗ್ರೀವನ ಬೆನ್ನಟ್ಟಿ ಹೋದನು. ಆದರೆ ಸುಗ್ರೀವನು ಮತಂಗವನವನ್ನು ಪ್ರವೇಶಿಸಿದುದರಿಂದ ವಾಲಿಯು ಶಾಪದ ಭಯದಿಂದಾಗಿ ಹಿಮ್ಮೆಟ್ಟಬೇಕಾಯಿತು. 'ಮುಕ್ತೋಽಸಿ ತ್ವಂ ನೀನಿಂದು ತಪ್ಪಿಸಿಕೊಂಡಿರುವೆ; ಇರಲಿ' – ಎಂದೆನ್ನುತ್ತಾ ವಾಲಿಯು ಕಿಷ್ಕಿಂಧೆಗೆ ಹಿಂದಿರುಗಿದನು.

ಶ್ರೀರಾಮನು ಹನುಮ-ಲಕ್ಷ್ಮಣರೊಡನೆ ಸುಗ್ರೀವನಿದ್ದ ವನಪ್ರದೇಶಕ್ಕೆ ಹೋದನು. ಲಕ್ಷ್ಮಣನೊಡನೆ ಬಂದ ಶ್ರೀರಾಮನನ್ನು ಸುಗ್ರೀವನು ನೋಡಿ ನಾಚಿಕೆಗೊಂಡು ತಲೆತಗ್ಗಿಸಿ ಭೂಮಿಯನ್ನೇ ನೋಡುತ್ತಾ ದೀನಭಾವದಿಂದ ಹೇಳಿದನು :

ಆಹ್ವಯಸ್ವೇತಿ ಮಾಮುಕ್ತ್ವಾ ದರ್ಶಯಿತ್ವಾ ಚ ವಿಕ್ರಮಮ್ ।
ವೈರಿಣಾ ಘಾತಯಿತ್ವಾ ಚ ಕಿಮಿದಾನೀಂ ತ್ವಯಾ ಕೃತಮ್ ॥ ೨೬॥

"ರಾಘವ ! ನಿನ್ನ ಪರಾಕ್ರಮವೆಷ್ಟೆಂಬುದನ್ನು ನನ್ನ ಮುಂದೆ

---

ಅಸ್ತತಟಾತ್ ಇತ್ಯುಕ್ತಂ. ಮತ್ತೊಬ್ಬರು : ಅಸ್ತಮಿಸಿದೊಡನೆಯೇ ಸೂರ್ಯನು ಎಷ್ಟೇ ದೂರದಲ್ಲಿದ್ದರೂ ಅತ್ಯಲ್ಪಕಾಲದಲ್ಲಿಯೇ ಉದಯಾಚಲಕ್ಕೆ ಬಂದುಬಿಡುವಂತೆ ಅದೃಶ್ಯ ಸ್ಥಾನವಾದ ಗುಹೆಯಿಂದ ವಾಲಿಯು ಹೊರಬಂದನು-ಭಾಸ್ಕರಃ ಅಸ್ತತಟಾತ್ ಅತಿದೂರಮಪಿ ಉದಯಪರ್ವತಮತ್ಯಲ್ಪೇನ ಕಾಲೇನ ಯಾತಿ, ಏವಂ ಅದೃಶ್ಯಸ್ಥಾನತಯಾ ತತ್ತುಲ್ಯಗುಹಾತಃ ಕ್ಷಣೇನ ಬಹಿರಾಗತ ಇತ್ಯರ್ಥಃ = ಕೆಂಪುಬಣ್ಣದಿಂದ ಕೂಡಿರುವ ಸೂರ್ಯನು ಅಸ್ತಾಚಲದಿಂದ ಕೆಳಕ್ಕೆ ಬೀಳುವಂತೆ-ಕೋಪದಿಂದ ಕೆಂಗಣ್ಣನೂ ಕೆಂಪು ಮುಖದವನೂ ಆಗಿದ್ದ ವಾಲಿಯು ತಾನಿದ್ದ ಸ್ಥಳದಿಂದ ಛಂಗನೆ ಹಾರಿ ಸುಗ್ರೀವನಿದ್ದೆಡೆಗೆ ಬಂದನು – ಹೀಗೆ ಅನ್ವಯಿಸುವುದು ಸಮಂಜಸವಾಗಿ ಕಾಣುತ್ತದೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.


ಪ್ರದರ್ಶಿಸಿದೆ. ವಾಲಿಯನ್ನು ಯುದ್ಧಕ್ಕೆ ಕರೆಯುವಂತೆ ಪ್ರಚೋದಿಸಿದೆ. ಆ ವೈರಿಯಿಂದಲೇ ನಾನು ಗಾಯಗೊಳ್ಳುವಂತೆ ಮಾಡಿದೆ. ನೀನು ಹೀಗೇಕೆ ಮಾಡಿದೆ?

ತಾಮೇವ ವೇಲಾಂ ವಕ್ತವ್ಯಂ ತ್ವಯಾ ರಾಘವ ತತ್ತ್ವತಃ ।
ವಾಲಿನಂ ನ ನಿಹನ್ಮೀತಿ ತತೋ ನಾಹಮಿತೋ ವ್ರಜೇ ॥ ೨೭॥

ಆಗಲೇ ನೀನು – 'ವಾಲಿಯನ್ನು ನಾನು ಕೊಲ್ಲುವುದಿಲ್ಲ' – ಎಂದು ಯಥಾವತ್ತಾಗಿಯೇ ಹೇಳಿಬಿಡಬಹುದಾಗಿದ್ದಿತು. ಆಗ ನಾನು ಇಲ್ಲಿಂದ ಹೊರಡುತ್ತಲೇ ಇರಲಿಲ್ಲ."

ಕರುಣಾಜನಕವಾದ ರೀತಿಯಲ್ಲಿ ದೈನ್ಯದಿಂದ ಹೀಗೆ ಹೇಳುತ್ತಿದ್ದ ಮಹಾತ್ಮನಾದ ಸುಗ್ರೀವನ ಮಾತನ್ನು ಕೇಳಿ ಶ್ರೀರಾಮನು ಪುನಃ ಹೇಳಿದನು:

"ತಾತ! ಸುಗ್ರೀವ! ನನ್ನ ಮಾತನ್ನು ಕೇಳು. ಕೋಪವನ್ನು ದೂರ ಮಾಡು. ಆಗ ನಾನು ಏಕೆ ಬಾಣಬಿಡಲಿಲ್ಲವೆಂಬುದನ್ನು ಹೇಳುತ್ತೇನೆ.

ಅಲಂಕಾರೇಣ ವೇಷೇಣ ಪ್ರಮಾಣೇನ ಗತೇನ ಚ ।
ತ್ವಂ ಚ ಸುಗ್ರೀವ ವಾಲೀ ಚ ಸದೃಶೌ ಸ್ಥಃ ಪರಸ್ಪರಮ್ ॥ ೩೦॥

ಶರೀರಾಲಂಕಾರದಿಂದಲೂ, ವೇಷದಿಂದಲೂ, ಎತ್ತರದಿಂದಲೂ, ನಡಿಗೆಯಿಂದಲೂ–ನೀನೂ ಮತ್ತು ವಾಲಿಯೂ ಪರಸ್ಪರವಾಗಿ ಅನುರೂಪರಾಗಿಯೇ ಇರುವಿರಿ. ಒಬ್ಬರಿಗೊಬ್ಬರಿಗೆ ಯಾವ ವಿಧವಾದ ವ್ಯತ್ಯಾಸವೂ ಕಾಣುವುದಿಲ್ಲ.

ಸ್ವರೇಣ ವರ್ಚಸಾ ಚೈವ ಪ್ರೇಕ್ಷಿತೇನ ಚ ವಾನರ ।
ವಿಕ್ರಮೇಣ ಚ ವಾಕ್ಯೈಶ್ಚ ವ್ಯಕ್ತಿಂ ವಾಂ ನೋಪಲಕ್ಷಯೇ ॥ ೩೧॥

ನಿಮ್ಮಿಬ್ಬರ ಧ್ವನಿ, ತೇಜಸ್ಸು, ಪರಸ್ಪರವೀಕ್ಷಣೆ, ಪರಾಕ್ರಮ, ಮಾತುಕತೆ–ಇವುಗಳಲ್ಲಿಯೂ ನಾನು ನಿಮ್ಮಿಬ್ಬರಲ್ಲಿ ಯಾವ ವಿಧವಾದ ವ್ಯತ್ಯಾಸವನ್ನೂ ಕಾಣಲಿಲ್ಲ.

ವಾನರೋತ್ತಮನೇ! ನಿಮ್ಮಿಬ್ಬರ ರೂಪಸಾದೃಶ್ಯದಿಂದ ಭ್ರಾಂತ

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

ನಾದ ನಾನು ಮಹಾವೇಗಯುಕ್ತವಾದ ಶತ್ರುವಿನಾಶಕವಾದ ಬಾಣವನ್ನು ಬಿಡಲಿಲ್ಲ.

ಜೀವಿತಾನ್ತಕರಂ ಘೋರಂ ಸಾದೃಶ್ಯಾತ್ತು ವಿಶಙ್ಕಿತಃ ।
ಮೂಲಘಾತೋ ನ ನೌ ಸ್ಯಾದ್ಧಿ ದ್ವಯೋರಪಿ ಕೃತೋ ಮಯಾ ॥

ನಿಮ್ಮಿಬ್ಬರಲ್ಲಿಯೂ ಸಾದೃಶ್ಯವಿದ್ದುದರಿಂದ–ಯಾವುದರಲ್ಲಿಯೂ ಸ್ವಲ್ಪವಾದರೂ ವ್ಯತ್ಯಾಸವೇ ಕಾಣದಿದ್ದುದರಿಂದ ಜೀವಿತವನ್ನೇ ಕೊನೆಗೊಳಿಸುವ ಸಾಮರ್ಥ್ಯವಿದ್ದ ಘೋರವಾದ ಬಾಣವನ್ನು ಬಿಡಲು ಸಂದೇಹಿಸಿದೆನು. ನಿಮ್ಮಿಬ್ಬರಲ್ಲಿ ಯಾವ ವ್ಯತ್ಯಾಸವನ್ನೂ ಕಾಣದಿದ್ದ ನಾನು ಬಾಣವನ್ನು ಬಿಟ್ಟು ಅದು ನಿನ್ನ ಪ್ರಾಣವನ್ನೇ ಅಪಹರಿಸಿಬಿಟ್ಟಿದ್ದರೆ ರಾಜ್ಯಪ್ರಾಪ್ತಿ-ಸ್ತ್ರೀಪ್ರಾಪ್ತಿರೂಪವಾದ ಮೂಲೋದ್ದೇಶಗಳಿಗೇ ಭಂಗವಾಗಿಬಿಡಬಹುದೆಂದು ಭಾವಿಸಿ ನಾನು ಹೀಗೆ ಮಾಡಿದೆನು.*

ನಿಮ್ಮಿಬ್ಬರಲ್ಲಿ ವಾಲಿಯು ಯಾರು? ಎಂದು ತಿಳಿಯದೇ ಇರುವ ನನ್ನ ಅಜ್ಞಾನದಿಂದಲೂ ಮತ್ತು ಚಪಲತೆಯಿಂದಲೂ ನೀನೇನಾದರೂ ನಾಶಹೊಂದಿದ್ದರೆ–ಆಗ ನನ್ನ ಮೂರ್ಖತೆಯೂ ಮತ್ತು ಬಾಲ್ಯಬುದ್ಧಿಯೂ ಸರ್ವತ್ರ ಖ್ಯಾತವಾಗುತ್ತಿದ್ದಿತು.

ದತ್ತ್ವಾಭಯಂ ವಧೋ ನಾಮ ಪಾತಕಂ ಮಹದುಚ್ಯತೇ ॥ ೩೫॥

ಒಬ್ಬನಿಗೆ ಅಭಯದಾನಮಾಡಿ ಅವನನ್ನೇ ಸಂಹರಿಸುವುದು ಮಹಾಪಾತಕವಾಗುತ್ತದೆ. ನಾನು, ಲಕ್ಷ್ಮಣ ಮತ್ತು ವರವರ್ಣಿನಿಯಾದ ಸೀತೆ–ಈ ಮೂವರೂ ಈಗ ನಿನ್ನ ಅಧೀನದಲ್ಲೇ ಇದ್ದೇವೆ. ಈ ಮಹಾರಣ್ಯದಲ್ಲಿ ನೀನೇ ನಮಗೆ ರಕ್ಷಕನಾಗಿರುವೆ. ಆದುದರಿಂದ ನೀನು ಪುನಃ ವಾಲಿಯೊಡನೆ ಯುದ್ಧಮಾಡಲು ಹೋಗು. ನಾನು ವಾಲಿಯನ್ನು ಕೊಲ್ಲುವುದಿಲ್ಲವೆಂದು ಸಂದೇಹಪಡಬೇಡ. ಇದೇ ಕ್ಷಣದಲ್ಲಿ ನಿನಗೂ ಮತ್ತು ವಾಲಿಗೂ ಯುದ್ಧ

---

*ಒಂದು ವೇಳೆ ಆ ಸಮಯದಲ್ಲಿ ನಾನು ಬಾಣವನ್ನು ಪ್ರಯೋಗಿಸಿ ಅದು ನಿನಗೇ ಬಿದ್ದು ನೀನೇ ಅಸುನೀಗಿಬಿಟ್ಟಿದ್ದರೆ ನಿನಗೆ ರಾಜ್ಯವೂ ಸಿಕ್ಕುತ್ತಿರಲಿಲ್ಲ. ನನಗೆ ಭಾರ್ಯೆಯೂ ಸಿಕ್ಕುತ್ತಿರಲಿಲ್ಲ. ಸೀತಾನ್ವೇಷಣೆಯಲ್ಲಿ ಅಡಚಣೆಯೇ ಉಂಟಾಗಿ ನಾನು ರಾಜ್ಯಕ್ಕೆ ಹಿಂದಿರುಗುತ್ತಲೂ ಇರಲಿಲ್ಲ. ನಮ್ಮಿಬ್ಬರಿಗೂ ಉಂಟಾಗಬಹುದಾಗಿದ್ದ ಈ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri


ನಡೆಯುವಾಗ ಒಂದೇ ಬಾಣದಿಂದ ಅವನು ಹತನಾಗುವುದನ್ನೂ, ಭೂಮಿಯ ಮೇಲೆ ಬಿದ್ದು ನರಳುತ್ತಾ ಹೊರಳಾಡುವುದನ್ನೂ ಕಾಣಲಿರುವೆ. ಆದರೆ ನೀನು ನಿನ್ನ ಅಣ್ಣನೊಡನೆ ದ್ವಂದ್ವಯುದ್ಧದಲ್ಲಿ ತೊಡಗಿದಾಗ ನಿನ್ನನ್ನು ನಾನು ಗುರುತಿಸಲು ಯಾವುದಾದರೂ ವಿಶೇಷವಾದ ಚಿಹ್ನೆಯನ್ನು ಹೊಂದಿರಬೇಕು."

ಗುರುತಿಸಲು ಸಾಧ್ಯವಾಗುವಂತೆ ಮಾಡಲು ಶ್ರೀರಾಮನು ಲಕ್ಷ್ಮಣನಿಗೆ ಹೇಳುತ್ತಾನೆ: "ಲಕ್ಷ್ಮಣ! ಶುಭಲಕ್ಷಣಯುಕ್ತವಾದ, ಅರಳಿದ ಹೂಗಳಿಂದ ಕೂಡಿರುವ ಈ ನಾಗಪುಷ್ಪೀ ಎಂಬ ಬಳ್ಳಿಯನ್ನು ಕಿತ್ತು ಮಹಾತ್ಮನಾದ ಸುಗ್ರೀವನ ಕೊರಳಿಗೆ ಹಾಕು."

ಶ್ರೀರಾಮನು ಹೀಗೆ ಹೇಳಲು, ಒಡನೆಯೇ ಲಕ್ಷ್ಮಣನು ಪರ್ವತದ ಅಂಚುಗಳಲ್ಲಿ ಬೆಳೆದಿದ್ದ ಪುಷ್ಪಭರಿತವಾಗಿದ್ದ ನಾಗಪುಷ್ಪೀಲತೆಯನ್ನು ಕಿತ್ತು ತಂದು ಸುಗ್ರೀವನ ಕುತ್ತಿಗೆಗೆ ಹಾಕಿದನು. ಉತ್ಪಾತಕಾಲದಲ್ಲಿ ಆಕಾಶದಲ್ಲಿರುವ ಸೂರ್ಯನು ನಕ್ಷತ್ರಗಳ ಮಾಲೆಯಿಂದ ಪ್ರಕಾಶಿಸುವಂತೆಯೂ, ಸಂಧ್ಯಾಕಾಲದ ಸೂರ್ಯನ ಕಿರಣಗಳಿಂದ ಬೆರೆತ ಮೇಘವು ಬೆಳ್ಳಕ್ಕಿಗಳ ಸಮೂಹದಿಂದ ಕೂಡಿ ಪ್ರಕಾಶಿಸುವಂತೆಯೂ ಕುತ್ತಿಗೆಯಲ್ಲಿದ್ದ ಗಜಪುಷ್ಪೀ ಮಾಲೆಯಿಂದ ಸುಗ್ರೀವನು ಪ್ರಕಾಶಿಸಿದನು. ಶ್ರೀರಾಮನ ಮಾತನ್ನು

---

ಆಘಾತವನ್ನು ತಪ್ಪಿಸುವ ಸಲುವಾಗಿಯೇ ನಾನಾಗ ಬಾಣಪ್ರಯೋಗಮಾಡಲಿಲ್ಲ–ಎಂಬುದು ಶ್ರೀರಾಮನ ಅಭಿಪ್ರಾಯವಾಗಿದೆ. ಶ್ರೀರಾಮನಿಗೂ ಭ್ರಾಂತಿಯೇ? ಎಂದು ಪ್ರಶ್ನೆಯನ್ನು ಹಾಕಿಕೊಂಡು ಒಬ್ಬರು ಹೀಗೆ ಸಮಾಧಾನವನ್ನು ಹೇಳಿದ್ದಾರೆ: 'ಭಗವಂತನಾದ ಶ್ರೀರಾಮನಿಗೆ ಭ್ರಾಂತಿಯೆಂಬುದೇ ಇಲ್ಲ. ವಾಲಿಯಾರು? ಸುಗ್ರೀವನಾರು? ಎಂಬುದು ಅವನಿಗೆ ಚೆನ್ನಾಗಿಯೇ ತಿಳಿದಿದ್ದಿತು. ಆದರೆ ವಾಲಿಯ ಆಯುಷ್ಯವಿನ್ನೂ ಉಳಿದಿದ್ದಿತು. ಅದನ್ನು ಅರಿತೇ ಮಹಾಜ್ಞಾನಿಯಾದ ಶ್ರೀರಾಮನು ವಾಲಿಯನ್ನು ಸಂಹರಿಸಲು ಬಾಣಪ್ರಯೋಗ ಮಾಡಲಿಲ್ಲ.' ಹಾಗಾದರೆ ಸುಗ್ರೀವನಿಗೆ ಸುಳ್ಳುಹೇಳಿದಂತಾಗಲಿಲ್ಲವೇ? ಎಂದರೆ: ಸುಹೃದನ ಮನಸ್ಸನ್ನು ನೋಯಿಸಕೂಡದೆಂಬ ಕಾರಣದಿಂದ ಹೇಳಿದ ಸುಳ್ಳಿಗೆ ದೋಷವೇನೂ ಇಲ್ಲ. ಏವಂವಿಧಾನೃತವಚನಂ ನ ದೋಷಾಯ। ಶ್ರೀರಾಮನನ್ನು ಸರ್ವಜ್ಞನೆಂದು ಸಮರ್ಥಿಸಲು ವ್ಯಾಖ್ಯಾನಕಾರರು ಹೇಳಿರುವ ಮಾತುಗಳಿವು. ಆದರೆ ಹೀಗೆ ಸಮರ್ಥಿಸಲು ಹೋದರೆ ಶ್ರೀರಾಮನಿಗೆ ಹೆಚ್ಚು ದೋಷಗಳೇ ಅಂಟಿಕೊಳ್ಳುತ್ತವೆಂಬುದನ್ನು ಅವರು ಯೋಚಿಸಿದಂತಿಲ್ಲ. ವಾಲಿಯೊಡನೆ ಯುದ್ಧ

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.

ಅಂಗೀಕರಿಸಿದ ಶ್ರೀಮಂತನಾದ ಸುಗ್ರೀವನು ಬಳ್ಳಿಯಿಂದ ಸಮಲಂಕೃತನಾಗಿ ಸುಂದರವಾದ ಶರೀರವನ್ನು ಹೊಂದಿ ಶ್ರೀರಾಮನ ಜೊತೆಯಲ್ಲಿಯೇ ವಾಲಿಪಾಲಿತವಾದ ಕಿಷ್ಕಿಂಧಾಪಟ್ಟಣಕ್ಕೆ ಪುನಃ ಹೊರಟನು.

೧೨ನೆಯ ಸರ್ಗವು ಮುಗಿಯಿತು.



## ಶ್ರೀರಾಮನೇ ಮೊದಲಾದವರು ಮಾರ್ಗದಲ್ಲಿ ಸುಂದರದೃಶ್ಯಗಳನ್ನು ನೋಡುತ್ತಾ ಸಪ್ತಜನಾಶ್ರಮವನ್ನೂ ಸಂದರ್ಶಿಸಿ ಕಿಷ್ಕಿಂಧೆಗೆ ತೆರಳಿದುದು

ಋಶ್ಯಮೂಕಾತ್ಸ ಧರ್ಮಾತ್ಮಾ ಕಿಷ್ಕಿನ್ಧಾಂ ಲಕ್ಷ್ಮಣಾಗ್ರಜಃ ।
ಜಗಾಮ ಸಹ ಸುಗ್ರೀವೋ ವಾಲಿವಿಕ್ರಮಪಾಲಿತಾಮ್ ॥೧॥

ಲಕ್ಷ್ಮಣಾಗ್ರಜನಾದ ಧರ್ಮಾತ್ಮನಾದ ಶ್ರೀರಾಮನು ಸುಗ್ರೀವನೊಡನೆ ಋಷ್ಯಮೂಕಪರ್ವತದಿಂದ–ವಾಲಿಯ ಪರಾಕ್ರಮದಿಂದ ರಕ್ಷಿಸಲ್ಪಡುತ್ತಿದ್ದ ಕಿಷ್ಕಿಂಧಾಪಟ್ಟಣಕ್ಕೆ ಪ್ರಯಾಣಮಾಡಿದನು.

ಶ್ರೀರಾಮನು ಸುವರ್ಣಭೂಷಿತವಾದ ಧನುಸ್ಸನ್ನೆತ್ತಿಕೊಂಡು ಯುದ್ಧಸಾಧಕಗಳಾದ ಸೂರ್ಯಕಿರಣಸದೃಶವಾದ ಬಾಣಗಳನ್ನು ಹಿಡಿದುಕೊಂಡು ಹೋಗುತ್ತಿದ್ದನು. ಮಹಾತ್ಮನಾದ ಅವನ ಮುಂದುಗಡೆ ಸುಸಂಘಟಿತವಾದ ಕುತ್ತಿಗೆಯುಳ್ಳ ಸುಗ್ರೀವನೂ, ಮಹಾಬಲನಾದ ಲಕ್ಷ್ಮಣನೂ, ಅವನ ಹಿಂಭಾಗದಲ್ಲಿ ವೀರನಾದ ಹನುಮಂತನೂ, ನಲನೂ, ವೀರನಾದ ನೀಲನೂ, ವಾನರಸೇನಾಪತಿಗಳಿಗೆ ನಾಯಕನಾದ ಮಹಾತೇಜಸ್ವಿಯಾದ ತಾರನೂ ಹೋಗುತ್ತಿದ್ದರು.

---

ಮಾಡಲು ಸುಗ್ರೀವನನ್ನು ಹುರಿದುಂಬಿಸಿದುದು, ವಾಲಿಯಿಂದ ಪ್ರಾಣಾಂತಕವಾದ ಪೆಟ್ಟನ್ನು ಸುಗ್ರೀವನು ತಿನ್ನುತ್ತಿದ್ದರೂ ಸುಮ್ಮನೇ ಇದ್ದುದು, ಕಡೆಯದಾಗಿ ಸುಗ್ರೀವನೊಡನೆ ಸುಳ್ಳುಹೇಳಿದುದು–ಇವೆಲ್ಲವೂ ಮಹಾದೋಷಗಳೇ ಆಗುತ್ತವೆ. ಶ್ರೀರಾಮನು ಹಾಸ್ಯಕ್ಕಾದರೂ ಸುಳ್ಳುಹೇಳತಕ್ಕವನಲ್ಲ. ಇದನ್ನು ಅವನೇ ಹಲವುಬಾರಿ ಹೇಳಿದ್ದಾನೆ. ಆದುದರಿಂದ ಮನುಷ್ಯರೂಪದಲ್ಲಿ ಅವತರಿಸಿರುವ ಶ್ರೀರಾಮನ ಮಾತುಗಳನ್ನು ಯಥಾರ್ಥವಾಗಿಯೇ ಭಾವಿಸುವುದು ಸಮುಚಿತ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.


ಅವರೆಲ್ಲರೂ ಕಿಷ್ಕಿಂಧಾಪಟ್ಟಣಕ್ಕೆ ಪ್ರಯಾಣಮಾಡುತ್ತಿದ್ದಾಗ ಹಾದಿಯಲ್ಲಿ ಪುಷ್ಪಗಳ ಭಾರದಿಂದ ಕೆಳಕ್ಕೆಬಾಗಿದ್ದ ವೃಕ್ಷಗಳನ್ನೂ, ಸ್ವಚ್ಛವಾದ ನೀರಿನಿಂದ ಕೂಡಿದ್ದ ಸಮುದ್ರಾಭಿಮುಖವಾಗಿ ಹರಿದುಹೋಗುತ್ತಿದ್ದ ನದಿಗಳನ್ನೂ ವೀಕ್ಷಿಸಿದರು. ಪರ್ವತಗಳನ್ನೂ, ಮನೆಗಳಂತೆಯೇ ಪ್ರಕಾಶಿಸುತ್ತಿದ್ದ ಕಂದರಗಳನ್ನೂ, ಬಂಡೆಗಳ ಪದರಗಳನ್ನೂ, ಸ್ವಾಭಾವಿಕವಾಗಿಯೇ ಸಿದ್ಧವಾಗಿದ್ದ ಗುಹೆಗಳನ್ನೂ, ಮುಖ್ಯ-ಮುಖ್ಯವಾದ ಪರ್ವತಶಿಖರಗಳನ್ನೂ, ಬಹಳ ಸುಂದರವಾಗಿ ಕಾಣುತ್ತಿದ್ದ ವಿಶಿಷ್ಟರೀತಿಯ ಗುಹೆಗಳನ್ನೂ ನೋಡಿದರು. ವೈಡೂರ್ಯಮಣಿಯಂತೆ ಸ್ವಚ್ಛವಾದ ನೀರಿನಿಂದ ತುಂಬಿದ್ದ ಸರೋವರಗಳನ್ನೂ ಅರಳುತ್ತಿರುವ ಕಮಲಪುಷ್ಪಗಳಿಂದ ಬಹಳವಾಗಿ ಶೋಭಿಸುತ್ತಿದ್ದ ಜಲಸಮೃದ್ಧವಾದ ಸರೋವರಗಳನ್ನೂ ಮಾರ್ಗಮಧ್ಯದಲ್ಲಿ ವೀಕ್ಷಿಸಿದರು. ಕಾರಂಡ, ಸಾರಸ, ಹಂಸ, ವಂಜುಳ, ನೀರುಕೋಳಿ, ಚಕ್ರವಾಕ–ಇವೇ ಮುಂತಾದ ಜಲಚರಪಕ್ಷಿಗಳಿಂದ ಶಬ್ದಾಯಮಾನವಾಗಿದ್ದ ತಟಾಕಗಳನ್ನೂ, ವನಪ್ರದೇಶದಲ್ಲಿ ಯಾರ ಭಯವೂ ಇಲ್ಲದೇ ಮೃದುವಾದ ಗರಿಕೆಯ ಹುಲ್ಲನ್ನು ಮೇಯುತ್ತಾ ಅರಣ್ಯದ ಸುತ್ತಲೂ ಸಂಚರಿಸುತ್ತಿದ್ದ ಜಿಂಕೆಗಳನ್ನೂ ವೀಕ್ಷಿಸಿದರು. ಬಿಳಿಯ ದಂತಗಳಿಂದ ವಿಭೂಷಿತವಾಗಿದ್ದ, ಭಯಂಕರವಾಗಿದ್ದ, ಒಂಟಿಯಾಗಿಯೇ ತಿರುಗಾಡುತ್ತಿದ್ದ, ನೀರನ್ನು ಕಲುಷಗೊಳಿಸುತ್ತಿದ್ದ, ನದಿಯ ತೀರಗಳನ್ನು ಧ್ವಂಸಮಾಡುತ್ತಿದ್ದ ಆನೆಗಳನ್ನು ವೀಕ್ಷಿಸಿದರು. ಪರ್ವತದ ಬುಡಗಳನ್ನೇ ಅಲುಗಾಡಿಸುತ್ತಿದ್ದ, ನಡೆದಾಡುವ ಪರ್ವತಗಳಂತೆಯೇ ಕಾಣುತ್ತಿದ್ದ, ಭೂಮಿಯ ಧೂಳಿನಿಂದ ಅಭಿಷಿಕ್ತವಾಗಿದ್ದ, ಮೇಘಗಳಿಗೆ ಸಮಾನವಾದ ಕಾಂತಿಯಿಂದ ಕೂಡಿದ್ದ ಆನೆಗಳನ್ನೂ, ಇತರ ಪ್ರಾಣಿಗಳನ್ನೂ, ಆಕಾಶದಲ್ಲಿ ಸಂಚರಿಸುತ್ತಿದ್ದ ವಿವಿಧವಾದ ಪಕ್ಷಿಗಳನ್ನೂ ಶ್ರೀರಾಮನೇ ಮೊದಲಾದವರು ಮಾರ್ಗದಲ್ಲಿ ವೀಕ್ಷಿಸಿದರು. ಸುಗ್ರೀವನ ಹಿಂದೆ ಬರುತ್ತಿದ್ದ ಅವರೆಲ್ಲರೂ ಹಾಗೆ ಪ್ರಯಾಣಮಾಡುತ್ತಿದ್ದಾಗ ರಘುಕುಲತಿಲಕನಾದ ಶ್ರೀರಾಮನು ವೃಕ್ಷಗಳಿಂದಲೂ ಲತಾಗುಲ್ಮಗಳಿಂಧಲೂ ನಿಬಿಡವಾಗಿದ್ದ ಅರಣ್ಯವನ್ನು ನೋಡಿ ಸುಗ್ರೀವನಿಗೆ ಹೇಳಿದನು:

" ಸುಗ್ರೀವ ! ಆಕಾಶದಲ್ಲಿರುವ ಮೇಘಗಳ ಸಮೂಹದಂತೆ ಸರ್ವತ್ರ ವ್ಯಾಪ್ತವಾಗಿರುವ, ನಾಲ್ಕು ಕಡೆಗಳಿಂದಲೂ ಬಾಳೆಯ ಕಂದುಗಳಿಂದ ಸುತ್ತು

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

ವರಿಯಲ್ಪಟ್ಟಿರುವ ಈ ವೃಕ್ಷಗಳ ಸಮೂಹವು ಯಾವುದೆಂದು ತಿಳಿಯಲು ಬಯಸಿದ್ದೇನೆ. ಇದನ್ನು ತಿಳಿಯಲು ನನಗೆ ಕುತೂಹಲವುಂಟಾಗಿದೆ. ನಿನ್ನಿಂದ ಈ ಕುತೂಹಲವನ್ನು ಹೋಗಲಾಡಿಸಿಕೊಳ್ಳಬೇಕೆಂದಿದ್ದೇನೆ."

ಮಹಾತ್ಮನಾದ ರಾಘವನ ಆ ಮಾತನ್ನು ಕೇಳಿ ಸುಗ್ರೀವನು ಹೋಗುತ್ತಿರುವಾಗಲೇ ಆ ಮಹಾರಣ್ಯದ ವಿಷಯವಾಗಿ ಹೇಳತೊಡಗಿದನು:

"ರಾಘವ! ಇದೊಂದು ವಿಶಾಲವಾದ, ಶ್ರಮಪರಿಹಾರಕವಾದ, ಉದ್ಯಾನವನಗಳಿಂದಲೂ – ರುಚಿಕರವಾದ ಕಂದ-ಮೂಲ-ಫಲಗಳಿಂದಲೂ ಸಮೃದ್ಧವಾಗಿರುವ ಆಶ್ರಮವಾಗಿದೆ. ಇಲ್ಲಿ ಕಠೋರವ್ರತನಿಷ್ಠರಾದ ಸಪ್ತಜನರೆಂಬ ಹೆಸರಿನ ಏಳು ಮಂದಿ ಮುನಿಗಳು ನೀರಿನಲ್ಲಿ ತಲೆಕೆಳಗಾಗಿ ನಿಂತು ನಿಯತರಾಗಿ ತಪಸ್ಸುಮಾಡುತ್ತಿದ್ದರು. ಏಳು ದಿನಗಳಿಗೊಂದು ಸಲ ವಾಯುವನ್ನೇ ಆಹಾರವನ್ನಾಗಿ ಸೇವಿಸುತ್ತಿದ್ದರು. ಪರ್ವತದ ತಪ್ಪಲುಪ್ರದೇಶದಲ್ಲಿಯೇ ವಾಸಮಾಡುತ್ತಿದ್ದ ಅವರು ಏಳುನೂರು ವರ್ಷಗಳವರೆಗೆ ಹಾಗೆಯೇ ತಪಸ್ಸುಮಾಡುತ್ತಿದ್ದು ಸಶರೀರರಾಗಿಯೇ ಸ್ವರ್ಗಕ್ಕೆ ಹೋದರು. ಅಂತಹ ಮಹಾತ್ಮರ ಪ್ರಭಾವದಿಂದಾಗಿ ಈ ಆಶ್ರಮವು ವೃಕ್ಷಗಳೆಂಬ ಪ್ರಾಕಾರದಿಂದ ಸುತ್ತುವರಿಯಲ್ಪಟ್ಟಿದೆ. ಇಂದ್ರನೇ ಮೊದಲಾದ ದೇವತೆಗಳಿಂದಲೂ, ಅಸುರರಿಂದಲೂ ಪ್ರವೇಶಿಸಲು ಇದು ದುಸ್ಸಾಧ್ಯವಾಗಿದೆ. ಪಕ್ಷಿಗಳು ಈ ಆಶ್ರಮಪ್ರದೇಶದಲ್ಲಿ ಹಾರಾಡುವುದಿಲ್ಲ. ಹಾಗೆಯೇ ವನಚಾರಿಗಳಾದ ಇತರ ಪ್ರಾಣಿಗಳೂ ಇಲ್ಲಿ ಕಾಲಿಡುವುದಿಲ್ಲ. ಯಾರಾದರೂ ಮೋಹವಶರಾಗಿ ಈ ಆಶ್ರಮಭೂಮಿಯೊಳಗೆ ಪ್ರವೇಶಿಸಿದ್ದೇ ಆದರೆ–ಅಂತಹವರು ಪುನಃ ಹಿಂದಿರುಗಿ ಬರುವುದಿಲ್ಲ. ಇಲ್ಲಿ ಮಧುರಾಕ್ಷರಸಹಿತವಾದ ಆಭರಣಗಳ ಶಬ್ದಗಳು ಕೇಳಿಸುತ್ತವೆ. ವಾದ್ಯ-ಗೀತಗಳ ಸುಶ್ರಾವ್ಯವಾದ ನಿನಾದಗಳೂ ಕೇಳಿಸುತ್ತವೆ. ದಿವ್ಯವಾದ ಗಂಧವು ಈ ಆಶ್ರಮದ ಸುತ್ತಲೂ ಪ್ರಸರಿಸಿದೆ. ಇಲ್ಲಿ ಗಾರ್ಹಪತ್ಯಾದಿ ಮೂರು ಅಗ್ನಿಗಳೂ ಸರ್ವಕಾಲದಲ್ಲಿಯೂ ಜಾಜ್ವಲ್ಯಮಾನವಾಗಿ ಪ್ರಕಾಶಿಸುತ್ತಲೇ ಇರುತ್ತವೆ. ಕಪೋತಶರೀರದಂತೆ ಎಣೆಗೆಂಪಾದ ಮತ್ತು ದಟ್ಟವಾದ ಮೂರು ಅಗ್ನಿಗಳ ಹೋಮಧೂಮವು ವೃಕ್ಷಗಳ ಅಗ್ರಭಾಗಗಳನ್ನು ಆವರಿಸುತ್ತಿರುವುದೋ ಎಂಬಂತೆ ಕಾಣಿಸುತ್ತಿದೆ. ಮೇಘಗಳ ಸಮೂಹಗಳಿಂದ ಆಚ್ಛಾದಿತವಾದ ಧೂಮಾವೃತವಾದ ಅಗ್ರಭಾಗಗಳಿಂದ ಕೂಡಿ ವೈಡೂರ್ಯಪರ್ವತ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಗಳಂತೆಯೇ ಕಾಣುತ್ತಿರುವ ಈ ವೃಕ್ಷಗಳು ಬಹಳವಾಗಿ ಪ್ರಕಾಶಿಸುತ್ತಿವೆ. ಧರ್ಮಾತ್ಮನೇ! ಅನುಜನಾದ ಲಕ್ಷ್ಮಣನೊಡನೆ ವಿನಯಭಾವದಿಂದ ಕೈಜೋಡಿಸಿಕೊಂಡು ಸಪ್ತರ್ಷಿಗಳನ್ನು ಉದ್ದೇಶಿಸಿ ಪ್ರಣಾಮಮಾಡು. ಮಹಾತ್ಮರಾದ ಈ ಋಷಿಗಳಿಗೆ ಯಾರು ವಿನೀತರಾಗಿ ನಮಸ್ಕಾರಮಾಡುವರೋ-ಅಂತಹವರ ಶರೀರಗಳಲ್ಲಿ ಅಶುಭಸೂಚಕವಾದ ಲಕ್ಷಣಗಳೊಂದೂ ಇರುವುದಿಲ್ಲ. ರೋಗ-ರುಜಿನಾದಿಗಳಿರುವುದಿಲ್ಲ. ಶುಭಲಕ್ಷಣಸಂಪನ್ನರಾಗುವರು."

ಸುಗ್ರೀವನು ಹೀಗೆ ಹೇಳಲು ಶ್ರೀರಾಮನು ಲಕ್ಷ್ಮಣನೊಡನೆ ಕೈಮುಗಿದುಕೊಂಡು ಮಹಾತ್ಮರಾದ ಆ ಸಪ್ತಜನಋಷಿಗಳನ್ನು ಉದ್ದೇಶಿಸಿ ನಮಸ್ಕಾರಮಾಡಿದನು. ಬಳಿಕ ಸುಗ್ರೀವನೂ, ಅವನ ಅನುಯಾಯಿಗಳಾದ ವಾನರರೂ ಪ್ರಹೃಷ್ಟರಾಗಿ ಕಿಷ್ಕಿಂಧಾನಗರದ ಕಡೆಗೆ ಪ್ರಯಾಣ ಮಾಡಿದರು. ಸಪ್ತಜನಾಶ್ರಮದಿಂದ ಮುಂದೆ ಬಹಳ ದೂರ ಪ್ರಯಾಣ ಮಾಡಿದನಂತರ ರಾಮಾದಿಗಳಿಗೆ ಪ್ರವೇಶಿಸಲು ದುಸ್ಸಾಧ್ಯವಾಗಿದ್ದ ವಾಲಿಪಾಲಿತವಾಗಿದ್ದ ಕಿಷ್ಕಿಂಧೆಯು ಗೋಚರಿಸಿತು.

ಹೀಗೆ ರಾಮ-ಲಕ್ಷ್ಮಣರೂ ಸುಗ್ರೀವಪ್ರಮುಖರಾದ ವಾನರರೂ ಉಗ್ರವಾದ ತೇಜಸ್ಸಿನಿಂದ ಕೂಡಿದವರಾಗಿ, ವಿಧ-ವಿಧವಾದ ಶಸ್ತ್ರಗಳನ್ನು ಹಿಡಿದುಕೊಂಡು ಇಂದ್ರಪುತ್ರನ ಪರಾಕ್ರಮದಿಂದ ಪರಿಪಾಲಿಸಲ್ಪಡುತ್ತಿದ್ದ ಕಿಷ್ಕಿಂಧಾಪಟ್ಟಣಕ್ಕೆ ಶತ್ರುವಿನ ವಧಾರ್ಥವಾಗಿ ಪುನಃ ಆಗಮಿಸಿದರು.

೧೩ನೆಯ ಸರ್ಗವು ಮುಗಿಯಿತು.

ಕಿಷ್ಕಿಂಧಾಕಾಂಡ ೧೪ನೆಯ ಸರ್ಗ

## ಶ್ರೀರಾಮನ ಆಶ್ವಾಸನೆಯಂತೆ ಸುಗ್ರೀವನು ವಾಲಿಯನ್ನು ಯುದ್ಧಕ್ಕೆ ಆಹ್ವಾನಿಸುತ್ತಾ ಗರ್ಜಿಸಿದುದು

ಸರ್ವೇ ತೇ ತ್ವರಿತಂ ಗತ್ವಾ ಕಿಷ್ಕಿಂಧಾಂ ವಾಲಿಪಾಲಿತಾಮ್ ।
ವೃಕ್ಷೈರಾತ್ಮಾನಮಾವೃತ್ಯ ವ್ಯತಿಷ್ಠನ್ಗಹನೇ ವನೇ ॥೧॥

ರಾಮ-ಲಕ್ಷ್ಮಣರೂ ಮತ್ತು ಸುಗ್ರೀವಪ್ರಮುಖರಾದ ವಾನರರೂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

ತ್ವರೆಯಿಂದ ವಾಲಿಯ ಪಟ್ಟಣವಾದ ಕಿಷ್ಕಿಂಧಾಪಟ್ಟಣದ ಸಮೀಪಕ್ಕೆ ಹೋಗಿ ಗಹನವಾಗಿದ್ದ ಅರಣ್ಯದಲ್ಲಿ ವೃಕ್ಷಗಳ ಮರೆಯಲ್ಲಿ ನಿಂತರು. ಅರಣ್ಯಪ್ರಿಯನಾಗಿದ್ದ, ಸುಪುಷ್ಟವಾದ ಕುತ್ತಿಗೆಯನ್ನು ಹೊಂದಿದ್ದ ಸುಗ್ರೀವನು ಸುತ್ತಲೂ ಒಮ್ಮೆ ದೃಷ್ಟಿಯನ್ನು ಹಾಯಿಸಿ ಹಿಂದಿನದೆಲ್ಲ ವನ್ನೂ ನೆನೆದು ಅತ್ಯಂತಕುಪಿತನಾದನು. ವಾನರಪರಿವಾರದಿಂದ ಪರಿವೃತ ನಾಗಿ ಆಕಾಶವನ್ನೇ ಭೇದಿಸುತ್ತಿರುವನೋ ಎಂಬಂತೆ ಘೋರವಾದ ಗರ್ಜನೆ ಯನ್ನು ಮಾಡಿ ವಾಲಿಯನ್ನು ಯುದ್ಧಕ್ಕೆ ಆಹ್ವಾನಿಸಿದನು. ಆಗ ತಾನೇ ಉದಯಿಸಿದ ಎಣೆಗೆಂಪಿನ ಸೂರ್ಯನಂತೆಯೇ ಪ್ರಕಾಶಮಾನನಾಗಿದ್ದ, ಮದಿಸಿದ ಸಿಂಹದಂತೆ ಹೆಜ್ಜೆಗಳನ್ನಿಡುತ್ತಿದ್ದ ಸುಗ್ರೀವನು-ವಾಯುವೇಗದಿಂದ ಪ್ರೇರಿತವಾದ ಮೇಘದಂತೆ-ಗರ್ಜನೆಮಾಡುತ್ತಾ ಕಾರ್ಯಸಾಧನೆಯಲ್ಲಿ ದಕ್ಷ ನಾದ ಶ್ರೀರಾಮನಿಗೆ ಹೇಳಿದನು:

ಹರಿವಾಗುರಯಾ ವ್ಯಾಪ್ತಾಂ ತಪ್ತಕಾಞ್ಚನತೋರಣಾಮ್ ।
ಪ್ರಾಪ್ತಾಃ ಸ್ಮ ಧ್ವಜಯನ್ತ್ರಾಢ್ಯಾಂ ಕಿಷ್ಕಿನ್ಧಾಂ ವಾಲಿನಃ ಪುರೀಮ್॥

“ರಾಘವ! ನಾವೀಗ ಕಿಷ್ಕಿಂಧಾಪಟ್ಟಣಕ್ಕೆ ಬಂದಿರುತ್ತೇವೆ. ಈ ಪಟ್ಟಣವು ವಾನರರೂಪವಾದ ಬಲೆಯಿಂದ ವ್ಯಾಪ್ತವಾಗಿದೆ. ಪುಟಕ್ಕೆ ಹಾಕಿದ ಚಿನ್ನದಿಂದ ಈ ಮಹಾದ್ವಾರವು ಸಮಲಂಕೃತವಾಗಿದೆ. ಧ್ವಜ ಗಳಿಂದಲೂ ಶತಘ್ನಿಯೇ ಮೊದಲಾದ ಆಯುಧಗಳಿಂದಲೂ ಸಮೃದ್ಧವಾಗಿದೆ.*

ವೀರನೇ! ವಸಂತಕಾಲವು ಬಂದೊಡನೆಯೇ ಲತೆಯು ಪುಷ್ಪಭರಿತ

---

* ಹರಿವಾಗುರಯಾ= ವಾನರರೂಪವಾದ ಬಲೆ. ವಾನರರೂಪಮೃಗಬನ್ಧಕಪಾಶೇನ ವ್ಯಾಪ್ತಾಂ:- ವಾನರರೂಪವಾದ ಮೃಗಬಂಧಪಾಶದಿಂದ ವ್ಯಾಪ್ತವಾಗಿರುವ. ಹರಯ ಏವ ವಾಗುರಾ ಮೃಗಗ್ರಹಣಪಾಶಃ ತಯಾ ವ್ಯಾಪ್ತಾಂ:- ವಾನರರೇ ವಾಗುರುಗಳು ಅಥವಾ ಮೃಗಗ್ರಹಣಬಲೆಗಳು. ಆದರಿಂದ ವ್ಯಾಪ್ತವಾಗಿರುವುದು ಕಿಷ್ಕಿಂಧೆ. ಎಂದರೆ ವಾನರರು ಬಲೆಯು ಮಾಡುವ ಕೆಲಸವನ್ನು ಮಾಡುತ್ತಾರೆ. ವಾನರರು ಬಲೆಯ ರೂಪ ದಲ್ಲಿದ್ದು ಹೊರಗಿನಿಂದ ಯಾರೇ ಬಂದರೂ ಬಲೆಯು ಜಿಂಕೆಯನ್ನು ಹಿಡಿಯುವಂತೆ ಶತ್ರುಗಳನ್ನು ಹಿಡಿದುಹಾಕುತ್ತಾರೆ. ಪಟ್ಟಣಪ್ರವೇಶಕ್ಕೆ ಅಸ್ಪದಕೊಡುವುದಿಲ್ಲ-ಎಂಬ ಅಭಿಪ್ರಾಯ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ವಾಗುವಂತೆ ವಾಲಿಯನ್ನು ಸಂಹರಿಸುವೆನೆಂಬ ನಿನ್ನ ಪ್ರತಿಜ್ಞಾವಚನವು ಈ ಸಮಯದಲ್ಲಿ ಸಫಲವಾಗುವಂತೆ ಮಾಡು."

ಧರ್ಮಾತ್ಮನಾದ ಸುಗ್ರೀವನು ಹೀಗೆ ಹೇಳಲು ಶತ್ರುಹಂತಕನಾದ ಶ್ರೀರಾಮನು ಪ್ರತ್ಯುತ್ತರಿಸಿದನು :

"ವೀರನೇ ! ಈ ಗಜಪುಷ್ಪೀಲತೆಯ ಹಾರವನ್ನು ಧರಿಸಿರುವುದರಿಂದ ಈಗ ನಿನ್ನನ್ನು ಗುರುತಿಸಬಹುದಾಗಿದೆ. ಲಕ್ಷ್ಮಣನು ಈ ಲತೆಯನ್ನು ಕಿತ್ತುತಂದು ನಿನ್ನ ಕೊರಳಲ್ಲಿ ಹಾಕಿದ್ದಾನೆ. ಉತ್ಪಾತಕಾಲದಲ್ಲಿ ಸೂರ್ಯನು ನಕ್ಷತ್ರಮಾಲೆಯಿಂದ ಶೋಭಿಸುವಂತೆ–ವಾಲಿಗೆ ವಿಪತ್ತು ಸಂಭವಿಸಿರುವ ಈ ಸಮಯದಲ್ಲಿ ನಿನ್ನ ಕುತ್ತಿಗೆಯಲ್ಲಿರುವ ಗಜಪುಷ್ಪೀಲತೆಯ ಮಾಲೆಯಿಂದ ನೀನು ಬಹಳವಾಗಿ ಶೋಭಿಸುತ್ತಿರುವೆ.* ಈಗ ನಾನು ವಾಲಿಯಿಂದ ನಿನಗೆ ಉಂಟಾಗಿರುವ ಭಯವನ್ನೂ ಮತ್ತು ವಾಲಿಸಂಬಂಧವಾದ ವೈರವನ್ನೂ ಯುದ್ಧದಲ್ಲಿ ಒಂದೇ ಬಾಣಪ್ರಯೋಗದಿಂದ ನಿರಸನಗೊಳಿಸುತ್ತೇನೆ. ಅಣ್ಣನ ರೂಪದಲ್ಲಿರುವ ನಿನ್ನ ವೈರಿಯಾದ ವಾಲಿಯನ್ನು ತೋರಿಸು. ಮರುಕ್ಷಣದಲ್ಲಿಯೇ ವಾಲಿಯು ಹತನಾಗಿ ಅರಣ್ಯದ ಧೂಳಿನಲ್ಲಿ ಬಿದ್ದು ಹೊರಳಾಡುತ್ತಾನೆ. ನನ್ನ ಕಣ್ಣುಗಳಿಗೆ ಬಿದ್ದನಂತರವೂ ಅವನು

* ವಿಪರೀತ ಇವಾಕಾಶೇ ಸೂರ್ಯೋ ನಕ್ಷತ್ರಮಾಲಯಾ-ಎಂದು ಈ ಶ್ಲೋಕದ ಉತ್ತರಾರ್ಧ. ಇದಕ್ಕೆ ವ್ಯಾಖ್ಯಾನಕಾರರು ವಿಪರೀತವಾದ ಅರ್ಥಗಳನ್ನು ಮಾಡಿರುತ್ತಾರೆ. ಸೂರ್ಯನಿರುವಾಗ ನಕ್ಷತ್ರಗಳಿರಲು ಸಾಧ್ಯವೇ ಇಲ್ಲ–ಎಂಬ ಸಿದ್ಧಾಂತವೇ ಇದಕ್ಕೆ ಕಾರಣವಾಗಿದೆ. ವಿಪರೀತಶಬ್ದಕ್ಕೆ ರಾತ್ರಿ ಎಂಬ ಅರ್ಥಮಾಡಿ ಸೂರ್ಯಶಬ್ದಕ್ಕೆ ಚಂದ್ರನೆಂದೇ ಅರ್ಥಮಾಡಿರುತ್ತಾರೆ. ಪರೀತಂ ತು ದಿವಾ ಪ್ರೋಕ್ತಂ ವಿಪರೀತಂ ತು ಶರ್ವರೀ। ರಾಕಾಮಧ್ಯಗತಶ್ಚಂದ್ರಃ ಸೂರ್ಯ ಇತ್ಯಭಿಧೀಯತೇ ॥ ಪರೀತಂ ಎಂಬುದಕ್ಕೆ ದಿವಸ ಎಂಬ ಅರ್ಥವೂ, ವಿಪರೀತಂ ಎಂಬುದಕ್ಕೆ ರಾತ್ರಿಯೆಂಬ ಅರ್ಥವೂ ಹೇಳಲ್ಪಟ್ಟಿದೆ. ಪೂರ್ಣಿಮೆಯ ದಿವಸದ ಚಂದ್ರನನ್ನು ಸೂರ್ಯನೆಂದೂ ಕರೆಯುತ್ತಾರೆ. ಈ ಶ್ಲೋಕವನ್ನೇ ಆಧಾರವನ್ನಾಗಿಟ್ಟುಕೊಂಡು ಹೀಗೆ ಅರ್ಥಮಾಡಿದ್ದಾರೆ. ವಿಪರೀತ ಪದಕ್ಕೆ ರಾತ್ರಿ-ಎಂಬ ಅರ್ಥವನ್ನೂ ಚಂದ್ರಪದಕ್ಕೆ ಸೂರ್ಯ ಎಂಬ ಅರ್ಥವನ್ನೂ ಮಾಡಿಬಿಟ್ಟರೆ ವಿರೋಧವೇ ಕಾಣುವುದಿಲ್ಲ ಆದರೆ ಶರ್ವರೀ-ಚಂದ್ರ ಈ ಪದಗಳನ್ನೇ ಉಪಯೋಗಿಸಿ ಶ್ಲೋಕಪೂರ್ಣಮಾಡಲು ವಾಲ್ಮೀಕಿಗಳಿಗೆ ತಿಳಿಯದೇ ?



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಜೀವಸಹಿತನಾಗಿ ಹಿಂದಿರುಗಿದರೆ ಆಗ ನೀನು ನನ್ನನ್ನು ದೋಷಿಯೆಂದು ಭಾವಿಸಬಹುದು. ಅದಕ್ಕಾಗಿ ನಿಂದಿಸಲೂಬಹುದು. ನಿನ್ನ ಕಣ್ಣೆದುರಿನಲ್ಲಿಯೇ ನಾನು ಒಂದೇ ಬಾಣದಿಂದ ಏಳು ಸಾಲವೃಕ್ಷಗಳನ್ನೂ ಸೀಳಿಹಾಕಿದೆನು. ಅದರಿಂದಲೇ ನೀನು, ನನ್ನ ಬಲ-ಪರಾಕ್ರಮಗಳಿಂದ ವಾಲಿಯೀಗಲೇ ಹತನಾಗುವನೆಂಬುದನ್ನು ತಿಳಿ. ಧರ್ಮಹಾನಿಯನ್ನು ಸಹಿಸದಿರುವ (ಧರ್ಮದ ರಕ್ಷಣೆಯಲ್ಲಿಯೇ ಹೆಚ್ಚು ನಿಷ್ಠೆಯಿಂದಿರುವ) ನಾನು ಹಿಂದೆ ಎಂತಹುದೇ ಕಷ್ಟದಲ್ಲಿಯೂ ಸುಳ್ಳನ್ನಾಡಿದವನಲ್ಲ. ಮುಂದೆಯೂ ಯಾವುದೇ ಸಂದರ್ಭದಲ್ಲಿಯೂ ಸುಳ್ಳು ಹೇಳುವುದಿಲ್ಲ. ಇಂದ್ರನು ಗದ್ದೆಯಲ್ಲಿ ಮೊಳಕೆಯೊಡೆದ ಭತ್ತದ ಪೈರನ್ನು ಮಳೆಯಿಂದ ಫಲಿತವನ್ನಾಗಿ ಮಾಡುವಂತೆ-ನಾನು ಮಾಡಿರುವ ಪ್ರತಿಜ್ಞೆಯನ್ನು ಸಫಲಗೊಳಿಸುತ್ತೇನೆ. ಈ ವಿಷಯದಲ್ಲಿ ನಿನಗಿರುವ ಭಯವನ್ನು ಪರಿತ್ಯಜಿಸು. ಹೇಮಮಾಲಿಯಾದ ವಾಲಿಯ ಆಹ್ವಾನದ ನಿಮಿತ್ತವಾಗಿ ನೀನೀಗ ಮಾಡಿದ ಗರ್ಜನೆಯನ್ನೇ ಪುನಃ ಮಾಡು. ಆ ನಿನ್ನ ಘೋರಗರ್ಜನೆಯಿಂದ ವಾಲಿಯು ಹಾರಿಬರುವಂತಾಗಬೇಕು. ವಿಜಯದಿಂದ ದೀಪ್ಯಮಾನನಾಗಿ ಪ್ರಕಾಶಿಸುವ, ಪರಾಕ್ರಮವನ್ನೇ ಯಾವಾಗಲೂ ಶ್ಲಾಘಿಸುವ, ಹಿಂದೆ ಯಾವಾಗಲೂ ನಿನ್ನಿಂದ ಪರಾಜಿತನಾಗದ, ಯುದ್ಧಪ್ರಿಯನಾದ ವಾಲಿಯು ಪುನಃ ನಿನ್ನ ಗರ್ಜನೆಯನ್ನು ಕೇಳಿದೊಡನೆಯೇ ಯಾರ ಸಂಗವೂ ಇಲ್ಲದೆ (ಯಾರನ್ನೂ ಜೊತೆಯಲ್ಲಿ ಕರೆದುಕೊಳ್ಳದೆ ಏಕಾಕಿಯಾಗಿ) ಇಲ್ಲಿಗೆ ಹಾರಿಕೊಂಡೇ ಬರುತ್ತಾನೆ.

---

ಅಥವಾ ಇದೇನು ಕೂಟಶ್ಲೋಕವೇ ? ಆದುದರಿಂದ ವಿಪರೀತೇ = ಎಂಬುದಕ್ಕೆ ಉತ್ಪಾತಕಾಲೇ ಎಂಬ ಅರ್ಥವೇ ಸಮಂಜಸವಾಗಿದೆ. ವಾಲಿಗಿದು ಉತ್ಪಾತಕಾಲವೂ ಆಗಿದೆ. ಉತ್ಪಾತಕಾಲದಲ್ಲಿ ಅಥವಾ ಪ್ರಳಯಕಾಲದಲ್ಲಿ ಹಗಲಿನಲ್ಲಿಯೇ ನಕ್ಷತ್ರಗಳು ಕಾಣುತ್ತವೆಯೆಂಬುದು ಪುರಾಣಪ್ರಸಿದ್ಧವಾಗಿಯೇ ಇದೆ. ರಾಷ್ಟ್ರದ ನಾಯಕರ ಅವಸಾನಕಾಲವು ಪ್ರಾಪ್ತವಾದರೆ ಅಶುಭಸೂಚಕವಾಗಿ ನಕ್ಷತ್ರಗಳು ಹಗಲಿನಲ್ಲಿ ಕಾಣುತ್ತವೆ ಎಂಬುದಕ್ಕೆ ಜ್ಯೋತಿಷಶಾಸ್ತ್ರದ ಪ್ರಮಾಣವಾಕ್ಯವಿದೆ. ರಾತ್ರಾವಿನ್ದ್ರಧನುರ್ದರ್ಶೇ ದಿವಾ ನಕ್ಷತ್ರದರ್ಶನೇ। ತದ್ರಾಷ್ಟ್ರಸಾಧನಾಶಃ ಸ್ಯಾದಿತಿ ಗರ್ಗಸ್ಯ ಭಾಷಿತಮ್ ॥ ರಾತ್ರಿಯಲ್ಲಿ ಕಾಮನಬಿಲ್ಲು ಕಾಣಿಸಿಕೊಂಡರೆ ಹಗಲಿನಲ್ಲಿ ನಕ್ಷತ್ರಗಳು ಕಾಣಿಸಿಕೊಂಡರೆ ಆ ರಾಷ್ಟ್ರದ ರಾಜನ ನಾಶವಾಗುವುದೆಂದು ಗರ್ಗರು ಹೇಳಿದ್ದಾರೆ. ಆದುದರಿಂದ ವಿಪರೀತೇ ಎಂಬುದಕ್ಕೆ ಉತ್ಪಾತಕಾಲದಲ್ಲಿ-ಎಂಬ ಅರ್ಥವೇ ಸಮಂಜಸವಾಗಿದೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ರಿಪೂಣಾಂ ಧರ್ಷಣಂ ಶೂರಾ ಮರ್ಷಯನ್ತಿ ನ ಸಂಯುಗೇ ।
ಜಾನನ್ತಸ್ತು ಸ್ವಕಂ ವೀರ್ಯಂ ಸ್ತ್ರೀಸಮಕ್ಷಂ ವಿಶೇಷತಃ ॥೧೪॥

ತಮ್ಮ ಶೌರ್ಯ-ಪರಾಕ್ರಮಗಳನ್ನು ತಿಳಿದುಕೊಂಡಿರುವ ಶೂರರು-ಅದರಲ್ಲಿಯೂ ವಿಶೇಷವಾಗಿ ಸ್ತ್ರೀಯರ ಎದುರಿನಲ್ಲಿದ್ದಾಗ - ಶತ್ರುಗಳು ಮಾಡುವ ಗರ್ಜನೆಯನ್ನು ಖಂಡಿತವಾಗಿಯೂ ಸಹಿಸಿಕೊಳ್ಳುವುದಿಲ್ಲ." *

ಶ್ರೀರಾಮನ ಆ ಮಾತನ್ನು ಕೇಳಿ ಹೇಮಪಿಂಗಳವರ್ಣದ ಸುಗ್ರೀವನು ಆಕಾಶವನ್ನೇ ಭೇದಿಸಿಬಿಡುವನೋ ಎಂಬಂತೆ ಕರ್ಕಶಧ್ವನಿಯಿಂದ ಗರ್ಜನೆ ಮಾಡಿದನು. ರಾಜ್ಯದಲ್ಲಿ ಅರಾಜಕತೆಯಿಂದಾಗಿ ಪರಪುರುಷರಿಂದ ಬಲಾತ್ಕಾರವಾಗಿ ಸೆಳೆದೆಳೆಯಲ್ಪಟ್ಟು ಕ್ಲೇಶಪಡುವ ಕುಲಸ್ತ್ರೀಯರಂತೆ-ಸುಗ್ರೀವನು ಮಾಡಿದ ಆ ಕ್ರೂರಗರ್ಜನೆಯಿಂದಾಗಿ ಭಯಗೊಂಡ ಹಸುಗಳು ಕಾಂತಿಹೀನವಾಗಿ ದಿಕ್ಕೆಟ್ಟು ಓಡಿಹೋದುವು. ಅರಣ್ಯದಲ್ಲಿದ್ದ ಜಿಂಕೆಗಳು ಯುದ್ಧದಲ್ಲಿ ಚಾವಟಿಯ ಏಟನ್ನು ತಿಂದ ಕುದುರೆಗಳಂತೆ-ನಾಗಾಲೋಟದಿಂದ ಓಡಿಹೋದುವು. ಪುಣ್ಯವು ಮುಗಿದುಹೋದನಂತರ ಗ್ರಹಗಳು ಆಕಾಶದಿಂದ ಕೆಳಕ್ಕೆ ಬೀಳುವಂತೆ ಆಕಾಶದಲ್ಲಿ ಹಾರಾಡುತ್ತಿದ್ದ ಪಕ್ಷಿಗಳು ಘೋರಗರ್ಜನೆಯನ್ನು ಕೇಳಿ ತೊಪ-ತೊಪನೆ ಭೂಮಿಯ ಮೇಲೆ ಬಿದ್ದುವು.

ಸೂರ್ಯನ ಮಗನಾದ ಸುಗ್ರೀವನು ಮೇಘವೇ ಗರ್ಜಿಸುತ್ತಿರುವುದೋ ಎಂಬಂತೆ ಘೋರವಾಗಿ ಗರ್ಜನೆಮಾಡುತ್ತಿದ್ದನು. ಶ್ರೀರಾಮನ ಪ್ರೋತ್ಸಾಹದಿಂದಾಗಿ ಅವನ ಶೌರ್ಯ-ತೇಜಸ್ಸುಗಳು ವೃದ್ಧಿಸಿದ್ದುವು. ಗರ್ಜನೆ

---

* ವಾಲಿಯು ಆ ಸಮಯದಲ್ಲಿ ಸ್ತ್ರೀಯರೊಡನೆ ಇರುವನೆಂದು ರಾಮನು ಈ ಶ್ಲೋಕದಲ್ಲಿ ಪರ್ಯಾಯವಾಗಿ ಹೇಳಿರುವುದರಿಂದ ಅದು ಸಾಯಂಕಾಲದ ವೇಳೆಯೆಂದು ವ್ಯಾಖ್ಯಾನಕಾರರು ಹೇಳಿದ್ದಾರೆ. ಇದನ್ನು ಸಮರ್ಥಿಸುತ್ತಾ ಅವರು ಪ್ರಾಣಿಸಂಬಂಧವಾದ ಈ ಶ್ಲೋಕವನ್ನು ಉದ್ಧರಿಸಿರುತ್ತಾರೆ. ಪ್ರಾತರ್ಮೂತ್ರಪುರೀಷಾಭ್ಯಾಂ ಮಧ್ಯಾಹ್ನೇ ಕ್ಷುತ್ಪಿಪಾಸಯಾ । ಸಾಯಂ ಕಾಮೇನ ಪೀಡ್ಯನ್ತೇ ಜನ್ತವೋ ನಿಶಿ ನಿದ್ರಯಾ ॥ ಪ್ರಾಣಿಗಳು ಪ್ರಾತಃಕಾಲದಲ್ಲಿ ಮೂತ್ರ-ಪುರೀಷೋತ್ಸರ್ಜನೆಗಳಿಂದ ಪೀಡಿಸಲ್ಪಡುತ್ತವೆ. ಮಧ್ಯಾಹ್ನದಲ್ಲಿ ಹಸಿವು-ಬಾಯಾರಿಕೆಗಳಿಂದ ಪೀಡಿಸಲ್ಪಡುತ್ತವೆ. ಸಾಯಂಕಾಲದ ವೇಳೆಯಲ್ಲಿ ಕಾಮದಿಂದ ಪೀಡಿಸಲ್ಪಡುತ್ತವೆ. ರಾತ್ರಿಯಲ್ಲಿ ನಿದ್ರೆಯಿಂದ ಪೀಡಿಸಲ್ಪಡುತ್ತವೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಮಾಡುವುದರಲ್ಲಿ ಅವನು ಪ್ರಸಿದ್ಧನಾಗಿದ್ದನು. ಗಾಳಿಯ ರಭಸದಿಂದ ಹುಟ್ಟುವ ತೆರೆಗಳುಳ್ಳ ನದಿಗಳಿಗೆ ಒಡೆಯನಾದ ಸಮುದ್ರನಂತೆ-ಸುಗ್ರೀವನು ಮತ್ತೊಮ್ಮೆ ಅವಸರದಿಂದ ಗರ್ಜನೆಮಾಡಿದನು.

೧೪ನೆಯ ಸರ್ಗವು ಮುಗಿಯಿತು.



ಸುಗ್ರೀವನ ಗರ್ಜನೆಯನ್ನು ಕೇಳಿ ವಾಲಿಯು ಯುದ್ಧಕ್ಕೆ ಹೊರಟುದು : ತಾರೆಯು ಅವನನ್ನು ತಡೆದುನಿಲ್ಲಿಸುತ್ತಾ ಸುಗ್ರೀವ-ರಾಮರೊಡನೆ ಮೈತ್ರಿಯನ್ನು ಬೆಳೆಸಲು ಸಲಹೆಮಾಡಿದುದು

ಅಥ ತಸ್ಯ ನಿನಾದಂ ತು ಸುಗ್ರೀವಸ್ಯ ಮಹಾತ್ಮನಃ ।
ಶುಶ್ರಾವಾನ್ತಃಪುರಗತೋ ವಾಲೀ ಭ್ರಾತುರಮರ್ಷಣಃ ॥೧॥

ಅನಂತರ ಅಂತಃಪುರದಲ್ಲಿದ್ದ ಅಸಹನಶೀಲನಾದ ವಾಲಿಯು ಮಹಾತ್ಮನಾದ ಸುಗ್ರೀವನ ಘೋರಗರ್ಜನೆಯನ್ನು ಕೇಳಿದನು.

ಪ್ರಪಂಚದ ಎಲ್ಲ ಪ್ರಾಣಿಗಳನ್ನೂ ನಡುಗಿಸುವಂತಹ ಸುಗ್ರೀವನ ಆ ಗರ್ಜನೆಯನ್ನು ಕೇಳಿದೊಡನೆಯೇ ತನಗೆ ಸಮಾನರೇ ಇಲ್ಲವೆಂದು ಭಾವಿಸಿದ್ದ ವಾಲಿಯ ಮದವು ಒಂದೇ ಬಾರಿಗೆ ಉಡುಗಿಹೋಯಿತು. ಹಾಗೂ ಅವನಿಗೆ ಮಹಾಕ್ರೋಧವೂ ಉಂಟಾಯಿತು. ಸಾಯಂಕಾಲದ ಬಿಸಿಲಿನಂತೆ ಕಾಂತಿಯಿಂದ ಕೂಡಿದ್ದ, ಕ್ರೋಧಾಭಿಭೂತನಾಗಿದ್ದ ವಾಲಿಯು ಸುಗ್ರೀವನ ಮೇಘಸದೃಶವಾದ ಗರ್ಜನೆಯನ್ನು ಕೇಳಿದೊಡನೆಯೇ-ರಾಹುಗ್ರಸ್ತನಾದ ಸೂರ್ಯನಂತೆ ಕಾಂತಿಹೀನನಾದನು. ಭಯಂಕರವಾದ ಕೋರೆಹಲ್ಲುಗಳನ್ನು ಹೊಂದಿದ್ದ ವಾಲಿಯ ಕಣ್ಣುಗಳು ಆ ಸಮಯದಲ್ಲಿ ಕೋಪದ ಕಾರಣದಿಂದಾಗಿ ಧಗ-ಧಗಿಸುವ ಬೆಂಕಿಯಂತೆಯೇ ಕಾಣುತ್ತಿದ್ದುವು. ದಂಟಿನಿಂದ ಕೂಡಿ ಮೇಲಕ್ಕೆದ್ದು ನಿಂತಿರುವ ಅರಳಿದ ಕಮಲದ ಕಾಂತಿಯಿಂದ ಕೂಡಿದ ಸರೋವರದಂತೆ ಪ್ರಕಾಶಿಸುತ್ತಿದ್ದನು.* ದುಃಸಹವಾದ ಗರ್ಜನೆಯನ್ನು ಕೇಳಿದ

---

* ಭ್ರಾತ್ಯುತ್ಪತಿತಪದ್ಮಾಭಃ ಸಮೃಣಾಲ ಇವ ಹ್ರದಃ-ಇದು ಈ ಶ್ಲೋಕದ ಉತ್ತರಾರ್ಧ ಉತ್ಪತಿತಪದ್ಮಾಭಃ-ಎಂಬ ಪದಕ್ಕೆ ವ್ಯಾಖ್ಯಾನಕಾರರು ಪರಸ್ಪರವಿರೋಧವಾಗಿಯೇ ವ್ಯಾಖ್ಯಾನಿಸಿದ್ದಾರೆ. (೧) ಉತ್ಪತಿತಪದ್ಮಃ-ವಿಕಸಿತರಕ್ತೋತ್ಪಲಃ-ಅರಳಿದ ಕೆಂಪು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ವಾಲಿಯು, ಹೆಜ್ಜೆಗಳ ಸಂಘಟ್ಟನೆಗಳಿಂದ ಭೂಮಿಯನ್ನೇ ಭೇದಿಸಿಬಿಡುವನೋ ಎಂಬಂತೆ ವೇಗದಿಂದ ಹೊರಟನು.

ಭ್ರಾಂತಳೂ ಭಯಗ್ರಸ್ತಳೂ ಆಗಿದ್ದ ತಾರೆಯು ಸ್ನೇಹದ ಕಾರಣದಿಂದ ಸೌಹಾರ್ದವನ್ನು ಪ್ರಕಟಪಡಿಸುತ್ತಾ, ಅಂತಃಪುರದಿಂದ ವೇಗವಾಗಿ ಹೊರಟ ವಾಲಿಯನ್ನು ಆಲಿಂಗಿಸಿಕೊಂಡು ಪರಿಣಾಮದಲ್ಲಿ ಹಿತಕರವಾಗುವ ಈ ಮಾತನ್ನು ಹೇಳಿದಳು :

" ವೀರನೇ! ಹಾಸಿಗೆಯಿಂದ ಮೇಲೆದ್ದವನು ಹಿಂದಿನ ರಾತ್ರಿಯಲ್ಲಿ ಧರಿಸಿ ಉಪಭೋಗಿಸಿದ ಪುಷ್ಪಹಾರವನ್ನು ವಿಸರ್ಜಿಸುವಂತೆ–ನದಿಯ ಪ್ರವಾಹದಂತೆ ಇದ್ದಕ್ಕಿದ್ದಂತೆಯೇ ಆವಿರ್ಭವಿಸಿರುವ ನಿನ್ನ ಈ ಕೋಪವನ್ನು ಪರಿತ್ಯಜಿಸು. ಬೆಳಗಾಗುತ್ತಲೇ ಸುಗ್ರೀವನೊಡನೆ ಯುದ್ಧಮಾಡು. ನಿನ್ನ ಶತ್ರುಗಳೂ ಬಹುಸಂಖ್ಯೆಯಲ್ಲಿರುವುದಿಲ್ಲ. ಮೇಲಾಗಿ ನೀನು ಸತ್ತ್ವಹೀನನೂ ಅಲ್ಲ. ಆದರೆ ನೀನು ಈಗಲೇ ಸುಗ್ರೀವನೊಡನೆ ಯುದ್ಧಕ್ಕೆ ಹೊರಡುವುದು ನನಗೆ ಸರಿಯಾಗಿ ಕಾಣುತ್ತಿಲ್ಲ. ನಾನು ನಿನ್ನನ್ನು ಏಕೆ ತಡೆಯುತ್ತಿರುವೆನೆಂಬುದಕ್ಕೆ ಕಾರಣವನ್ನು ಹೇಳುವೆನು; ಕೇಳು. ಈ ಹಿಂದೆ ಸುಗ್ರೀವನು ಕ್ರೋಧಾಭಿಭೂತನಾಗಿ ನಿನ್ನನ್ನು ಯುದ್ಧಕ್ಕೆ ಆಹ್ವಾನಿಸಿದ್ದನು. ಆ ಸಮಯದಲ್ಲಿ ನೀನು ಇಲ್ಲಿಂದ ಹೊರಟೆ. ನಾನೇನೂ ಆಗ ನಿನ್ನನ್ನು ತಡೆಯ

---

ಕಮಲ. ಉತ್ಪತಿತ ಪದ್ಮಾಭಃ ಉತ್ಪತಿತಾ ಸ್ವೋಪರಿ ಪ್ರಸೃತಾ ತನ್ನ ಮೇಲೆ ಉದುರಿದ ಪದ್ಮಗಳ ಕಾಂತಿಯು ಯಾವುದರಲ್ಲಿದೆಯೋ ಅದು = ಸರೋವರ. (೨) ಉತ್ಪತಿತೈಃ ಉದ್ಧೃತೈಃ ಪದ್ಮೈಃ ಉತ್ಪತಿತಾ ನಷ್ಟಾ ಪದ್ಮಕೃತಶೋಭಾ :–ಕಮಲದಿಂದ ಉಂಟಾದ ಶೋಭೆಯಿಂದ ನಷ್ಟವಾದ ಸರೋವರ. (೩) ಉತ್ಪತಿತಾ ವಿನಷ್ಟಾ, ಪದ್ಮಾಭಾ ಪದ್ಮವಿನಾಶೇನ ಪದ್ಮಹೇತುಕಾ ದೀಪ್ತಿಃ ಯಸ್ಯ ಸಃ = ಕಮಲದ ವಿನಾಶದಿಂದ ಕಮಲದ ಇರುವಿಕೆಯ ಕಾರಣದಿಂದ ನಷ್ಟವಾದ ಪ್ರಕಾಶವು ಯಾವುದೋ ಅದು ಸರೋವರ. ಸಮೃಣಾಲಃ ಪದ್ಮನಾಲಮಾತ್ರವಿಶಿಷ್ಟಪ್ರದೇಶವ. ಕೇವಲ ಕಮಲದ ಕಾಂಡದಿಂದ ಕೂಡಿದ ಸರೋವರದಂತೆ–ಹೀಗೆಲ್ಲಾ ಅರ್ಥಮಾಡಿರುತ್ತಾರೆ. ಉತ್ಪತಿತಃ ಎಂಬುದಕ್ಕೆ ಮೇಲಕ್ಕೆ ಹಾರಿದ; ಮೇಲಕ್ಕೆ ಬಂದ–ಎಂಬುದು ನಿಘಂಟುಕಾರರು ಕೊಟ್ಟಿರುವ ಅರ್ಥ. ನಷ್ಟವಾದ ಎಂಬ ಅರ್ಥವಿಲ್ಲ. ಸಮೃಣಾಲಃ ಕಾಂಡಸಹಿತವಾದ. ಉತ್ಪತಿತಃ = ಮೇಲಕ್ಕೆ ಬಂದ ಪದ್ಮದ ಕಾಂತಿಯಿಂದ ಕೂಡಿರುವ ಸರೋವರದಂತೆ ವಾಲಿಯು ಪ್ರಕಾಶಿಸುತ್ತಿದ್ದನು ಎಂದು ಸರಸವಾದ ಅರ್ಥವಾಗುತ್ತದೆ. ಆದರೆ ಹಿಂದಿನ ಶ್ಲೋಕದಲ್ಲಿ ವಾಲಿಯು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಲಿಲ್ಲ. ನೀನವನನ್ನು ಪರಾಜಯಗೊಳಿಸಿದೆ. ನಿನ್ನಿಂದ ಪೆಟ್ಟುತಿಂದ ಅವನು ದಿಕ್ಕಾಪಾಲಾಗಿ ಓಡಿಹೋದನು. ನಿನ್ನಿಂದ ಪರಾಜಿತನಾಗಿ ಪೆಟ್ಟನ್ನೂ ತಿಂದಿದ್ದ ಅದೇ ಸುಗ್ರೀವನೀಗ ಪುನಃ ಇಲ್ಲಿಗೆ ಬಂದು ನಿನ್ನನ್ನು ಯುದ್ಧಕ್ಕೆ ಆಹ್ವಾನಿಸುತ್ತಿರುವನು. ಇದು ನನಗೆ ಸಂದೇಹಕ್ಕೆಡೆಮಾಡಿ ಕೊಟ್ಟಿದೆ. ಅವನ ದರ್ಪ, ನಿನ್ನನ್ನು ಯುದ್ಧಕ್ಕೆ ಸೆಳೆಯುವ ಸಲುವಾಗಿಯೇ ಅವನು ಮಾಡುತ್ತಿರುವ ಪ್ರಯತ್ನ, ಗರ್ಜಿಸುತ್ತಿರುವ ರೀತಿ ಮತ್ತು ಕ್ಷಣ-ಕ್ಷಣಕ್ಕೂ ಈ ಗರ್ಜನೆಯು ವೃದ್ಧಿಸುತ್ತಿರುವುದು-ಇವುಗಳನ್ನು ಗಮನಿಸಿದರೆ ಅವನ ಈ ಅಸಹಜವಾದ ಚರ್ಯೆಗೆ ಕಾರಣವು ಅಲ್ಪವಲ್ಲ. ಒಮ್ಮೆ ಪರಾಜಿತನಾದರೂ ಪುನಃ ಆಗಮಿಸಿರುವ ಸುಗ್ರೀವನು ನಿಸ್ಸಹಾಯಕನಾಗಿರುವನೆಂದು ನಾನೆಂದೂ ಭಾವಿಸುವುದಿಲ್ಲ. ಈ ಸಮಯದಲ್ಲವನು ಬಲಿಷ್ಠನಾದವನೊಬ್ಬನನ್ನು ಸಹಾಯಕ್ಕೆ ಕರೆತಂದಿರಲೇಬೇಕು. ಅಂತಹವನ ಒತ್ತಾಸೆಯಿಂದಲೇ ಸುಗ್ರೀವನು ಹೀಗೆ ಗರ್ಜನೆಯನ್ನು ಮಾಡುತ್ತಿದ್ದಾನೆ. ವಾನರಶ್ರೇಷ್ಠನಾದ ಸುಗ್ರೀವನು ಸ್ವಭಾವದಿಂದಲೇ ಮಹಾನಿಪುಣನೂ ಬುದ್ಧಿವಂತನೂ ಆಗಿರುವನು. ಸತ್ತ್ವವನ್ನು ಸಂಪೂರ್ಣವಾಗಿ ಪರೀಕ್ಷಿಸದೇ ಯಾರೊಡನೆಯೂ ಸಖ್ಯವನ್ನು ಬೆಳಿಸತಕ್ಕವನಲ್ಲ. ಸುಗ್ರೀವನ ಸ್ನೇಹಿತರ ವಿಷಯವಾಗಿ ಹೇಳುತ್ತಿದ್ದ ಅಂಗದನ ಮಾತನ್ನು ನಾನು ಈ ಹಿಂದೆಯೇ ಕೇಳಿದ್ದೆನು. ಆದುದರಿಂದಲೇ ಈಗ ನಾನು ನಿನಗೆ ಹಿತಕರವಾದ ಈ ಮಾತನ್ನು ಹೇಳುತ್ತಿರುವೆನು.

ಕುಮಾರನಾದ ಅಂಗದನೊಮ್ಮೆ ಅರಣ್ಯಕ್ಕೆ ಹೋಗಿದ್ದನು. ಅಲ್ಲಿ ನಮ್ಮ ಗೂಢಚಾರರು ಅವನಿಗೊಂದು ಸಮಾಚಾರವನ್ನು ಹೇಳಿದರು. ಅದನ್ನೇ ಅವನು ಇಲ್ಲಿಗೆ ಬಂದು ನನಗೂ ಹೇಳಿದನು. ಆ ರಹಸ್ಯವನ್ನೇ ಈಗ ನಿನಗೆ ಹೇಳುವೆನು ; ಕೇಳು.

---

ನಿಷ್ಪ್ರಭನಾದನೆಂದು ಹೇಳಿ ಈ ಶ್ಲೋಕದಲ್ಲಿ ಕಮಲದ ರಾಶಿಯಿಂದ ಕೂಡಿರುವ ಸರೋವರದಂತೆ ಕಾಂತಿಮಂತನಾಗಿದ್ದನು ಎಂದು ಅರ್ಥಮಾಡಿದರೆ ವಿರೋಧವಾಗುವುದು-ಎಂದು ಬಗೆದ ವ್ಯಾಖ್ಯಾನಕಾರರು ಉತ್ಪತಿತ ಶಬ್ದಕ್ಕೆ ನಷ್ಟವಾದ ಎಂದು ಅರ್ಥಮಾಡಿರುತ್ತಾರೆ.. ದೀಪ್ತಾಗ್ನಿಸನ್ನಿಭಃ ಅಥವಾ ದೀಪ್ತಾಗ್ನಿಲೋಚನಃ ಎಂದು ವಾಲಿಗೆ ವಿಶೇಷಣವನ್ನು ಹೇಳಿರುವುದರಿಂದ ವಿಕಸಿತವಾದ ಕಮಲದ ಕಾಂತಿಯಿಂದ ಕೂಡಿದ ಸರೋವರದಂತಿದ್ದನು-ಎಂಬ ಉಪಮೆಯೇ ಸಾಧುವಾಗಿ ಕಾಣುತ್ತದೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಇಕ್ಷ್ವಾಕುಗಳ ವಂಶದಲ್ಲಿ ಹುಟ್ಟಿರುವ, ಮಹಾಶೂರರಾದ, ಯುದ್ಧದಲ್ಲಿ ಅಪರಾಜಿತರಾದ, ಅಯೋಧ್ಯಾಧಿಪತಿಯಾಗಿದ್ದ ದಶರಥನ ಮಕ್ಕಳಾದ ರಾಮ-ಲಕ್ಷ್ಮಣರೆಂಬುವರು ಕಾರಣಾಂತರದಿಂದ ಕಾಡಿಗೆ ಬಂದಿರುವರು. ಎದುರಿಸಲು ಅಸಾಧ್ಯರಾದ ಆ ರಾಜಕುಮಾರರು ಸುಗ್ರೀವನಿಗೆ ಪ್ರಿಯವನ್ನುಂಟುಮಾಡುವ ಅಪೇಕ್ಷೆಯಿಂದಲೇ ಆತನ ಬಳಿಗೆ ಬಂದಿರುವರು. ಯುದ್ಧದಲ್ಲಿ ಅತಿಕುಶಲನೆಂದು ವಿಖ್ಯಾತನಾಗಿರುವ ಶ್ರೀರಾಮನು ನಿನ್ನ ತಮ್ಮನಿಗೆ ಸಹಾಯಕನು. ರಾಮನು ಎಂತಹವನೆಂಬುದನ್ನು ಹೇಳುವೆನು; ಕೇಳು.

ರಾಮಃ ಪರಬಲಾಮರ್ದೀ ಯುಗಾನ್ತಾಗ್ನಿರಿವೋತ್ಥಿತಃ ।
ನಿಹಾಸವೃಕ್ಷಃ ಸಾಧೂನಾಮಾಪನ್ನಾನಾಂ ಪರಾ ಗತಿಃ ॥೧೯॥

ಆರ್ತಾನಾಂ ಸಂಶ್ರಯಶ್ಚೈವ ಯಶಸಶ್ಚೈಕಭಾಜನಮ್ ।
ಜ್ಞಾನವಿಜ್ಞಾನಸಂಪನ್ನೋ ನಿದೇಶೇ ನಿರತಃ ಪಿತುಃ ॥೨೦॥

ರಾಮನು ಶತ್ರುಸೈನ್ಯವನ್ನು ಮರ್ದನಮಾಡತಕ್ಕವನು. ಶತ್ರುಗಳ ವಿಷಯದಲ್ಲಿ ಪ್ರಳಯಕಾಲದಲ್ಲಿ ಪ್ರಾದುರ್ಭೂತನಾಗುವ ಅಗ್ನಿಯಂತೆಯೇ ಇರತಕ್ಕವನು. ಸಾಧುಗಳ ವಿಷಯದಲ್ಲಿ ತಂಪಾದ ನೆರಳಿನಿಂದಲೂ ಫಲಗಳಿಂದಲೂ ಕೂಡಿರುವ ವೃಕ್ಷದಂತಿರತಕ್ಕವನು. ಆಪತ್ತಿನಲ್ಲಿರುವವರಿಗೆ ಪರಮಗತಿಯು. ಆರ್ತರಾದವರ ದುಃಖವನ್ನು ಹೋಗಲಾಡಿಸಿ ಆಶ್ರಯವನ್ನು ನೀಡತಕ್ಕವನು. ಅಪಾರವಾದ ಕೀರ್ತಿಗೆ ಪಾತ್ರನಾಗಿರತಕ್ಕ ಏಕೈಕ ವ್ಯಕ್ತಿಯು. ಶಾಸ್ತ್ರಜ್ಞಾನ-ಅಧ್ಯಾತ್ಮಜ್ಞಾನಗಳೆರಡರಲ್ಲಿಯೂ ಸಂಪನ್ನನಾದವನು. ಇಂತಹ ಸಕಲಗುಣಸಂಪನ್ನನಾದ ಶ್ರೀರಾಮನು ತಂದೆಯ ಆಜ್ಞೆಯನ್ನು ಪಾಲಿಸುವುದರಲ್ಲಿಯೇ ನಿರತನಾಗಿ ಕಾಡಿಗೆ ಬಂದಿರುವನು.

ಹಿಮವಂತನು ಸಕಲಧಾತುಗಳಿಗೂ ( ಲೋಹಗಳಿಗೂ ) ಖನಿಯಾಗಿರುವಂತೆ – ಶ್ರೀರಾಮನು ಸಕಲಸದ್ಗುಣಗಳಿಗೂ ಖನಿಪ್ರಾಯನಾಗಿದ್ದಾನೆ. ಮಹಾತ್ಮನಾದ, ಜಯಿಸಲು ಅಶಕ್ಯನಾದ, ಅಪ್ರಮೇಯನಾದ, ಯುದ್ಧಪ್ರಕ್ರಿಯೆಯಲ್ಲಿ ಅತಿಕುಶಲನಾದ ಅಂತಹವನೊಡನೆ ವಿರೋಧವನ್ನು ಕಟ್ಟಿಕೊಳ್ಳುವುದು ನಿನಗೆ ಉಚಿತವಾಗಿ ಕಾಣುವುದಿಲ್ಲ. ನಿನ್ನ ವಿಷಯದಲ್ಲಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.
ದೋಷಾರೋಪಣೆ ಮಾಡುವ ಇಚ್ಛೆಯೂ ನನಗಿಲ್ಲ. ಆದರೂ ನನಗೆ ತಿಳಿದಿರುವ ವಿಷಯವನ್ನು ಹೇಳುತ್ತೇನೆ. ನಿನಗೆ ಹಿತಕರವಾಗುವ ವಿಷಯವನ್ನೇ ಹೇಳುತ್ತೇನೆ. ನಾನು ಹೇಳುವುದನ್ನು ಮನಸ್ಸಿಟ್ಟು ಕೇಳು. ನಾನು ಹೇಳಿದಂತೆ ಮಾಡು.

ಪ್ರಭುವೇ! ಸುಗ್ರೀವನನ್ನು ಈ ಕೂಡಲೇ ಯುವರಾಜನನ್ನಾಗಿ ನಿಯಮಿಸು. ಅವನಿಗೆ ಯುವರಾಜಪದವಿಯಲ್ಲಿ ಪಟ್ಟಾಭಿಷೇಕಮಾಡು. ತಮ್ಮನೊಡನೆ ದ್ವೇಷವನ್ನು ಕಟ್ಟಿಕೊಳ್ಳಬೇಡ. ರಾಮನೊಡನೆಯೂ ಮೈತ್ರಿಯನ್ನು ಬೆಳೆಸುವುದು ಉಚಿತವೆಂದು ನಾನು ಭಾವಿಸುತ್ತೇನೆ. ಸುಗ್ರೀವನ ಮೇಲಿನ ವೈರವನ್ನು ಪೂರ್ಣವಾಗಿ ತ್ಯಜಿಸಿ ಅವನೊಡನೆ ಮೈತ್ರಿಯನ್ನು ಬೆಳೆಸುವುದು ನಿನಗೆ ಯೋಗ್ಯವಾಗಿದೆ. ನಿನ್ನ ತಮ್ಮನಾದ ಸುಗ್ರೀವನು ಲಾಲನೆ-ಪಾಲನೆಗಳಿಗೆ ಯೋಗ್ಯನಾಗಿದ್ದಾನೆ. ಅವನು ಕಿಷ್ಕಿಂಧೆಯಲ್ಲಿಯೇ ಇರಲಿ; ಋಷ್ಯಮೂಕದಲ್ಲಿಯೇ ಇರಲಿ – ಸರ್ವಥಾ ನಿನ್ನ ಬಂಧುವೇ ಆಗಿದ್ದಾನೆ. ಸಹೋದರನಿಗಿಂತಲೂ ಹತ್ತಿರದ ಬಂಧುವನ್ನು ನಾನು ಈ ಪ್ರಪಂಚದಲ್ಲಿ ಕಂಡೇ ಇಲ್ಲ. ಆದುದರಿಂದ ಯುವರಾಜಪದವಿಯ ಪ್ರದಾನದಿಂದಲೂ, ಗೌರವಿಸುವುದರಿಂದಲೂ ಮತ್ತು ಸತ್ಕಾರದ್ದಿಂದಲೂ ನೀನು ಸುಗ್ರೀವನನ್ನು ಎರಡನೆಯವನನ್ನಾಗಿ (ಯುವರಾಜನನ್ನಾಗಿ) ಮಾಡಿಕೋ. ಅವನಾದರೂ ನಿನ್ನ ಮೇಲಿನ ವೈರವನ್ನು ಪರಿತ್ಯಜಿಸಿ ನಿನ್ನ ಪಕ್ಕದಲ್ಲಿ ನಿಲ್ಲಲಿ. ವಿಪುಲಗ್ರೀವನಾದ ಸುಗ್ರೀವನು ನಿನಗೆ ಯಾವಾಗಲೂ ಬಂಧುವೇ ಆಗಿದ್ದಾನೆ. ಈ ಸಮಯದಲ್ಲಿ ತಮ್ಮನೊಡನೆ ಸೌಹಾರ್ದವನ್ನು ಬೆಳೆಸುವುದರಿಂದ ಮಾತ್ರವೇ ಉಳಿದುಕೊಳ್ಳುವೆ. ಜೀವಂತನಾಗಿ ಉಳಿಯಲು ಬೇರೆಯ ಮಾರ್ಗವೇ ಇಲ್ಲ. ನೀನು ನನಗೆ ಪ್ರಿಯವಾಗುವುದನ್ನು ಮಾಡುವ ಇಚ್ಛೆಯುಳ್ಳವನಾಗಿದ್ದರೆ–ನಾನು ನಿನಗೆ ಹಿತಕರಳೆಂಬುದನ್ನು ನೀನು ತಿಳಿದುಕೊಂಡಿದ್ದರೆ-ಪ್ರಯತ್ನಪೂರ್ವಕವಾಗಿ ಯಾಚಿಸುತ್ತಿರುವ ನನ್ನ ಈ ಮಾತನ್ನು ನಡೆಸಿಕೊಡು. ಪಥ್ಯವಾದ ಮತ್ತು ಹಿತಕರವಾದ ನನ್ನ ಮಾತನ್ನು ಕೇಳು. ನಾನು ಹೇಳಿದುದಕ್ಕೆ ಕೋಪಿಸಿಕೊಳ್ಳುವುದು ಯುಕ್ತವಲ್ಲ. ಇಂದ್ರನ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ಕೂಡಿರುವ ದಶರಥನ ಮಗನಾದ ಶ್ರೀರಾಮನೊಡನೆ ಕಲಹಮಾಡುವುದೂ ಸರಿಯಲ್ಲ."

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಆ ಸಮಯದಲ್ಲಿ ತಾರೆಯು ವಾಲಿಗೆ ಹಿತಕರವೂ ಭವಿಷ್ಯದಲ್ಲಿ ಶುಭಕರವೂ ಆದ ಮಾತುಗಳನ್ನೇ ಹೇಳಿದಳು. ಆದರೆ ವಿನಾಶಕಾಲದಲ್ಲಿ ಮೃತ್ಯುಮುಖದಲ್ಲಿರುವವನಿಗೆ ವೈದ್ಯರು ಹೇಳುವ ಪಥ್ಯವು ರುಚಿಸಲಾರದಂತೆ-ತಾರೆಯ ಹಿತಕರವಾದ ಮಾತುಗಳು ವಾಲಿಗೆ ರುಚಿಸಲಿಲ್ಲ.

೧೫ನೆಯ ಸರ್ಗವು ಮುಗಿಯಿತು.

ಕಿಷ್ಕಿಂಧಾಕಾಂಡ ೧೬ನೆಯ ಸರ್ಗ

## ವಾಲಿಯು ತಾರೆಯ ಮಾತನ್ನು ತಿರಸ್ಕರಿಸಿ ಸುಗ್ರೀವನೊಡನೆ ಯುದ್ಧಕ್ಕೆ ಹೋದುದು : ಶ್ರೀರಾಮನ ಬಾಣಾಘಾತದಿಂದ ಗಾಯಗೊಂಡು ಕೆಳಕ್ಕೆ ಬಿದ್ದುದು

ತಾಮೇವಂ ಬ್ರುವತೀಂ ತಾರಾಂ ತಾರಾಧಿಪನಿಭಾನನಾಮ್ ।
ವಾಲೀ ನಿರ್ಭರ್ತ್ಸಯಾಮಾಸ ವಚನಂ ಚೇದಮಬ್ರವೀತ್ ॥೧॥

ರಾಮ-ಸುಗ್ರೀವರೊಡನೆ ಸಖ್ಯಮಾಡಿಕೊಳ್ಳುವಂತೆ ಹೇಳುತ್ತಿರುವ ಚಂದ್ರವದನೆಯಾದ ತಾರೆಯನ್ನು ತಿರಸ್ಕರಿಸುತ್ತಾ ವಾಲಿಯು ಹೇಳಿದನು :

" ಚಾರುಮುಖಿಯೇ ! ಗರ್ಜಿಸುತ್ತಿರುವ ನನ್ನ ತಮ್ಮನ-ಅದರಲ್ಲಿಯೂ ವಿಶೇಷವಾಗಿ ನನ್ನ ಶತ್ರುವಿನ-ಉದ್ರೇಕಗೊಳಿಸುವಂತಹ ರಣಕಹಳೆಯನ್ನು ನಾನೇಕೆ ಸಹಿಸಿಕೊಂಡು ಕುಳಿತಿರಲಿ ?

ಅಧರ್ಷಿತಾನಾಂ ಶೂರಾಣಾಂ ಸಮರೇಷ್ವನಿವರ್ತಿನಾಮ್ ।
ಧರ್ಷಣಾಮರ್ಷಣಂ ಭೀರು ಮರಣಾದತಿರಿಚ್ಯತೇ ॥೩॥

ಭಯಶೀಲಳೇ ! ಯಾರಿಂದಲೂ ಎದುರಿಸಲು ಸಾಧ್ಯವಿಲ್ಲದ ಮತ್ತು ಯುದ್ಧದಿಂದ ಯಾವಾಗಲೂ ಜಯಗಳಿಸದೇ ಹಿಂದಿರುಗದಿರುವ ಶೂರರಿಗೆ ಶತ್ರುಗಳು ಮಾಡುವ ತಿರಸ್ಕಾರವನ್ನು ಸಹಿಸಿಕೊಳ್ಳುವುದೆಂದರೆ ಅದು ಮರಣಕ್ಕಿಂತಲೂ ಹೆಚ್ಚಿನದಾಗುತ್ತದೆ. ಯುದ್ಧದಲ್ಲಿ ನನ್ನೊಡನೆ ಸೆಣೆಸಾಡಲು ಬಂದಿರುವ ಹೀನವಾದ ಕುತ್ತಿಗೆಯಿಂದ ಕೂಡಿರುವ ಸುಗ್ರೀವನ ಗರ್ವಯುಕ್ತವಾದ ಗರ್ಜನೆಯನ್ನು ಸಹಿಸಿಕೊಳ್ಳಲು ನಾನು ಖಂಡಿತವಾಗಿಯೂ ಸಮರ್ಥನಲ್ಲ.*

* ಈ ಶ್ಲೋಕದಲ್ಲಿ ಸುಗ್ರೀವಸ್ಯ ಚ ಸಂರಮ್ಭಂ ಹೀನಗ್ರೀವಸ್ಯ ಗರ್ಜಿತಮ್ ॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ನನ್ನ ವಿಷಯದಲ್ಲಿ ರಾಘವನು ಏನಾದರೂ ಮಾಡಿಬಿಡುವನೆಂದು ನೀನು ವಿಷಾದಿಸಬೇಕಾಗಿಲ್ಲ. ಧರ್ಮಜ್ಞನೂ ಕೃತಜ್ಞನೂ ಆಗಿರುವ ಶ್ರೀರಾಮನು ಪಾಪಕಾರ್ಯವನ್ನೇಕೆ ಮಾಡುವನು ? ಅಣ್ಣ-ತಮ್ಮಂದಿರ ಮಧ್ಯದಲ್ಲಿ ಅವನೇಕೆ ಪ್ರವೇಶಿಸುವನು ? ಆದುದರಿಂದ ನೀನಿನ್ನು ಹಿಂದಿರುಗು. ನಾನಂತೂ ಯುದ್ಧಕ್ಕೆ ಹೋಗಿಯೇ ತೀರುತ್ತೇನೆ " – ಎನ್ನುತ್ತಾ ವಾಲಿಯು ಮುನ್ನಡೆದನು. ಆದರೂ ತಾರೆಯು ಅವನನ್ನು ಸಮಾಧಾನಗೊಳಿಸುತ್ತಾ ಜೊತೆಯಲ್ಲಿಯೇ ಹೋಗುತ್ತಿದ್ದಳು.

ಇದನ್ನು ಗಮನಿಸಿದ ವಾಲಿಯು ಪುನಃ ತಾರೆಗೆ ಹೇಳಿದನು :

" ಪ್ರಿಯೇ ! ಪುನಃ ಪುನಃ ನನ್ನನ್ನೇಕೆ ಅನುಸರಿಸಿಕೊಂಡು ಬರುತ್ತಿರುವೆ ? ಸ್ತ್ರೀಯರೊಡನೆ ನೀನೀಗಲೇ ಹಿಂದಿರುಗಿ ಹೋಗು. ನೀನು ನನಗೆ ಸುಹೃದಳಂತೆ ಹಿತೋಪದೇಶವನ್ನು ಮಾಡಿರುವೆ. ಭಕ್ತಳಾಗಿ ಅಪಾರವಾದ ಸೇವೆಯನ್ನು ಸಲ್ಲಿಸಿರುವೆ. ಮನಸ್ಸಿನಲ್ಲುಂಟಾಗಿರುವ ಭಯವನ್ನು ತ್ಯಜಿಸು. ನಾನೀಗಲೇ ಹೋಗಿ ಸುಗ್ರೀವನೊಡನೆ ಯುದ್ಧಮಾಡುತ್ತೇನೆ. ಅವನ ದರ್ಪವನ್ನು ಮಾತ್ರ ತೊಡೆದುಹಾಕುತ್ತೇನೆ. ಅವನು ಪರಮಶತ್ರುವಾಗಿದ್ದರೂ ಸಹೋದರನಾಗಿರುವುದರಿಂದ ಅವನ ಪ್ರಾಣಗಳನ್ನು ತೆಗೆಯುವುದಿಲ್ಲ. ಜೀವಸಹಿತವಾಗಿ ಬಿಟ್ಟುಬಿಡುತ್ತೇನೆ. ನನ್ನೊಡನೆ ಯುದ್ಧಮಾಡಲು ಎದುರಾಗಿ ನಿಲ್ಲುವ ಸುಗ್ರೀವನಿಗೆ ಯಾವ ಯುದ್ಧವು

---

ಎಂಬುದಾಗಿ ಉತ್ತರಾರ್ಥವಿದೆ. ಸುಗ್ರೀವನೆಂದು ಹೆಸರಿದ್ದಮಾತ್ರಕ್ಕೆ ಅವನು ಹೀನಗ್ರೀವನಾಗಕೂಡದೆಂದೇನೂ ಇಲ್ಲ. ಸುಂದರಿ ಎಂಬ ಹೆಸರಿದ್ದಮಾತ್ರಕ್ಕೆ ಅವಳು ಕಡು ಚೆಲುವೆಯೆಂದು ಭಾವಿಸಬೇಕಾಗಿಲ್ಲ. ವಾಲಿಯು ಸುಗ್ರೀವನನ್ನು ನಿಂದಿಸುವಾಗ ಹೀನಗ್ರೀವನೆಂದು ನಿಂದಿಸುತ್ತಾನೆ. ಇದು ವಿರೋಧಾರ್ಥಪದಪ್ರಯೋಗ ಎಂದು ವಾಲಿಗೆ ಅನ್ನಿಸಿರಲಿಕ್ಕಿಲ್ಲ. ಹಿಂದೆ ಶೂರ್ಪಣಖೆಯು ಸೀತೆಯನ್ನು ಕರಾಳಿ ಎಂದು ಹೇಳಲಿಲ್ಲವೇ ? ಇಂತಹ ಸಂದರ್ಭದಲ್ಲಿ ಕೇವಲ ನಿಂದೆಯ ಅರ್ಥದಲ್ಲಿ ಇದನ್ನು ತೆಗೆದುಕೊಳ್ಳಬೇಕೇ ಹೊರತು ವಿರೋಧಾರ್ಥ ಬರುವುದೆಂಬ ಅಭಿಪ್ರಾಯದಿಂದ ಪದಕ್ಕೆ ವಿಶೇಷಾರ್ಥ ಕಲ್ಪನೆಮಾಡುವುದು ಅಷ್ಟು ಸರಿಯಲ್ಲ. ಆದರೂ ವಿದ್ವಾಂಸರಾದ ವ್ಯಾಖ್ಯಾನಕಾರರು ಹೀನಗ್ರೀವ ಎಂಬುದಕ್ಕೆ ವಿಶೇಷಾರ್ಥವನ್ನು ಕಲ್ಪಿಸಿರುತ್ತಾರೆ. ಹೀನಗ್ರೀವಸ್ಯ, ಎಂಬ ಹಿ-ಇನಗ್ರೀವಸ್ಯ ಎಂದು ಪದವಿಭಾಗಮಾಡಿ ಇನಗ್ರೀವಸ್ಯ–ಎಂಬ ಶಬ್ದಕ್ಕೆ ಇನಾ-ಶ್ರೇಷ್ಠಾ-ವಿಪುಲೇತ್ಯರ್ಥಃ ಗ್ರೀವಾ ಯಸ್ಯ ಸಃ ಶ್ರೇಷ್ಠವಾದ (ವಿಶಾಲವಾದ)

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಇಷ್ಟವೋ ಆ ಯುದ್ಧವನ್ನೇ ಮಾಡುತ್ತೇನೆ. ವೃಕ್ಷಗಳಿಂದಲೂ ಮುಷ್ಟಿಗಳಿಂದಲೂ ಪೆಟ್ಟುತಿನ್ನುವ ಅವನು ಸ್ವಲ್ಪಹೊತ್ತಿನಲ್ಲಿಯೇ ಓಡಿ ಹೋಗುತ್ತಾನೆ. ನನ್ನ ದರ್ಪವನ್ನೂ ಮತ್ತು ಸಾಹಸಪ್ರಯತ್ನವನ್ನೂ ದುರಾತ್ಮನಾದ ಸುಗ್ರೀವನು ಖಂಡಿತವಾಗಿಯೂ ಸಹಿಸಿಕೊಳ್ಳಲಾರನು. ಪ್ರಿಯಳೇ ! ನೀನು ನನಗೆ ಬುದ್ಧಿಸಹಾಯವನ್ನು ಮಾಡಿರುವೆ. ( ಸಮಯ ದಲ್ಲಿ ನನಗೆ ಹಿತೋಪದೇಶವನ್ನು ಮಾಡಿರುವೆ. ) ಅಪಾರವಾದ ಸೌಹಾರ್ದ ವನ್ನೂ ತೋರಿರುವೆ. ನನ್ನ ಪ್ರಾಣಗಳ ಮೇಲೆ ಆಣೆಯಿಟ್ಟು ಹೇಳುತ್ತೇನೆ. ಗೆಳತಿಯರೊಡನೆ ಬೇಗ ಅರಮನೆಗೆ ಹಿಂದಿರುಗು. ನಾನು ಆ ನನ್ನ ತಮ್ಮ ನನ್ನು ರಣರಂಗದಲ್ಲಿ ಜಯಿಸಿ ಹಿಂದಿರುಗುತ್ತೇನೆ."

ಪ್ರಿಯವಾದ ಮಾತುಗಳನ್ನಾಡುವ ಮತ್ತು ಅತಿಕುಶಲೆಯಾದ ತಾರೆಯು–ಹೀಗೆ ಹೇಳಿದ ವಾಲಿಯನ್ನು ಆಲಿಂಗಿಸಿಕೊಂಡು ಕೇಳಿಯೂ ಕೇಳಿಸದಂತೆ ರೋದನಮಾಡುತ್ತಾ ಪತಿಗೆ ಪ್ರದಕ್ಷಿಣೆಯನ್ನು ಮಾಡಿದಳು. ಮಂತ್ರವಿದಳಾದ ತಾರೆಯು ಪತಿಗೆ ವಿಜಯವನ್ನು ಆಶಿಸಿ ಸ್ವಸ್ತಿವಾಚನವನ್ನು ಮಾಡಿ ಕಳುಹಿಸಿಕೊಟ್ಟು ಶೋಕದಿಂದ ಭ್ರಾಂತಳಾಗಿ ಸಖಿಯರೊಡನೆ ಅಂತಃಪುರವನ್ನು ಸೇರಿದಳು. ಆನಂತರ ಕ್ರುದ್ಧನಾಗಿದ್ದ ವಾಲಿಯು ಮಹಾಸರ್ಪವು ದೀರ್ಘವಾಗಿ ಬುಸುಗುಟ್ಟುವಂತೆ–ನಿಟ್ಟುಸಿರುಬಿಡುತ್ತಾ ಶತ್ರುವನ್ನು ನೋಡುವ ಬಯಕೆಯಿಂದ ಸುತ್ತಲೂ ನೋಡಿದನು. ಕವಚ ವನ್ನು ಧರಿಸಿ ಸೊಂಟಪಟ್ಟಿಯನ್ನು ಬಿಗಿದುಕೊಂಡು ದೃಢವಾಗಿ ನಿಂತಿದ್ದ, ಅಗ್ನಿಯಂತೆಯೇ ದೇದೀಪ್ಯಮಾನನಾಗಿ ಪ್ರಕಾಶಿಸುತ್ತಿದ್ದ, ಕಂದುಹಳದೀ ಬಣ್ಣದ ಸುಗ್ರೀವನನ್ನು ಅಲ್ಲಿಯೇ ಕಂಡನು. ಪರಮಕ್ರುದ್ಧನಾಗಿದ್ದ,

---

ಕುತ್ತಿಗೆಯು ಯಾವನಿಗಿರುವುದೋ ಅವನು ಇನಗ್ರೀವ–ಎಂದು ಅರ್ಥಮಾಡಿರುತ್ತಾರೆ. ಮತ್ತೊಬ್ಬರು ಸುಗ್ರೀವಸ್ಯ ಸಂರಂಭಂ=ಸುಗ್ರೀವನ ಗರ್ವವನ್ನೂ, ಹೀನಗ್ರೀವಸ್ಯ ಗರ್ಜಿತಂ ಕುತ್ಸಿತವಾದ ಕುತ್ತಿಗೆಯನ್ನು ಹೊಂದಿರುವ ಸುಗ್ರೀವನ ಗರ್ಜನೆಯನ್ನೂ ಸಹಿಸಿಕೊಳ್ಳಲು ಸಮರ್ಥನಾಗಿಲ್ಲ ಎಂದು ಅರ್ಥಮಾಡಿದ್ದಾರೆ. ಹೀನಗ್ರೀವಸ್ಯೇತಿ ಪರು ಷೋಕ್ತಿಃ–ಹೀನಗ್ರೀವಸ್ಯ–ಎಂಬುದು ಪರುಷವಚನ ಅಥವಾ ಕಠಿನವಚನ ( ಬೈಗುಳದ ಮಾತು )–ಎಂದು ಈ ವ್ಯಾಖ್ಯಾನಕಾರರು ಹೇಳಿದ್ದಾರೆ. ಹೀನಶಬ್ದಕ್ಕೆ ಅಲ್ಪವಾದ ಎಂಬ ಅರ್ಥವೂ ಇದೆ. ಸುಗ್ರೀವನ ಕುತ್ತಿಗೆಯು ಅಲ್ಪವಾಗಿಯೂ ಇತ್ತು ಸುಂದರವಾಗಿಯೂ ಇತ್ತು ಎಂದು ಅರ್ಥಮಾಡಿದರೆ ವಿರೋಧವಿರುವುದಿಲ್ಲ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಮಹಾವೀರನಾದ, ಯುದ್ಧಮಾಡಲು ಆಹ್ವಾನಿತನಾದ ವಾಲಿಯು ಒಡನೆಯೇ ವೀರಗಚ್ಚೆಯನ್ನು ಹಾಕಿ ಮುಷ್ಟಿಯನ್ನು ಬಿಗಿದು ರಭಸದಿಂದ ಸುಗ್ರೀವನಿಗೆ ಎದುರಾಗಿ ಹೋದನು.

ಅತ್ಯಂತಕ್ರುದ್ಧನಾಗಿದ್ದ ಸುವರ್ಣಮಾಲೆಯನ್ನು ಧರಿಸಿದ್ದ ವಾಲಿಯನ್ನು ಉದ್ದೇಶಿಸಿ ಸುಗ್ರೀವನು ಕೂಡ ದೃಢವಾಗಿ ಬಿಗಿದ ಮುಷ್ಟಿಯನ್ನು ಮೇಲೆತ್ತಿಕೊಂಡು ವಾಲಿಗೆ ಎದುರಾಗಿ ಧಾವಿಸಿದನು. ಕೋಪದಿಂದ ಕೆಂಗಣ್ಣನಾಗಿದ್ದ, ಮಹಾವೇಗಯುಕ್ತನಾಗಿದ್ದ, ರಭಸದಿಂದ ಮೇಲೆರಗಲು ಬರುತ್ತಿದ್ದ ರಣಪಂಡಿತನಾದ ಸುಗ್ರೀವನಿಗೆ ವಾಲಿಯು ಹೇಳಿದನು:

"ಸುಗ್ರೀವ! ಬೆರಳುಗಳೆಲ್ಲವನ್ನೂ ಮಡಿಸಿಕೊಂಡು ಬಿಗಿಯಾಗಿ ಹಿಡಿದಿರುವ ಈ ನನ್ನ ಮುಷ್ಟಿಯನ್ನು ನೋಡು. ವೇಗವಾಗಿ ಪ್ರಹರಿಸಲ್ಪಡುವ ಈ ನನ್ನ ಬಿಗಿಮುಷ್ಟಿಯು ಕ್ಷಣಮಾತ್ರದಲ್ಲಿ ನಿನ್ನ ಪ್ರಾಣಗಳನ್ನು ಸೆಳೆದುಕೊಂಡು ಹಿಂದಿರುಗುತ್ತದೆ."

ವಾಲಿಯು ಹೀಗೆ ಹೇಳಲು ಸುಗ್ರೀವನೂ ಅದಕ್ಕೆ ಪ್ರತಿಯಾಗಿ ಹೇಳಿದನು:

ತವೈವ ಚಾಹರನ್ಪ್ರಾಣಾನ್ಮುಷ್ಟಿಃ ಪತತು ಮೂರ್ಧನಿ ॥೨೧॥

"ನನ್ನ ಈ ಮುಷ್ಟಿಯೂ ನಿನ್ನ ಪ್ರಾಣಗಳನ್ನು ಅಪಹರಿಸಲು ನಿನ್ನ ತಲೆಯ ಮೇಲೆ ಬೀಳಲಿದೆ."

ಮರುಕ್ಷಣದಲ್ಲಿಯೇ ವಾಲಿಯು ವೇಗವಾಗಿ ಬಂದು ಸುಗ್ರೀವನನ್ನು ಮುಷ್ಟಿಯಿಂದ ಪ್ರಹರಿಸಿದನು. ಮುಷ್ಟಿಪ್ರಹಾರದಿಂದ ಗಾಯಗೊಂಡ ಸುಗ್ರೀವನು – ಚಿಲುಮೆಗಳಿಂದ ಕೂಡಿರುವ ಪರ್ವತದಂತೆ – ರಕ್ತದಿಂದ ತೋಯ್ದುಹೋದನು. ಆದರೆ ಆ ಪ್ರಹಾರದಿಂದ ಸುಗ್ರೀವನು ಧೃತಿಗೆಡಲಿಲ್ಲ. ತೇಜಸ್ವಿಯಾದ ಆ ವಾನರಶ್ರೇಷ್ಠನು ಸಾಲವೃಕ್ಷವೊಂದನ್ನು ಕಿತ್ತು – ಇಂದ್ರನು ವಜ್ರಾಯುಧದಿಂದ ಮಹಾಗಿರಿಯನ್ನು ಪ್ರಹರಿಸಿದಂತೆ – ವಾಲಿಯನ್ನು ಸದೆಬಡಿದನು. ಸಮುದ್ರದಲ್ಲಿ ಪ್ರಯಾಣಿಕರ ನಾವೆಯು ಹೆಚ್ಚಾದ ಭಾರದಿಂದ ತತ್ತರಿಸಿಹೋಗುವಂತೆ–ಆ ಸಾಲವೃಕ್ಷಪ್ರಹಾರದಿಂದ ಪೀಡಿತನಾದ ವಾಲಿಯು ಬಹಳವಾಗಿ ತತ್ತರಿಸಿದನು. ವಾಲಿ-ಸುಗ್ರೀವರಿಬ್ಬರೂ ಮಹಾ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಬಲಶಾಲಿಗಳು. ಮಹಾಪರಾಕ್ರಮಿಗಳು. ಗರುಡನ ವೇಗಕ್ಕೆ ಸಮಾನವಾದ ವೇಗವುಳ್ಳವರು. ಯುದ್ಧೋನ್ಮತ್ತರಾಗಿ ಉದ್ರಿಕ್ತರಾಗಿದ್ದ ಇಬ್ಬರೂ ಬಹಳ ಭಯಂಕರವಾದ ಶರೀರಗಳನ್ನು ಹೊಂದಿದ್ದರು. ಆಕಾಶದಲ್ಲಿರುವ ಸೂರ್ಯ-ಚಂದ್ರರಂತೆಯೇ ಕಾಣುತ್ತಿದ್ದರು. ಶತ್ರುಸಂಹಾರಕರಾದ ಅವರಿಬ್ಬರೂ ಪರಸ್ಪರವಾಗಿ ಛಿದ್ರಾನ್ವೇಷಣೆಯಲ್ಲಿ ಆಸಕ್ತರಾಗಿದ್ದರು. ಯುದ್ಧದ ಸಮಯದಲ್ಲಿ ಎದುರಾಳಿಯ ಅಜಾಗರೂಕತೆಯ ಸುಳಿವನ್ನು ಕಂಡುಹಿಡಿಯುವುದರಲ್ಲಿ ಇಬ್ಬರೂ ಜಾಗರೂಕರಾಗಿರುತ್ತಿದ್ದರು. ಪರಸ್ಪರವಾಗಿ ಮುಷ್ಟಿಯುದ್ಧವು ಹೀಗೆಯೇ ನಡೆಯುತ್ತಿರುವಾಗ ಬಲ-ವೀರ್ಯಗಳಿಂದ ಪ್ರವೃದ್ಧನಾಗಿದ್ದ ವಾಲಿಯ ಕೈ ಮೇಲಾಯಿತು. ಸೂರ್ಯಪುತ್ರನಾದ ಮಹಾವೀರ್ಯನಾದ ಸುಗ್ರೀವನು ಬಲಗುಂದಿದನು.

ವಾಲಿಯು ಸುಗ್ರೀವನ ದರ್ಪವನ್ನು ಅಡಗಿಸಿದನು. ಹಾಗೂ ಅವನ ಪರಾಕ್ರಮವೂ ಶಿಥಿಲವಾಗುತ್ತಾ ಬಂದಿತು. ಅದರಿಂದ ಸುಗ್ರೀವನು ಅತ್ಯಂತಕುಪಿತನಾಗಿ ಪುನಃ ತನ್ನ ಕೈಚಳಕವನ್ನು ತೋರಿಸಲು ಪ್ರಾರಂಭಿಸಿದನು.*

ರೆಂಬೆಗಳಿಂದ ಕೂಡಿರುವ ವೃಕ್ಷಗಳಿಂದಲೂ, ಪರ್ವತಶಿಖರಗಳಿಂದಲೂ, ವಜ್ರಾಯುಧದ ಅಗ್ರಭಾಗಗಳಂತಿದ್ದ ಉಗುರುಗಳಿಂದಲೂ, ಮುಷ್ಟಿಗಳಿಂದಲೂ, ಮೊಣಕಾಲುಗಳಿಂದಲೂ, ಹೆಜ್ಜೆಗಳಿಂದಲೂ, ತೋಳುಗಳಿಂದಲೂ ವಾಲಿ-ಸುಗ್ರೀವರು ಪುನಃ ಪುನಃ ಯುದ್ಧಮಾಡುತ್ತಲೇ ಇದ್ದರು. ಅವರಿಬ್ಬರ ನಡುವೆ ನಡೆಯುತ್ತಿದ್ದ ಮಹಾಘೋರವಾದ ದ್ವಂದ್ವಯುದ್ಧವು ವೃತ್ರ-ವಾಸವರ ಮಹಾಸಮರದಂತೆಯೇ ಕಾಣುತ್ತಿದ್ದಿತು. ರಕ್ತದಿಂದ ತೋಯ್ದು ಹೋಗಿದ್ದ ವನಚಾರಿಗಳಾದ ಆ ಇಬ್ಬರು ವಾನರರೂ ಮಹಾಮೇಘಗಳೋಪಾದಿಯಲ್ಲಿ ಗರ್ಜನೆಮಾಡುತ್ತಾ ಪರಸ್ಪರವಾಗಿ ಭಯಪಡಿಸುತ್ತಾ ಯುದ್ಧಮಾಡುತ್ತಿದ್ದರು. ಆ ಸಮಯದಲ್ಲಿ ವಾನರೇಶ್ವರನಾದ ಸುಗ್ರೀವನು

---

*ದರ್ಶಯಾಮಾಸ ಲಾಘವಂ ಎಂಬುದಕ್ಕೆ ಬದಲಾಗಿ ರಾಘವಂ ಎಂಬ ಪಾಠವೂ ಇದೆ. ಈ ಪಾಠದಂತೆ ರಾಘವನಿಗೆ ತನಗುಂಟಾದ ಹಾನಿಯನ್ನು ಸೂಚಿಸಿದನು ಎಂದು ಅರ್ಥವಾಗುತ್ತದೆ. ಆದರೆ ಮುಂದೆ ಪರಸ್ಪರಯುದ್ಧಪ್ರಕರಣವೇ ಇರುವುದರಿಂದ ಲಾಘವಂ ಎಂಬ ಪಾಠವೇ ಸಮೀಚೀನವಾಗಿ ಕಾಣುತ್ತದೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಬಲಗುಂದುತ್ತಿರುವುದನ್ನೂ-ಸಹಾಯಕ್ಕಾಗಿ ಪದೇ-ಪದೇ ಸುತ್ತಲೂ ನೋಡು ತ್ತಿರುವುದನ್ನೂ ಶ್ರೀರಾಮನು ಗಮನಿಸಿದನು. ಕಪೀಶ್ವರನಾದ ಸುಗ್ರೀವನು ಕ್ಷಣ-ಕ್ಷಣಕ್ಕೂ ವಾಲಿಯಿಂದ ಪೀಡಿಸಲ್ಪಡುತ್ತಿರುವುದನ್ನು ಕಂಡ ಶ್ರೀರಾಮನು ವಾಲಿಯನ್ನು ಸಂಹರಿಸುವ ಇಚ್ಛೆಯಿಂದ ಬಾಣದ ಕಡೆಗೆ



ನೋಡಿದನು. ಅಂತಕನು ಕಾಲಚಕ್ರವನ್ನು ತಿರುಗಿಸುತ್ತಾ ಧ್ವನಿಮಾಡು ವಂತೆ-ಸರ್ಪದಂತಿದ್ದ ಬಾಣವನ್ನು ಧನುಸ್ಸಿನಲ್ಲಿ ಹೂಡಿ ಕಿವಿಯವರೆಗೂ ಸೆಳೆದು ಟೇಂಕರಿಸಿದನು. ಧನುಸ್ಸಿನ ಆ ಟೇಂಕಾರಶಬ್ದದಿಂದ ಗರುಡನೇ ಮೊದಲಾದ ರಾಜಪಕ್ಷಿಗಳೂ ಭಯಗೊಂಡುವು. ಪ್ರಳಯಕಾಲವೇ ಸನ್ನಿಹಿತ ವಾಗಿರುವುದೆಂದು ಭ್ರಮಿಸಿ ಮೃಗಗಳೂ ಓಡಿಹೋದುವು. ಬಳಿಕ ಸಿಡಿಲಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ನಂತೆಯೇ ಘೋರಧ್ವನಿಯನ್ನು ಮಾಡುತ್ತಿದ್ದು, ಪ್ರದೀಪ್ತವಾದ ವಜ್ರಾಯುಧಕ್ಕೆ ಸಮಾನವಾಗಿದ್ದ, ಶ್ರೀರಾಮನ ಧನುಸ್ಸಿನಿಂದ ಹೊರಬಂದ ಆ ಬಾಣವು ವಾಲಿಯ ವಕ್ಷಃಸ್ಥಳದಲ್ಲಿ ನಾಟಿತು. ಮಹಾತೇಜಸ್ವಿಯಾದ, ವೀರ್ಯದಿಂದ ದರ್ಪಿಷ್ಠನಾಗಿದ್ದ, ಕಪಿಶ್ರೇಷ್ಠನಾದ ವಾಲಿಯು ಮಹಾವೇಗ ಯುಕ್ತವಾಗಿದ್ದ ಶ್ರೀರಾಮನ ಆ ಬಾಣದಿಂದ ಪ್ರಹೃತನಾಗಿ ಭೂಮಿಯ ಮೇಲೆ ಬಿದ್ದನು. ಆಶ್ವಯುಜಮಾಸದ ಹುಣ್ಣಿಮೆಯಂದು ಕೆಳಕ್ಕೆ ಬೀಳುವ ಇಂದ್ರಧ್ವಜದಂತೆ–ಕಣ್ಣೀರಿನಿಂದಲೂ, ಗದ್ಗದವಾದ ಕಂಠದಿಂದಲೂ, ಆರ್ತವಾದ ಧ್ವನಿಯಿಂದಲೂ ಕೂಡಿದ್ದ ವಾಲಿಯು ಕಾಂತಿಹೀನನಾಗಿ ಸಂಜ್ಞೆಯನ್ನು ಕಳೆದುಕೊಂಡು ನೆಲದ ಮೇಲೆ ಬಿದ್ದನು. * ಶ್ರೀರಾಮನು ಬಿಟ್ಟ ಆ ಶ್ರೇಷ್ಠವಾದ ಬಾಣವು–ಯುಗದ ಕಡೆಯಲ್ಲಿ ಕಾಣಿಸಿಕೊಳ್ಳುವ ಕಾಲ ಪುರುಷನಂತೆ– ಬಹಳ ಭಯಂಕರವಾಗಿದ್ದಿತು. ಚಿನ್ನದಿಂದಲೂ ಬೆಳ್ಳಿಯಿಂದಲೂ ಸಮಲಂಕೃತವಾಗಿದ್ದಿತು. ಪೂರ್ವಕಾಲದಲ್ಲಿ ಮಹಾದೇವನು ತನ್ನ ಹಣೆಗಣ್ಣಿನಿಂದ ಶತ್ರುವಾದ ಕಾಮನನ್ನು ದಹಿಸುವ ಸಲುವಾಗಿ ಧೂಮ ಯುಕ್ತವಾದ ಅಗ್ನಿಯನ್ನು ಹೊರಹೊಮ್ಮಿಸಿದಂತೆ – ಪುರುಷೋತ್ತಮನಾದ ಶ್ರೀರಾಮನು ದೇದೀಪ್ಯಮಾನವಾಗಿದ್ದ ಶತ್ರುಧ್ವಂಸಕವಾದ ಆ ಬಾಣವನ್ನು ವಾಲಿಯ ಮೇಲೆ ಪ್ರಯೋಗಿಸಿದನು. ರಕ್ತದ ಧಾರೆಯಿಂದಲೂ ಮತ್ತು ಬೆವರಿನಿಂದಲೂ ತೋಯ್ದುಹೋಗಿದ್ದ ಇಂದ್ರನ ಮಗನಾದ ವಾಲಿಯು, ಬಿರುಗಾಳಿಯ ಹೊಡೆತದಿಂದ ಕೆಳಕ್ಕೆ ಬಿದ್ದ ಪುಷ್ಪಸಹಿತವಾದ ಅಶೋಕವೃಕ್ಷದಂತೆಯೂ – ಉತ್ಸವದ ಕೊನೆಯಲ್ಲಿ ಭೂಮಿಗೆ ಇಳಿಸಿದ ಇಂದ್ರಧ್ವಜದಂತೆಯೂ–ಚೇತನಾಶೂನ್ಯನಾಗಿ ಭೂಮಿಯಲ್ಲಿ ಬಿದ್ದನು. *

೧೬ನೆಯ ಸರ್ಗವು ಮುಗಿಯಿತು.

---

*ಗೌಡದೇಶದಲ್ಲಿ ಆಶ್ವಯುಜ ಹುಣ್ಣಿಮೆಯ ದಿವಸ ಇಂದ್ರನ ಪ್ರೀತ್ಯರ್ಥವಾಗಿ ಇಂದ್ರಧ್ವಜವನ್ನು ಸ್ಥಾಪಿಸಿ ವಿಧ್ಯುಕ್ತವಾಗಿ ಪೂಜಿಸಿದ ನಂತರ ಅದನ್ನು ಕೆಳಗಿಳಿಸುವರೆಂದು ಪ್ರತೀತಿಯಿದೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


## ವಾಲಿಯಿಂದ ಶ್ರೀರಾಮನ ನಿಂದನೆ

ತತಃ ಶರೇಣಾಭಿಹತೋ ರಾಮೇಣ ರಣಕರ್ಕಶಃ ।
ಪಪಾತ ಸಹಸಾ ವಾಲೀ ನಿಕೃತ್ತ ಇವ ಪಾದಪಃ ॥೧॥

ಶ್ರೀರಾಮನ ಬಾಣದಿಂದ ಪ್ರಹೃತನಾದ ರಣಭೀಷಣನಾದ ವಾಲಿಯು ಬುಡಕಡಿದ ಮರದಂತೆ-ಒಡನೆಯೇ ಕೆಳಗುರುಳಿದನು.

ಅವನ ಸಂಪೂರ್ಣಶರೀರವೂ ಭೂಮಿಯ ಮೇಲೆ ಬಿದ್ದಿದ್ದಿತು. ಅವನು ಪುಟಕ್ಕೆ ಹಾಕಿದ ಚಿನ್ನದ ಆಭರಣಗಳಿಂದ ಭೂಷಿತನಾಗಿದ್ದನು. ಹಗ್ಗವನ್ನು ಬಿಚ್ಚಿದನಂತರ ಇಂದ್ರನ ಧ್ವಜವು ಕೆಳಕ್ಕೆ ಬೀಳುವಂತೆ-ವಾಲಿಯು ಭೂಮಿಯ ಮೇಲೆ ಬಿದ್ದಿದ್ದನು. ಕಪಿ-ಭಲ್ಲೂಕಗಳ ಸಮೂಹಕ್ಕೆ ರಾಜನಾಗಿದ್ದ ವಾಲಿಯೂ ಭೂಮಿಯ ಮೇಲೆ ಬೀಳಲಾಗಿ ಚಂದ್ರನಿಲ್ಲದ ಆಕಾಶವು ಶೋಭಿಸದಂತೆ ಭೂಮಂಡಲವು ಶೋಭಾಯಮಾನವಾಗಿ ಕಾಣುತ್ತಿರಲಿಲ್ಲ. ಮಹಾತ್ಮನಾದ ವಾಲಿಯು ಭೂಮಿಯಲ್ಲಿ ಬಿದ್ದಿದ್ದರೂ ಅವನ ದೇಹವನ್ನು ಕಾಂತಿಯಾಗಲೀ, ಪ್ರಾಣಗಳಾಗಲೀ, ತೇಜಸ್ಸಾಗಲೀ, ಪರಾಕ್ರಮವಾಗಲೀ ತೊರೆದು ಹೋಗಿರಲಿಲ್ಲ. ಇಂದ್ರನು ಮಗನ ಸಲುವಾಗಿ ಕೊಟ್ಟಿದ್ದ ರತ್ನಭೂಷಿತವಾದ ಸುವರ್ಣಮಾಲೆಯು ಕಪಿಮುಖ್ಯನಾದ ವಾಲಿಯ ಪ್ರಾಣಗಳನ್ನೂ, ತೇಜಸ್ಸನ್ನೂ, ಕಾಂತಿಯನ್ನೂ ಹಿಡಿದಿಟ್ಟುಕೊಂಡಿದ್ದಿತು. ಕಪಿಗಳ ಮುಖಂಡನಾದ ವೀರನಾದ ವಾಲಿಯು ಆ ಸುವರ್ಣಮಾಲೆಯಿಂದಾಗಿ ಸಂಧ್ಯಾರಾಗದಿಂದ ರಂಜಿತವಾದ ಮೇಘದಂತೆಯೇ ಕಾಣುತ್ತಿದ್ದನು. ವಾಲಿಯು ನೆಲದ ಮೇಲೆ ಬಿದ್ದಿದ್ದರೂ ಅವನು ಧರಿಸಿದ್ದ ಮಾಲೆ, ಅವನ

---

*ಈ ಸರ್ಗದ ಪಠಣದಿಂದ ಲಭ್ಯವಾಗುವ ಫಲವನ್ನು ಸ್ಕಾಂದಪುರಾಣದಲ್ಲಿ ಹೀಗೆ ಹೇಳಿದ್ದಾರೆ: ಗಿರೀಣಾಂ ಭೇದನಂ ಚೈವ ಕಿಷ್ಕಿಂಧಾಗಮನಂ ತಥಾ । ವಾಲಿಸುಗ್ರೀವಯೋರ್ಯುದ್ಧಂ ಶ್ರುತ್ವಾ ವಿಜಯಪೂರ್ವಕಮ್ । ಯುದ್ಧೇ ವಿಜಯಮಾಪ್ನೋತಿ ವಾಲಿನೋ ವಿಜಯಂ ಯಥಾ ॥ ಸಪ್ತಸಾಲವೃಕ್ಷಗಳ ಭೇದನವನ್ನೂ, ರಾಮನ ಕಿಷ್ಕಿಂಧಾಗಮನವನ್ನೂ, ವಿಜಯಪೂರ್ವಕವಾದ ವಾಲಿ-ಸುಗ್ರೀವರ ಯುದ್ಧಪ್ರಕರಣವನ್ನೂ ಕೇಳಿದ ಕ್ಷತ್ರಿಯನು-ರಾಮನು ವಾಲಿಯನ್ನು ಜಯಿಸಿದಂತೆ – ಯುದ್ಧದಲ್ಲಿ ಶತ್ರುಗಳನ್ನು ಜಯಿಸುವನು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ದೇಹ ಮತ್ತು ಮರ್ಮಸ್ಥಳದಲ್ಲಿ ಹೊಕ್ಕಿದ್ದ ರಾಮನ ಬಾಣ-ಇವು ಮೂರು ಪ್ರಕಾರವಾಗಿ ವಿಭಾಗಿಸಲ್ಪಟ್ಟ ಶರೀರದ ಶೋಭೆಯಂತೆಯೇ ಕಾಣುತ್ತಿದ್ದುವು. ಶ್ರೀರಾಮನ ಧನುಸ್ಸಿನಿಂದ ಹೊರಬಂದ ಸ್ವರ್ಗಮಾರ್ಗಕ್ಕೊಯ್ಯುವ ಆ ಬಾಣವು ವಾಲಿಗೆ ಉತ್ಕೃಷ್ಟವಾದ ಗತಿಯನ್ನೇ ಹೊಂದಿಸಿತು. ಹೀಗೆ ರಣರಂಗದಲ್ಲಿ ಬಿದ್ದಿದ್ದ ಇಂದ್ರನ ಮಗನು ಜ್ವಾಲೆಯಿಂದ ರಹಿತವಾದ ಅಗ್ನಿಯಂತೆಯೂ, ಪುಣ್ಯವು ಕ್ಷಯಿಸಿದ ನಂತರ ದೇವಲೋಕದಿಂದ ಕೆಳಕ್ಕೆ ತಳ್ಳಲ್ಪಟ್ಟ ಯಯಾತಿಯಂತೆಯೂ, ಪ್ರಳಯಕಾಲದಲ್ಲಿ ಕಾಲನಿಂದ ಕೆಳಕ್ಕೆ ಬೀಳಿಸಲ್ಪಟ್ಟ ಸೂರ್ಯನಂತೆಯೂ, ದುರ್ಧರ್ಷನಾದ ಮಹೇಂದ್ರನಂತೆಯೂ, ದುಃಸಹನಾದ ಉಪೇಂದ್ರನಂತೆಯೂ ಕಾಣುತ್ತಿದ್ದನು. ಅಂತಹ ಹೇಮಮಾಲಿಯಾದ, ಮಹೇಂದ್ರನ ಮಗನಾದ, ವಿಶಾಲವಕ್ಷನಾದ, ಮಹಾಬಾಹುವಾದ, ಪ್ರದೀಪ್ತವಾದ ಮುಖದಿಂದಲೂ ಹೊಂಬಣ್ಣದ ಕಣ್ಣುಗಳಿಂದಲೂ ಕೂಡಿದ್ದ ವಾಲಿಯನ್ನು ಲಕ್ಷ್ಮಣನ ಜೊತೆಯಲ್ಲಿದ್ದ ಶ್ರೀರಾಮನು ನೋಡಿದನು. ಹಾಗೂ ಅವನ ಬಳಿಗೆ ಹೋದನು. ಜ್ವಾಲೆಯಡಗಿದ ಅಗ್ನಿಯಂತೆ ರಣರಂಗದಲ್ಲಿ ಬಿದ್ದಿದ್ದ, ಮೆಲ್ಲ-ಮೆಲ್ಲನೆ ತಮ್ಮ ಕಡೆಗೇ ನೋಡುತ್ತಿದ್ದ ವೀರನಾದ ವಾಲಿಯನ್ನು ಯಥೋಚಿತವಾಗಿ ಗೌರವಿಸುತ್ತಾ ಮಹಾವೀರ್ಯರಾದ ರಾಮ-ಲಕ್ಷ್ಮಣರು ವಾಲಿಯ ಬಳಿಗೆ ಹೋದರು.

ತಂ ದೃಷ್ಟ್ವಾ ರಾಘವಂ ವಾಲೀ ಲಕ್ಷ್ಮಣಂ ಚ ಮಹಾಬಲಮ್ ।
ಅಬ್ರವೀತ್ಪರುಷಂ ವಾಕ್ಯಂ ಪ್ರಶ್ರಿತಂ ಧರ್ಮಸಂಹಿತಮ್ ॥೧೪॥

ಸ ಭೂಮಾವಲ್ಪತೇಜೋಽಸುರ್ನಿಹತೋ ನಷ್ಟಚೇತನಃ ।
ಅರ್ಥಸಂಹಿತಯಾ ವಾಚಾ ಗರ್ವಿತಂ ರಣಗರ್ವಿತಮ್ ॥೧೫॥

ಆ ಸಮಯದಲ್ಲಿ ವಾಲಿಯು ಅಲ್ಪವಾದ ತೇಜಸ್ಸಿನಿಂದ ಕೂಡಿದ್ದನು. ಅಲ್ಪಪ್ರಾಣನಾಗಿದ್ದನು. ರಾಮನ ಬಾಣದಿಂದ ಹತಪ್ರಾಯನಾಗಿದ್ದನು. ಬುದ್ಧಿಗೆಟ್ಟಿದ್ದನು. ಆದರೂ ಶ್ರೀರಾಮನನ್ನೂ ಮಹಾಬಲನಾದ ಲಕ್ಷ್ಮಣನನ್ನೂ ನೋಡಿ, ಕಠೋರವಾಗಿದ್ದರೂ ವಿನಯಯುಕ್ತವಾಗಿದ್ದ ಮತ್ತು ಧರ್ಮ


CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಯುಕ್ತವಾಗಿದ್ದ ಮಾತುಗಳನ್ನೂ – ಅರ್ಥವತ್ತಾಗಿಯೂ ಗರ್ವಯುಕ್ತವೂ ಮತ್ತು ರಣಗರ್ವಯುಕ್ತವೂ ಆಗಿದ್ದ ಮಾತುಗಳನ್ನೂ ಹೇಳಿದನು. *



"ರಾಮ! ನೀನು ಚಕ್ರವರ್ತಿಯ ಮಗನು. ಪ್ರಖ್ಯಾತನಾದವನು. ನೋಡಲು ಮುದ್ದಾಗಿ ಕಾಣುವವನು. ಸತ್ಕುಲಪ್ರಸೂತನು. ಸತ್ತ್ವಗುಣಸಂಪನ್ನನು. ಮಹಾತೇಜಸ್ವಿಯು. ಅನೇಕ ವಿಧವಾದ ವ್ರತಾಚರಣೆಗಳನ್ನು ಮಾಡಿರತಕ್ಕವನು. 1

* ಈ ಶ್ಲೋಕದಲ್ಲಿರುವ ಗರ್ವಿತಂ–ರಣಗರ್ವಿತಂ ಎಂಬ ಎರಡು ಪದಗಳು ಯಾವುದಕ್ಕೆ ವಿಶೇಷಣಗಳೆಂಬುದನ್ನು ತಿಳಿಯುವುದು ಕಷ್ಟವಾಗಿದೆ. ಗರ್ವಿತಂ ರಣಗರ್ವಿತಂ ರಾಮಂ–ಎಂದು ಈ ಶ್ಲೋಕದಲ್ಲಿ ಶ್ರೀರಾಮನಿಗೆ ಈ ಪದಗಳನ್ನು ವಿಶೇಷಣಗಳನ್ನಾಗಿ

1 ಈ ಶ್ಲೋಕವನ್ನು ಒಬ್ಬರು ವ್ಯಾಖ್ಯಾನಕಾರರು ಮಾತ್ರವೇ ವ್ಯಾಖ್ಯಾನಿಸಿದ್ದಾರೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಪರಾಙ್ಮುಖವಧಂ ಕೃತ್ವಾ ಕೋ ನು ಪ್ರಾಪ್ತಸ್ತ್ವಯಾ ಗುಣಃ ।
ಯದಹಂ ಯುದ್ಧಸಂರಬ್ಧಃ ಶರೇಣೋರಸಿ ತಾಡಿತಃ ॥೧೭॥

ನಿನ್ನ ಎದುರಾಗಿ ನಿಲ್ಲದೇ ಸುಗ್ರೀವನೊಡನೆ ಯುದ್ಧಮಾಡುತ್ತಿದ್ದ ನನ್ನನ್ನು ವಧಿಸಿ ನೀನು ಯಾವ ಗೌರವವನ್ನು ಸಂಪಾದಿಸಿದೆ? ನಾನು ನನ್ನ ತಮ್ಮನೊಡನೆ ಕೋಪಾವಿಷ್ಟನಾಗಿ ಯುದ್ಧದಲ್ಲಿ ತೊಡಗಿದ್ದಾಗ ನೀನು ಬಾಣದಿಂದ ನನ್ನ ವಕ್ಷಃಸ್ಥಳದಲ್ಲಿ ಪ್ರಹರಿಸಿದೆ.

'ಶ್ರೀರಾಮನು ಕುಲೀನನು; ಸತ್ತ್ವಗುಣಸಂಪನ್ನನು; ತೇಜಸ್ವಿಯು; ಉತ್ತಮವಾದ ವ್ರತಗಳನ್ನು ಆಚರಿಸಿರುವವನು; ಕರುಣಾಮಯನು; ಪ್ರಜೆಗಳ ಹಿತದಲ್ಲಿಯೇ ಯಾವಾಗಲೂ ನಿರತನಾಗಿರತಕ್ಕವನು; ದಯಾವಂತನು; ಧರ್ಮಕಾರ್ಯಗಳಲ್ಲಿ ಮಹೋತ್ಸಾಹವುಳ್ಳವನು; ಸಮಯೋಚಿತವಾಗಿ ಕಾರ್ಯಗಳನ್ನು ಮಾಡತಕ್ಕವನು; ದೃಢವಾದ ವ್ರತಾನುಷ್ಠಾನಗಳುಳ್ಳವನು-ಇವೇ ಮುಂತಾಗಿ ನಿನ್ನ ಯಶಸ್ಸನ್ನು ಎಲ್ಲ ಪ್ರಾಣಿಗಳೂ ಈ ಪ್ರಪಂಚದಲ್ಲಿ ಜೊಗಳಿ ಹಾಡುತ್ತವೆ.

ದಮಃ ಶಮಃ ಕ್ಷಮಾ ಧರ್ಮೋ ಧೃತಿಃ ಸತ್ಯಂ ಪರಾಕ್ರಮಃ ।
ಪಾರ್ಥಿವಾನಾಂ ಗುಣಾ ರಾಜನ್ದಣ್ಡಶ್ಚಾಪ್ಯಪರಾಧಿಷು ॥೨೦॥

---

ಮಾಡಬಹುದು. ಆದರೆ ಗರ್ವಯುಕ್ತನಾಗಿದ್ದ ಮತ್ತು ರಣದರ್ಪದಿಂದ ಯುಕ್ತನಾಗಿದ್ದ ಎಂಬ ವಿಶೇಷಣಗಳು ಶ್ರೀರಾಮನಿಗೆ ಈ ಸಂದರ್ಭದಲ್ಲಿ ಯುಕ್ತವಾದ ವಿಶೇಷಣಗಳಾಗುವುದಿಲ್ಲ. ಆದುದರಿಂದ ಒಬ್ಬ ವ್ಯಾಖ್ಯಾನಕಾರರು ವಾಚಾಗರ್ವಿತಂ ಎಂದು ಸಮಸ್ತಪದ ಮಾಡಿ ವಾಚಾ ಅಗರ್ವಿತಂ ಎಂದು ಪದವಿಭಾಗಮಾಡಿ ರಾಮನಿಗೆ ವಿಶೇಷಣವೆಂದು ಹೇಳಿದ್ದಾರೆ. ಅಗರ್ವಿತಮಿತಿ ಛೇದಃ ತದ್ರಾಮವಿಶೇಷಣಂ. ರಣಗರ್ವಿತಮಿತಿ ವಾಕ್ಯವಿಶೇಷಣಂ-ಹಿಂದಿನ ಶ್ಲೋಕದಲ್ಲಿ ಬಂದಿರುವ ವಾಕ್ಯಂ ಎಂಬ ಪದಕ್ಕೆ ರಣಗರ್ವಿತಂ ಎಂಬುದು ವಿಶೇಷಣವೆಂದು ಹೇಳಿದ್ದಾರೆ ಮತ್ತೊಬ್ಬರು ರಣಗರ್ವಿತಂ ಎಂಬುದನ್ನು ರಾಮನಿಗೆ ವಿಶೇಷಣ ಮಾಡಿದ್ದಾರೆ. ಗರ್ವಿತಂ ಗರ್ವೋಪೇತಂ ಯಥಾ ಭವತಿ ತಥಾ। ರಣಗರ್ವಿತಂ ರಾಮಂ. ಮತ್ತೊಬ್ಬ ವ್ಯಾಖ್ಯಾನಕಾರರ ಪ್ರಕಾರ ಈ ಶ್ಲೋಕವು ಪ್ರಕ್ಷಿಪ್ತ.

---

ಬೇರೆಯವರು ಈ ಶ್ಲೋಕವನ್ನು ಪರಿಗಣಿಸಿರುವುದಿಲ್ಲ. ಪ್ರಿಯದರ್ಶನಃ ಎಂಬುದಕ್ಕೆ ವ್ಯಾಖ್ಯಾನಕಾರರು ಶಾಸ್ತ್ರಪ್ರಿಯನು ಎಂದು ಅರ್ಥಮಾಡಿರುತ್ತಾರೆ. ಪ್ರಿಯಂ ದರ್ಶನಂ ಶಾಸ್ತ್ರಂ ಯಸ್ಯ ಸಃ [ದರ್ಶನಂ ದಿಶಿ ಶಾಸ್ತ್ರೇ ಸ್ಯಾತ್-ದರ್ಪಣೇ]-ಎಂಬ ಕೋಶವನ್ನನುಸರಿಸಿ ಈ ಅರ್ಥವನ್ನು ಸಮರ್ಥಿಸಿದ್ದಾರೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಅಂತರಿಂದ್ರಿಯನಿಗ್ರಹ ; ಬಹಿರಿಂದ್ರಿಯನಿಗ್ರಹ ; ಧರ್ಮಾಚರಣೆ ; ಧೈರ್ಯ ; ಸತ್ಯನಿಷ್ಠೆ ; ಪರಾಕ್ರಮ ; ಅಪರಾಧಿಗಳನ್ನು ಶಿಕ್ಷಿಸುವುದು-ಇವು ರಾಜರ ಗುಣಗಳಾಗಿರುತ್ತವೆ.

ಅಂತಹ ರಾಜಗುಣಗಳೆಲ್ಲವೂ ನಿನ್ನಲ್ಲಿವೆಯೆಂದು ನಿಶ್ಚಯಿಸಿ, ನಿನ್ನ ಶ್ರೇಷ್ಠವಾದ ಕುಲವನ್ನೂ ಗಮನಿಸಿ – ತಾರೆಯಿಂದ ತಡೆಯಲ್ಪಟ್ಟರೂ- ಸುಗ್ರೀವನೊಡನೆ ಯುದ್ಧಮಾಡಲು ಬಂದೆನು. ನಿನ್ನನ್ನು ನಾನು ಈ ಹಿಂದೆ ನೋಡಿರದಿದ್ದರೂ ಮತ್ತೊಬ್ಬನೊಡನೆ ಕೋಪಾವಿಷ್ಟನಾಗಿ ಮತ್ತು ಪ್ರಮತ್ತನಾಗಿ ಯುದ್ಧಮಾಡುತ್ತಿರುವಾಗ – ನೀನು ಮಧ್ಯದಲ್ಲಿ ಪ್ರವೇಶಿಸಿ ಯುದ್ಧ ಮಾಡುವುದಿಲ್ಲವೆಂಬ ಭಾವನೆಯು ನನಗೆ ದೃಢವಾಗಿದ್ದಿತು.

ಆದರೆ ನಿನ್ನ ಚರ್ಯೆಯನ್ನು ಪ್ರತ್ಯಕ್ಷವಾಗಿ ಕಂಡನಂತರ ನಿನ್ನನ್ನು ಹೃದಯಶೂನ್ಯನೆಂದು ನಾನು ಭಾವಿಸುತ್ತೇನೆ. ನೀನು ಕೇವಲ ಧರ್ಮದ ಸೋಗನ್ನು ಹಾಕಿಕೊಂಡು ತಿರುಗುವವನು. ವಸ್ತುತಃ ಧಾರ್ಮಿಕನಲ್ಲ. ನಿನ್ನ ಆಚಾರ-ವ್ಯವಹಾರಗಳು ಪಾಪಪೂರ್ಣವಾಗಿವೆ. ಹುಲ್ಲು-ಸೆತ್ತೆ-ಸೆದೆಗಳಿಂದ ಮುಚ್ಚಲ್ಪಟ್ಟಿರುವ ಕೂಪದಂತೆ ನೀನು ವಂಚಕನಾಗಿರುವೆ. ಬೂದಿಮುಚ್ಚಿದ ಕೆಂಡದಂತೆ ಸತ್ಪುರುಷರ ವೇಷವನ್ನು ಧರಿಸಿರುವ ಪಾಪಿಯು ನೀನು. ಲೋಕವನ್ನು ವಂಚಿಸುವ ಸಲುವಾಗಿಯೇ ನೀನು ಹೀಗೆ ವೇಷವನ್ನು ಧರಿಸಿರುವೆ ಯೆಂಬುದು ಈ ಮೊದಲು ನನಗೆ ತಿಳಿಯಲಿಲ್ಲ. ನಿನ್ನ ದೇಶದಲ್ಲಾಗಲೀ ಪಟ್ಟಣದಲ್ಲಾಗಲೀ ನಾನು ಯಾವ ವಿಧವಾದ ಉಪದ್ರವವನ್ನೂ ಉಂಟು ಮಾಡಿದ್ದಿಲ್ಲ. ನಿನ್ನನ್ನು ಯಾವುದೇ ಕಾರಣದಿಂದಲೂ ಅವಮಾನಿಸಿಯೂ ಇಲ್ಲ. ಹೀಗಿರುವಾಗ ನಿಷ್ಕಳಂಕನಾದ ನಿಷ್ಪಾಪನಾದ ನನ್ನನ್ನೇಕೆ ಕೊಂದೆ ? ನಾನು ನಿತ್ಯವೂ ಅರಣ್ಯದಲ್ಲಿ ಕಂದ-ಮೂಲ-ಫಲಗಳನ್ನು ತಿಂದು ಜೀವಿಸುತ್ತಿರುವವನು. ಅರಣ್ಯದಲ್ಲಿ ಸ್ವೇಚ್ಛೆಯಿಂದ ಸಂಚರಿಸುವ ಕಪಿ. ನಾನು ನಿನ್ನೊಡನೆ ಯುದ್ಧಮಾಡಲು ಬಂದವನೂ ಅಲ್ಲ ; ಯುದ್ಧಮಾಡುತ್ತಲೂ ಇರಲಿಲ್ಲ. ಬೇರೆ

ಅವರು ಈ ಶ್ಲೋಕಕ್ಕೆ ವ್ಯಾಖ್ಯಾನಿಸಿಲ್ಲ. ಗರ್ವಿತಂ ರಣಗರ್ವಿತಂ ಪ್ರಶ್ರಿತಂ ಧರ್ಮಸಂಹಿತಂ ಪರುಷಂ- ಈ ಎಲ್ಲಾ ಪದಗಳನ್ನೂ ವಾಕ್ಯಂ ಎಂಬುದಕ್ಕೇ ವಿಶೇಷಣಗಳನ್ನಾಗಿಟ್ಟುಕೊಂಡರೆ ಸಮಂಜಸವಾಗಿ ಕಾಣುತ್ತದೆ. ಏಕೆಂದರೆ : ಅವನು ಹೇಳುವ ಮುಂದಿನ ವಾಕ್ಯಗಳಲ್ಲಿ ಈ ಎಲ್ಲ ವಿಶೇಷಣಗಳೂ ಎದ್ದುಕಾಣುತ್ತವೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಯುವರೊಡನೆ ನಾನು ಯುದ್ಧಮಾಡುತ್ತಿದ್ದೆನು. ಇಂತಹ ಸಂದರ್ಭದಲ್ಲಿ ನನ್ನನ್ನು ನಿಷ್ಕಾರಣವಾಗಿ ಕೊಂದುದೇಕೆ? ನೀನು ಧರ್ಮಾತ್ಮನಾದ ದಶರಥ ಚಕ್ರವರ್ತಿಯ ಮಗ. ಎಲ್ಲ ಶಾಸ್ತ್ರಗಳನ್ನೂ ತಿಳಿದಿರುವವನೆಂದು ಖ್ಯಾತಿಯನ್ನು ಪಡೆದಿರುವೆ. ಯಾವಾಗಲೂ ಧರ್ಮದೊಡನೆಯೇ ಕೂಡಿ ಇರುವವನೆಂಬ (ಧರ್ಮಾತ್ಮನೆಂಬ) ಅಂಕಿತವೂ ನಿನಗಿದೆ. ಕ್ಷತ್ರಿಯವಂಶದಲ್ಲಿ ಹುಟ್ಟಿ ವೇದ-ವೇದಾಂಗಗಳನ್ನೂ ಅಭ್ಯಾಸಮಾಡಿ, ಧರ್ಮಾಧರ್ಮಗಳ ವಿಷಯದಲ್ಲಿ ಮತ್ತು ಕರ್ತವ್ಯಾಕರ್ತವ್ಯಗಳ ವಿಷಯದಲ್ಲಿ ಯಾವ ವಿಧವಾದ ಸಂದೇಹವೂ ಇಲ್ಲದ ಧರ್ಮಸೂಚಕವಾದ ಚಿಹ್ನೆಗಳಿಂದ ಕೂಡಿರುವ ಯಾವನು ತಾನೇ ಇಂತಹ ಕ್ರೂರವಾದ ಕಾರ್ಯವನ್ನು ಮಾಡುವನು? ರಾಜಕುಲದಲ್ಲಿ ಹುಟ್ಟಿ ಧಾರ್ಮಿಕನೆಂದು ಪ್ರಸಿದ್ಧನಾಗಿದ್ದರೂ ನೀನು ಅಸಾಧುವು. ಆದರೂ ಸತ್ಪುರುಷರ ವೇಷವನ್ನು ಧರಿಸಿ ನೀನೇಕೆ ಈ ಅರಣ್ಯದಲ್ಲಿ ಸಂಚರಿಸುತ್ತಿರುವೆ? ಸಾಮ, ದಾನ, ಕ್ಷಮೆ, ಧರ್ಮನಿಷ್ಠೆ, ಧೈರ್ಯ, ಪರಾಕ್ರಮ, ಅಪರಾಧಿಗಳನ್ನು ದಂಡಿಸುವುದು–ಇವು ರಾಜರ ಗುಣಗಳಾಗಿವೆ. ನಾವು ಅರಣ್ಯದಲ್ಲಿ ಸಂಚರಿಸುವ ಮೃಗಗಳು. ಅರಣ್ಯದಲ್ಲಿ ಸಿಕ್ಕುವ ಕಂದ-ಮೂಲಗಳನ್ನು ತಿಂದು ಜೀವಿಸುವವರು. ಇದೇ ನಮ್ಮ ಸ್ವಭಾವವಾಗಿದೆ. ಆದರೆ ನೀನಾದರೋ ಮಹಾಪುರುಷನು. ನರಶ್ರೇಷ್ಠನು. ನಿನ್ನಂತಹವನು ವನಚಾರಿಗಳಾದ ನಮ್ಮ ವಿಷಯದಲ್ಲಿ ಹೀಗೆ ಮಾಡಬಹುದೇ?

ಭೂಮಿರ್ಹಿರಣ್ಯಂ ರೂಪ್ಯಂ ಚ ವಿಗ್ರಹೇ ಕಾರಣಾನಿ ಚ ।
ತತ್ರ ಕಸ್ತೇ ವನೇ ಲೋಭೋ ಮದೀಯೇಷು ಫಲೇಷು ವಾ ॥೩೨॥

ಹೆಣ್ಣು, ಹೊನ್ನು, ಮಣ್ಣು–ಈ ಮೂರೂ ಯುದ್ಧಕ್ಕೆ ಕಾರಣಗಳಾಗುತ್ತವೆ. ಈ ಮೂರರಲ್ಲಿ ಯಾವುದಕ್ಕಾಗಿ ನೀನು ನನ್ನನ್ನು ಸಂಹರಿಸಿದೆ? ಈ ವನದ ಮೇಲೆ ನಿನಗೇನಾದರೂ ಆಸೆಯುಂಟಾಯಿತೇ? ಹೆಣ್ಣು-ಹೊನ್ನು-ಮಣ್ಣುಗಳಲ್ಲಿ ಯಾವುದರ ಮೇಲಿನ ಲೋಭದಿಂದಾಗಿ ನನ್ನನ್ನು ನೀನು ಸಂಹರಿಸಿದೆ? *

ನಯಶ್ಚ ವಿನಯಶ್ಚೋಭೌ ನಿಗ್ರಹಾನುಗ್ರಹಾವಪಿ ।
ರಾಜವೃತ್ತಿರಸಂಕೀರ್ಣಾ ನ ನೃಪಾಃ ಕಾಮವೃತ್ತಯಃ ॥೩೩॥

---

*ರೂಪಂ ಎಂಬುದಕ್ಕೆ ರೂಪ್ಯಂ ಎಂದು ಲಾಕ್ಷಣಿಕವಾಗಿ ವ್ಯಾಖ್ಯಾನಕಾರರು ಅರ್ಥ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ದಂಡನೀತಿ ಮತ್ತು ವಿನಯ, ನಿಗ್ರಹ ಮತ್ತು ಅನುಗ್ರಹ–ಇವು ರಾಜನಲ್ಲಿರಬೇಕಾದ ಮುಖ್ಯಗುಣಗಳು. ರಾಜನ ನಡವಳಿಕೆಯು ಯಾವಾಗಲೂ ವ್ಯತ್ಯಾಸವಾಗದಂತೆ ಸ್ವಚ್ಛವಾಗಿರಬೇಕು. ಅವರು ಯಾವಾಗಲೂ ಸ್ವೇಚ್ಛಾಚಾರಿಗಳಾಗಬಾರದು.

ನೀನಾದರೋ ಕಾಮವೇ ಪ್ರಧಾನವಾಗಿರುವವನು. ಕೋಪಿಷ್ಠನು. ಅಸ್ಥಿರವಾದ ಚಿತ್ತವೃತ್ತಿಯುಳ್ಳವನು. ರಾಜವ್ಯವಹಾರಗಳಲ್ಲಿ ಸ್ವಚ್ಛತೆಯಿಲ್ಲದವನು. ಯಾವಾಗಲೂ ಧನುಸ್ಸಿನಲ್ಲಿಯೇ ಆಸಕ್ತಿಯುಳ್ಳವನು. ನಿನಗೆ ಧರ್ಮದಲ್ಲಿ ಶ್ರದ್ಧೆಯಿಲ್ಲ. ಅರ್ಥದಲ್ಲಿಯೂ ನಿನ್ನ ಬುದ್ಧಿಯು ಸ್ಥಿರವಾಗಿ ನಿಂತಿಲ್ಲ. ಇಂದ್ರಿಯಗಳಿಗೆ ವಶನಾಗಿ ಸ್ವೇಚ್ಛಾಚಾರಿಯಾಗಿರುವೆ. ನಿನ್ನ ವಿಷಯದಲ್ಲಿ ಯಾವುದೊಂದು ಅಪರಾಧವನ್ನೂ ಮಾಡದಿರುವ ನನ್ನನ್ನು ಬಾಣದಿಂದ ಕೊಂದಿರುವೆ. ಇಂತಹ ಅತ್ಯಂತಜುಗುಪ್ಸಿತವಾದ ಕಾರ್ಯವನ್ನು ಮಾಡಿರುವ ನೀನು ಸತ್ಪುರುಷರ ಮಧ್ಯದಲ್ಲಿ–'ವಾಲಿಯನ್ನು ಕೊಂದುದೇಕೆ?'–ಎಂದು ಯಾರಾದರೂ ಪ್ರಶ್ನಿಸಿದರೆ ಏನೆಂದು ಉತ್ತರಿಸುವೆ?

ರಾಜಹಾ ಬ್ರಹ್ಮಹಾ ಗೋಘ್ನಶ್ಚೋರಃ ಪ್ರಾಣಿವಧೇ ರತಃ ।
ನಾಸ್ತಿಕಃ ಪರಿವೇತ್ತಾ ಚ ಸರ್ವೇ ನಿರಯಗಾಮಿನಃ ॥೩೭॥

ರಾಜನನ್ನು ಕೊಂದವನು, ಬ್ರಾಹ್ಮಣನನ್ನು ಕೊಂದವನು, ಗೋವನ್ನು ಕೊಂದವನು, ಪ್ರಾಣಿಗಳ ವಧೆಯಲ್ಲಿಯೇ ನಿರತನಾಗಿರತಕ್ಕವನು, ಅಣ್ಣನು ಮದುವೆಯಾಗುವ ಮೊದಲೇ ಮದುವೆಯಾದ ತಮ್ಮನು – ಇವರೆಲ್ಲರೂ ನರಕಕ್ಕೆ ಹೋಗುತ್ತಾರೆ.

ಸೂಚಕಶ್ಚ ಕದರ್ಯಶ್ಚ ಮಿತ್ರಘ್ನೋ ಗುರುತಲ್ಪಗಃ ।
ಲೋಕಂ ಪಾಪಾತ್ಮನಾಮೇತೇ ಗಚ್ಛನ್ತ್ಯತ್ರ ನ ಸಂಶಯಃ ॥೩೮॥

ಚಾಡಿ ಹೇಳುವವನು, ನೀಚನು, ಮಿತ್ರದ್ರೋಹಿಯು, ಗುರುಪತ್ನಿಯೊಡನೆ ಸಮಾಗಮಮಾಡುವವನು–ಇವರೆಲ್ಲರೂ ಪಾಪಿಷ್ಠರಾದವರು ಹೋಗುವ ನರಕಲೋಕಕ್ಕೆ ಹೋಗುತ್ತಾರೆ. ಇದರಲ್ಲಿ ಸಂಶಯವೇ ಇಲ್ಲ.

---

ಮಾಡಿರುತ್ತಾರೆ. ಹೆಣ್ಣು-ಹೊನ್ನು-ಮಣ್ಣು – ಇವು ವ್ಯಾಜ್ಯಕ್ಕೆ ಕಾರಣಗಳೆಂಬುದು ಲೋಕಪ್ರಸಿದ್ಧವಾಗಿದೆ. ಆದುದರಿಂದ ರೂಪಂ ಎಂಬುದಕ್ಕೆ ಸೌಂದರ್ಯ (ಸೌಂದರ್ಯವತಿಯಾದ ಹೆಣ್ಣು) ಎಂದು ಅರ್ಥಮಾಡುವುದು ಸಮಂಜಸವಾಗಿರುತ್ತದೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri

ವಿನೋದಕ್ಕಾಗಲೀ, ಆಹಾರಕ್ಕಾಗಲೀ–ರಾಜರು ಬೇಟೆಯಾಡುವುದು ರಾಜಧರ್ಮವಾಗಿದೆ. ಅದರಂತೆ ನಿನ್ನನ್ನು ಬೇಟೆಯಾಡಿ ಸಂಹರಿಸಿದೆನೆಂದು ನೀನು ಭಾವಿಸಿರಬಹುದು. ಆದರೆ ಅದೂ ಯುಕ್ತವಲ್ಲ.

ಅಧಾರ್ಯಂ ಚರ್ಮ ಮೇ ಸದ್ಭಿ ರೋಮಾಣ್ಯಸ್ಥಿ ಚ ವರ್ಜಿತಮ್।
ಅಭಕ್ಷ್ಯಾಣಿ ಚ ಮಾಂಸಾನಿ ತ್ವದ್ವಿಧೈರ್ಧರ್ಮಚಾರಿಭಿಃ ॥೩೯॥

ಸತ್ಪುರುಷರು ನನ್ನ (ಕಪಿಯ) ಚರ್ಮವನ್ನು ಹೊದೆಯುವುದಿಲ್ಲ. ನನ್ನ ಮೈಗೂದಲಾಗಲೀ, ಮೂಳೆಯಾಗಲೀ ನಿಷೇಧಿಸಲ್ಪಟ್ಟವೆ. ನನ್ನಲ್ಲಿರುವ ಮಾಂಸವೂ ನಿನ್ನಂತಹ ಧರ್ಮಿಷ್ಠರಾಗಿರತಕ್ಕವರ ಆಹಾರಕ್ಕೆ ಯೋಗ್ಯವಲ್ಲ.

ಪಞ್ಚ ಪಞ್ಚನಖಾ ಭಕ್ಷ್ಯಾ ಬ್ರಹ್ಮಕ್ಷತ್ರೇಣ ರಾಘವ।
ಶಲ್ಯಕಃ ಶ್ವಾವಿಧೋ ಗೋಧಾ ಶಶಃ ಕೂರ್ಮಶ್ಚ ಪಞ್ಚಮಃ ॥೪೦॥

ಬ್ರಾಹ್ಮಣರು ಮತ್ತು ಕ್ಷತ್ರಿಯರು ಐದು ಉಗುರುಗಳಿರುವ ಖಡ್ಗಮೃಗ, ಮುಳ್ಳುಹಂದಿ, ಉಡ, ಮೊಲ ಮತ್ತು ಆಮೆ–ಈ ಐದು ಪ್ರಾಣಿಗಳ ಮಾಂಸವನ್ನು ಮಾತ್ರವೇ ಭಕ್ಷಿಸಬಹುದು. ನಾನೂ ಪಂಚನಖನೇ ಆದರೂ ನನ್ನ ಚರ್ಮವನ್ನಾಗಲೀ ಎಲುಬನ್ನಾಗಲೀ ಧರ್ಮಜ್ಞರಾದ ವಿದ್ವಾಂಸರು ಮುಟ್ಟುವುದೂ ಇಲ್ಲ. ನನ್ನ ಮಾಂಸವೂ ಭಕ್ಷಣಕ್ಕೆ ಯೋಗ್ಯವಲ್ಲ. ಹೀಗಿದ್ದರೂ ನೀನು ನನ್ನನ್ನು ಸಂಹರಿಸಿರುವೆ.

ಸರ್ವಜ್ಞಳಾದ ತಾರೆಯು ಸತ್ಯವೂ ಮತ್ತು ಹಿತಕರವೂ ಆದ ಮಾತನ್ನೇ ಆಡಿದಳು. ಮೋಹದಿಂದಾಗಿ ನಾನು ಅವಳ ಮಾತನ್ನು ಮೀರಿ ಬಂದು ಕಾಲವಶನಾದೆನು. ಸ್ತ್ರೀಯು ಶೀಲಸಂಪನ್ನಳಾಗಿದ್ದರೂ ಧರ್ಮಬಾಹಿರನಾದವನನ್ನು ಪತಿಯನ್ನಾಗಿ ವರಿಸಿ ಅನಾಥೆಯಾಗುವಂತೆ–ಇಂದು ಧರ್ಮಬಾಹಿರನಾದ ನಿನ್ನನ್ನು ವರಿಸಿರುವ ವಸುಂಧರೆಯೂ ಅನಾಥೆಯಾಗಿದ್ದಾಳೆ.

ಉದ್ಧತನಾದ, ಮೋಸಗಾರನಾದ, ಕ್ಷುದ್ರನಾದ, ವಿನಯಸಂಪನ್ನನೆಂದು ಸುಳ್ಳಾಗಿಯೇ ಹೇಳಿಕೊಳ್ಳುವ ಪಾಪಿಷ್ಠನಾದ ನೀನು ಮಹಾತ್ಮನಾದ ದಶರಥನಿಗೆ ಹೇಗೆ ಮಗನಾಗಿ ಹುಟ್ಟಿದೆ?

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಚಾರಿತ್ರ್ಯಭ್ರಂಶವನ್ನೇ ಕಟ್ಟುವ ಹಗ್ಗವನ್ನಾಗಿ ಹೊಂದಿರುವ, ಸತ್ಪುರುಷರ ಧರ್ಮವನ್ನು ಅತಿಕ್ರಮಿಸಿರುವ ಅಧರ್ಮವೇ ಅಂಕುಶವಾಗಿರುವ, ರಾಮರೂಪವಾದ ಆನೆಯಿಂದ ನಾನಿಂದು ಹತನಾದೆನು. ಸತ್ಪುರುಷರ ದೃಷ್ಟಿಯಲ್ಲಿ ಅಶುಭಕರವಾದ, ಅಯುಕ್ತವಾದ, ಅತಿನಿಂದ್ಯವಾದ ಇಂತಹ ದುಷ್ಕಾರ್ಯವನ್ನು ಮಾಡಿರುವ ನೀನು ಮುಂದೆ ಸತ್ಪುರುಷರೊಡನೆ ಕಲೆತಾಗ ಏನೆಂದು ಹೇಳುವೆ? ಸುಗ್ರೀವನೊಡನೆ ಯುದ್ಧಮಾಡುತ್ತಿದ್ದು ನಿನ್ನ ವಿಷಯದಲ್ಲಿ ಉದಾಸೀನನಾಗಿದ್ದ ನನ್ನ ವಿಷಯದಲ್ಲೇನೋ ನೀನು ಪರಾಕ್ರಮವನ್ನು ತೋರಿದೆ. ಆದರೆ ಅಪಕಾರವನ್ನೇ ಮಾಡಿರುವ ನಿನ್ನ ಶತ್ರುಗಳ ವಿಷಯದಲ್ಲಿ ನಿನ್ನ ಯಾವ ವಿಧವಾದ ಪರಾಕ್ರಮವನ್ನೂ ನಾನು ಕಂಡಿಲ್ಲ. ರಾಜಕುಮಾರ! ನೀನೇನಾದರೂ ನನ್ನೆದುರಾಗಿಯೇ ನಿಂತು ಯುದ್ಧಮಾಡಿದ್ದರೆ–ಈ ವೇಳೆಗಾಗಲೇ ನನ್ನಿಂದ ಹತನಾಗಿ ಯಮದೇವನನ್ನು ಕಾಣುತ್ತಿದ್ದೆ. ಮದ್ಯಪಾನಮಾಡಿ ಮತ್ತನಾಗಿ ಮಲಗಿರುವ ಮನುಷ್ಯನನ್ನು ವಿಷಸರ್ಪವು ಕಚ್ಚಿ ಸಾಯಿಸುವಂತೆ–ಯಾರಿಂದಲೂ ಎದುರಿಸಲು ಅಸಾಧ್ಯನಾದ ನನ್ನನ್ನು ಮರೆಯಲ್ಲಿ ನಿಂತು ಸಂಹರಿಸಿದೆ. ಸುಗ್ರೀವನಿಗೆ ಪ್ರಿಯವನ್ನುಂಟುಮಾಡುವ ಆಕಾಂಕ್ಷೆಯಿಂದ ನನ್ನನ್ನು ಸಂಹರಿಸಿದೆ. ಆದರೆ ಅದಕ್ಕೆ ಕಾರಣ ಸೀತಾನ್ವೇಷಣೆಯೇ ಅಲ್ಲವೇ? ಈ ಅಭಿಪ್ರಾಯವನ್ನು ನೀನು ನನಗೆ ಮೊದಲೇ ಹೇಳಿದ್ದರೆ–ಒಂದೇ ಹಗಲಿನಲ್ಲಿ ಮೈಥಿಲಿಯನ್ನು ನಿನ್ನ ಬಳಿಗೆ ತಂದೊಪ್ಪಿಸುತ್ತಿದ್ದೆನು. ನಿನ್ನ ಭಾರ್ಯೆಯನ್ನು ಅಪಹರಿಸಿರುವ ದುರಾತ್ಮನಾದ ರಾವಣನನ್ನು ಕುತ್ತಿಗೆಯನ್ನು ಹಿಡಿದು ಜೀವಸಹಿತವಾಗಿಯೇ ನಿನ್ನ ವಶಕ್ಕೊಪ್ಪಿಸುತ್ತಿದ್ದೆನು. ರಾವಣನು ಮೈಥಿಲಿಯನ್ನು ಸಾಗರದ ಮಧ್ಯದಲ್ಲೇ ಇಟ್ಟಿರಲಿ; ಪಾತಾಳದಲ್ಲೇ ಇಟ್ಟಿರಲಿ–ಮಧು-ಕೈಟಭರು ಪಾತಾಳದಲ್ಲಿ ಬಿಳೀಹೇಸರಗತ್ತೆಗಳ ರೂಪದಲ್ಲಿಟ್ಟಿದ್ದ ವೇದಗಳನ್ನು ಹಯಗ್ರೀವನು ಮೇಲಕ್ಕೆ ತಂದಂತೆ–ನಿನ್ನ ಆದೇಶಾನುಸಾರವಾಗಿ ಕರೆತರುತ್ತಿದ್ದೆನು.

ನಾನು ಸ್ವರ್ಗಕ್ಕೆ ಹೋದನಂತರ ಸುಗ್ರೀವನು ಈ ರಾಜ್ಯವನ್ನು ಪಡೆದುಕೊಳ್ಳುತ್ತಾನೆ. ಅದು ಯುಕ್ತವಾಗಿಯೇ ಇದೆ. ಆದರೆ ನೀನು ಅಧರ್ಮದಿಂದ ನನ್ನನ್ನು ಯುದ್ಧದಲ್ಲಿ ಸಂಹರಿಸಿ ತನ್ಮೂಲಕವಾಗಿ ಅವನಿಗೆ ರಾಜ್ಯವು ಸಿಕ್ಕುವಂತೆ ಮಾಡಿರುವುದು ಸರಿಯಲ್ಲ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಕಾಲಪುರುಷನೇ ಪ್ರಾಣಿಗಳನ್ನು ಈ ವಿಧವಾದ ಮರಣಕರ್ಮದಲ್ಲಿ ಸಂಯೋಜಿಸುತ್ತಾನೆ. ಪ್ರಾಣಿಗಳ ಮರಣವು ಕಾಲಕ್ಕೆ ಅಧೀನವಾದುದು. ವಿಧಿನಿಯಮದಂತೆ ನಾನೂ ಮರಣಹೊಂದಿದೆನು–ಎಂದೇ ಭಾವಿಸೋಣ. ಆದರೆ ಅದೃಶ್ಯನಾಗಿ ನಿಂತು ನನ್ನನ್ನು ಕೊಂದುದು ಸರಿ–ಎಂದು ನೀನು ಭಾವಿಸುವೆಯಾದರೆ ಅದಕ್ಕೆ ಸರ್ವಸಮ್ಮತವಾಗುವಂತಹ ಉತ್ತರಕೊಡಲು ಚೆನ್ನಾಗಿ ಯೋಚಿಸು."

ಬಾಣದ ಆಘಾತದಿಂದ ಬಹಳ ದುಃಖಿತನಾಗಿದ್ದ, ಬಾಡಿದ ಮುಖದಿಂದ ಕೂಡಿದ್ದ, ಮಹಾತ್ಮನಾದ ವಾಲಿಯು ಹೀಗೆ ಹೇಳಿ–ಸೂರ್ಯನ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ಶ್ರೀರಾಮನ ಮುಖವನ್ನು ನೋಡಿ ಸುಮ್ಮನಾದನು.

೧೭ನೆಯ ಸರ್ಗವು ಮುಗಿಯಿತು.

ಕಿಷ್ಕಿಂಧಾಕಾಂಡ ೧೮ನೆಯ ಸರ್ಗ

## ಶ್ರೀರಾಮನು ವಾಲಿಗೆ ತನ್ನ ಕಾರ್ಯದ ಔಚಿತ್ಯವನ್ನು ವಿವರಿಸಿ ಹೇಳಿದುದು: ವಾಲಿಯು ನಿರುತ್ತರನಾಗಿ ತನ್ನ ಅಪರಾಧಕ್ಕೆ ಕ್ಷಮೆ ಬೇಡಿದುದು: ಅಂಗದನ ರಕ್ಷಣೆಗಾಗಿ ಶ್ರೀರಾಮನನ್ನು ಪ್ರಾರ್ಥಿಸಿದುದು: ಶ್ರೀರಾಮನು ಆಶ್ವಾಸನೆಯನ್ನಿತ್ತುದು

ಇತ್ಯುಕ್ತಃ ಪ್ರಶ್ರಿತಂ ವಾಕ್ಯಂ ಧರ್ಮಾರ್ಥಸಹಿತಂ ಹಿತವತ್ ।
ಪರುಷಂ ವಾಲಿನಾ ರಾಮೋ ನಿಹತೇನ ವಿಚೇತಸಾ ॥೧॥

ಹೀಗೆ ಶ್ರೀರಾಮನ ಬಾಣದಿಂದ ಹತಪ್ರಾಯನಾಗಿ ಬಿದ್ದಿದ್ದ ಬುದ್ಧಿಗೆಟ್ಟಿದ್ದ ವಾಲಿಯು–ಧರ್ಮಾರ್ಥಸಹಿತವಾದ, ಹಿತಕರವಾದ ವಿನಯದಿಂದ ಕೂಡಿದ, ಕಠೋರವಾದ ಮಾತುಗಳನ್ನು ರಾಮನಿಗೆ ಹೇಳಿದನು.

ಆ ಸಮಯದಲ್ಲಿ ಕಪಿಶ್ರೇಷ್ಠನಾದ ವಾಲಿಯು ಪ್ರಭೆಯಿಲ್ಲದ ಸೂರ್ಯನಂತೆಯೂ, ನೀರಿಲ್ಲದ ಬಿಳಿಯ ಮೋಡದಂತೆಯೂ, ಆರಿಹೋದ ಅಗ್ನಿಯಂತೆಯೂ ಕಾಣುತ್ತಿದ್ದನು. ವಾಲಿಯಿಂದ ನಿಂದಿಸಲ್ಪಟ್ಟ ಶ್ರೀರಾಮನು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.
ಧರ್ಮಾರ್ಥಗಳಿಂದಲೂ – ಸದ್ಗುಣಗಳಿಂದಲೂ ಸಂಪನ್ನವಾಗಿದ್ದ, ಉತ್ತಮೋತ್ತಮವಾಗಿದ್ದ ಮಾತನ್ನು ವಾಲಿಗೆ ಹೇಳಿದನು :

" ಧರ್ಮಾರ್ಥಕಾಮಗಳ ಸ್ವರೂಪವನ್ನೂ ಲೌಕಿಕವ್ಯವಹಾರವನ್ನೂ ತಿಳಿದುಕೊಳ್ಳದಿರುವ ನೀನು ಕೇವಲ ಮೂರ್ಖತನದಿಂದ ನನ್ನನ್ನೇಕೆ ನಿಂದಿಸುತ್ತಿರುವೆ ?

ಬುದ್ಧಿಸಂಪನ್ನರನ್ನೂ, ವೃದ್ಧರನ್ನೂ, ಆಚಾರ್ಯರನ್ನೂ ಧರ್ಮಾರ್ಥಗಳ ವಿಷಯವಾಗಿ ಪ್ರಶ್ನೆಮಾಡಿ ಧರ್ಮದ ರಹಸ್ಯವೇನೆಂಬುದನ್ನೂ ತಿಳಿಯದೇ ವಾನರಸಹಜವಾದ ಚಪಲತೆಯಿಂದ ನನ್ನ ವಿಷಯದಲ್ಲಿ ನಿಂದನೆಯ ಮಾತನ್ನು ಹೇಳಲು ನೀನು ಬಯಸಿರುವೆ.

ಧರ್ಮದ ರಹಸ್ಯವು ಹೇಗಿರುವುದೆಂಬುದನ್ನು ಹೇಳುವೆನು ; ಕೇಳು. ಪರ್ವತ-ವನಾರಣ್ಯಗಳಿಂದ ಕೂಡಿರುವ ಈ ಭೂಮಂಡಲವು ಇಕ್ಷ್ವಾಕುವಂಶದವರಿಗೆ ಸೇರಿರುವುದು. ಮೃಗ-ಪಕ್ಷಿಗಳ ಮತ್ತು ಮನುಷ್ಯರ ನಿಗ್ರಹಾನುಗ್ರಹಗಳಲ್ಲಿ ಇಕ್ಷ್ವಾಕುವಂಶೀಯರಿಗೆ ಅಧಿಕಾರವಿದೆ. ಇಕ್ಷ್ವಾಕುಗಳ ಸಾಮ್ರಾಜ್ಯವನ್ನೀಗ ಧರ್ಮಾತ್ಮನಾದ, ಸತ್ಯಸಂಧನಾದ, ಸರಳಸ್ವಭಾವದಿಂದ ಕೂಡಿರುವ ಭರತನು ಆಳುತ್ತಿದ್ದಾನೆ. ಧರ್ಮ-ಕಾಮಾರ್ಥಗಳ ಸೂಕ್ಷ್ಮಸ್ವರೂಪವನ್ನು ತಿಳಿದಿರುವ ಭರತನು ದುಷ್ಟಶಿಕ್ಷಣ-ಶಿಷ್ಟಪರಿಪಾಲನೆಗಳಲ್ಲಿ ಸರ್ವದಾ ನಿರತನಾಗಿರುತ್ತಾನೆ. ಅವನಲ್ಲಿ ನಯ-ವಿನಯಗಳಿವೆ. ಸತ್ಯವೂ ಅವನಲ್ಲಿಯೇ ಪ್ರತಿಷ್ಠಿತವಾಗಿದೆ. ಅವನ ಮಹಾಪರಾಕ್ರಮವೂ ವಿಖ್ಯಾತವಾಗಿದೆ. ಇಷ್ಟೇ ಅಲ್ಲದೆ ಭರತನು ಯಾವ ಕಾಲದಲ್ಲಿ–ಯಾವ ಸ್ಥಳದಲ್ಲಿ – ಪ್ರಜೆಗಳಿಗೆ ಹಿತವಾಗುವ ಯಾವ ಕಾರ್ಯವನ್ನು ಮಾಡಬೇಕೆಂಬುದನ್ನೂ ತಿಳಿದಿರುವನು. ನಾವೂ ಮತ್ತು ಇತರ ರಾಜರೂ ಭರತನಿಂದ ಧರ್ಮೋದ್ಧಾರದ ಆದೇಶವನ್ನು ಪಡೆದು ವಿಶ್ವದಲ್ಲಿ ಧರ್ಮದ ಪರಂಪರೆಯನ್ನು ವೃದ್ಧಿಗೊಳಿಸಬೇಕೆನ್ನುವ ಆಶಯದಿಂದ ಅಖಂಡಭೂಮಂಡಲದಲ್ಲಿ ಸಂಚರಿಸುತ್ತಿದ್ದೇವೆ. ಧರ್ಮವತ್ಸಲನಾದ, ನೃಪಶ್ರೇಷ್ಠನಾದ ಭರತನು ರಾಜ್ಯವನ್ನಾಳುತ್ತಿರುವಾಗ ಧರ್ಮಕ್ಕೆ ಹಾನಿಯನ್ನುಂಟುಮಾಡಲು ಯಾರಿಗೆ ತಾನೇ ಸಾಮರ್ಥ್ಯವಿದೆ ? ಭರತನಿಂದ ನಿರ್ದೇಶಿತರಾಗಿರುವ ನಾವು ಶ್ರೇಷ್ಠವಾದ ಕ್ಷತ್ರಿಯಧರ್ಮದಲ್ಲಿ ನಿರತರಾಗಿರುತ್ತಾ ಭರತನ ಆಜ್ಞೆಯನ್ನು ಪುರಸ್ಕರಿಸಿ ಧರ್ಮಭ್ರಷ್ಟರಾದ ಪ್ರಜೆ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಗಳನ್ನು ಯಥಾಶಾಸ್ತ್ರವಾಗಿ ಶಿಕ್ಷಿಸುತ್ತೇವೆ. ನೀನಾದರೋ ಧರ್ಮಕ್ಕೆ ಲೋಪವಮಾಡಿರುವವನು ; ಅತಿನಿಂದ್ಯವಾದ ಕರ್ಮವನ್ನು ಮಾಡಿರುವೆ. ಕಾಮ ರೂಪವಾದ ಪುರುಷಾರ್ಥದಲ್ಲಿಯೇ ಹೆಚ್ಚಿನ ಆಸಕ್ತಿಯುಳ್ಳವನಾಗಿರುವೆ. ರಾಜರು ನಡೆದುಕೊಳ್ಳಬೇಕಾದ ಧರ್ಮಮಾರ್ಗದಲ್ಲಿ ನಡೆದುಕೊಳ್ಳುತ್ತಿಲ್ಲ.

ಜ್ಯೇಷ್ಠೋ ಭ್ರಾತಾ ಪಿತಾ ಚೈವ ಯಶ್ಚ ವಿದ್ಯಾಂ ಪ್ರಯಚ್ಛತಿ ।
ತ್ರಯಸ್ತೇ ಪಿತರೋ ಜ್ಞೇಯಾ ಧರ್ಮೇ ಪಥಿ ಹಿ ವರ್ತಿನಃ ॥೧೩॥

ಧರ್ಮಮಾರ್ಗದಲ್ಲಿ ವ್ಯವಹರಿಸುತ್ತಿರುವವನಿಗೆ – ಹಿರಿಯಣ್ಣ, ತಂದೆ ಮತ್ತು ವಿದ್ಯಾದಾನಮಾಡಿದ ಗುರು – ಈ ಮೂವರೂ ತಂದೆಗೆ ಸಮಾನ ರಾಗಿರುತ್ತಾರೆ.

ಯವೀಯಾನಾತ್ಮನಃ ಪುತ್ರಃ ಶಿಷ್ಯಶ್ಚಾಪಿ ಗುಣೋದಿತಃ ।
ಪುತ್ರವತ್ತೇ ತ್ರಯಶ್ಚಿನ್ತ್ಯಾ ಧರ್ಮಶ್ಚೇದತ್ರ ಕಾರಣಮ್ ॥೧೪॥

ತಮ್ಮ, ಔರಸಪುತ್ರ, ಗುಣದಿಂದ ಶ್ರೇಷ್ಠತೆಯನ್ನು ಪಡೆದಿರುವ ಶಿಷ್ಯ– ಈ ಮೂವರನ್ನೂ ಮಕ್ಕಳಂತೆಯೇ ಭಾವಿಸಬೇಕು. ಹೀಗೆ ಭಾವಿಸಬೇಕೆಂಬು ದಕ್ಕೆ ಧರ್ಮವೇ ವ್ಯವಸ್ಥಾಪಕವಾದ ಕಾರಣವಾಗಿದೆ.

ಸೂಕ್ಷ್ಮಃ ಪರಮದುರ್ಜ್ಞೇಯಃ ಸತಾಂ ಧರ್ಮಃ ಪ್ಲವಂಗಮ ।
ಹೃದಿಸ್ಥಃ ಸರ್ವಭೂತಾನಾಮಾತ್ಮಾ ವೇದ ಶುಭಾಶುಭಮ್ ॥೧೫॥

ಪ್ಲವಂಗಮನೇ ! ಧರ್ಮವು ಸತ್ಪುರುಷರಿಗೂ ತಿಳಿಯಲು ಕಷ್ಟಸಾಧ್ಯ ವಾದುದು. ಅತೀಂದ್ರಿಯವಾದುದು. ಎಲ್ಲ ಪ್ರಾಣಿಗಳ ಹೃದಯಗಳಲ್ಲಿಯೂ ಇರುವ ಅಂತರ್ಯಾಮಿಯೊಬ್ಬನೇ ಎಲ್ಲ ಪ್ರಾಣಿಗಳ ಶುಭಾಶುಭಗಳನ್ನೂ ( ಪಾಪ-ಪುಣ್ಯಗಳನ್ನೂ ) ತಿಳಿದಿರುತ್ತಾನೆ.

ನೀನು ಮೊದಲೇ ಚಂಚಲಸ್ವಭಾವದವನು. ಹುಟ್ಟುಕುರುಡರು ಹುಟ್ಟುಕುರುಡರೊಡನೆ ಪ್ರಪಂಚದ ಆಗುಹೋಗುಗಳ ವಿಷಯವಾಗಿ ಸಮಾಲೋಚಿಸುವಂತೆ – ನೀನು ನಿನ್ನಂತೆಯೇ ಚಂಚಲಸ್ವಭಾವದವರೂ ಜಿತೇಂದ್ರಿಯರಲ್ಲದವರೂ ಆಗಿರುವ ವಾನರರೊಡನೆ ಸಮಾಲೋಚಿಸುವೆ. ಇದರಿಂದ ನೀನು ಧರ್ಮಸೂಕ್ಷ್ಮಗಳನ್ನು ಹೇಗೆ ತಿಳಿಯುವೆ ?

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ನಾನಾದರೋ ಈ ಮಾತಿನ ಸ್ಪಷ್ಟಾರ್ಥವನ್ನು ನಿನಗೆ ಹೇಳುತ್ತಿದ್ದೇನೆ. ಆದರೆ ನೀನು ಕೇವಲ ಕ್ರೋಧವಶನಾಗಿ ನನ್ನನ್ನು ನಿಂದಿಸುವುದು ಯೋಗ್ಯವಲ್ಲ.

ನೀನು ಸನಾತನಧರ್ಮವನ್ನೇ ತಿರಸ್ಕರಿಸಿ ತಮ್ಮನ ಪತ್ನಿಯೊಡನೆ ಸಂಬಂಧವನ್ನು ಬೆಳೆಸಿರುವೆ. ನಾನೇಕೆ ನಿನ್ನನ್ನು ವಧಿಸಿದೆನೆಂಬುದಕ್ಕೆ ಇರುವ ಈ ಮುಖ್ಯಕಾರಣವನ್ನು ನೀನೇ ಗಮನಿಸು. ಪಾಪಕರ್ಮನಾದ ನೀನು ಇನ್ನೂ ಜೀವಂತನಾಗಿರುವ, ಧರ್ಮಾತ್ಮನಾದ, ಸುಗ್ರೀವನ ಪತ್ನಿಯಾದ ಮತ್ತು ನಿನ್ನ ಸೊಸೆಯ ಸ್ಥಾನದಲ್ಲಿರುವ ರುಮೆಯಲ್ಲಿ ಕಾಮಾಂಧನಾಗಿ ವರ್ತಿಸುತ್ತಿರುವೆ.*

ತಸ್ಯ ತ್ವಂ ಧರಮಾಣಸ್ಯ ಸುಗ್ರೀವಸ್ಯ ಮಹಾತ್ಮನಃ ... 

ತದ್ವ್ಯತೀತಸ್ಯ ತೇ ಧರ್ಮಾತ್ಕಾಮವೃತ್ತಸ್ಯ ವಾನರ ।
ಭ್ರಾತೃಭಾರ್ಯಾಭಿಮರ್ಶೇಽಸ್ಮಿನ್ದಣ್ಡೋಽಯಂ ಪ್ರತಿಪಾದಿತಃ ॥

ಧರ್ಮಭ್ರಷ್ಟನಾದ, ಕಾಮವೃತ್ತನಾದ ನೀನು ತಮ್ಮನ ಹೆಂಡತಿಯೊಡನೆ ಸಂಬಂಧವಿಟ್ಟುಕೊಂಡುದಕ್ಕಾಗಿ ನಿನಗೆ ಈ ಮರಣದಂಡನೆಯನ್ನು ವಿಧಿಸಲಾಗಿದೆ.

ನ ಹಿ ಧರ್ಮವಿರುದ್ಧಸ್ಯ ಲೋಕವೃತ್ತಾದಪೇಯುಷಃ ।
ದಣ್ಡಾದನ್ಯತ್ರ ಪಶ್ಯಾಮಿ ನಿಗ್ರಹಂ ಹರಿಯೂಥಪ ॥೨೧॥

ಧರ್ಮಕ್ಕೆ ವಿರುದ್ಧವಾಗಿ ವರ್ತಿಸಿರುವ, ಲೋಕಾಚಾರದಿಂದಲೂ ಹೀನನಾಗಿರುವ ನಿನಗೆ ಮರಣದಂಡನೆಗಿಂತಲೂ ಬೇರೆಯ ಶಿಕ್ಷೆಯನ್ನು ನಾನು ಕಾಣೆನು. ಸತ್ಕುಲಪ್ರಸೂತನಾದ, ಕ್ಷತ್ರಿಯಕುಲದಲ್ಲಿ ಹುಟ್ಟಿರುವ ನನಗೆ ನೀನು ಮಾಡಿರುವ ಘೋರಪಾತಕವನ್ನು ಸಹಿಸಿಕೊಳ್ಳಲಾಗಲಿಲ್ಲ.

ಔರಸೀಂ ಭಗಿನೀಂ ವಾಪಿ ಭಾರ್ಯಾಂ ವಾಪ್ಯನುಜಸ್ಯ ಯಃ ।
ಪ್ರಚರೇತ ನರಃ ಕಾಮಾತ್ತಸ್ಯ ದಣ್ಡೋ ವಧಃ ಸ್ಮೃತಃ ॥೨೨॥

---

*ರುಮೆಯು ತಾರ ಎಂಬ ವಾನರನ ಮಗಳು. ಸುಗ್ರೀವನ ಹೆಂಡತಿ. ತಾರೆಯು ಸುಷೇಣನೆಂಬ ವಾನರನ ಮಗಳು. ವಾಲಿಯ ಹೆಂಡತಿ. ವಾಲಿಯು ಮಾಯಾವಿಯೊಡನೆ ಯುದ್ಧಕ್ಕಾಗಿ ಬಿಲದೊಳಕ್ಕೆ ಹೋದಾಗ ಸುಗ್ರೀವನು ಬಿಲದ ಬಾಗಿಲಿನಲ್ಲಿ ಒಂದು ವರ್ಷದವರೆಗೆ ಕಾದುನಿಂತಿದ್ದನು. ರಕ್ತದ ಕೋಡಿಯೇ ಬಿಲದಿಂದ ಹೊರಬರಲು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಯಾವನು ತನ್ನ ಮಗಳ ವಿಷಯದಲ್ಲಾಗಲೀ, ತಂಗಿಯ ವಿಷಯದಲ್ಲಾಗಲೀ, ತಮ್ಮನ ಹೆಂಡತಿಯ ವಿಷಯದಲ್ಲಾಗಲೀ – ಕಾಮುಕನಾಗಿ ವರ್ತಿಸುವನೋ – ಅಂತಹವನಿಗೆ ಮರಣದಂಡನೆಯೇ ಯುಕ್ತವಾದ ಶಿಕ್ಷೆಯೆಂದು ಹೇಳಲ್ಪಟ್ಟಿದೆ.

ಭರತನೀಗ ಭೂಮಂಡಲಕ್ಕೆ ಚಕ್ರವರ್ತಿಯಾಗಿದ್ದಾನೆ. ನಾವು ಅವನ ಆಜ್ಞಾಧಾರಕರಾಗಿದ್ದೇವೆ. ನೀನು ಧರ್ಮವನ್ನು ಅತಿಕ್ರಮಿಸಿರುವೆ. ನಿನ್ನಂತಹ ಅಧರ್ಮಿಯನ್ನು ಉಪೇಕ್ಷಿಸಲು ಹೇಗೆತಾನೇ ಸಾಧ್ಯವಾಗುತ್ತದೆ? ಸರ್ವೋತ್ಕೃಷ್ಟವಾದ ಧರ್ಮವನ್ನು ಅತಿಕ್ರಮಿಸಿ ನಡೆಯುವ ಅಧರ್ಮಿಗಳನ್ನು ಶಿಕ್ಷಿಸುತ್ತಾ ಧರ್ಮದಿಂದ ರಾಜ್ಯವನ್ನು ಪರಿಪಾಲಿಸುತ್ತಿರುವ ಭರತನು ಕಾಮಚಾರಿಗಳಾದವರ ನಿಗ್ರಹದಲ್ಲಿ ಸರ್ವದಾ ನಿರತನಾಗಿರುತ್ತಾನೆ. ನಾವಾದರೋ ಚಕ್ರವರ್ತಿಯಾದ ಭರತನ ಆದೇಶವನ್ನೇ ಶಾಸನವನ್ನಾಗಿ ಭಾವಿಸಿ ನಿನ್ನಂತಹ ಮರ್ಯಾದೆಗೆಟ್ಟು ವರ್ತಿಸುವ ರಾಜರನ್ನು ನಿಗ್ರಹಿಸಲೆಂದೇ ಸದಾ ಸಿದ್ಧರಾಗಿರುತ್ತೇವೆ.

ಇನ್ನು ನಾನು ನನ್ನ ಮತ್ತು ಸುಗ್ರೀವನ ಸಂಬಂಧದ ವಿಷಯವಾಗಿ ಹೇಳುವೆನು; ಕೇಳು. ಲಕ್ಷ್ಮಣನೊಡನೆ ನನಗೆ ಹೇಗೆ ಸಖ್ಯವಿರುವುದೋ ಹಾಗೆಯೇ ಸುಗ್ರೀವನೊಡನೆಯೂ ಸಖ್ಯವಿದೆ. ಪತ್ನೀ ಮತ್ತು ರಾಜ್ಯಗಳ ನಿಮಿತ್ತವಾಗಿ ಈ ಸಖ್ಯವುಂಟಾಗಿದೆ. ಅವನು ನನ್ನ ಶ್ರೇಯಸ್ಸಿನ ಸಾಧನೆಯಲ್ಲಿ ಸರ್ವದಾ ನಿರತನಾಗಿರುತ್ತಾನೆ. ಅಗ್ನಿಸಾಕ್ಷಿಯಾಗಿ ಸಖ್ಯಮಾಡಿಕೊಂಡ ಸಮಯದಲ್ಲಿ ನಾನು ಎಲ್ಲ ವಾನರರ ಸಮಕ್ಷದಲ್ಲಿಯೂ ವಾಲಿಯನ್ನು ಸಂಹರಿಸುವೆನೆಂದು ಸುಗ್ರೀವನಿಗೆ ಪ್ರತಿಜ್ಞೆ ಮಾಡಿಕೊಟ್ಟಿದ್ದೆನು. ಆ ಪ್ರತಿಜ್ಞೆ

---

ಅಣ್ಣನು ಮೃತನಾಗಿರುವನೆಂದೇ ನಿರ್ಧರಿಸಿ, ರಾಕ್ಷಸನು ಬಿಲದಿಂದ ಹೊರಬರದಿರಲೆಂದು, ಬಿಲವನ್ನು ಪರ್ವತದ ಬಂಡೆಯಿಂದ ಮುಚ್ಚಿ ಕಿಷ್ಕಿಂಧೆಗೆ ಹಿಂದಿರುಗಿದನು. ಮಂತ್ರಿಗಳಿಗೆ ಈ ವಿಷಯವು ತಿಳಿದು ಸುಗ್ರೀವನಿಗೆ ಇಷ್ಟವಿಲ್ಲದಿದ್ದರೂ ಕಿಷ್ಕಿಂಧಾರಾಜ್ಯದಲ್ಲಿ ಪಟ್ಟಗಟ್ಟಿದರು. ಹಿಂದೆ ಧರ್ಮಶಾಸ್ತ್ರಾನುಸಾರವಾಗಿ ಅಣ್ಣನು ಮೃತನಾದಲ್ಲಿ ದೇವರನು (ಮೈದುನನು) ಅಣ್ಣನ ಭಾರ್ಯೆಯನ್ನು ಪರಿಗ್ರಹಿಸುವ ವಾಡಿಕೆಯಿದ್ದಿತು. ಕಲಿಯುಗದಲ್ಲಿ ಇದು ನಿಷಿದ್ಧವಾಗಿದೆ. ಆ ವಾಡಿಕೆಯಂತೆ ತಾರೆಯು ಸುಗ್ರೀವನ ಪತ್ನಿಯೂ ಆದಳು. ಸುಗ್ರೀವನು ತಾರೆಯನ್ನು ಪರಿಗ್ರಹಿಸಿದುದು ಧರ್ಮಕ್ಕೆ ವಿರುದ್ಧವಾಗಿರಲಿಲ್ಲ. ಬಳಿಕ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಯನ್ನು ಉಪೇಕ್ಷಿಸಲು ನನ್ನಂತಹವನಿಗೆ ಹೇಗೆ ಸಾಧ್ಯ? ಧರ್ಮಸಮ್ಮತವಾದ ಈ ಎಲ್ಲ ಕಾರಣಗಳಿಂದಲೂ ನಿನಗೆ ವಿಧಿಸಿರುವ ಈ ಮರಣದಂಡನೆಯು ಯುಕ್ತವೇ ಆಗಿರುವುದೆಂಬುದನ್ನು ವಿಚಾರಮಾಡಿ ನೀನೂ ಸಮ್ಮತಿಸು. ನಿನ್ನ ನಿಗ್ರಹವು ಸರ್ವಥಾ ಧರ್ಮವೇ ಆಗಿದೆಯೆಂಬುದನ್ನು ನೀನೂ ಗಮನಿಸಬೇಕಾಗಿದೆ. ಧರ್ಮವನ್ನೇ ಅನುಸರಿಸಿ ನಡೆಯುವವನು ಸ್ನೇಹಿತನಾದವನಿಗೆ ಅತ್ಯವಶ್ಯವಾಗಿ ಉಪಕಾರವನ್ನು ಮಾಡಬೇಕು. ಧರ್ಮೈಕದೃಷ್ಟಿಯುಳ್ಳ ನೀನಾದರೂ ನಾನು ಮಾಡಿರುವ ಕಾರ್ಯವನ್ನು ಅನುಮೋದಿಸುವುದು ಯೋಗ್ಯವಾಗಿದೆ. ಸದಾಚಾರದಲ್ಲಿಯೇ ಆಸಕ್ತಿಯು ಹುಟ್ಟುವಂತೆ ಮಾಡುವ, ಮನುವು ಹೇಳಿರುವ ಎರಡು ಶ್ಲೋಕಗಳನ್ನು ನಾನು ಕೇಳಿದ್ದೇನೆ. ಚಾರಿತ್ರ್ಯಪ್ರತಿಪಾದಕವಾದ ಆ ಎರಡು ಶ್ಲೋಕಗಳನ್ನು ಧರ್ಮಕುಶಲರಾದ ವಿದ್ವಾಂಸರೂ ಅಂಗೀಕರಿಸುತ್ತಾರೆ. ಅದರಂತೆಯೇ ನಾನೂ ನಡೆದುಕೊಂಡಿರುತ್ತೇನೆ.

ರಾಜಭಿರ್ಧೃತದಣ್ಡಾಸ್ತು ಕೃತ್ವಾ ಪಾಪಾನಿ ಮಾನವಾಃ ।
ನಿರ್ಮಲಾಃ ಸ್ವರ್ಗಮಾಯಾನ್ತಿ ಸನ್ತಃ ಸುಕೃತಿನೋ ಯಥಾ ॥೩೧॥

ಮನುಷ್ಯರು ಪಾಪಗಳನ್ನು ಮಾಡಿ ರಾಜನಿಂದ ಯಥೋಚಿತವಾದ ಶಿಕ್ಷೆಯನ್ನು ಪಡೆದು ಅನುಭವಿಸಿ ನಿರ್ಮಲರಾಗಿ (ಪಾಪದಿಂದ ಮುಕ್ತರಾಗಿ) ಸುಕೃತಿಗಳಾದ ಸಾಧುಪುರುಷರಂತೆಯೇ ಸ್ವರ್ಗಕ್ಕೆ ಹೋಗುತ್ತಾರೆ.

---

ಬಿಲದಿಂದ ಹೊರಬಂದ ವಾಲಿಯು ತಮ್ಮನನ್ನು ರಾಜ್ಯಭ್ರಷ್ಟನನ್ನಾಗಿ ಮಾಡಿದುದಲ್ಲದೇ ಸುಗ್ರೀವನಿಗೆ ಪ್ರತೀಕಾರಮಾಡಬೇಕೆಂಬ ಶಠತ್ವದಿಂದ ಸುಗ್ರೀವನ ಭಾರ್ಯೆಯಾದ ರುಮೆಯನ್ನೂ ತನ್ನ ಅಂತಃಪುರದಲ್ಲಿರಿಸಿಕೊಂಡನು. ತಮ್ಮನ ಭಾರ್ಯೆಯನ್ನು ಉಪಭೋಗಿಸುವುದು ಮಹಾಪಾಪಕರ. ಸೊಸೆಯನ್ನು ಉಪಭೋಗಿಸಿದ ಪಾಪಕ್ಕೆ ಗುರಿಯಾಗುತ್ತಾನೆ. ಇದಕ್ಕಿಂತಲೂ ಹೆಚ್ಚಿನ ಅಧರ್ಮವಾಗಲೀ ಪಾಪವಾಗಲೀ ಮತ್ತಾವುದೂ ಇಲ್ಲ. ಇದು ಶಿಕ್ಷಾರ್ಹವಾದುದು. ಮೇಲಾಗಿ ಒಂದು ದೇಶದ ರಾಜನೇ ಈ ಅಕೃತ್ಯವನ್ನು ಮಾಡಲು ತೊಡಗಿದರೆ-ಧರ್ಮವೆಲ್ಲಿ ಉಳಿಯುವುದು? ಯಥಾ ರಾಜಾ ತಥಾ ಪ್ರಜಾಃ-ಎಂಬಂತೆ ಪ್ರಜೆಗಳೆಲ್ಲರೂ ಅಧರ್ಮಿಗಳೇ ಆಗುವರು. ಆದುದರಿಂದ ರಾಜನೇ ಮಾಡಿರುವ ಈ ಮಹಾಪರಾಧಕ್ಕೆ ಶಿಕ್ಷೆಯೆಂದರೆ ಮರಣದಂಡನೆಯೇ ಸರಿ. ಮರಣದಂಡನೆಯಾಗಬೇಕೆಂಬುದು ಧರ್ಮನಿರ್ಣಯವೇ ಹೊರತು ಯಾವ ರೀತಿಯಲ್ಲಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಶಾಸನಾದ್ವಾ ವಿಮೋಕ್ಷಾದ್ವಾ ಸ್ತೇನಃ ಸ್ತೇಯಾತ್ಪ್ರಮುಚ್ಯತೇ ।
ರಾಜಾ ತ್ವಶಾಸನ್ಪಾಪಸ್ಯ ತದವಾಪ್ನೋತಿ ಕಿಲ್ಬಿಷಮ್ ॥೩೨॥

ಕಳ್ಳತನವನ್ನು ಅಥವಾ ಯಾವುದೇ ಪಾಪಕರ್ಮವನ್ನು ಮಾಡಿದವನು ರಾಜನು ಕೊಡುವ ಶಿಕ್ಷೆಯಿಂದಾಗಲೀ, ದೇಶಭ್ರಷ್ಟನನ್ನಾಗಿ ಮಾಡುವುದ ರಿಂದಾಗಲೀ ಪಾಪದಿಂದ ಬಿಡುಗಡೆಹೊಂದುತ್ತಾನೆ. ಒಂದು ವೇಳೆ ರಾಜನು ಪಾಪಿಷ್ಠನನ್ನು ಶಿಕ್ಷಿಸದೇ ಹೋದರೆ ಪಾಪಿಷ್ಠನ ಪಾಪವನ್ನು ರಾಜನೇ ಪಡೆದುಕೊಳ್ಳುತ್ತಾನೆ.*

ಹಿಂದೆ ಸಂನ್ಯಾಸಿಯೊಬ್ಬನು ನಿನ್ನಂತೆಯೇ ಇದೇ ವಿಧವಾದ ಪಾಪ ವನ್ನು ಮಾಡಿದ್ದನು. ಆ ಸಮಯದಲ್ಲಿ ರಾಜನಾಗಿದ್ದ, ನನ್ನ ವೃದ್ಧಪಿತಾ ಮಹನೂ–ಪರಮಪೂಜ್ಯನೂ ಆದ ಮಾಂಧಾತನು ಮನುವಿನಿಂದ ಹೇಳಲ್ಪಟ್ಟ ಈ ಶ್ಲೋಕಗಳ ನಿರ್ದೇಶಾನುಸಾರವಾಗಿ ಬಹಳ ಘೋರವಾದ ಪ್ರಾಣಾಂತಿಕ ಪಾದ ಶಿಕ್ಷೆಯನ್ನು ಆ ಸಂನ್ಯಾಸಿಗೆ ವಿಧಿಸಿದನು. ರಾಜರು ಪ್ರಮತ್ತರಾಗಿ ತಮ್ಮ ಕರ್ತವ್ಯವನ್ನು ಮಾಡದೇ ಇರುವುದರಿಂದ ಪ್ರಜೆಗಳೂ ಪಾಪಮಾಡು

---

ಮರಣದಂಡನೆಯಾಗಬೇಕೆಂಬುದು ಇಲ್ಲಿ ಮುಖ್ಯವಲ್ಲ. ರಾಮನು ಪರೋಕ್ಷವಾಗಿ ನಿಂತು ದಂಡನೆಯನ್ನು ಕಾರ್ಯರೂಪಕ್ಕೆ ತರಬಹುದು; ಎದುರಾಗಿ ನಿಂತೂ ಕಾರ್ಯ ರೂಪಕ್ಕೆ ತರಬಹುದು. ಸೊಸೆಯನ್ನು ಉಪಭೋಗಿಸಿದುದಕ್ಕಾಗಿ ಮರಣದಂಡನೆ ಯಾಗಬೇಕೆಂಬುದು ಮುಖ್ಯವಿಷಯವೇ ಹೊರತು ಮರಣದಂಡನೆಯು ಹೇಗಾಗ ಬೇಕೆಂಬುದು ಮುಖ್ಯವಿಷಯವಲ್ಲ. ಕಲ್ಲುಗಾಣಕ್ಕಾದರೂ ಹಾಕಬಹುದು; ವಿಷಪ್ರಣಿಸ ಬಹುದು; ನೇಣುಹಾಕಬಹುದು; ಬೆಟ್ಟದ ಮೇಲಿಂದ ತಳ್ಳಬಹುದು. ಆದುದರಿಂದ ಶ್ರೀರಾಮನು ಮರೆಯಲ್ಲಿ ನಿಂತು ವಾಲಿಯನ್ನು ವಧಿಸಿದುದೂ ವಿಹಿತವೇ ಆಗಿತ್ತು. ಅದನ್ನೇ ಶ್ರೀರಾಮನು ಮುಂದೆ ಹೇಳುತ್ತಾನೆ.

* ವಿಮೋಕ್ಷಾದ್ವಾ ಎಂಬುದಕ್ಕೆ ಒಬ್ಬ ವ್ಯಾಖ್ಯಾನಕಾರರು ಬ್ರಾಹ್ಮಣಾದೀನಾಂ ಪಾಪಿತ್ವೇ ವಿಮೋಕ್ಷಣಾತ್ ಗ್ರಾಮಾದಿಭ್ಯೋ ನಿಃಸಾರಣಾದಿತ್ಯರ್ಥಃ–ಬ್ರಾಹ್ಮಣರೇ ಮೊದ ಲಾದವರು ಪಾಪಮಾಡಿದಲ್ಲಿ ಗ್ರಾಮದಿಂದ ಗಡೀಪಾರುಮಾಡುವುದರ ಮೂಲಕ ಶಿಕ್ಷಿಸು ವುದು–ಎಂದೂ, ಮತ್ತೊಬ್ಬರು ವಿಮೋಕ್ಷಾದ್ವಾ – ವಿಸರ್ಜನಾದ್ವಾ ಬಿಟ್ಟುಬಿಡುವುದ ರಿಂದಾಗಲಿ–ಎಂದೂ ಅರ್ಥಮಾಡಿರುತ್ತಾರೆ. ಪಾಪಮಾಡಿದವರನ್ನು ಬಿಟ್ಟುಬಿಟ್ಟರೆ ಅವನ ಪಾಪಪರಿಹಾರವಾಗುವುದಿಲ್ಲ. ಶಿಕ್ಷೆಯಾಗಲೇಬೇಕು. ವಿಮೋಕ್ಷಣಪದಕ್ಕೆ ಪರಿತ್ಯಜಿಸು ವುದು ಎಂಬ ಅರ್ಥವಿದೆ. ಆದುದರಿಂದ ಗಡೀಪಾರು ಎಂಬ ಅರ್ಥವೇ ಇಲ್ಲಿ ಹೊಂದಿ ಕೊಳ್ಳುತ್ತದೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತ್ತಾರೆ. ಪುನಃ ಜಾಗರೂಕರಾದ ರಾಜರು ಅಪರಾಧಿಗಳಿಗೆ ಪ್ರಾಯಶ್ಚಿತ್ತ ರೂಪವಾಗಿ ಶಿಕ್ಷೆಕೊಡುತ್ತಾರೆ. ಹೀಗೆ ಮಾಡುವುದರಿಂದ ಇಬ್ಬರ ಪಾಪಗಳೂ ಪರಿಹಾರವಾಗುತ್ತವೆ.[1]

ವಾನರಶ್ರೇಷ್ಠನೇ ! ನಿನ್ನ ಪರಿತಾಪವನ್ನು ಸಾಕುಮಾಡು. ಧರ್ಮವನ್ನು ಉದ್ಧರಿಸಬೇಕಾದ ಕಾರಣದಿಂದಲೇ ನಾನು ನಿನ್ನನ್ನು ವಧಿಸಿದ್ದೇನೆ. ಮೇಲಾಗಿ ನಾವು ಯಾವ ಕಾರ್ಯವನ್ನೇ ಆಗಲೀ ಮಾಡಲು ಅಥವಾ ಮಾಡದಿರಲು ಸ್ವತಂತ್ರರಲ್ಲ. ಶಾಸ್ತ್ರದ ನಿರ್ದೇಶದಂತೆ ನಡೆದುಕೊಳ್ಳುತ್ತಿದ್ದೇವೆ. ನಿನ್ನನ್ನು ಈ ರೀತಿಯಲ್ಲಿ ಕೊಲ್ಲಲು ಇದ್ದ ಮತ್ತೊಂದು ಕಾರಣವನ್ನೂ ಕೇಳು. ಯುಕ್ತಿಯುಕ್ತವಾದ ಆ ಕಾರಣವನ್ನು ಕೇಳಿದ ಮೇಲಾದರೂ ನೀನು ಕೋಪವನ್ನು ತ್ಯಜಿಸುವುದು ಯುಕ್ತವಾಗಿದೆ. ಈ ಕಾರ್ಯದಿಂದ ನನ್ನ ಮನಸ್ಸಿನಲ್ಲಿ ಪರಿತಾಪವಾಗಲೀ ಖೇದವಾಗಲೀ ಉಂಟಾಗಿಲ್ಲ.

ವಾಗುರಾಭಿಶ್ಚ ಪಾಶೈಶ್ಚ ಕೂಟೈಶ್ಚ ವಿವಿಧೈರ್ನರಾಃ ।
ಪ್ರತಿಚ್ಛನ್ನಾಶ್ಚ ದೃಶ್ಯಾಶ್ಚ ಗೃಹ್ಣನ್ತಿ ಸುಬಹೂನ್ಮೃಗಾನ್ ॥೩೯॥
ಪ್ರಧಾವಿತಾನ್ವಾ ವಿತ್ರಸ್ತಾನ್ವಿಸ್ರಬ್ಧಾಂಶ್ಚಾಪಿ ನಿಷ್ಠಿತಾನ್ ॥೪೦॥
ಪ್ರಮತ್ತಾನಪ್ರಮತ್ತಾನ್ವಾ ನರಾ ಮಾಂಸಾರ್ಥಿನೋ ಭೃಶಮ್ ।
ವಿಧ್ಯನ್ತಿ ವಿಮುಖಾಂಶ್ಚಾಪಿ ನ ಚ ದೋಷೋಽತ್ರ ವಿದ್ಯತೇ ॥೪೧॥

ಮನುಷ್ಯರು ಬಲೆಗಳಿಂದಲೂ ಇನ್ನೂ ಹಲವಾರು ಕಪಟವಿಧಾನಗಳಿಂದಲೂ ಮರೆಯಲ್ಲಿದ್ದುಕೊಂಡು ಅಥವಾ ಪ್ರತ್ಯಕ್ಷವಾಗಿ ಹಲವಾರು ಮೃಗಗಳನ್ನು ಹಿಡಿಯುತ್ತಾರೆ. ಮೃಗಗಳು ಓಡುತ್ತಿರಲಿ; ಹೆದರಿಕೊಂಡಿರಲಿ; ಕೊಲ್ಲುವುದಿಲ್ಲವೆಂಬ ವಿಶ್ವಾಸದಿಂದಲೇ ಇರಲಿ; ಎದುರಾಗಿ ನಿಂತಿರಲಿ; ಪ್ರಮತ್ತವಾಗಿರಲಿ; ಅಪ್ರಮತ್ತವಾಗಿರಲಿ–ಮಾಂಸಾರ್ಥಿಗಳಾದ ಮಾನವರು ಮೃಗಗಳನ್ನು ಕೊಲ್ಲುತ್ತಾರೆ. ಹೀಗೆ ಕೊಲ್ಲುವುದರಿಂದ ಯಾವ ದೋಷವೂ ಇಲ್ಲ.

---

1 ಪ್ರಮತ್ತರಾದ ಇತರ ರಾಜರೂ ನಿನ್ನಂತೆ ಪಾಪಮಾಡಿರುವುದುಂಟು. ಅವರು ತಾವೇ ಪಾಪದ ಪರಿಹಾರಕ್ಕಾಗಿ ಸ್ಮೃತ್ಯುಕ್ತವಾದ ರೀತಿಯಲ್ಲಿ ಪ್ರಾಯಶ್ಚಿತ್ತಗಳನ್ನು ಮಾಡಿಕೊಳ್ಳುತ್ತಾರೆ ಆದರಿಂದ ಅವರು ಮಾಡಿದ ಪಾಪವು ಪರಿಹಾರವಾಗುತ್ತದೆ– ಹೀಗೂ ಅರ್ಥಮಾಡಬಹುದಾಗಿದೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.


ಧರ್ಮಕೋವಿದರಾದ ರಾಜರ್ಷಿಗಳೂ ಬೇಟೆಯಾಡಲು ಕಾಡಿಗೆ ಹೋಗುತ್ತಾರೆ. ನೀನಾದರೋ ಶಾಖಾಮೃಗವಾಗಿರುವೆ. ಈ ಕಾರಣದಿಂದಲೇ ನೀನು ನನ್ನೊಡನೆ ನೇರವಾಗಿ ಯುದ್ಧಮಾಡದಿದ್ದರೂ, ಸುಗ್ರೀವನೊಡನೆ ಯುದ್ಧಮಾಡುತ್ತಿದ್ದರೂ ನಾನು ನಿನ್ನನ್ನು ಬಾಣದಿಂದ ಸಂಹರಿಸಿದೆನು.

ದುರ್ಲಭಸ್ಯ ಚ ಧರ್ಮಸ್ಯ ಜೀವಿತಸ್ಯ ಶುಭಸ್ಯ ಚ ।
ರಾಜಾನೋ ವಾನರಶ್ರೇಷ್ಠ ಪ್ರದಾತಾರೋ ನ ಸಂಶಯಃ ॥೪೧॥

ವಾನರಶ್ರೇಷ್ಠನೇ! ದುರ್ಲಭವಾದ ಧರ್ಮವನ್ನೂ, ಮಂಗಳಕರವಾದ ಜೀವನವನ್ನೂ, ಸೌಭಾಗ್ಯವನ್ನೂ ದಯಪಾಲಿಸುವವರು ರಾಜರೇ ಆಗಿದ್ದಾರೆ. ಈ ವಿಷಯದಲ್ಲಿ ಸಂಶಯವೇ ಇಲ್ಲ.

ತಾನ್ನ ಹಿಂಸ್ಯಾನ್ನ ಚಾಕ್ರೋಶೇನ್ನಾಕ್ಷಿಪೇನ್ನಾಪ್ರಿಯಂ ವದೇತ್ ।
ದೇವಾ ಮನುಷ್ಯರೂಪೇಣ ಚರನ್ತ್ಯೇತೇ ಮಹೀತಲೇ ॥೪೨॥

ಅಂತಹ ರಾಜರನ್ನು ಯಾವುದೇ ಕಾರಣದಿಂದಲೂ ಹಿಂಸಿಸಬಾರದು. ಅವರ ವಿಷಯದಲ್ಲಿ ಕೋಪಗೊಳ್ಳಬಾರದು. ಅಪ್ರಿಯವಾದ ಮಾತನ್ನೂ ಹೇಳಬಾರದು. ಆಕ್ಷೇಪಿಸಲೂ ಬಾರದು. ದೇವತೆಗಳೇ (ಲೋಕಪಾಲರೇ) ಮನುಷ್ಯರೂಪದಲ್ಲಿ ರಾಜರಾಗಿ ಹುಟ್ಟಿ ಈ ಭೂಮಂಡಲದಲ್ಲಿ ಸಂಚರಿಸುತ್ತಿರುತ್ತಾರೆ.*

ನೀನಾದರೋ ಧರ್ಮವನ್ನು ತಿಳಿಯದೇ ಕೇವಲ ಕ್ರೋಧಕ್ಕೆ ವಶನಾಗಿ ತಾತ-ಮುತ್ತಾತಂದಿರು ಅನುಸರಿಸುತ್ತಿದ್ದ ಕ್ಷತ್ರಧರ್ಮದಲ್ಲಿಯೇ ಸುಸ್ಥಿರನಾಗಿರುವ ನನ್ನನ್ನು ನಿಂದಿಸುತ್ತಿರುವೆ."

ಶ್ರೀರಾಮನು ಹೀಗೆ ಹೇಳಲು ಧರ್ಮಮಾರ್ಗದಿಂದಲೇ ರಾಮನು ತನ್ನನ್ನು ವಧಿಸಿರುವನೆಂಬುದರಲ್ಲಿ ನಿಶ್ಚಯವಾದ ಬುದ್ಧಿಯನ್ನು ಹೊಂದಿದ ವಾಲಿಯು ತಾನು ಮಾಡಿದ ಅಕಾರ್ಯಕ್ಕಾಗಿ ಬಹಳ ವ್ಯಥೆಪಟ್ಟನು.

* ದೇವಾಃ–ಎಂಬುದಕ್ಕೆ ಅಷ್ಟೌ ಲೋಕಪಾಲಾಃ–ಎಂದು ಒಬ್ಬರು ವ್ಯಾಖ್ಯಾನ ಮಾಡಿದ್ದಾರೆ. ಅಷ್ಟಾಭಿಃ ಲೋಕಪಾಲಾನಾಂ ಮಾತ್ರಾಭಿಃ ಕಲ್ಪಿತೋ ನೃಪಃ ॥ ಎಂಬ ಸ್ಮೃತಿ ವಚನವನ್ನು ಉದ್ಧರಿಸಿದ್ದಾರೆ.



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.
ಮುಂದೆ ಅವನು ರಾಘವನಲ್ಲಿ ಯಾವ ವಿಧವಾದ ದೋಷವನ್ನೂ ಎಣಿಸಲಿಲ್ಲ. ಬಳಿಕ ಕೈಮುಗಿದುಕೊಂಡು ಹೇಳಿದನು :

"ನರಶ್ರೇಷ್ಠನೇ ! ನೀನು ಏನು ಹೇಳಿದೆಯೋ ಅದು ಹಾಗೆಯೇ ಸರಿ. ಅದರಲ್ಲಿ ಸಂಶಯವೇ ಇಲ್ಲ. ನಿನ್ನಂತಹ ಪುರುಷಶ್ರೇಷ್ಠನಿಗೆ ನನ್ನಂತಹ ನಿಹೀನನು ಉತ್ತರಕೊಡಲು ಸಮರ್ಥನಲ್ಲ. ಈ ಹಿಂದೆ ನಾನು ಪ್ರಮಾದವಶದಿಂದ ನಿನ್ನ ವಿಷಯದಲ್ಲಿ ಅಪ್ರಿಯವಾದ ಮಾತುಗಳನ್ನಾಡಿದುದಕ್ಕಾಗಿ ನನ್ನಲ್ಲಿ ದೋಷವನ್ನೆಣಿಸಬೇಡ. ನೀನು ಅಪರೋಕ್ಷಜ್ಞಾನಾನುಭವದಿಂದ ಧರ್ಮಾರ್ಥ-ಕಾಮಗಳ ತತ್ತ್ವವನ್ನು ಸಂಪೂರ್ಣವಾಗಿ ತಿಳಿದಿರುವೆ. ಪ್ರಜೆಗಳ ಹಿತದಲ್ಲಿಯೇ ಯಾವಾಗಲೂ ನಿರತನಾಗಿರುವೆ. ಕಾರ್ಯ-ಕಾರಣಗಳನ್ನು ನಿರ್ಣಯಿಸುವುದರಲ್ಲಿ (ದಂಡನೆ ಮತ್ತು ಅದಕ್ಕೆ ಕಾರಣಭೂತವಾದ ಅಪರಾಧ-ಇವುಗಳನ್ನು ನಿರ್ಣಯಿಸುವುದರಲ್ಲಿ) ನಿನ್ನ ಅಂತಃಕರಣವು ಸ್ಥಿರವೂ ಮತ್ತು ನಿರ್ಮಲವೂ ಆಗಿದೆ. ನಾನು ಧರ್ಮಭ್ರಷ್ಟರಲ್ಲಿ ಅಗ್ರಗಣ್ಯನಾಗಿದ್ದೇನೆ. ಧರ್ಮದಿಂದ ಜಾರಿಬಿದ್ದಿದ್ದೇನೆ. ಇಂತಹ ನನ್ನನ್ನು ಧರ್ಮಯುಕ್ತವಾದ ಮಾತುಗಳಿಂದ ಪರಿಪಾಲಿಸು."

ವಾಲಿಯ ಕಣ್ಣುಗಳಿಂದ ಧಾರಾಕಾರವಾಗಿ ನೀರು ಹರಿಯುತ್ತಿದ್ದುದರಿಂದ ಕಂಠವು ಗದ್ಗದವಾಗಿದ್ದಿತು. ದೀನಧ್ವನಿಯಿಂದ ಕೂಡಿದ್ದ ವಾಲಿಯು ರಾಮನನ್ನು ದಿಟ್ಟಿಸಿನೋಡುತ್ತಾ ಕೆಸರಿನಲ್ಲಿ ಸಿಕ್ಕಿಕೊಂಡಿರುವ ಆನೆಯಂತೆ ಸಂಕಟಪಡುತ್ತಾ ಮೆಲ್ಲನೆ ಹೇಳಿದನು :

"ರಾಘವ ! ನಾನು ಅವಸಾನಹೊಂದಿದುದಕ್ಕಾಗಿ ಶೋಕಿಸುತ್ತಿಲ್ಲ. ತಾರೆಯ ವಿಷಯವಾಗಿಯೂ ದುಃಖಪಡುತ್ತಿಲ್ಲ. ಬಾಂಧವರಿಗಾಗಿಯೂ ದುಃಖಪಡುವುದಿಲ್ಲ. ಆದರೆ ಸಕಲಸದ್ಗುಣಸಂಪನ್ನನಾದ, ಸುವರ್ಣಮಯವಾದ ತೋಳುಬಂದಿಯನ್ನು ಧರಿಸಿರುವ ನನ್ನ ಮಗ ಅಂಗದನಿಗಾಗಿ ದುಃಖಪಡುತ್ತೇನೆ. ಬಾಲ್ಯದಿಂದಲೂ ನಾನು ಅವನನ್ನು ಅತ್ಯಂತಪ್ರೀತಿಯಿಂದ ಲಾಲಿಸಿ-ಪೋಷಿಸಿದ್ದೇನೆ. ನನ್ನನ್ನಗಲಿದ ಅವನು ಸೂರ್ಯಕಿರಣಗಳಿಂದ ಬತ್ತಿಹೋಗುವ ಸರೋವರದಂತೆ-ಬಾಡಿಹೋಗುತ್ತಾನೆ. ನನಗೆ ತಾರೆಯಲ್ಲಿ ಹುಟ್ಟಿರುವ ಅವನು ಇನ್ನೂ ಬಾಲಕನು. ಪರಿಪಕ್ವವಾದ ಬುದ್ಧಿಯಿಲ್ಲದವನು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri


ಏಕಮಾತ್ರ ಪ್ರಿಯಪುತ್ರನು. ಮಹಾಬಲನಾದ ಅವನನ್ನು ನೀನೇ ರಕ್ಷಿಸಬೇಕು. ಸುಗ್ರೀವನ ವಿಷಯದಲ್ಲಿಯೂ ಮತ್ತು ಅಂಗದನ ವಿಷಯದಲ್ಲಿಯೂ ನೀನು ಅನುಗ್ರಹಬುದ್ಧಿಯುಳ್ಳವನಾಗು. ಈಗ ರಕ್ಷಕನೂ, ಶಾಸಕನೂ, ಕಾರ್ಯಾಕಾರ್ಯಗಳನ್ನು ನಿರ್ಣಯಿಸಿ ಹೇಳತಕ್ಕವನೂ ನೀನೇ ಆಗಿರುವೆ. ನೀನು ಭರತ-ಲಕ್ಷ್ಮಣರ ವಿಷಯದಲ್ಲಿ ನಡೆದುಕೊಳ್ಳುವಂತೆ ಸುಗ್ರೀವಾಂಗದರ ವಿಷಯದಲ್ಲಿಯೂ ನಡೆದುಕೊಳ್ಳುವುದು ಯೋಗ್ಯವಾಗಿದೆ. ನಾನು ಸುಗ್ರೀವನ ವಿಷಯದಲ್ಲಿ ಅಪರಾಧವನ್ನೆಸಗಿರುವುದರಿಂದ ದಯನೀಯಳಾದ ತಾರೆಯೂ ಅವನ ವಿಷಯದಲ್ಲಿ ಅಪರಾಧವನ್ನೆಸಗಿದಂತಾಗಿದೆ. ಈ ಕಾರಣದಿಂದಾಗಿ ಸುಗ್ರೀವನು ಮುನಿದು ತಾರೆಯನ್ನು ಅವಮಾನಿಸದಂತೆ ನೋಡಿಕೊಳ್ಳುವುದೂ ನಿನಗೆ ಸೇರಿದ್ದಾಗಿದೆ.

ಸುಗ್ರೀವನು ನಿನ್ನ ಅನುಗ್ರಹಕ್ಕೆ ಪಾತ್ರನಾಗಿ ಈ ರಾಜ್ಯವನ್ನು ಪರಿಪಾಲಿಸಬಲ್ಲನು. ನಿನ್ನ ಅಧೀನದಲ್ಲಿದ್ದು ನಿನ್ನ ಮನೋಗತವಾದ ಅಭಿಪ್ರಾಯವನ್ನು ತಿಳಿದು ಕಾರ್ಯಮಾಡುವವನು ಭೂಮಂಡಲವನ್ನೂ ಆಳಬಲ್ಲನು. ಸ್ವರ್ಗವನ್ನಾದರೂ ಜಯಿಸಬಲ್ಲನು. ಯುದ್ಧಕ್ಕೆ ಹೊರಟಾಗ ತಾರೆಯು ನನ್ನನ್ನು ತಡೆದರೂ-ನಿನ್ನಿಂದ ಮರಣಹೊಂದಬೇಕೆಂಬ ಆಕಾಂಕ್ಷೆಯಿಂದ-ತಮ್ಮನೊಡನೆ ದ್ವಂದ್ವಯುದ್ಧಮಾಡಲು ಬಂದೆನು." ವಾಲಿಯು ವಿಧೇಯನಾಗಿ ಇಷ್ಟು ಹೇಳಿ ಮೌನಿಯಾದನು.

ಶ್ರೀರಾಮನು ಸುಜ್ಞಾನವನ್ನು ಪ್ರಕಟಿಸಿದ ವಾಲಿಯನ್ನು ಸಾಧುಸಮ್ಮತವಾದ, ಧರ್ಮತತ್ತ್ವಾರ್ಥಯುಕ್ತವಾದ ಮಾತಿನಿಂದ ಸಮಾಧಾನಗೊಳಿಸುತ್ತಾ ಹೇಳಿದನು :

"ಪ್ಲವಗೇಶ್ವರನೇ ! ನೀನು ಈ ವಿಷಯವಾಗಿ (ಅಂಗದನ ವಿಷಯವಾಗಿ) ಪರಿತಾಪಪಡುವ ಕಾರಣವಿಲ್ಲ. (ರಾಮನು ಮರೆಯಲ್ಲಿ ನಿಂತು ಸಂಹಾರಮಾಡಿದನು-ಎಂಬ) ನಮ್ಮ ವಿಷಯವಾಗಿಯೇ ಆಗಲೀ (ಸುಗ್ರೀವನ ಪತ್ನಿಯನ್ನು ಅಪಹರಿಸಿ ಮಹಾಪಾಪಮಾಡಿದೆನು-ಎಂಬ) ನಿನ್ನ ವಿಷಯವಾಗಿಯೇ ಆಗಲೀ ಯೋಚಿಸಬೇಕಾದ ಕಾರಣವಿಲ್ಲ. ನೀನು ಮಾಡಿರುವ ವಿಶೇಷಕಾರ್ಯವನ್ನು (ಮಹಾಪಾಪಕರವಾದ ಕಾರ್ಯವನ್ನು) ಗಮನ

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

ದಲ್ಲಿಟ್ಟುಕೊಂಡೇ ನಿನ್ನನ್ನು ಸಂಹರಿಸಲೇಬೇಕೆಂದು ಧರ್ಮತಃ ನಿಶ್ಚಯಿಸಿ ಮಾಡಿದೆವು.

ದಣ್ಡ್ಯೇ ಯಃ ಪಾತಯೇದ್ದಣ್ಡಂ ದಣ್ಡ್ಯೋ ಯಶ್ಚಾಪಿ ದಣ್ಡ್ಯತೇ ।
ಕಾರ್ಯಕಾರಣಸಿದ್ಧಾರ್ಥಾವುಭೌ ತೌ ನಾವಸೀದತಃ ॥ ೩೦॥

ಯಾವ ರಾಜನು ಶಿಕ್ಷಾರ್ಹನಾದವನಿಗೆ ಯಥಾಯೋಗ್ಯವಾದ ಶಿಕ್ಷೆಯನ್ನು ವಿಧಿಸುವನೋ, ಯಾವನು ಆ ಶಿಕ್ಷೆಯನ್ನು ಅನುಭವಿಸುವನೋ-ಅವರಿಬ್ಬರೂ ಕಾರ್ಯ ಮತ್ತು ಕಾರಣಗಳಿಂದ ಸಿದ್ಧವಾದ ಪ್ರಯೋಜನವನ್ನು ಹೊಂದಿದವರಾಗಿ ವಿನಾಶಹೊಂದುವುದಿಲ್ಲ.*

ನೀನು ಮಾಡಿರುವ ಅಪರಾಧಕ್ಕೆ ತಕ್ಕುದಾದ ಶಿಕ್ಷೆಯನ್ನು ಅನುಭವಿಸಿರುವುದರಿಂದ ಈಗ ಪಾಪರಹಿತನಾಗಿರುವೆ. ಆದುದರಿಂದ ನೀನು ಧರ್ಮಶಾಸ್ತ್ರದೃಷ್ಟವಾದ ಮಾರ್ಗದಿಂದ ಧರ್ಮಪ್ರಧಾನವಾದ ನಿನ್ನ ಸ್ವರೂಪವನ್ನು ಹೊಂದಿರುವೆ. ತಪ್ಪಿಗೆ ತಕ್ಕುದಾದ ಶಿಕ್ಷೆಯನ್ನು ಅನುಭವಿಸಿರುವ ನೀನು ಶುದ್ಧಾಂತಃಕರಣನಾಗಿರುವೆ. ನಿನ್ನ ಹೃದಯದಲ್ಲಿರುವ ಶೋಕ-ಮೋಹ-ಭಯಗಳನ್ನು ಸಂಪೂರ್ಣವಾಗಿ ಪರಿತ್ಯಜಿಸು. ವಿಧಿಯ ವಿಧಾನವನ್ನು ನಿನ್ನಿಂದ ಅತಿಕ್ರಮಿಸಿ ನಡೆಯಲು ಸಾಧ್ಯವಾಗಲಾರದು. ಅದಕ್ಕಾಗಿ ಪರಿತಪಿಸುವ ಕಾರಣವಿಲ್ಲ. ಅಂಗದನು ನಿನ್ನ ವಿಷಯದಲ್ಲಿ ಹೇಗೆ ನಡೆದುಕೊಳ್ಳುತ್ತಿದ್ದನೋ ಹಾಗೆಯೇ ಸುಗ್ರೀವನ ವಿಷಯದಲ್ಲಿಯೂ – ನನ್ನ ವಿಷಯದಲ್ಲಿಯೂ ನಡೆದುಕೊಳ್ಳುತ್ತಾನೆ. ನಿನಗೆ ಅಂಗದನ ಮೇಲಿರುವ ವಾತ್ಸಲ್ಯವೇ ಸುಗ್ರೀವನಿಗೂ ಮತ್ತು ನನಗೂ ಅವನ ಮೇಲಿದೆ. ಆದುದರಿಂದ ನೀನು ಅಂಗದನ ವಿಷಯವಾಗಿಯೂ ಯೋಚಿಸಬೇಕಾಗಿಲ್ಲ."

ವಾಲಿಯು–ಮಹಾತ್ಮನಾದ, ಧರ್ಮಮಾರ್ಗಾನುವರ್ತಿಯಾದ, ಯುದ್ಧದಲ್ಲಿ ಶತ್ರುಗಳನ್ನು ಮರ್ದನಮಾಡುವ ಶ್ರೀರಾಮನ ಸಮಾಧಾನಕರವಾದ,

*ಶಿಕ್ಷಾರ್ಹನಾದವನನ್ನು ದಂಡಿಸುವುದು ರಾಜನ ಕರ್ತವ್ಯ. ಶಿಕ್ಷೆಯು ಮರಣದಂಡನೆಯೇ ಆಗಿದ್ದರೂ ಅದರಿಂದ ರಾಜನಿಗೆ ಯಾವ ದೋಷವೂ ಬರುವುದಿಲ್ಲ. ಅದಕ್ಕೆ ಬದಲಾಗಿ ಮರಣದಂಡನೆಗೆ ಯೋಗ್ಯನಾದವನನ್ನು ಶಿಕ್ಷಿಸದಿದ್ದರೆ ರಾಜನು ಪಾಪಭಾಗಿಯಾಗುತ್ತಾನೆ. ಶಿಕ್ಷೆಗೆ ಅರ್ಹನಾದವನು ಶಿಕ್ಷೆಯನ್ನು ಅನುಭವಿಸಲೇಬೇಕು. ಶಿಕ್ಷೆಯನ್ನು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಸುಮಧುರವಾದ ಮತ್ತು ಯುಕ್ತಿಯುಕ್ತವಾದ ಮಾತುಗಳನ್ನು ಕೇಳಿ ಪುನಃ ರಾಮನಿಗೆ ಹೇಳಿದನು :

" ಮಹೇಂದ್ರಸದೃಶನೇ! ಭಯಂಕರವಿಕ್ರಮನೇ! ಪ್ರಭುವೇ! ಬಾಣದ ಪ್ರಹಾರದಿಂದ ಪರಿತಪ್ತನಾದ ನಾನು ವಿವೇಕವನ್ನು ಕಳೆದುಕೊಂಡು ಧರ್ಮಾರ್ಥಗಳನ್ನು ತಿಳಿಯದೇ ನಿನ್ನನ್ನು ದೂಷಿಸಿದೆನು. ನನ್ನಲ್ಲಿ ಅನುಗ್ರಹ ಬುದ್ಧಿಯುಳ್ಳವನಾಗಿ ನನ್ನ ಈ ಅಪರಾಧವನ್ನು ಮನ್ನಿಸು." *

೧೮ನೆಯ ಸರ್ಗವು ಮುಗಿಯಿತು.

ಕಿಷ್ಕಿಂಧಾಕಾಂಡ ೧೯ನೆಯ ಸರ್ಗ

## ಪತಿಯು ಮರಣಾವಸ್ಥೆಯಲ್ಲಿರುವುದನ್ನು ಕಪಿಗಳಿಂದ ಕೇಳಿದ ತಾರೆಯು ವಾಲಿಯ ಬಳಿಗೆ ಬಂದು ಪ್ರಲಪಿಸಿದುದು

ಸ ವಾನರಮಹಾರಾಜಃ ಶಯಾನಃ ಶರವಿಕ್ಷತಃ ।
ಪ್ರತ್ಯುಕ್ತೋ ಹೇತುಮದ್ವಾಕ್ಯೈರ್ನೋತ್ತರಂ ಪ್ರತ್ಯಪದ್ಯತ ॥೧॥

ಶ್ರೀರಾಮನ ಯುಕ್ತಿಯುಕ್ತವಾದ ಪ್ರತ್ಯುತ್ತರವನ್ನು ಕೇಳಿ ಶರ ಪ್ರಹಾರದಿಂದ ಬಹಳವಾಗಿ ಗಾಯಗೊಂಡು ಮಲಗಿದ್ದ ವಾನರರಾಜನಾದ ವಾಲಿಯು ಮುಂದೆ ಯಾವ ಮಾತನ್ನೂ ಆಡಲಿಲ್ಲ.

ಸುಗ್ರೀವನೊಡನೆ ಯುದ್ಧಮಾಡುತ್ತಿದ್ದಾಗ ಕಲ್ಲುಬಂಡೆಗಳಿಂದಲೂ, ವೃಕ್ಷಗಳಿಂದಲೂ ಬಲವಾದ ಪೆಟ್ಟುಗಳನ್ನು ತಿಂದು ಛಿನ್ನ-ಭಿನ್ನವಾದ ಶರೀರ ದಿಂದ ಕೂಡಿದ್ದ ವಾಲಿಯು ಶ್ರೀರಾಮನ ಬಾಣದಿಂದಲೂ ಪ್ರಹತನಾಗಿ ಅಂತ್ಯ ಕಾಲದಲ್ಲಿ ಮೂರ್ಛಿತನಾದನು.

ವಾಲಿಯ ಭಾರ್ಯೆಯಾದ ತಾರಾದೇವಿಯು ಯುದ್ಧದಲ್ಲಿ ಕಪಿ ಶಾರ್ದೂಲನಾದ ವಾಲಿಯು ರಾಮನ ಬಾಣದಿಂದ ಪೀಡಿತನಾಗಿ ಸತ್ತು

---

ಅನುಭವಿಸುವುದರಿಂದಲೇ ಅಪರಾಧಿಯು ಪೂತಾತ್ಮನಾಗುತ್ತಾನೆ. ಶಿಕ್ಷೆಯನ್ನು ಅನುಭವಿ ಸದೇ ಅವನು ಮಾಡಿದ ಪಾಪವನ್ನು ಕಳೆದುಕೊಳ್ಳಲು ಸಾಧ್ಯವಾಗುವುದೇ ಇಲ್ಲ. ಹೀಗೆ ರಾಜನು ತನ್ನ ಕರ್ತವ್ಯವನ್ನು ಧರ್ಮಮಾರ್ಗದಿಂದ ಮಾಡಿದಲ್ಲಿ ರಾಜನೂ ಮತ್ತು ಅಪ ರಾಧಿಯೂ ಪರಿಶುದ್ಧರಾಗುತ್ತಾರೆ.

* ವಿಶೇಷ ವಿವರಣೆಯನ್ನು ಪರಿಶಿಷ್ಟದಲ್ಲಿ ಕೊಡಲಾಗಿದೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಹೋಗುವ ಸ್ಥಿತಿಯಲ್ಲಿದ್ದಾನೆಂಬ ಸುದಾರುಣವಾದ ಮತ್ತು ಅಪ್ರಿಯವಾದ ವಾರ್ತೆಯನ್ನು ಕೇಳಿದೊಡನೆಯೇ ಉದ್ವಿಗ್ನಳಾಗಿ ಅಂಗದನೊಡನೆ ಗಿರಿಗುಹೆಯಿಂದ ಹೊರಬಂದಳು.

ಅಂಗದನ ಪರಿವಾರಕ್ಕೆ ಸೇರಿದ್ದ ಭೀಮಬಲರಾದ ವಾನರರು ಧನುಸ್ಸನ್ನು ಹಿಡಿದು ನಿಂತಿದ್ದ ಶ್ರೀರಾಮನನ್ನು ನೋಡಿ ಭಯಗ್ರಸ್ತರಾಗಿ ಪಲಾಯನಮಾಡಿದರು. ಗುಂಪಿನ ನಾಯಕಜಿಂಕೆಯು ಬೇಟೆಗಾರನ ಕೈಗೆ ಸಿಕ್ಕಿ ಸತ್ತುಹೋದನಂತರ ಹಿಂಬಾಲಕ ಜಿಂಕೆಗಳು ದಿಕ್ಕಾಪಾಲಾಗಿ ಓಡಿಹೋಗುವಂತೆ-ಭಯದಿಂದ ವೇಗವಾಗಿ ಓಡಿಹೋಗುತ್ತಿದ್ದ ಕಪಿಮುಖ್ಯರನ್ನು ತಾರೆಯು ನೋಡಿದಳು. ರಾಮಬಾಣವು ತಮ್ಮನ್ನು ಹಿಂಬಾಲಿಸಿ ಬರುತ್ತಿರುವುದೋ ಎಂಬಂತೆ ಪಲಾಯನಮಾಡುತ್ತಿದ್ದ, ರಾಮನ ದರ್ಶನ ಮಾತ್ರದಿಂದಲೇ ಭಯಗೊಂಡಿದ್ದ, ನಾಯಕನ ವಧೆಯಿಂದ ಅತಿದುಃಖಿತರಾಗಿದ್ದ ಆ ವಾನರರ ಬಳಿಗೆ ಹೋಗಿ ಶೋಕತಪ್ತಳಾಗಿದ್ದ ಸಾಧ್ವಿಯಾದ ತಾರೆಯು ಕೇಳಿದಳು :

" ವಾನರಪ್ರಮುಖರೇ ! ರಾಜಸಿಂಹನಾದ ವಾಲಿಯು ಹೊರಬಂದನೆಂದರೆ ನೀವೆಲ್ಲರೂ ಮುಂದೆ ಹೋಗುತ್ತಿದ್ದಿರಿ. ಈಗೇಕೆ ನೀವೆಲ್ಲರೂ ವಾಲಿಯನ್ನು ಬಿಟ್ಟು ದಿಕ್ಕೆಟ್ಟವರಾಗಿ ಭಯಗೊಂಡು ಪಲಾಯನಮಾಡುತ್ತಿರುವಿರಿ? ರಾಜ್ಯವನ್ನು ಪಡೆದುಕೊಳ್ಳುವ ಸಲುವಾಗಿ ಕ್ರೂರನಾದ ಸುಗ್ರೀವನು ಅಣ್ಣನಾದ ವಾಲಿಯನ್ನು ರಾಮನಿಂದ ಕೊಲ್ಲಿಸಿದನು. ಶ್ರೀರಾಮನು ಬಹಳ ದೂರಕ್ಕೆ ಹೋಗುವ ಬಾಣಗಳಿಂದ ದೂರದಲ್ಲಿಯೇ ನಿಂತು ವಾಲಿಯನ್ನು ಸಂಹರಿಸಿದನು. ಇದರಿಂದ ನೀವೇಕೆ ಪಲಾಯನ ಮಾಡುತ್ತಿರುವಿರಿ ? "

ಆಕೆಯು ಹೇಳಿದ ಮಾತುಗಳನ್ನು ಕೇಳಿ ಕಾಮರೂಪಿಗಳಾದ ಕಪಿಮುಖ್ಯರು ಸಮಯೋಚಿತವಾದ ಮತ್ತು ಯುಕ್ತಿಯುಕ್ತವಾದ ಈ ಮಾತನ್ನು ಹೇಳಿದರು :

" ಜೀವತ್ಪುತ್ರಳೇ ! ನೀನು ಹಿಂದಿರುಗಿ ಹೋಗು. ಮಗನಾದ ಅಂಗದನನ್ನಾದರೂ ರಕ್ಷಿಸಿಕೊಂಡಿರು. ಯಮಧರ್ಮನೇ ರಾಮನ ರೂಪವನ್ನು ತಾಳಿ ವಾಲಿಯನ್ನು ಯಮಪುರಿಗೆ ಒಯ್ಯುತ್ತಿದ್ದಾನೆ. ಶ್ರೀರಾಮನು-

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸುಗ್ರೀವನ ಮೇಲೆ ವಾಲಿಯು ಎಸೆಯುತ್ತಿದ್ದ ವೃಕ್ಷಗಳನ್ನೂ ಬಂಡೆಗಳನ್ನೂ ವಜ್ರಾಯುಧಕ್ಕೆ ಸಮಾನವಾದ ಬಾಣಗಳಿಂದ ಧ್ವಂಸಮಾಡಿ ವಾಲಿಯನ್ನೂ ಸಂಹರಿಸಿದನು. ಇಂದ್ರನ ಪ್ರಭೆಗೆ ಸಮಾನವಾದ ಪ್ರಭೆಯಿಂದ ಕೂಡಿದ್ದ ಕಪಿಶ್ರೇಷ್ಠನು ಹತನಾಗಲು ಪರಾಭವಹೊಂದಿದ ಎಲ್ಲ ವಾನರಸೈನ್ಯವೂ ಪಲಾಯನಮಾಡಿತು. ಈ ಸಮಯದಲ್ಲಿ ಶೂರರಾದ ಕಪಿಮುಖ್ಯರು ಕಿಷ್ಕಿಂಧೆಯ ಹೆಬ್ಬಾಗಿಲನ್ನು ಸಂರಕ್ಷಿಸಲಿ. ವಾಲಿಯ ಮಗನಾದ ಅಂಗದನು ಪಟ್ಟಾಭಿಷಿಕ್ತನಾಗಲಿ. ಪಟ್ಟಾಭಿಷಿಕ್ತನಾದನಂತರ ಅವನ ಸೇವೆಯನ್ನು ಎಲ್ಲ ವಾನರರೂ ಮಾಡುತ್ತಾರೆ. ಅಥವಾ ಇದೂ ಸರಿಯಾಗಲಾರದು. ಇನ್ನು ಮುಂದೆ ನೀನು ಇಲ್ಲಿ ವಾಸಮಾಡುವುದೇ ಸರಿಯಾಗಿ ಕಾಣುವುದಿಲ್ಲ. ಏಕೆಂದರೆ: ನಮ್ಮ ಶತ್ರುಗಳು ಕಿಷ್ಕಿಂಧಾಪಟ್ಟಣವನ್ನು ಬಹಳ ಬೇಗ ಆಕ್ರಮಿಸುತ್ತಾರೆ. ಇಲ್ಲಿ ಪತ್ನಿಯರಿಂದ ಕೂಡಿರುವ ಮತ್ತು ಪತ್ನಿಯರಿಂದ ಅಗಲಿರುವ ವಾನರರಿದ್ದಾರೆ. ರಾಜ್ಯಲುಬ್ಧರಾಗಿರುವ ಮತ್ತು ನಮ್ಮಿಂದ ವಂಚಿತರಾಗಿರುವ ವಾನರರಿಂದ ನಮಗೆ ಭಯವಿದೆ." *

ವಾಲಿಯು ಬಿದ್ದಿದ್ದ ಸ್ಥಳದಿಂದ ಸ್ವಲ್ಪದೂರ ಮಾತ್ರವೇ ಬಂದಿದ್ದ ವಾನರಶ್ರೇಷ್ಠರ ಆ ಮಾತುಗಳನ್ನು ಕೇಳಿ ಚಾರುಹಾಸಿನಿಯಾದ ವರಾಂಗನೆಯಾದ ತಾರೆಯು ತನಗೆ ಅನುಗುಣವಾದ ಮಾತನ್ನೇ ಹೇಳಿದಳು:

ಪುತ್ರೇಣ ಮಮ, ಕಿಂ ಕಾರ್ಯಂ ಕಿಂ ರಾಜ್ಯೇನ ಕಿಮಾತ್ಮನಾ ।
ಕಪಿಸಿಂಹೇ ಮಹಾಭಾಗೇ ತಸ್ಮಿನ್ಭರ್ತರಿ ನಶ್ಯತಿ ॥೧೮॥

ಪಾದಮೂಲಂ ಗಮಿಷ್ಯಾಮಿ ತಸ್ಯೈವಾಹಂ ಮಹಾತ್ಮನಃ ।
ಯೋಽಸೌ ರಾಮಪ್ರಯುಕ್ತೇನ ಶರೇಣ ವಿನಿಪಾತಿತಃ ॥೧೯॥

---

* ವಾಲಿಯು ಸುಗ್ರೀವನ ಅನುಯಾಯಿಗಳಾದ ಎಷ್ಟೋ ವಾನರರನ್ನೂ ಕಿಷ್ಕಿಂಧೆಯಿಂದ ಓಡಿಸಿಬಿಟ್ಟಿದ್ದಾನೆ. ಅವರಲ್ಲಿ ಕೆಲವರು ಭಾರ್ಯಾಸಮೇತರಾಗಿ ಓಡಿಹೋಗಿದ್ದಾರೆ. ಅವರೆಲ್ಲರೂ ಈಗ ಸುಗ್ರೀವನ ಜೊತೆಯಲ್ಲಿಯೇ ಇದ್ದಾರೆ. ಒಂದು ವೇಳೆ ತಾರೆಯು ಕಿಷ್ಕಿಂಧೆಯಲ್ಲಿ ಇರಲು ಇಚ್ಛಿಸಿದರೆ ವಾಲಿಯ ವಧೆಯಾದನಂತರ ಆ ವಾನರರೆಲ್ಲರೂ ಸುಗ್ರೀವನ ಜೊತೆಯಲ್ಲಿ ಕಿಷ್ಕಿಂಧೆಗೆ ಬರುವುದರಿಂದ ವಾಲಿಯ ಪಕ್ಷದ ವಾನರರನ್ನು ಸುಮ್ಮನೆ ಬಿಡಲಾರರು. ಆದುದರಿಂದ ಸುಗ್ರೀವನ ಅನುಯಾಯಿಗಳಾದ ವಾನರರಿಂದ ತಮಗೆ ಭಯವಿರುವುದೆಂದು ಅಂಗದಾನುಯಾಯಿಗಳಾದ ವಾನರರು ತಾರೆಗೆ ಹೇಳುತ್ತಾರೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


"ವಾನರರೇ ! ಅಂತಹ ಮಹಾಭಾಗ್ಯಶಾಲಿಯಾದ ಕಪಿಶ್ರೇಷ್ಠನಾದ ನನ್ನ ಪತಿಯೇ ವಿನಾಶಹೊಂದುತ್ತಿರುವಾಗ–ನನಗೆ ನನ್ನ ಮಗನಿಂದೇನಾಗ ಬೇಕಾಗಿದೆ ? ರಾಜ್ಯದಿಂದೇನಾಗಬೇಕಾಗಿದೆ ? ನಾನಾದರೂ ಏಕೆ ಜೀವಿಸಿರ ಬೇಕು ? ರಾಮಬಾಣದಿಂದ ಹತನಾದ ಮಹಾತ್ಮನಾದ ವಾಲಿಯ ಪಾದ ಗಳಲ್ಲಿಯೇ ಸೇರಿಕೊಳ್ಳುತ್ತೇನೆ."

ಶೋಕಮೂರ್ಛಿತಳಾದ ತಾರೆಯು ಹೀಗೆ ಹೇಳಿಕೊಂಡು ಗಟ್ಟಿಯಾಗಿ ಅಳುತ್ತಾ ಎರಡು ಕೈಗಳಿಂದಲೂ ಎದೆಯನ್ನೂ ತಲೆಯನ್ನೂ ಚಚ್ಚಿ ಕೊಳ್ಳುತ್ತಾ ವಾಲಿಯು ಬಿದ್ದಿದ್ದ ಕಡೆಗೇ ಓಡಿಹೋದಳು. ಹಾಗೆ ಓಡಿ ಹೋಗುತ್ತಿದ್ದಾಗ ತನ್ನ ಪತಿಯು ಭೂಮಿಯಲ್ಲಿ ಬಿದ್ದಿರುವುದನ್ನು ನೋಡಿ ದಳು. ಯುದ್ಧಗಳಲ್ಲಿ ಪಲಾಯನಮಾಡದ, ದಾನವೇಂದ್ರರ ಸಂಹಾರಕನಾದ, ವೀರನಾದ ಪತಿಯನ್ನು ತಾರೆಯು ನೋಡಿದಳು. ಇಂದ್ರನು ವಜ್ರಾಯುಧ ವನ್ನು ಪ್ರಯೋಗಿಸುವಂತೆ ಪರ್ವತಗಳನ್ನೇ ಶತ್ರುಗಳ ಮೇಲೆ ಎಸೆಯುತ್ತಿದ್ದ, ಬಿರುಗಾಳಿಯ ರಭಸಕ್ಕೆ ಸಮಾನವಾದ ವೇಗವುಳ್ಳ, ಮಹಾಮೇಘಗಳ ಸಮೂಹದಿಂದ ಹೊರಬರುವ ಸಿಡಿಲಿನ ಶಬ್ದದಂತೆ ಗರ್ಜನೆಮಾಡುತ್ತಿದ್ದ, ಇಂದ್ರನ ಪರಾಕ್ರಮಕ್ಕೆ ಸದೃಶವಾದ ಪರಾಕ್ರಮವನ್ನು ಹೊಂದಿದ್ದ, ಮಳೆ ಗರೆದು ಶಾಂತವಾದ ಮೇಘದಂತೆ ಕಾಣುತ್ತಿದ್ದ, ಗರ್ಜನೆಗೆ ಪ್ರತಿಗರ್ಜಿಸುವ ಸ್ವಭಾವದವನಾಗಿದ್ದ, ಮಹಾಶೂರನಾದ, ಮಾಂಸದ ಆಸೆಗಾಗಿ ಹುಲಿಯಿಂದ ಸಂಹರಿಸಲ್ಪಟ್ಟ ಸಿಂಹದಂತಿದ್ದ ಶ್ರೀರಾಮನಿಂದ ಕೆಳಕ್ಕೆ ಬೀಳಿಸಲ್ಪಟ್ಟ ವಾಲಿ ಯನ್ನು ತಾರೆಯು ನೋಡಿದಳು. ಸರ್ವಲೋಕಪೂಜ್ಯವಾದ, ಪತಾಕೆ ಯಿಂದಲೂ–ಬಲಿಪ್ರದಾನದ ವೇದಿಕೆಯಿಂದಲೂ ಕೂಡಿರುವ, ನಾಗಸರ್ಪದ ನಿಮಿತ್ತವಾಗಿ ಗರುಡನಿಂದ ಧ್ವಂಸಮಾಡಲ್ಪಟ್ಟ ಚೈತ್ಯವೃಕ್ಷದಂತಿದ್ದ (ದೇವಾಲಯದಂತಿದ್ದ) ಪತಿಯನ್ನು ತಾರೆಯು ನೋಡಿದಳು. ಹಾಗೆಯೇ ಅವಳು ಶ್ರೇಷ್ಠವಾದ ಧನುಸ್ಸನ್ನು ಅವಲಂಬಿಸಿ ನಿಂತಿದ್ದ ಶ್ರೀರಾಮನನ್ನೂ, ಅವನ ತಮ್ಮನಾದ ಲಕ್ಷ್ಮಣನನ್ನೂ, ಪತಿಯ ತಮ್ಮನಾದ ಸುಗ್ರೀವನನ್ನೂ ನೋಡಿದಳು.*

---

* ಶಾರ್ದೂಲೇನ ಆಮಿಷಸ್ಯಾರ್ಥೇ ಮೃಗರಾಜಮಿವಾಹತಮ್ । ಮೃಗರಾಜ– ಎಂಬುದಕ್ಕೆ ಒಬ್ಬೊಬ್ಬರು ಒಂದೊಂದು ವಿಧವಾಗಿ ಅರ್ಥಮಾಡಿರುತ್ತಾರೆ. ಮೃಗರಾಜ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ತಾರೆಯು ರಾಮ-ಲಕ್ಷ್ಮಣ-ಸುಗ್ರೀವರನ್ನೂ ದಾಟಿ ಮುಂದೆ ಹೋಗಿ ಹತನಾಗಿ ಬಿದ್ದಿದ್ದ ವಾಲಿಯ ಬಳಿಗೆ ಹೋದಳು. ಪತಿಯನ್ನೊಮ್ಮೆ ದಿಟ್ಟಿಸಿ ನೋಡಿ ಅತ್ಯಂತವ್ಯಥಿತಳಾಗಿ ಮೂರ್ಛೆಹೊಂದಿ ಕೆಳಕ್ಕೆ ಬಿದ್ದಳು. ಸ್ವಲ್ಪ ಹೊತ್ತು ಕಳೆದನಂತರ ನಿದ್ರೆಯಿಂದ ಎಚ್ಚೆತ್ತವಳಂತೆ ಮೇಲೆದ್ದು ಪತಿಯನ್ನು ನೋಡಿ ಅಯ್ಯೋ! ಆರ್ಯಪುತ್ರ! ಎಂದು ಕೂಗಿಕೊಳ್ಳುತ್ತಾ ಮೃತ್ಯುಪಾಶದಿಂದ ಬದ್ಧನಾಗಿದ್ದ ಪತಿಯನ್ನು ನೋಡಿ ಗಟ್ಟಿಯಾಗಿ ಅತ್ತಳು. ಹೆಣ್ಣು ಕುರರೀಪಕ್ಷಿಯಂತೆ ಕಿರುಚಿಕೊಳ್ಳುತ್ತಿದ್ದ ತಾರೆಯನ್ನೂ ಅವಳ ಜೊತೆಯಲ್ಲೇ ಬಂದಿದ್ದ ಅಂಗದನನ್ನೂ ನೋಡಿ ಸುಗ್ರೀವನು ಬಹಳವಾಗಿ ಸಂಕಟಪಟ್ಟನು.

೧೯ನೆಯ ಸರ್ಗವು ಮುಗಿಯಿತು.

ಕಿಷ್ಕಿಂಧಾಕಾಂಡ                ೨೦ನೆಯ ಸರ್ಗ

## ತಾರೆಯ ವಿಲಾಪ

ರಾಮಚಾಪವಿಸೃಷ್ಟೇನ ಶರೇಣಾನ್ತಕರೇಣ ತಮ್ ।
ದೃಷ್ಟ್ವಾ ವಿನಿಹತಂ ಭೂಮೌ ತಾರಾ ತಾರಾಧಿಪಾನನಾ ।
ಸಾ ಸಮಾಸಾದ್ಯ ಭರ್ತಾರಂ ಪರ್ಯಷ್ವಜತ ಭಾಮಿನೀ ॥೧॥

ಚಂದ್ರಮುಖಿಯಾದ ಸಾಧ್ವಿಯಾದ ತಾರೆಯು ಶ್ರೀರಾಮನ ಧನುಸ್ಸಿ

---

ಎಂಬುದಕ್ಕೆ ರೂಢವಾದ ಅರ್ಥ ಸಿಂಹವೆಂದೇ ಆಗುತ್ತದೆ. ಸಿಂಹೋ ಮೃಗೇನ್ದ್ರಃ–ಎಂದು ಕೋಶವೇ ಇದೆ. ಶಾರ್ದೂಲಶಬ್ದಕ್ಕೆ ರೂಢವಾದ ಅರ್ಥ ಹುಲಿ ಎಂದಾಗುತ್ತದೆ. ಹುಲಿಯು ಮಾಂಸದ ಸಲುವಾಗಿ ಸಿಂಹವನ್ನೇ ಸಂಹರಿಸುವಂತೆ–ಎಂದು ಅರ್ಥವಾಗುತ್ತದೆ. ಆದರೆ ಹೀಗೆ ಎಲ್ಲಿಯೂ ಸಿಂಹವನ್ನು ಹುಲಿಯು ತಿನ್ನುವುದು ಕೇಳಿಬರುವುದಿಲ್ಲ. ಆದುದರಿಂದಲೇ ಒಬ್ಬ ವ್ಯಾಖ್ಯಾನಕಾರರು ಇದನ್ನು 'ಅಭೂತೋಪಮಾ' ಎಂದು ಕರೆದಿರುತ್ತಾರೆ. ತಾರೆಯ ದೃಷ್ಟಿಯಲ್ಲಿ ವಾಲಿಯು ಸಿಂಹನೆಂಬ ರಾಮನು ಹುಲಿಯೆಂಬ ಭಾವನೆಯಿರಬಹುದು. ಮತ್ತೊಬ್ಬರು ಮೃಗರಾಜಂ ಎಂಬುದಕ್ಕೆ ಗಜರಾಜಂ ಎಂದು ಅರ್ಥಮಾಡಿ ವಿಪುಲಮಾಂಸವತ್ತಯಾ ವಿಪುಲವಾಗಿ ಮಾಂಸವಿರುವುದರಿಂದ ಸಿಂಹದಿಂದ ಹತವಾದ ಆನೆಯಂತೆ–ಎಂದು ಅರ್ಥಮಾಡಿರುತ್ತಾರೆ. ಆನೆಯನ್ನು ಕಂಡೊಡನೆಯೇ ಸಿಂಹವು ಅದನ್ನು ಸಂಹರಿಸುವುದೇನೋ ಪ್ರಸಿದ್ಧವಾಗಿದೆ. ಆದರೆ ಮೃಗರಾಜಶಬ್ದಕ್ಕೆ ಗಜರಾಜ ಎಂಬ ಅರ್ಥವು ಪ್ರಸಿದ್ಧವಲ್ಲ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ನಿಂದ ಬಿಡಲ್ಪಟ್ಟ ಪ್ರಾಣಾಂತಿಕವಾದ ಬಾಣದಿಂದ ಹತನಾಗಿ ಭೂಮಿಯಲ್ಲಿ ಬಿದ್ದಿದ್ದ ವಾಲಿಯನ್ನು ನೋಡಿ ಅತಿಯಾದ ದುಃಖದಿಂದ ಅವನನ್ನು ಗಾಢ ವಾಗಿ ಆಲಿಂಗಿಸಿಕೊಂಡಳು. ಆನೆಯಂತೆಯೇ ಕಾಣುತ್ತಿದ್ದ, ಮಹೇಂದ್ರ ನಂತೆಯೇ ಕ್ಷೋಭಿಸುತ್ತಿದ್ದ, ಬುಡಮೇಲಾಗಿ ಬಿದ್ದಿರುವ ವೃಕ್ಷದಂತೆ ನೆಲದ ಮೇಲೆ ಬಿದ್ದಿದ್ದ, ಶ್ರೀರಾಮನ ಬಾಣದಿಂದ ಪ್ರಹೃತನಾಗಿದ್ದ, ವಾನರೇಂದ್ರ ನಾದ ವಾಲಿಯನ್ನು ನೋಡಿ ಶೋಕದಿಂದ ಸಂತಪ್ತವಾದ ಮನಸ್ಸಿನಿಂದ ಕೂಡಿ ದೀನಳಾಗಿ ಗೋಳಾಡಿದಳು.

"ಯುದ್ಧದಲ್ಲಿ ಭಯಂಕರವಾದ ಪರಾಕ್ರಮವನ್ನು ತೋರುತ್ತಿದ್ದವನೇ! ಮಹಾವೀರನೇ! ಕಪಿಶ್ರೇಷ್ಠನೇ! ನಿರಪರಾಧಿನಿಯಾದ ದೀನಳಾದ ನನ್ನೊ ಡನೆ ಈಗೇಕೆ ಮಾತನಾಡುತ್ತಿಲ್ಲ? ಹರಿಶ್ರೇಷ್ಠನೇ! ಮೇಲೇಳು. ಉತ್ತಮ ವಾದ ಹಾಸಿಗೆಯಲ್ಲಿ ಮಲಗು. ನಿನ್ನಂತಹ ನೃಪತಿಶ್ರೇಷ್ಠರು ಇಂತಹ ಕಠಿನವಾದ ಭೂಮಿಯಲ್ಲಿ ಖಂಡಿತವಾಗಿಯೂ ಮಲಗುವುದಿಲ್ಲ. ವಸುಧಾಧಿ ಪನೇ! ನಿನಗೆ ಈ ಭೂದೇವಿಯೇ ಅತ್ಯಂತಪ್ರಿಯಳಾಗಿರುವಂತೆ ಕಾಣುತ್ತಿದೆ. ಏಕೆಂದರೆ: ನೀನು ಪ್ರಾಣಗಳನ್ನು ತೊರೆದಿದ್ದರೂ ನನ್ನನ್ನು ದೂರೀಕರಿಸಿ ಅಂಗಾಂಗಗಳಿಂದ ಅವಳನ್ನೇ ಆಲಿಂಗಿಸಿಕೊಂಡಿರುವೆ."

ಧರ್ಮಮಾರ್ಗದಲ್ಲಿಯೇ ನಡೆಯುತ್ತಿದ್ದ ನೀನು ಕಿಷ್ಕಿಂಧಾಪಟ್ಟಣ ದಂತೆಯೇ ರಮ್ಯವಾದ ಪಟ್ಟಣವೊಂದನ್ನು ಸ್ವರ್ಗಮಾರ್ಗದಲ್ಲಿ ನಿರ್ಮಿಸಿ ಕೊಂಡಿರುವೆಯೆಂಬುದು ಇದೀಗ ಸ್ಪಷ್ಟವಾಗಿದೆ. ನಾವೆಲ್ಲರೂ ನಿನ್ನ ಜೊತೆ ಯಲ್ಲಿ ಮಧುಸುಗಂಧದಿಂದ ಯುಕ್ತವಾದ ಅರಣ್ಯಗಳಲ್ಲಿ ವಿಹರಿಸುತ್ತಿದ್ದೆವು. ಇಂದು ನೀನು ಆ ನಮ್ಮ ವನವಿಹಾರಗಳಿಗೆ ಪರಿಸಮಾಪ್ತಿಯನ್ನು ಮಾಡಿಬಿಟ್ಟಿ ರುವೆ. ಇನ್ನು ನಾವು ನಿನ್ನೊಡನೆ ವನಗಳಲ್ಲಿ ವಿಹರಿಸುವಂತೆಯೇ ಇಲ್ಲ. ಮಹಾನಾಯಕರಿಗೂ ನಾಯಕಮಣಿಯಾಗಿದ್ದ ನೀನು ಅಸುನೀಗಲಾಗಿ ನನ್ನ ಆನಂದವೆಲ್ಲವೂ ನಾಶವಾಗಿ ಹೋಗಿದೆ. ಜೀವನದಲ್ಲಿಯೇ ನಿರಾಶೆಯುಂಟಾ ಗಿದೆ. ಶೋಕಮಹಾಸಾಗರದಲ್ಲಿ ಮುಳುಗಿಹೋಗಿದ್ದೇನೆ. ನಿಶ್ಚಯ ವಾಗಿಯೂ ನನ್ನ ಹೃದಯವು ಕಠಿಣವೇ ಆಗಿರಬೇಕು. ಏಕೆಂದರೆ: ಭೂಮಿಯಲ್ಲಿ ಬಿದ್ದಿರುವ ನಿನ್ನನ್ನು ನೋಡಿದನಂತರವೂ ಶೋಕದಿಂದ ಪರಿ ತಪಿಸುತ್ತಿರುವ ಈ ನನ್ನ ಹೃದಯವು ಸಾವಿರಾರು ಚೂರುಗಳಾಗಿ ಒಡೆದು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಹೋಗಿರುವುದಿಲ್ಲ. ಪ್ಲವಗೇಶ್ವರನೇ ! ಸುಗ್ರೀವನ ಭಾರ್ಯೆಯನ್ನು ನೀನು ಅಪಹರಿಸಿದೆ. ಅವನನ್ನು ಕಿಷ್ಕಿಂಧೆಯಿಂದಲೂ ಹೊರಗಟ್ಟಿದೆ. ನೀನು ಮಾಡಿದ ಕಾರ್ಯಕ್ಕೆ ತಕ್ಕುದಾದ ಪ್ರತಿಫಲವನ್ನೇ ನೀನೀಗ ಪಡೆದು ಕೊಂಡಿರುವೆ. ನಿನ್ನ ಶ್ರೇಯಸ್ಸಿನಲ್ಲಿಯೇ ·ವಿಶೇಷವಾದ ಆಸಕ್ತಿಯನ್ನು ಹೊಂದಿದ್ದ, ನಿನ್ನ ಹಿತೈಷಿಣಿಯಾಗಿದ್ದ ನಾನು-ನೀನು ಯುದ್ಧಕ್ಕೆ ಹೊರಟ ಸಮಯದಲ್ಲಿ ಸುಗ್ರೀವನೊಡನೆ ಯುದ್ಧಮಾಡುವುದು ಉಚಿತವಲ್ಲವೆಂದು ಹಿತಕರವಾದ ಮಾತನ್ನೇ ಹೇಳಿದೆನು. ಆದರೆ ಆ ಸಮಯದಲ್ಲಿ ಮೋಹವಶ ನಾಗಿದ್ದ ನೀನು ನನ್ನನ್ನು ನಿಂದಿಸಿದೆ. ನಿನ್ನ ಅಗಲುವಿಕೆಯಿಂದಾಗಿ ನಾನು ಪರಿತಪಿಸುತ್ತಿರುವೆನೇ ಹೊರತು ವೀರಸ್ವರ್ಗವನ್ನು ಪಡೆಯಲಿರುವ ನಿನಗೆ ಯಾವ ಆತಂಕವೂ ಇಲ್ಲ. ಸ್ವರ್ಗದಲ್ಲಿಯೂ ರೂಪ-ಯೌವನಗಳಿಂದ ಗರ್ವಿತೆಯರಾದ ಚತುರೆಯರಾದ ಅಪ್ಸರೆಯರ ಮನಸ್ಸನ್ನೂ ಕಲಕಿಬಿಡುವೆ. ನಿಶ್ಚಯವಾಗಿಯೂ ನಿನ್ನ ಜೀವಿತವನ್ನು ಕಡೆಗಾಣಿಸಿರುವವನು ಕಾಲನೇ ಆಗಿದ್ದಾನೆ. ಯಾರಿಗೂ ಅಧೀನನಾಗದಿದ್ದ ನೀನು ಕಾಲನ ಪ್ರಭಾವದಿಂದ ಒತ್ತಾಯಪೂರ್ವಕವಾಗಿ ಸುಗ್ರೀವನ ವಶನಾಗಿಬಿಟ್ಟೆ. ಬೇರೊಬ್ಬರೊಡನೆ ಯುದ್ಧಮಾಡುತ್ತಿದ್ದ ನಿನ್ನನ್ನು ನಿಷ್ಕಾರಣವಾಗಿ ವಧೆಮಾಡಿ ಅತಿನಿಂದ್ಯ ವಾದ ಕರ್ಮವನ್ನು ಮಾಡಿರುವ ರಾಮನು ತಾನುಮಾಡಿದ ಈ ಕಾರ್ಯಕ್ಕಾಗಿ ಸಂತಾಪವನ್ನೂ ಪಡುತ್ತಿಲ್ಲ. ಈ ಹಿಂದೆ ದೈನ್ಯವೆಂಬುದನ್ನೇ ಕಾಣದಿದ್ದ, ದುಃಖವೆಂಬುದನ್ನೇ ತಿಳಿಯದಿದ್ದ ನಾನೀಗ ಅತಿದೀನಳಾಗಿದ್ದೇನೆ. ಶೋಕ ದಿಂದ ಪರಿತಪಿಸುತ್ತಿದ್ದೇನೆ. ವೈಧವ್ಯವನ್ನು ಪಡೆದು ಅನಾಥೆಯಂತೆ ವರ್ತಿಸುತ್ತಿದ್ದೇನೆ.

ಪ್ರಾಣೇಶ್ವರ ! ಸುಕುಮಾರನಾದ, ಸುಖೋಚಿತನಾದ, ವೀರನಾದ ಅಂಗದನನ್ನು ನೀನು ಲಾಲಿಸಿ-ಪೋಷಿಸಿದೆ. ಆ ನನ್ನ ಪ್ರಿಯಪುತ್ರನಾದ ಅಂಗದನು ತನ್ನ ಚಿಕ್ಕಪ್ಪನೇನಾದರೂ ಕೋಪಿಸಿಕೊಂಡರೆ ಎಂತಹ ದುರವಸ್ಥೆ ಗೀಡಾಗುತ್ತಾನೆ ? ”

ಅಂಗದನಿಗೆ ಹೇಳುತ್ತಾಳೆ :

“ ಮಗು ! ಅಂಗದ ! ಧರ್ಮವತ್ಸಲನಾದ ನಿನ್ನ ತಂದೆಯನ್ನು ಈಗಲೇ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಚೆನ್ನಾಗಿ ನೋಡಿಬಿಡು. ಇನ್ನು ಮುಂದೆ ಇವನ ದರ್ಶನವು ಅತ್ಯಂತ ದುರ್ಲಭವೇ ಆಗುತ್ತದೆ."

ಪುನಃ ವಾಲಿಗೆ ಹೇಳುತ್ತಾಳೆ :

"ಅಯ್ಯೋ ! ಇದೋ ಈ ನಿನ್ನ ಪ್ರಿಯಪುತ್ರನು. ನಿನ್ನನ್ನು ನೋಡುವ ಸಲುವಾಗಿಯೇ ಬಂದಿದ್ದಾನೆ. ನೀನೀಗ ಪ್ರವಾಸ ಹೊರಟಿರುವೆ ; ನಿನ್ನ ಮಗನನ್ನು ಸಂತೈಸು. ನೆತ್ತಿಯನ್ನೊಮ್ಮೆ ಆಘ್ರಾಣಿಸು. ಇವನಿಗೇನಾದರೂ ಸಂದೇಶವನ್ನು ನೀಡು. ರಾಮನು ನಿನ್ನನ್ನು ಸಂಹರಿಸಿ ಮಹಾಕಾರ್ಯವನ್ನೇ ಸಾಧಿಸಿದ್ದಾನೆ. ಸುಗ್ರೀವನಿಗೆ ಮಾಡಿಕೊಟ್ಟಿದ್ದ ಪ್ರತಿಜ್ಞೆಯನ್ನು ಪೂರೈಸಿ ಮಿತ್ರಋಣದಿಂದ ಮುಕ್ತನಾಗಿದ್ದಾನೆ."

ಸುಗ್ರೀವನಿಗೆ ಹೇಳುತ್ತಾಳೆ :

"ಸುಗ್ರೀವ ! ಶತ್ರುವಾದ ನಿನ್ನಣ್ಣನನ್ನು ಶಿಕ್ಷಿಸಿದ್ದಾಯಿತು. ಇನ್ನಾದರೂ ನಿನ್ನ ಎಲ್ಲ ಕಾಮನೆಗಳನ್ನು ಪೂರೈಸಿಕೊ. ನಿನ್ನ ಭಾರ್ಯೆಯಾದ ರುಮೆಯನ್ನು ಪಡೆದುಕೊಂಡು ಯಾವ ವಿಧವಾದ ಆತಂಕವೂ ಇಲ್ಲದೇ ರಾಜ್ಯವನ್ನು ಉಪಭೋಗಿಸು."

ವಾಲಿಗೆ ಹೇಳುತ್ತಾಳೆ :

"ವಾನರೇಶ್ವರನೇ ! ಪ್ರಭುವೇ ! ನಿನಗಾಗಿ ನಾನು ಗೋಳಾಡುತ್ತಲೇ ಇದ್ದೇನೆ. ಪ್ರಿಯಭಾರ್ಯೆಯಾದ ನನ್ನೊಡನೆ ವಿಶ್ವಾಸದಿಂದ ಒಮ್ಮೆಯಾದರೂ ಏಕೆ ಮಾತನಾಡುತ್ತಿಲ್ಲ ? ನಿನ್ನ ಬಹುಮಂದಿ ಪತ್ನಿಯರೂ ನನ್ನಂತೆಯೇ ವಿಲಪಿಸುತ್ತಿರುವುದನ್ನಾದರೂ ನೋಡು ಪ್ರಾಣೇಶ !"

ತಾರೆಯು ಹೀಗೆ ಗೋಳಾಡುತ್ತಿರುವುದನ್ನು ನೋಡಿ ದೀನೆಯರಾಗಿದ್ದ ದುಃಖಿತೆಯರಾಗಿದ್ದ ವಾಲಿಯ ಇತರ ಭಾರ್ಯೆಯರು ಅಂಗದನನ್ನು ಸುತ್ತುವರಿದು ಗಟ್ಟಿಯಾಗಿ ಅಳತೊಡಗಿದರು.

"ತೋಳುಬಂದಿಗಳಿಂದ ಸಮಲಂಕೃತವಾದ ಮತ್ತು ವೀರ್ಯವತ್ತಾದ ತೋಳುಗಳಿಂದ ಪರಿಶೋಭಿಸುತ್ತಿರುವವನೇ ! ಪ್ರಭುವೇ ! ನಿನ್ನ ಪ್ರಿಯಪುತ್ರನಾದ ಅಂಗದನನ್ನು ಬಿಟ್ಟು ಚಿರಪ್ರವಾಸಕ್ಕೆ ಹೊರಟುಬಿಟ್ಟಿರುವೆಯಾ ?

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri


ಗುಣಗಳಿಂದ ನಿನಗೆ ಅನುರೂಪನಾಗಿರುವ, ಪರಮಪ್ರಿಯನಾದ, ಸುಂದರವಾದ ವೇಷ-ಭೂಷಣಗಳನ್ನು ತೊಟ್ಟುಕೊಂಡಿರುವ ಈ ಅಂಗದನನ್ನು ಬಿಟ್ಟು ಹೋಗುವುದು ನಿನಗೆ ಖಂಡಿತವಾಗಿಯೂ ಉಚಿತವಲ್ಲ."

ತಾರೆಯು ಹೇಳುತ್ತಾಳೆ :

"ಸುಂದರವಾದ ವೇಷ-ಭೂಷಣಗಳನ್ನು ಧರಿಸಿರುವವನೇ! ನಾನಾಗಲೀ ನಿನ್ನ ಮಗನಾಗಲೀ ನಿನಗೆ ಪ್ರಿಯವಲ್ಲದ ಯಾವ ಕಾರ್ಯವನ್ನು ಮಾಡಿರುವೆವು? ಅಂಗದನೊಡನಿರುವ ನನ್ನನ್ನು ಇಲ್ಲಿಯೇ ಬಿಟ್ಟು ನೀನು ದೀರ್ಘಪ್ರವಾಸವನ್ನು ಕೈಗೊಂಡುದರ ಕಾರಣವೇನು? ದೀರ್ಘಬಾಹುವೇ! ಒಂದು ವೇಳೆ ನಾನು ಅಜ್ಞಾನದಿಂದ ಯಾವುದಾದರೂ ಅಪರಾಧವನ್ನು ಮಾಡಿರಬಹುದು. ಕಪಿವಂಶನಾಥನೇ! ನನ್ನ ತಲೆಯನ್ನು ನಿನ್ನ ಪಾದಗಳಿಗೆ ಮುಟ್ಟಿಸಿ ಬೇಡಿಕೊಳ್ಳುತ್ತೇನೆ. ನನ್ನ ಅಪರಾಧವನ್ನು ಕ್ಷಮಿಸಿ ಬಿಡು."

ಪತಿಯ ಬಳಿಯಲ್ಲಿ ವಾನರಸ್ತ್ರೀಯರೊಡನೆ ಕುಳಿತಿದ್ದ ಉತ್ತಮವಾದ ಶರೀರಶೋಭೆಯುಳ್ಳ ತಾರೆಯು ಹೀಗೆ ಕರುಣಾಜನಕವಾಗಿ ವಿಲಪಿಸುತ್ತಿದ್ದು ವಾಲಿಯು ಬಿದ್ದಿದ್ದ ಸ್ಥಳದಲ್ಲಿಯೇ ಪ್ರಾಯೋಪವೇಶಮಾಡುವುದಾಗಿ ನಿಶ್ಚಯಿಸಿದಳು.

೨೦ನೆಯ ಸರ್ಗವು ಮುಗಿಯಿತು.

ಕಿಷ್ಕಿಂಧಾಕಾಂಡ ೨೧ನೆಯ ಸರ್ಗ

## ಹನುಮಂತನಿಂದ ತಾರೆಗೆ ಸಮಾಧಾನವಚನ :
## ಪ್ರಾಯೋಪವೇಶದಲ್ಲಿಯೇ ತಾರೆಯ ನಿರ್ಧಾರ

ತತೋ ನಿಪತಿತಾಂ ತಾರಾಂ ಚ್ಯುತಾಂ ತಾರಾಮಿವಾಮ್ಬರಾತ್ ।
ಶನೈರಾಶ್ವಾಸಯಾಮಾಸ ಹನೂಮಾನ್ಹರಿಯೂಥಪಃ ॥೧॥

ಆಕಾಶದಿಂದ ಬಿದ್ದ ನಕ್ಷತ್ರದ ತಾರೆಯಂತೆ ನಿಶ್ಚೇಷ್ಟಳಾಗಿ ನೆಲದ ಮೇಲೆ ಬಿದ್ದಿದ್ದ ತಾರೆಯನ್ನು ಕಪಿನಾಯಕನಾದ ಹನುಮಂತನು ಮೆಲ್ಲ-ಮೆಲ್ಲನೆ ಸಂತೈಸತೊಡಗಿದನು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಗುಣದೋಷಕೃತಂ ಜನ್ತುಃ ಸ್ವಕರ್ಮಫಲಹೇತುಕಮ್ ।
ಅವ್ಯಗ್ರಸ್ತದವಾಪ್ನೋತಿ ಸರ್ವಂ ಪ್ರೇತ್ಯ ಶುಭಾಶುಭಮ್ ॥ ೨॥

"ಮಹಾರಾಣಿ! ಪ್ರಾಣಿಯು ಗುಣಬುದ್ಧಿಯ ಮೂಲಕವಾಗಿ ಅಥವಾ ದೋಷಬುದ್ಧಿಯ ಮೂಲಕವಾಗಿ ಯಾವ ಕರ್ಮವನ್ನು ಮಾಡುವುದೋ-ಅದರ ಫಲವನ್ನು ಸುಖ-ದುಃಖರೂಪದಲ್ಲಿ ಪಡೆದುಕೊಳ್ಳುತ್ತದೆ. ಪರಲೋಕಕ್ಕೆ ಹೋಗುವ ಪ್ರತಿಯೊಂದು ಜೀವವೂ ತಾನು ಮಾಡಿದ ಶುಭಾಶುಭ ಕರ್ಮಗಳ ಫಲವನ್ನು ಏಕಾಗ್ರತೆಯಿಂದ ಅನುಭವಿಸುತ್ತದೆ.

ಶೋಚ್ಯಾ ಶೋಚಸಿ ಕಂ ಶೋಚ್ಯಂ ದೀನಂ ದೀನಾನುಕಮ್ಪಸೇ ।
ಕಸ್ಯ ಕೋ ವಾ ನು ಶೋಚ್ಯೋಽಸ್ತಿ ದೇಹೇಽಸ್ಮಿನ್ಬುದ್ಬು-
ದೋಪಮೇ ॥ ೩॥

ಅಮ್ಮ! ನೀನೇ ಶೋಚನೀಯಳಾಗಿರುವೆ. ನಿನ್ನ ಸ್ಥಿತಿಯೇ ಚಿಂತಾಜನಕವಾಗಿದೆ. ಹೀಗಿರುವಾಗ ನೀನು ಯಾರಿಗಾಗಿ ಶೋಕಿಸುತ್ತಿರುವೆ? ನೀನೇ ಅತ್ಯಂತದೀನಳಾಗಿರುವೆ. ಬೇರಾವ ದೀನರಿಗಾಗಿ ನೀನು ಅನುಕಂಪವನ್ನು ತೋರಿಸುತ್ತಿರುವೆ? ಈ ದೇಹವೇ ನೀರಮೇಲಿನ ಗುಳ್ಳೆಯಂತಿರುವಾಗ ಯಾರು ಯಾರಿಗಾಗಿ ಶೋಕಿಸಬೇಕಾಗಿದೆ?

ಈಗಿನ ನಿನ್ನ ಕರ್ತವ್ಯವು ಸತ್ತವರಿಗಾಗಿ ಅಳುತ್ತಾ ಕೂಡುವುದಲ್ಲ. ನೀನು ಜೀವತ್ಪುತ್ರಳಾಗಿರುವೆ. ನಿನ್ನ ಪ್ರಿಯಪುತ್ರನಾದ ಅಂಗದನನ್ನು ನೀನು ಚೆನ್ನಾಗಿ ನೋಡಿಕೊಳ್ಳಬೇಕಾಗಿದೆ. ಭವಿಷ್ಯದಲ್ಲಿ ಇವನ ಉನ್ನತಿಗೆ ಸಾಧಕವಾದ ಯಾವ ಶ್ರೇಷ್ಠವಾದ ಕಾರ್ಯವಿರುವುದೋ-ಅದರ ಬಗೆಗೆ ನೀನು ಯೋಚಿಸಬೇಕಾಗಿದೆ.

ಜ್ಞಾತ್ವಾಸ್ಯನಿಯತಾಮೇವಂ ಭೂತಾನಾಮಾಗತಿಂ ಗತಿಮ್ ।
ತಸ್ಮಾಚ್ಛುಭಂ ಹಿ ಕರ್ತವ್ಯಂ ಪಣ್ಡಿತೇನೈಹಲೌಕಿಕಮ್ ॥ ೪॥

ಪ್ರಾಣಿಗಳು ಹುಟ್ಟುತ್ತಲೂ ಇರುತ್ತವೆ; ಸಾಯುತ್ತಲೂ ಇರುತ್ತವೆ ಎಂಬುದನ್ನೂ – ಯಾವುದೂ ಶಾಶ್ವತನಲ್ಲವೆಂಬ ವಿಷಯವನ್ನೂ – ನೀನು ತಿಳಿದವಳಾಗಿರುವೆ. ಆದುದರಿಂದ ಪಂಡಿತನಾದವನು ಇಹಲೋಕದಲ್ಲಿ ಮಾಡಬೇಕಾಗಿರುವ ಶುಭಕಾರ್ಯವನ್ನು ಮಾಡಬೇಕು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri

"ವಾಲಿಯನ್ನೇ ಆಶ್ರಯಿಸಿ ಸಾವಿರಾರು, ಲಕ್ಷ-ಲಕ್ಷ ವಾನರರು ಐಶ್ವರ್ಯವನ್ನು ಹಂಚಿಕೊಂಡು ಜೀವನನಿರ್ವಹಣೆಯನ್ನು ಮಾಡುತ್ತಿದ್ದರು. ಅಂತಹ ಸರ್ವಾಶ್ರಯನಾದ ವಾಲಿಯೇ ಇಂದು ಮರಣಹೊಂದಿದ್ದಾನೆ. ಅವನು ನೀತಿಶಾಸ್ತ್ರಾನುಸಾರವಾಗಿ ಅರ್ಥಸಾಧನೆಯನ್ನು ಮಾಡುತ್ತಾ ರಾಜ್ಯ ಭಾರವನ್ನು ನಡೆಸುತ್ತಿದ್ದನು. ದುಃಖಿತರಾಗಿದ್ದ ಸ್ವಜನರಿಗೆ ಸಮಾಧಾನ ವಚನಗಳನ್ನು ಹೇಳುತ್ತಿದ್ದನು. ಸಮಯಗಳಲ್ಲಿ ಯಥೇಷ್ಟವಾಗಿ ದಾನಮಾಡು ತ್ತಿದ್ದನು. ಕ್ಷಮಾಗುಣಸಂಪನ್ನನಾಗಿದ್ದನು. ಅಂತಹವನಿಂದು ಧರ್ಮಾತ್ಮ ರಿಂದ ಜಯಿಸಲ್ಪಡುವ ಪುಣ್ಯಲೋಕಗಳಿಗೆ ಹೋಗಿದ್ದಾನೆ. ಆದುದರಿಂದ ನೀನಿವನ ವಿಷಯವಾಗಿ ಚಿಂತಿಸುವುದು ಉಚಿತವಲ್ಲ. ಅನಿಂದಿತಳೇ! ಈ ಎಲ್ಲ ಕಪಿಶ್ರೇಷ್ಠರೂ, ನಿನ್ನ ಮಗನಾದ ಅಂಗದನೂ, ಕಪಿ ಮತ್ತು ಕರಡಿಗಳ ಈ ರಾಜ್ಯವೂ ನಿನ್ನಿಂದ ಸನಾಥವಾಗಿದೆ. ಇಂದು ನೀನೇ ಇವರೆಲ್ಲರಿಗೂ ಸ್ವಾಮಿನಿಯಾಗಿರುವೆ. ಸುಗ್ರೀವಾಂಗದರಿಬ್ಬರೂ ದುಃಖದಿಂದ ಬೆಂದುಹೋಗಿ ದ್ದಾರೆ. ಇವರನ್ನು ನೀನು ಸಮಾಧಾನಗೊಳಿಸಿ ಮುಂದಿನ ಕಾರ್ಯವನ್ನು ಕೈಗೊಳ್ಳುವಂತೆ ಹೇಳು. ನಿನ್ನ ಅಧೀನದಲ್ಲಿದ್ದುಕೊಂಡು ಅಂಗದನೇ ಈ ರಾಜ್ಯವನ್ನು ಆಳಲಿ. ಯಾವ ಪ್ರಯೋಜನವನ್ನು ಉದ್ದೇಶಿಸಿ ಜನರು ಸಂತಾನವನ್ನು ಅಪೇಕ್ಷಿಸುವರೋ ಮತ್ತು ಯಾವ ಕಾರ್ಯವನ್ನು ಮಾಡ ಬೇಕಾಗಿರುವುದೋ – ಅವೆಲ್ಲವನ್ನೂ ಈಗ ಅಂಗದನು ಯಥಾಯೋಗ್ಯವಾಗಿ ಮಾಡಲಿ. ಈ ಕಾಲದಲ್ಲಿ ಮಾಡಬೇಕಾಗಿರುವ ನಿಶ್ಚಯವು ಇದೇ ಆಗಿರು ವುದು.* ಕಪೀಶ್ವರನಾದ ವಾಲಿಯು ವಿಧ್ಯುಕ್ತವಾದ ಸಂಸ್ಕಾರಕ್ಕೆ ಯೋಗ್ಯ ನಾಗಿದ್ದಾನೆ. ವಿಧ್ಯುಕ್ತವಾಗಿ ದಹನಾದಿ ಸಂಸ್ಕಾರಗಳು ನಡೆದನಂತರ ಅಂಗದನು ಪಟ್ಟಾಭಿಷಿಕ್ತನಾಗಲಿ. ಸಿಂಹಾಸನಾರೂಢನಾದ ಮಗನನ್ನು ನೋಡುತ್ತಿರುವ ನಿನ್ನ ಮನಸ್ಸಿಗೆ ಶಾಂತಿಯುಂಟಾಗುತ್ತದೆ."

ಪತಿಯ ವಿಯೋಗವ್ಯಸನದಿಂದ ಪೀಡಿತಳಾಗಿದ್ದ ತಾರೆಯು ಹನುಮಂತನ ಮಾತನ್ನು ಕೇಳಿ ಯಥಾಯೋಗ್ಯವಾಗಿ ಉತ್ತರಿಸಿದಳು :

---

* ಅವಸಾನಾನಂತರದಲ್ಲಿ ಪಿಂಡೋದಕಕ್ರಿಯೆಗಳನ್ನು ಮಾಡಿ ಸದ್ಗತಿಯುಂಟಾಗುವಂತೆ ಮಾಡುವನೆಂಬ ಆಶಯದಿಂದಲೇ ಜನರು ಮಕ್ಕಳನ್ನು ಅಪೇಕ್ಷಿಸುತ್ತಾರೆ. ಪುತ್ರನಾದ ಅಂಗದನು ರಾಜನಿಗೆ ವಾಲಿಯ ಅಪರಸಂಸ್ಕಾರವನ್ನು ಮಾಡುವ ಕಾಲವೀಗ ಸನ್ನಿಹಿತ ವಾಗಿದೆ ಎಂಬುದು ಹನುಮಂತನ ಅಭಿಪ್ರಾಯ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಅಙ್ಗದಪ್ರತಿರೂಪಾಣಾಂ ಪುತ್ರಾಣಾಮೇಕತಃ ಶತಮ್ ।
ಹತಸ್ಯಾಪ್ಯಸ್ಯ ವೀರಸ್ಯ ಗಾತ್ರಸಂಶ್ಲೇಷಣಂ ವರಮ್ ॥೧೪॥

"ಹನುಮಂತ! ಅಂಗದನ ಪಟ್ಟಾಭಿಷೇಕದಿಂದ ನನ್ನ ಮನಸ್ಸಿಗೆ ಶಾಂತಿಸಿಗುವುದೆಂದು ಹೇಳಿದೆಯಲ್ಲವೇ ? ನೂರು ಮಂದಿ ಅಂಗದರು ಒಂದು ಕಡೆ. ಸತ್ತುಹೋಗಿರುವ ಪತಿಯ ಆಲಿಂಗನವೆಂಬುದು ಮತ್ತೊಂದು ಕಡೆ. ಈ ಎರಡರಲ್ಲಿ ನೂರು ಮಂದಿ ಅಂಗದರಿಗಿಂತಲೂ ಸತ್ತುಬಿದ್ದಿರುವ ಪತಿಯ ಆಲಿಂಗನವೇ ಶ್ರೇಷ್ಠವೆಂದೂ ನನ್ನ ಮನಸ್ಸಿಗೆ ಶಾಂತಿದಾಯಕವೆಂದೂ ನಾನು ಭಾವಿಸುತ್ತೇನೆ.

ನೀನು ಹೇಳಿದಂತೆ ಈ ಕಪಿರಾಜ್ಯಕ್ಕೆ ನಾನು ನಾಥಳೂ ಆಗುವುದಿಲ್ಲ. ಅಂಗದನಿಗೆ ಏನಾದರೂ ಒಳ್ಳೆಯದನ್ನು ಮಾಡುವ ಅಧಿಕಾರವೂ ನನಗಿರುವುದಿಲ್ಲ. ಅಂಗದನ ಚಿಕ್ಕಪ್ಪನಾದ ಸುಗ್ರೀವನೇ ಮುಂದಿನ ಎಲ್ಲ ಕಾರ್ಯಗಳನ್ನೂ ಮಾಡಲು ಸಮರ್ಥನಾಗಿದ್ದಾನೆ. ಅಂಗದನ ವಿಷಯದಲ್ಲಿ ನೀನು ಹೇಳಿದಂತೆ ಆಚರಿಸಬಾರದು.

ಪಿತಾ ಹಿ ಬನ್ಧುಃ ಪುತ್ರಸ್ಯ ನ ಮಾತಾ ಹರಿಸತ್ತಮ ॥೧೫॥

ಕಪಿಶ್ರೇಷ್ಠನೇ! ಮಗನಿಗೆ ತಂದೆಯೇ ಬಂಧುವು. ತಾಯಿಯೆಂದಿಗೂ ಬಂಧುವಾಗಲಾರಳು. ಆದುದರಿಂದ ಅಂಗದನಿಗೆ ಅವನ ಚಿಕ್ಕತಂದೆಯಾದ ಸುಗ್ರೀವನೇ ನಿಜವಾದ ಬಂಧುವು. ಅವನೇ ಅಂಗದನ ಯೋಗ-ಕ್ಷೇಮಗಳನ್ನು ನೋಡಿಕೊಳ್ಳುತ್ತಾನೆ.

ಈ ಲೋಕದಲ್ಲಿಯೇ ಆಗಲೀ, ಪರಲೋಕದಲ್ಲಿಯೇ ಆಗಲೀ–ಕಪಿರಾಜನಾದ ವಾಲಿಯ ಆಶ್ರಯಕ್ಕಿಂತಲೂ ಶ್ರೇಷ್ಠವಾದ ಆಶ್ರಯವು ನನಗೆ ಬೇರೊಂದಿಲ್ಲ. ಯುದ್ಧದಲ್ಲಿ ಶತ್ರುವಿಗೆ ಅಭಿಮುಖವಾಗಿ ಹತನಾದ ನನ್ನ ಪತಿಯು ಮಲಗಿರುವ ಈ ಶಯನವೇ (ಭೂಮಿಯೇ) ನನಗೂ ಮಲಗಲು ಯೋಗ್ಯವಾಗಿದೆ. (ಇಲ್ಲಿಯೇ ನಾನು ಪ್ರಾಯೋಪವೇಶ ಮಾಡುತ್ತೇನೆ.)"

೨೧ನೆಯ ಸರ್ಗವು ಮುಗಿಯಿತು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.


## ವಾಲಿಯು ಸುಗ್ರೀವನಿಗೂ ಮತ್ತು ಅಂಗದನಿಗೂ ತನ್ನ ಆಶಯವನ್ನು ತಿಳಿಸಿ ಪ್ರಾಣತೊರೆದುದು

ವೀಕ್ಷಮಾಣಸ್ತು ಮನ್ದಾಸುಃ ಸರ್ವತೋ ಮನ್ದಮುಚ್ಛ್ವಸನ್ ।
ಆದಾವೇವ ತು ಸುಗ್ರೀವಂ ದದರ್ಶ ತ್ವಾತ್ಮಜಂ ತತಃ ॥೧॥

ಅಲ್ಪಪ್ರಾಣನಾಗಿದ್ದ ವಾಲಿಯು ಮೆಲ್ಲ-ಮೆಲ್ಲನೆ ಉಸಿರಾಡುತ್ತಾ ಎಲ್ಲ ಕಡೆಗಳಲ್ಲಿಯೂ ಕಣ್ಣುಗಳನ್ನು ಹೊರಳಿಸುತ್ತಿರುವಾಗ - ತನ್ನ ಮುಂಭಾಗದಲ್ಲಿಯೇ ನಿಂತಿದ್ದ ತಮ್ಮನಾದ ಸುಗ್ರೀವನನ್ನು ಮೊದಲು ನೋಡಿ ಬಳಿಕ ಮಗನನ್ನು ನೋಡಿದನು.

ಕಪೀಶ್ವರನಾದ ವಾಲಿಯು ಯುದ್ಧದಲ್ಲಿ ಜಯಗಳಿಸಿದ್ದ ಸುಗ್ರೀವನನ್ನು ಸ್ಪಷ್ಟವಾದ ಮಾತುಗಳಿಂದ ಸಂಬೋಧಿಸುತ್ತಾ ಸ್ನೇಹಯುಕ್ತವಾದ ಈ ಮಾತನ್ನು ಹೇಳಿದನು :

"ಸುಗ್ರೀವ ! ನಾನು ನಿನಗೆ ಹಿಂದೆ ಅಪರಾಧವನ್ನು ಮಾಡಿರುವ ಕಾರಣದಿಂದ ನನ್ನನ್ನು ಅಪರಾಧಿಯೆಂದು ಭಾವಿಸಬೇಡ. ಭವಿಷ್ಯದಲ್ಲಿ ಇಂತಹ ದುರ್ದೆಸೆಯನ್ನು ಹೊಂದಬೇಕೆಂದು ವಿಧಿನಿಯಮವಿದ್ದುದರಿಂದ ಆ ವಿಧಿಯೇ ನನ್ನ ಬುದ್ಧಿಯನ್ನು ವಿಮೋಹಗೊಳಿಸಿ ಬಲಾತ್ಕಾರಪೂರ್ವಕವಾಗಿ ನನ್ನಿಂದ ಹಾಗೆ ಮಾಡಿಸಿತು. ನಮ್ಮಿಬ್ಬರಿಗೂ ಏಕಕಾಲದಲ್ಲಿ ಸುಖವುಂಟಾಗುವುದು ವಿಧಿಗೆ ಸಮ್ಮತವಲ್ಲವೆಂದು ನಾನು ಭಾವಿಸುತ್ತೇನೆ. ಆದುದರಿಂದಲೇ ಭ್ರಾತೃಸಂಬಂಧವಾದ ಸೌಹಾರ್ದವು ಬೇರೆಯಾಗಿಯೇ ಪರಿಣಮಿಸಿತು.*

---

* ಒಂದೇ ರಾಜ್ಯದಲ್ಲಿ ಇಬ್ಬರೂ ಭ್ರಾತೃಸೌಹಾರ್ದದಿಂದಿರುತ್ತಾ ರಾಜ-ಯುವರಾಜರಾಗಿದ್ದುಕೊಂಡು ರಾಜಯೋಗ್ಯವಾದ ಸುಖೋಪಭೋಗಗಳನ್ನು ಏಕಕಾಲದಲ್ಲಿ ಅನುಭವಿಸಲು ವಿಧಿಯು ಇಚ್ಛಿಸಲಿಲ್ಲವೆಂದು ಭಾವಿಸುತ್ತೇನೆ. ಹೀಗೆ ಜೊತೆಯಲ್ಲಿಯೇ ಇದ್ದು ಸುಖಪಡಬಹುದಾಗಿದ್ದರೂ ವಿಧಿಯನಿಯಮದಂತೆ ಅದು ಬೇರೆಯ ರೀತಿಯಲ್ಲಿ ಪರಿಣಮಿಸಿತು. ನಾನು ಸುಖವಾಗಿದ್ದಷ್ಟು ದಿವಸಗಳು ನೀನು ಕಷ್ಟಪಡಬೇಕಾಯಿತು. ನೀನು ಸುಖವಾಗಿರುವ ಕಾಲದಲ್ಲಿ ನಾನು ಇರುವುದೇ ಇಲ್ಲ. ವಿಧಿಯೇ ಹೀಗೆ ಗೊತ್ತುಪಡಿಸಿದೆ.



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.
ವನಚಾರಿಗಳಾದ ಕಪಿ-ಕರಡಿಗಳ ರಾಜ್ಯವನ್ನು ಈಗಲೇ ನೀನು ಸ್ವೀಕರಿಸು. ನಾನೀಗಲೇ ಯಮನ ಮನೆಗೆ ಹೋಗುತ್ತಿರುವೆನೆಂಬುದನ್ನೂ ತಿಳಿ. ನನ್ನ ಪ್ರಾಣಗಳನ್ನೂ, ರಾಜ್ಯವನ್ನೂ, ಅಪಾರವಾದ ಐಶ್ವರ್ಯವನ್ನೂ ಮತ್ತು ಕಳಂಕರಹಿತವಾದ ಕೀರ್ತಿಯನ್ನೂ ನಾನೀಗ ಬಿಟ್ಟುಹೋಗುತ್ತಿದ್ದೇನೆ. ನನ್ನ ಇಂತಹ ದುರವಸ್ಥೆಯಲ್ಲಿ ನಿನಗೆ ಒಂದೆರಡು ಮಾತುಗಳನ್ನು ಹೇಳುತ್ತೇನೆ. ಅವನ್ನು ನಡೆಸಿಕೊಡಲು ನಿನಗೆ ಕಷ್ಟವೇ ಆಗಬಹುದು. ಆದರೂ ನನ್ನ ಮಾತನ್ನು ನೀನು ನಡೆಸಿಕೊಡಲೇಬೇಕು.

ಸುಖಾರ್ಹನಾದ, ಸುಖದಿಂದಲೇ ಬೆಳೆದಿರುವ, ಬಾಲಕನಾದರೂ ಮೂರ್ಖನಲ್ಲದ, ಕಂಬನಿದುಂಬಿದ ಮುಖದಿಂದ ಕೂಡಿರುವ, ಭೂಮಿಯಲ್ಲಿ ಬಿದ್ದಿರುವ ಈ ಅಂಗದನನ್ನು ನೋಡು. ನನ್ನ ಪ್ರಾಣಗಳಿಗಿಂತಲೂ ಪ್ರಿಯಕರನಾಗಿರುವ ನನ್ನನ್ನಗಲುವ ಈ ನನ್ನ ಔರಸಪುತ್ರನನ್ನು ನಿನ್ನ ಔರಸಪುತ್ರನಂತೆಯೇ ಭಾವಿಸಿ ಯಾವ ವಿಧವಾದ ಪುರುಷಾರ್ಥಗಳಿಗೂ ಕೊರತೆಯಿಲ್ಲದ ರೀತಿಯಲ್ಲಿ ಪರಿಪಾಲಿಸು. ಇನ್ನು ಮುಂದೆ ನೀನೇ ಇವನ ತಂದೆಯೂ, ಇವನಿಗೆ ಬೇಕಾದುದೆಲ್ಲವನ್ನೂ ಕೊಡುವವನೂ, ರಕ್ಷಕನೂ ಆಗಿರುವೆ. ಭಯದ ಸಮಯದಲ್ಲಿ ಅಭಯವನ್ನೂ ನೀನೇ ನೀಡಬೇಕು. ಇದುವರೆಗೆ ನಾನಿದ್ದಂತೆ ಮುಂದಕ್ಕೆ ನೀನೇ ಇವನ ಸಕಲಸರ್ವಸ್ವವೂ ಆಗಿರುವೆ. ತಾರೆಯ ಮಗನಾದ ಶ್ರೀಮಂತನಾದ ಈ ಅಂಗದನು ಪರಾಕ್ರಮದಲ್ಲಿ ನಿನಗೆ ಸಮಾನನಾಗಿದ್ದಾನೆ. ರಾಕ್ಷಸರನ್ನು ಸಂಹರಿಸುವ ಸಮಯದಲ್ಲಿ ಇವನೇ ನಿನಗೆ ಮುಂದಾಳಾಗಿರುವನು. ತೇಜಸ್ವಿಯಾದ, ತರುಣನಾದ, ತಾರೆಯ ಮಗನಾದ ಈ ಅಂಗದನು ಯುದ್ಧದಲ್ಲಿ ನನಗೆ ಅನುರೂಪವಾದ ರೀತಿಯಲ್ಲಿ ಶತ್ರುಗಳೊಡನೆ ಪರಾಕ್ರಮದಿಂದ ಕಾದಾಡುತ್ತಾನೆ. ಸುಷೇಣನ ಮಗಳಾದ ಈ ತಾರೆಯು–ಸಾಮಾನ್ಯರಿಂದ ತಿಳಿಯಲು ಅಸಾಧ್ಯವಾದ ಸೂಕ್ಷ್ಮವಾದ ವಿಷಯಗಳನ್ನು ನಿರ್ಣಯಿಸಿ ಹೇಳುವುದರಲ್ಲಿಯೂ, ವಿಧ-ವಿಧವಾದ ಉತ್ಪಾತಗಳ ಫಲಾಫಲಗಳನ್ನು ತಿಳಿದು ಹೇಳುವುದರಲ್ಲಿಯೂ ಸರ್ವತೋಮುಖವಾದ ಮತ್ತು ವಿಶೇಷವಾದ ತಿಳುವಳಿಕೆಯನ್ನು ಹೊಂದಿದ್ದಾಳೆ. ಇವಳು ಯಾವುದೇ ಕಾರ್ಯವನ್ನಾಗಲೀ –'ಸಾಧು ಕ್ರಿಯತಾಂ ಒಳ್ಳೆಯದು ; ಮಾಡಬಹುದು' – ಎನ್ನುವಳೋ ಆ ಕಾರ್ಯವನ್ನು ಹಿಂದು-ಮುಂದು

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata, Digitization: eGangotri.


ನೋಡದೇ ಮಾಡಬಹುದು. ತಾರೆಯು ಯೋಚಿಸಿ ನಿರ್ಧಾರಪೂರ್ವಕವಾಗಿ ಹೇಳುವ ವಿಷಯವು ಯಾವ ರೀತಿಯಲ್ಲಿಯೂ ಸ್ವಲ್ಪವಾದರೂ ವ್ಯತ್ಯಾಸ ವಾಗುವುದೇ ಇಲ್ಲ. ಶ್ರೀರಾಮನ ಕಾರ್ಯವನ್ನು ನೀನು ಸ್ವಲ್ಪವಾದರೂ ಶಂಕೆಯೇ ಇಲ್ಲದೆ ಮಾಡಬೇಕು. ನೀನು ಅವನ ಕಾರ್ಯವನ್ನು ಮಾಡಿಕೊಡ ದಿದ್ದರೆ ಅಧರ್ಮವಾಗುವುದು. ಅವಮಾನಿತನಾದ ಶ್ರೀರಾಮನು ನಿನ್ನನ್ನು ಸಂಹರಿಸಲೂಬಹುದು. ಇದೋ ನೋಡು; ಈ ಸುವರ್ಣಮಾಲೆಯನ್ನು ಹಿಡಿ. ಕುತ್ತಿಗೆಯಲ್ಲಿ ಧರಿಸು. ಈ ಮಾಲೆಯಲ್ಲಿ ಉತ್ಕೃಷ್ಟವಾದ ಕಾಂತಿ ಯಿದೆ. ಇದರೊಡನೆಯೇ ನಾನು ಅಸುನೀಗಿದರೆ ಇದು ತನ್ನ ದಿವ್ಯಕಾಂತಿ ಯನ್ನು ಕಳೆದುಕೊಳ್ಳುವುದು."

ಸೋದರಪ್ರೇಮದಿಂದ ವಾಲಿಯು ಸುಗ್ರೀವನಿಗೆ ಹೀಗೆ ಹೇಳಲು ಸುಗ್ರೀವನು ಶತ್ರುವಧೆಯಿಂದ ಉಂಟಾಗಿದ್ದ ಹರ್ಷವನ್ನು ತೊರೆದು ರಾಹು ಗ್ರಸ್ತನಾದ ಚಂದ್ರನಂತೆ ಅತ್ಯಂತದೀನನಾದನು. ವಾಲಿಯು ಹೇಳಿದ ಆ ಮಾತುಗಳಿಂದ ಸುಗ್ರೀವನ ಮನಸ್ಸಿನಲ್ಲಿದ್ದ ವೈರಭಾವವು ಶಾಂತವಾಯಿತು. ಸಮಾಧಾನವನ್ನು ಹೊಂದಿ ತತ್ಕಾಲೋಚಿತವಾದ ಕಾರ್ಯವನ್ನು ಮಾಡಲು ನಿಶ್ಚಯಿಸಿ ವಾಲಿಯ ಆಜ್ಞೆಯಂತೆ ಸುವರ್ಣಮಯವಾಗಿದ್ದ ಆ ಮಾಲೆ ಯನ್ನು ಅಣ್ಣನಿಂದ ಪಡೆದುಕೊಂಡನು. ದಿವ್ಯವಾದ ಆ ಮಾಲೆಯನ್ನು ಸುಗ್ರೀವನಿಗೆ ಕೊಟ್ಟನಂತರ ಮರಣೋನ್ಮುಖನಾಗಿದ್ದ ವಾಲಿಯು ಹತ್ತಿರ ದಲ್ಲಿಯೇ ನಿಂತಿದ್ದ ಪ್ರಿಯಪುತ್ರನಾದ ಅಂಗದನಿಗೆ ಪ್ರೇಮಪೂರ್ವಕವಾಗಿ ಈ ಮಾತುಗಳನ್ನು ಹೇಳಿದನು :

"ಕುಮಾರ! ನೀನು ಯಾವ ಸ್ಥಳದಲ್ಲಿ ಯಾವ ಕಾಲದಲ್ಲಿ ಹೇಗೆ ನಡೆದುಕೊಳ್ಳಬೇಕೋ–ಹಾಗೆಯೇ ನಡೆದುಕೊಳ್ಳಬೇಕು. ಸುಗ್ರೀವನ ಮಾತು ನಿನಗೆ ಪ್ರಿಯವಾಗಿರಲಿ, ಅಪ್ರಿಯವಾಗಿರಲಿ–ಅದನ್ನು ನೀನು ಸಹಿಸಿಕೊಳ್ಳ ಬೇಕು. ಆಯಾ ಕಾಲಗಳಲ್ಲಿ ಒದಗಿ ಬರುವ ಸುಖವನ್ನಾಗಲೀ–ಕಷ್ಟವನ್ನಾ ಗಲೀ ಅನುಭವಿಸುತ್ತಾ ಸುಗ್ರೀವನ ಅಧೀನದಲ್ಲಿರಬೇಕು. ನಾನು ನಿನ್ನನ್ನು ಸತತವಾಗಿ ಲಾಲನೆಮಾಡುತ್ತಿದ್ದೆನು. ನೀನು ನನಗಾಗಿ ಯಾವ ಕಾರ್ಯ ವನ್ನು ಮಾಡದಿದ್ದರೂ ಸುಮ್ಮನಿದ್ದುಬಿಡುತ್ತಿದ್ದೆನು. ನೀನು ಅಪರಾಧ ಮಾಡಿದರೂ ಕ್ಷಮಿಸಿಬಿಡುತ್ತಿದ್ದೆನು. ಬಹಳ ಮುದ್ದಾಗಿ ಸಾಕಿದ್ದೇನೆ. ಆದರೆ

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

ಈ ವಿಧವಾದ ಲಾಲನೆ-ಪೋಷಣೆಗಳನ್ನು ನೀನು ಸುಗ್ರೀವನಿಂದಲೂ ನಿರೀಕ್ಷಿಸ ಬಾರದು. ನನ್ನೊಡನೆ ಸರಸವಾಗಿದ್ದಂತೆ ಸರಸವಾಗಿರುವುದನ್ನು ಸುಗ್ರೀವನು ಮಾನ್ಯಮಾಡಲಾರನು. ಸುಗ್ರೀವನ ಸ್ನೇಹಿತರಲ್ಲದವರೊಡನೆ ಮತ್ತು ಸುಗ್ರೀವನ ಶತ್ರುಗಳೊಡನೆ ನೀನು ಗೆಳೆತನವನ್ನು ಮಾಡಿಕೊಳ್ಳಬೇಡ. ಯಾವಾಗಲೂ ಸ್ವಾಮಿಯ ಅರ್ಥಸಿದ್ಧಿಯಲ್ಲಿಯೇ ನಿರತನಾಗಿರುತ್ತಾ ಜಿತೇಂದ್ರಿಯನಾಗಿ ಸುಗ್ರೀವನ ಆಜ್ಞಾಧಾರಕನಾಗಿರು. ನೀನು ಯಾರೊಡನೆಯೂ ಅತಿಯಾದ ಸ್ನೇಹವನ್ನು ಬೆಳೆಸಬೇಡ. ಸ್ನೇಹವಿಲ್ಲದವನಂತೆಯೂ ನಡೆದು ಕೊಳ್ಳಬೇಡ. ಅತಿಸ್ನೇಹವನ್ನು ಮಾಡುವುದು ಮತ್ತು ಸ್ನೇಹವನ್ನೇ ಮಾಡ ದಿರುವುದು ಈ ಎರಡೂ ದೋಷಗಳೇ ಆಗಿವೆ. ಆದುದರಿಂದ ಮಧ್ಯವರ್ತಿಯಾಗಿ ವ್ಯವಹರಿಸು." ಶ್ರೀರಾಮನ ಶರಪ್ರಹಾರದಿಂದ ಅತ್ಯಂತಪೀಡಿತನಾಗಿದ್ದ ವಾಲಿಯು ಮಗನಿಗೆ ಹೀಗೆ ಹೇಳಿ ಎರಡು ಕಣ್ಣುಗಳನ್ನೂ ಹೊರಳಿಸುತ್ತಾ ಭಯಂಕರವಾದ ಹಲ್ಲುಗಳು ಕಾಣುವಂತೆ ಬಾಯ್ದೆರೆದು ಅಸುನೀಗಿದನು. ನಾಯಕನನ್ನು ಕಳೆದುಕೊಂಡ ಕಪಿಶ್ರೇಷ್ಠರಾದ ವಾನರರೆಲ್ಲರೂ ವಿಲಪಿಸುತ್ತಾ ಕಿರುಚಿಕೊಂಡರು.

ವಾನರೇಶ್ವರನಾದ ವಾಲಿಯು ಸ್ವರ್ಗಕ್ಕೆ ಹೊರಟೊಡನೆಯೇ ಕಿಷ್ಕಿಂಧೆಯು ಶೂನ್ಯವಾಗಿ ಹೋಯಿತು. ಉದ್ಯಾನವನಗಳೂ, ಪರ್ವತಗಳೂ ಮತ್ತು ಕಾನನಗಳೂ ಶೂನ್ಯವಾಗಿ ಕಾಣುತ್ತಿದ್ದುವು. ವಾನರರೆಲ್ಲರೂ ಕಾಂತಿ ಹೀನರಾದರು. ಅವರು ತಮ್ಮ ತಮ್ಮಲ್ಲಿಯೇ ಹೀಗೆ ಮಾತನಾಡಿಕೊಳ್ಳು ತ್ತಿದ್ದರು: "ಕಾನನಗಳೂ ಮತ್ತು ವನಗಳೂ ಮಹಾವೇಗಯುಕ್ತನಾದ ವಾಲಿಯೊಡನೆ ಹಾರಿಬಂದ ಹೂಗಳೊಡನೆ ತುಂಬಿರುತ್ತಿದ್ದುವು. ಈಗ ಅಂತಹ ಮಹಾದ್ಭುತವಾದ ಕಾರ್ಯವನ್ನು ಯಾರು ಮಾಡುತ್ತಾರೆ? ಮಹಾಬಾಹು ವಾದ ಮಹಾತ್ಮನಾದ ಗೋಲಭನೆಂಬ ಗಂಧರ್ವನೊಡನೆ ನಮ್ಮ ರಾಜನು ಹದಿನೈದು 'ವರ್ಷಗಳ ಕಾಲ ಬಿಡುವಿಲ್ಲದೇ ಯುದ್ಧಮಾಡಿದನು. ರಾತ್ರಿ ಯಲ್ಲಾಗಲೀ ಹಗಲಿನಲ್ಲಾಗಲೀ ಅವರ ಯುದ್ಧವು ನಿಲ್ಲುತ್ತಲೇ ಇರ ಲಿಲ್ಲ. ಹದಿನಾರನೆಯ ವರ್ಷದಲ್ಲಿ ವಾಲಿಯು ಗೋಲಭನನ್ನು ಸಂಹರಿಸಿದನು. ಕೋರೆಹಲ್ಲುಗಳಿಂದ ಭಯಂಕರನಾಗಿ ಕಾಣುತ್ತಿದ್ದ ನಮ್ಮ ರಾಜನು ಧೂರ್ತ ನಾಗಿದ್ದ ಆ ಗಂಧರ್ವನನ್ನು ಸಂಹರಿಸಿ ನಮ್ಮೆಲ್ಲರಿಗೂ ಅಭಯವನ್ನಿತ್ತನು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಅಂತಹವನಿಂದು ಹತನಾಗಿ ಹೇಗೆ ಬಿದ್ದಿದ್ದಾನೆ?" ಹೀಗೆಲ್ಲಾ ಅವರು ಪರಸ್ಪರವಾಗಿ ಮಾತನಾಡಿಕೊಳ್ಳುತ್ತಿದ್ದರು.

ಸಿಂಹದಿಂದ ವ್ಯಾಪ್ತವಾದ ಮಹಾರಣ್ಯದಲ್ಲಿ ಗೋಪತಿಯಾದ ಗೂಳಿಯನ್ನು ಸಿಂಹವು ಕೊಂದುಬಿಟ್ಟರೆ ಹಸುಗಳು ಭ್ರಾಂತವಾಗುವಂತೆ-ವೀರನಾದ ಕಪಿಶ್ರೇಷ್ಠನಾದ ವಾಲಿಯನ್ನು ರಾಮನು ಸಂಹರಿಸಲು ವನಚಾರಿಗಳಾದ ವಾನರರು ಭ್ರಾಂತರಾದರು. ಸುಖಿಗಳಾಗಲಿಲ್ಲ. ವ್ಯಸನವೆಂಬ ಸಮುದ್ರದಲ್ಲಿ ಮುಳುಗಿಹೋಗಿದ್ದ, ಗಂಡನ ಮುಖದ ಮೇಲೆಯೇ ದೃಷ್ಟಿಯನ್ನಿಟ್ಟು ಅವನ ಮುಖವನ್ನು ಮುದ್ದಾಡುತ್ತಾ ಗೋಳಾಡುತ್ತಿದ್ದ ತಾರೆಯು-ಬುಡವನ್ನು ಕಡಿದ ವೃಕ್ಷಕ್ಕೆ ಹಬ್ಬಿರುವ ಬಳ್ಳಿಯಂತೆ-ವಾಲಿಯನ್ನು ಅಪ್ಪಿಕೊಂಡೇ ಭೂಮಿಯಲ್ಲಿ ಬಿದ್ದಳು.

೨೨ನೆಯ ಸರ್ಗವು ಮುಗಿಯಿತು.

ಕಿಷ್ಕಿಂಧಾಕಾಂಡ — ೨೩ನೆಯ ಸರ್ಗ

## ತಾರೆಯ ವಿಲಾಪ

ತತಃ ಸಮುಪಜಿಘ್ರನ್ತೀ ಕಪಿರಾಜಸ್ಯ ತನ್ಮುಖಮ್ ।
ಪತಿಂ ಲೋಕಾಚ್ಚ್ಯುತಂ ತಾರಾ ಮೃತಂ ವಚನಮಬ್ರವೀತ್ ॥೧॥

ಬಳಿಕ ತಾರೆಯು ಕಪಿರಾಜನಾದ ವಾಲಿಯ ಮುಖವನ್ನೇ ಆಘ್ರಾಣಿಸುತ್ತಾ ಮೃತನಾಗಿದ್ದ ಪತಿಗೆ ಹೇಳಿದಳು :

"ವೀರನೇ! ನಾನು ಹೇಳಿದಂತೆ ಮಾಡದೇ ಕಲ್ಲುಗಳು ತುಂಬಿರುವ, ಹಳ್ಳ-ತಿಟ್ಟುಗಳಿರುವ ಅತ್ಯಂತದುಃಖಕರವಾದ ಕಠಿಣವಾದ ನೆಲದ ಮೇಲೆಯೇ ಇನ್ನೂ ಮಲಗಿರುವೆ.

ನಿಶ್ಚಯವಾಗಿಯೂ ಈ ಭೂದೇವಿಯೇ ನಿನಗೆ ನನಗಿಂತಲೂ ಪ್ರಿಯತರಳಾಗಿದ್ದಾಳೆ. ಏಕೆಂದರೆ: ನೀನು ಭೂದೇವಿಯನ್ನೇ ಆಲಿಂಗಿಸಿಕೊಂಡು ಮಲಗಿರುವೆ. ನನ್ನೊಡನೆ ಒಂದು ಮಾತನ್ನೂ ಆಡುತ್ತಿಲ್ಲ. ಸಾಹಸಪೂರ್ಣವಾದ ಕಾರ್ಯಗಳಲ್ಲಿಯೇ ಪ್ರೀತಿಯಿರತಕ್ಕವನೇ! ವಿಧಾತನು ಈಗ ಸುಗ್ರೀವನ ವಶವಾಗಿಬಿಟ್ಟಿದ್ದಾನೆ. ನಿಶ್ಚಯವಾಗಿಯೂ ಇದು ಅತ್ಯಾಶ್ಚರ್ಯವೇ ಸರಿ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಈಗ ಸುಗ್ರೀವನೇ ನಿನಗಿಂತಲೂ ಮಹಾಪರಾಕ್ರಮಿಯಾಗಿಬಿಟ್ಟನು. ಮಹಾಬಲಿಷ್ಠರಾದ ಋಕ್ಷ-ವಾನರಮುಖ್ಯರು ನಿನ್ನ ಹತ್ತಿರದಲ್ಲೇ ಇದ್ದಾರೆ. ಅವರ ದುಃಖಪೂರ್ಣವಾದ ವಿಲಾಪವನ್ನೂ, ಅಂಗದನ ದುಃಖವನ್ನೂ ಮತ್ತು ನನ್ನ ಈ ದೈನ್ಯದ ಮಾತುಗಳನ್ನೂ ಕೇಳಿಯೂ ನೀನೇಕೆ ಎಚ್ಚರಗೊಳ್ಳುತ್ತಿಲ್ಲ? ನೀನೀಗ ಯುದ್ಧದಲ್ಲಿ ಹತನಾಗಿ ಎಲ್ಲಿ ಮಲಗಿರುವೆಯೋ-ಅಲ್ಲಿಯೇ ಹಿಂದೆ ನಿನ್ನಿಂದಲೇ ಹತರಾದ ಅನೇಕಶತ್ರುಗಳು ಮಲಗಿದ್ದರು. ನೀನೀಗ ಮಲಗಿರುವುದು ಅಂತಹ ವೀರಶಯನವೇ ಆಗಿದೆ. ಯುದ್ಧದಲ್ಲಿ ಕೌಟಿಲ್ಯವನ್ನಾಶ್ರಯಿಸದೇ ಪರಾಕ್ರಮವನ್ನೇ ಆಶ್ರಯಿಸಿ ಯುದ್ಧಮಾಡುವವನೇ! ಸದ್ವಂಶಸಂಭೂತನೇ! ಯುದ್ಧಪ್ರಿಯನೇ! ನನಗೆ ಅತ್ಯಂತಪ್ರಿಯನಾದವನೇ! ಮಾನದನೇ! ಅನಾಥಳಾದ ನನ್ನನ್ನು ಏಕಾಕಿನಿಯನ್ನಾಗಿ ಬಿಟ್ಟುಹೋಗಿರುವೆ.

**ಶೂರಾಯ ನ ಪ್ರದಾತವ್ಯಾ ಕನ್ಯಾ ಖಲು ವಿಪಶ್ಚಿತಾ ।**
**ಶೂರಭಾರ್ಯಾಂ ಹತಾಂ ಪಶ್ಯ ಸದ್ಯೋ ಮಾಂ ವಿಧವಾಂ**
**ಕೃತಾಮ್ ॥೬॥**

ವಿದ್ವಾಂಸನಾದವನು - ಶೂರನಾದವನಿಗೆ ಮಗಳನ್ನು ಕೊಡಬಾರದು. ಇಷ್ಟು ಬೇಗ ಶೂರನ ಭಾರ್ಯೆಯಾದ ನಾನು ವಿಧವೆಯಾಗಿ ಹಾಳಾಗಿರುವುದನ್ನು ನೀನೇ ಗಮನಿಸು. ನನ್ನ ಮಾನ-ಮರ್ಯಾದೆಗಳೆಲ್ಲವೂ ಹಾಳಾದುವು. ಪತಿಶುಶ್ರೂಷೆಯಿಂದಾಗಿ ಪಡೆಯಬಹುದಾಗಿದ್ದ ಶಾಶ್ವತವಾದ ಪುಣ್ಯಲೋಕವೂ ತಪ್ಪಿಹೋಯಿತು. ನಾನೀಗ ವಿಶಾಲವಾದ ಮತ್ತು ಆಳವಾದ ಶೋಕಸಾಗರದಲ್ಲಿ ಮುಳುಗಿಹೋಗಿದ್ದೇನೆ. ನಿಶ್ಚಯವಾಗಿಯೂ ಈ ನನ್ನ ಹೃದಯವು ಉಕ್ಕಿನಿಂದಲೇ ಮಾಡಿದ್ದಾಗಿರಬೇಕು. ಏಕೆಂದರೆ: ಪ್ರಿಯಪತಿಯು ಹತನಾಗಿ ಬಿದ್ದಿರುವುದನ್ನು ನೋಡಿಯೂ ನನ್ನ ಈ ಹೃದಯವು ನೂರಾರು ಚೂರುಗಳಾಗಿ ಸೀಳಿಹೋಗುತ್ತಿಲ್ಲ. ಸುಹೃದನೂ ಮತ್ತು ಪತಿಯೂ ಆಗಿರುವ ನೀನು ಸ್ವಾಭಾವಿಕವಾಗಿಯೇ ಅತ್ಯಂತಪ್ರಿಯನೂ ಆಗಿರುವೆ. ಯುದ್ಧದಲ್ಲಿ ಮಹಾಪರಾಕ್ರಮಿಯೇ ಆಗಿದ್ದರೂ ಇಂದು ನೀನು ಸಾವನ್ನಪ್ಪಿರುವೆ.

**ಪತಿಹೀನಾ ತು ಯಾ ನಾರೀ ಕಾಮಂ ಭವತು ಪುತ್ರಿಣೀ ।**
**ಧನಧಾನ್ಯೈಃ ಸುಪೂರ್ಣಾಪಿ ವಿಧವೇತ್ಯುಚ್ಯತೇ ಜನೈಃ ॥೧೨॥**

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಹೆಂಗಸು ಪುತ್ರವತಿಯೇ ಆಗಿದ್ದರೂ, ಧನ-ಧಾನ್ಯಗಳಿಂದ ಸಮೃದ್ಧಳೇ ಆಗಿದ್ದರೂ-ಪತಿಯಿಂದ ವಿಹೀನಳಾದರೆ ಅಂತಹವಳನ್ನು 'ವಿಧವೆ'-ಎಂದು ಜನರು ಕರೆಯುತ್ತಾರೆ. ನಿನ್ನ ಶರೀರದಿಂದಲೇ ಹರಿದು ಕೆಳಗೆ ಚೆಲ್ಲಿರುವ ರಕ್ತದ ಮೇಲೆ ಮಲಗಿರುವ ನೀನು ಇಂದ್ರಗೋಪಮಣಿಯಂತೆ ಕೆಂಪಾಗಿರುವ ನಿನ್ನ ಹಾಸಿಗೆಯಲ್ಲಿ ಮಲಗಿರುವಂತೆಯೇ ಕಾಣುತ್ತಿರುವೆ. ಸುತ್ತಲೂ ಧೂಳಿನಿಂದಲೂ ರಕ್ತದಿಂದಲೂ ವ್ಯಾಪ್ತವಾಗಿರುವ ನಿನ್ನ ಶರೀರವನ್ನು ನನ್ನೆರಡು ತೋಳುಗಳಿಂದ ತಬ್ಬಿಕೊಳ್ಳಲೂ ನಾನು ಅಸಮರ್ಥಳಾಗಿರುವೆನು. ಸಹೋದರರಿಬ್ಬರ ಅತ್ಯಂತಭಯಂಕರವಾದ ವೈರದಲ್ಲಿ ಸುಗ್ರೀವನೇ ಲಾಭಪಡೆದುಕೊಂಡನು. ಶ್ರೀರಾಮನು ಬಿಟ್ಟ ಒಂದೇ ಬಾಣವು ಸುಗ್ರೀವನ ಭಯವನ್ನು ಅಪಹರಿಸಿಬಿಟ್ಟಿತು. ನಿನ್ನ ಎದೆಯಲ್ಲಿ ರಾಮನು ಬಿಟ್ಟ ಆ ಬಾಣವು ನಾಟಿಕೊಂಡಿದೆ. ಇದರಿಂದಾಗಿ ನನಗೆ ನಿನ್ನನ್ನು ತಬ್ಬಿಕೊಳ್ಳಲೂ ಆಗುತ್ತಿಲ್ಲ. ಈ ಕಾರಣದಿಂದ ನೀನು ಸಾವನ್ನಪ್ಪಿದ್ದರೂ ನಿನ್ನನ್ನು ಸುಮ್ಮನೇ ಕುಳಿತು ನೋಡುತ್ತಿದ್ದೇನೆ."

ತಾರೆಯು ಹೀಗೆ ಪ್ರಲಪಿಸುತ್ತಿರಲಾಗಿ ಬೆಟ್ಟದ ಗುಹೆಯೊಳಗೆ ಅಡಗಿಕೊಂಡಿರುವ ಹೊಳೆಯುತ್ತಿರುವ ವಿಷಸರ್ಪವನ್ನು ಹೊರತರುವಂತೆ-ನೀಲನೆಂಬ ಕಪಿಮುಖ್ಯನು ವಾಲಿಯ ಹೃದಯಗಹ್ವರದಲ್ಲಿ ನಾಟಿಕೊಂಡಿದ್ದ ಬಾಣವನ್ನು ಹೊರಕ್ಕೆ ಸೆಳೆದನು. ವಾಲಿಯ ಶರೀರದಿಂದ ಹೊರಬಂದ ಆ ಬಾಣವು ಅಸ್ತಾಚಲಶಿಖರದಿಂದ ತಡೆಯಲ್ಪಟ್ಟು ಸೂರ್ಯನ ಮೂಲಕ ಹೊರಸೂಸುವ ಕಿರಣಗಳಂತೆ ಪ್ರಕಾಶಮಾನವಾದ ಕಾಂತಿಯಿಂದ ಬೆಳಗುತ್ತಿದ್ದಿತು. ಗೈರಿಕಾದಿ ಧಾತುಗಳಿಂದ ಸಮ್ಮಿಶ್ರವಾದ ಕೆಂಪಾದ ಜಲಧಾರೆಯು ಪರ್ವತದಿಂದ ಹರಿಯುವಂತೆ - ಬಾಣವನ್ನು ಕಿತ್ತೊಡನೆಯೇ ವಾಲಿಯ ಶರೀರದಲ್ಲಿದ್ದ ಗಾಯಗಳಿಂದ ರಕ್ತದ ಧಾರೆಗಳು ಸುತ್ತಲೂ ಹರಿಯತೊಡಗಿದುವು. ಯುದ್ಧಸಮಯದಲ್ಲಿ ಹುಟ್ಟಿದ ಧೂಳಿನಿಂದ ಮುಚ್ಚಿಹೋಗಿದ್ದ, ರಾಮನ ಬಾಣದಿಂದ ಪ್ರಹೃತನಾಗಿದ್ದ, ಶೂರನಾದ ವಾಲಿಯನ್ನು ತಾರೆಯು ತನ್ನ ಕಂಬನಿಯಿಂದಲೇ ಅಭಿಷೇಕಮಾಡಿಬಿಟ್ಟಳು. ವಾಲಿಯು ಶ್ರೀರಾಮನ ಬಾಣದಿಂದ ಹತನಾಗಿ ಬಿದ್ದಿದ್ದನು. ಅವನ ಅಂಗಗಳೆಲ್ಲವೂ ರಕ್ತದಿಂದ ತೋಯ್ದುಹೋಗಿದ್ದುವು. ವರಾಂಗನೆಯಾದ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ತಾರೆಯು ಅಂತಹ ವಾಲಿಯನ್ನು ನೋಡಿ ಪಿಂಗಾಕ್ಷನಾದ ತನ್ನ ಪುತ್ರನಿಗೆ ಹೇಳಿದಳು :

" ಮಗು ! ನಿನ್ನ ತಂದೆಯ ಸುದಾರುಣವಾದ ಈ ಕೊನೆಯ ಅವಸ್ಥೆಯನ್ನಾದರೂ ನೋಡು ! ಪಾಪರೂಪವಾದ ಕರ್ಮದಿಂದ ಸಂಭವಿಸಿದ ವೈರದಿಂದಾಗಿ ಈ ವಿಧವಾದ ದುರವಸ್ಥೆಯು ಇವನಿಗೆ ಪ್ರಾಪ್ತವಾಯಿತು. ಬಾಲಸೂರ್ಯನಂತೆ ಉಜ್ವಲವಾದ ಶರೀರವನ್ನು ಹೊಂದಿರುವ, ಯಮನ ಮನೆಗೆ ಹೋಗುತ್ತಿರುವ, ಮಾನದನಾದ ರಾಜನಿಗೆ ಅಭಿವಾದನಮಾಡು."

ತಾರೆಯು ಹೀಗೆ ಹೇಳಲು ಅಂಗದನು ಮೇಲೆದ್ದು ' ಅಙ್ಗದೋಽಹಂ ಅಭಿವಾದಯೇ ಅಂಗದನಾದ ನಾನು ಅಭಿವಾದನಮಾಡುತ್ತೇನೆ ' ಎಂದು ಹೇಳುತ್ತಾ ಮಾಂಸಲವಾಗಿಯೂ ಮತ್ತು ದುಂಡಾಗಿಯೂ ಇದ್ದ ಎರಡು ಭುಜಗಳಿಂದಲೂ ವಾಲಿಯ ಪಾದಗಳನ್ನು ಹಿಡಿದುಕೊಂಡನು. ಹೀಗೆ ಅಂಗದನು ಅಭಿವಾದನಮಾಡುತ್ತಿದ್ದಾಗ ತಾರೆಯು ಪುನಃ ವಾಲಿಗೆ ಹೇಳಿದಳು : " ಪ್ರಾಣನಾಥ ! ಹಿಂದೆ ಅಂಗದನು ಹೀಗೆಯೇ ನಮಸ್ಕಾರ ಮಾಡುತ್ತಿದ್ದಾಗ– ' ದೀರ್ಘಾಯುರ್ಭವ ಪುತ್ರ ಮಗನೇ ! ದೀರ್ಘಾಯುಷ್ಮಂತನಾಗು '–ಎಂದು ನೀನು ಆಶೀರ್ವದಿಸುತ್ತಿದ್ದೆ. ಈಗೇಕೆ ಆಶೀರ್ವದಿಸುತ್ತಿಲ್ಲ ? ಅಭಿವಾದನಮಾಡುತ್ತಿದ್ದರೂ ಮಾತನಾಡದೆ ಏಕೆ ಸುಮ್ಮನಿರುವೆ ? ಸಿಂಹದಿಂದ ಕೊಲ್ಲಲ್ಪಟ್ಟ ಹೋರಿಯ ಸಮೀಪದಲ್ಲಿ ಕರುವಿನೊಡನೆ ಹಸುವೂ ನಿಂತುಕೊಳ್ಳುವಂತೆ ಪುತ್ರಸಹಿತಳಾದ ನಾನು ಅಸುನೀಗಿ ಬಿದ್ದಿರುವ ನಿನ್ನ ಬಳಿ ಇರುವೆನು. ಸಂಗ್ರಾಮವೆಂಬ ಯಾಗವನ್ನು ಮಾಡಿ ರಾಮಬಾಣಪ್ರಹಾರವೆಂಬ ನೀರಿನಲ್ಲಿ ಪತ್ನಿಯಾದ ನನ್ನನ್ನು ಬಿಟ್ಟು ನೀನೊಬ್ಬನೇ ಅವಭೃಥಸ್ನಾನವನ್ನು ಹೇಗೆ ಮಾಡಿದೆ ?* ಹಿಂದೆ ಯುದ್ಧದಲ್ಲಿ ಸುಪ್ರೀತನಾದ ದೇವರಾಜನು ತನಗೆ ಅತ್ಯಂತಪ್ರಿಯವಾಗಿದ್ದ ಸುವರ್ಣಮಯ ಮಾಲೆಯನ್ನು ನಿನಗೆ ದಯಪಾಲಿಸಿದ್ದನು. ಆ ಮಾಲೆಯನ್ನು ನಾನೀಗ ನಿನ್ನ ಕತ್ತಿನಲ್ಲಿ ಏಕೆ ಕಾಣುತ್ತಿಲ್ಲ ? ಮೇರುಪರ್ವತವನ್ನು ಸುತ್ತುತ್ತಿರುವ ಸೂರ್ಯನು ಅಸ್ತಮಿಸುತ್ತಿದ್ದರೂ ಆತನ ದಿವ್ಯಪ್ರಭೆಯು ಆ ಪರ್ವತವನ್ನು

---

* ಯಜ್ಞವನ್ನಾಗಲೀ, ಯಜ್ಞಾಂಗವಾದ ಅವಭೃಥಸ್ನಾನವನ್ನಾಗಲೀ ಸಪತ್ನೀಕನಾಗಿಯೇ ಮಾಡಬೇಕು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಬಿಟ್ಟು ಹೋಗದಂತೆ – ನೀನು ಪ್ರಾಣಗಳಿಂದ ವಿಹೀನನಾಗಿದ್ದರೂ ರಾಜ ತೇಜಸ್ಸು ನಿನ್ನನ್ನು ಬಿಟ್ಟುಹೋಗಿಲ್ಲ. ಆ ಸಮಯದಲ್ಲಿ ಸುಗ್ರೀವನೊಡನೆ ಯುದ್ಧಮಾಡಲು ಹೋಗಬೇಡವೆಂಬ ನನ್ನ ಹಿತಕರವಾದ ಮಾತಿನಂತೆ ನೀನು ನಡೆದುಕೊಳ್ಳಲಿಲ್ಲ. ಆ ಸಮಯದಲ್ಲಿ ನಿನ್ನನ್ನು ಬಲಾತ್ಕಾರದಿಂದಲಾದರೂ ಮುಂದೆ ಹೋಗದಂತೆ ತಡೆದು ನಿಲ್ಲಿಸಲು ನಾನು ಅಸಮರ್ಥಳಾಗಿದ್ದೆನು. ನೀನು ಯುದ್ಧದಲ್ಲಿ ಹತನಾದುದರಿಂದ ಸಪುತ್ರಳಾದ ನಾನೂ ಮೃತಪ್ರಾಯಳೇ ಆದೆನು. ನಿನ್ನೊಡನೆಯೇ ನನ್ನ ಸೌಭಾಗ್ಯವೂ ಹೊರಟು ಹೋಯಿತು."

೨೩ನೆಯ ಸರ್ಗವು ಮುಗಿಯಿತು.

ಕಿಷ್ಕಿಂಧಾಕಾಂಡ ೨೪ನೆಯ ಸರ್ಗ

## ಶೋಕಮಗ್ನನಾದ ಸುಗ್ರೀವನ ಪ್ರಾಣತ್ಯಾಗದ ನಿರ್ಧಾರ: ತನ್ನನ್ನೂ ವಧಿಸುವಂತೆ ಶ್ರೀರಾಮನಲ್ಲಿ ತಾರೆಯು ಪ್ರಾರ್ಥನೆ: ಶ್ರೀರಾಮನ ಸಮಾಧಾನ ವಚನ

ತಾಂ ತ್ವಶ್ರುವೇಗೇನ ದುರಾಸದೇನ
ತ್ವಭಿಪ್ಲುತಾಂ ಶೋಕಮಹಾರ್ಣವೇನ ।
ಪಶ್ಯಂಸ್ತದಾ ವಾಲ್ಯನುಜಸ್ತರಸ್ವೀ
ಭ್ರಾತುರ್ವಧೇನಾಪ್ರತಿಮೇನ ತೇಪೇ ॥೧॥

ವೇಗವಂತನಾದ ವಾಲಿಯ ತಮ್ಮನಾದ ಸುಗ್ರೀವನು–ತಡೆದುಕೊಳ್ಳಲು ಅಸಾಧ್ಯವಾದ ಕಣ್ಣೀರಿನ ವೇಗದಿಂದ ಕೂಡಿದ್ದ ಶೋಕವೆಂಬ ಮಹಾಸಾಗರದಲ್ಲಿ ಮುಳುಗಿದ್ದ ತಾರೆಯನ್ನು ನೋಡಿ, ಅವಳ ದುಃಖಕ್ಕೆ ಕಾರಣವಾದ ಅಪ್ರತಿಮವಾದ ಅಣ್ಣನ ವಧೆಯಿಂದ ತಾನೂ ಬಹಳವಾಗಿ ಸ್ಪಂತಪಿಸಿದನು. ಕಂಬನಿದುಂಬಿದ ಕಣ್ಣುಗಳಿಂದ ಕೂಡಿದ್ದ ಬುದ್ಧಿವಂತನಾದ ಸುಗ್ರೀವನು ತಾರೆಯು ಮ್ಲಾನಳಾಗಿರುವುದನ್ನು ಕಂಡು ವಿಷಾದಚಿತ್ತನಾಗಿ ಬಹಳವಾಗಿ ಪರಿತಪಿಸುತ್ತಾ, ಸೇವಕರಿಂದ ಪರಿವೃತನಾಗಿ ಮೆಲ್ಲ-ಮೆಲ್ಲನೆ ಶ್ರೀರಾಮನ ಬಳಿಗೆ ಹೋದನು. ಸುದೀರ್ಘವಾದ ಧನುಸ್ಸನ್ನೂ ಸರ್ಪಸದೃಶವಾದ ಬಾಣವನ್ನೂ ಹಿಡಿದಿದ್ದ, ಯಶೋವಂತನಾದ, ಸಾಮುದ್ರಿಕಶಾಸ್ತ್ರದಲ್ಲಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಹೇಳಿರುವಂತೆ ರಾಜಲಕ್ಷಣಗಳಿಂದ ಕೂಡಿದ್ದ, ಲಕ್ಷ್ಮಣನ ಸಮೀಪದಲ್ಲಿ ನಿಂತಿದ್ದ ಶ್ರೀರಾಮನ ಬಳಿಗೆ ಹೋಗಿ ಹೇಳಿದನು :

"ನರೇಂದ್ರಪುತ್ರನೇ ! ನೀನು ಪ್ರತಿಜ್ಞೆ ಮಾಡಿದ್ದಂತೆ ವಾಲಿಯ ವಧೆಯನ್ನೇನೋ ಮಾಡಿದೆ. ಇದರಿಂದ ನನಗೆ ರಾಜ್ಯಲಾಭರೂಪವಾದ ಪ್ರತ್ಯಕ್ಷವಾದ ಫಲವೂ ಸಿಕ್ಕಿದಂತಾಯಿತು. ಮಹಾಶೂರನಾದ ಅಣ್ಣನನ್ನು ಕಳೆದುಕೊಂಡಿರುವ ನನಗೀಗ ಬದುಕಿನಲ್ಲಿಯೇ ಆಸಕ್ತಿಯು ಹೊರಟುಹೋಗಿದೆ. ರಾಜ್ಯಭೋಗಾದಿಗಳನ್ನೂ ಅನುಭವಿಸುವ ಮನಸ್ಸಿಲ್ಲ. ವಾಲಿಯು ಹತನಾಗಲು ಅವನ ಪತ್ನಿಯಾದ ತಾರೆಯು ಬಹಳವಾಗಿ ಗೋಳಾಡುತ್ತಿದ್ದಾಳೆ. ಪಟ್ಟಣಕ್ಕೆ ಪಟ್ಟಣವೇ ದುಃಖದಿಂದ ಪರಿತಪಿಸುತ್ತಿದೆ. ಅಣ್ಣನ ಮಗನಾದ ಅಂಗದನೂ ತಂದೆಯ ಮರಣದ ದುಃಖದಿಂದ ಬದುಕುವನೋ ಇಲ್ಲವೋ ಎಂಬ ಸಂದೇಹದಲ್ಲಿದ್ದಾನೆ. ಇಂತಹ ಸಂದರ್ಭದಲ್ಲಿ ನನಗೆ ಈ ರಾಜ್ಯಭೋಗಾದಿಗಳಾವುವೂ ರುಚಿಸುತ್ತಿಲ್ಲ. ನಿರ್ನಿಮಿತ್ತವಾಗಿ ನನ್ನನ್ನು ಕಿಷ್ಕಿಂಧೆಯಿಂದ ಹೊರದೂಡಿದನೆಂಬ ಕೋಪದಿಂದಲೂ, ನನ್ನ ಪತ್ನಿಯನ್ನು ಅಪಹರಿಸಿದನೆಂಬ ಅಸಹನೆಯಿಂದಲೂ, ನನ್ನನ್ನು ಬಹಳವಾಗಿ ತಿರಸ್ಕರಿಸಿದ್ದರಿಂದಲೂ ನಾನು ಈ ಹಿಂದೆ ವಾಲಿಯ ವಧೆಗೆ ಸಮ್ಮತಿಸಿದೆನು. ಆದರೆ ಅವನು ಹತನಾದನಂತರ ನಾನು ಗಾಢವಾಗಿ ಪರಿತಪಿಸುತ್ತಿದ್ದೇನೆ. ವಾನರವೃತ್ತಿಯಿಂದ ಹೇಗೋ ಜೀವಿಸುತ್ತಿರುವ ನನಗೆ ಪರ್ವತೋತ್ತಮವಾದ ಈ ಋಷ್ಯಮೂಕದಲ್ಲಿಯೇ ಅನಂತಕಾಲದವರೆಗೂ ವಾಸಮಾಡಿಕೊಂಡಿರುವುದೇ ಶ್ರೇಯಸ್ಕರವೆಂದು ಭಾವಿಸುತ್ತಿದ್ದೇನೆ. ವಾಲಿಯನ್ನು ಸಂಹರಿಸಿದುದರಿಂದ ನನಗೆ ಸ್ವರ್ಗವೇ ಸಿಕ್ಕುವುದಾಗಿದ್ದರೂ ಅದೂ ನನಗೆ ಈಗ ಬೇಕೆನಿಸುತ್ತಿಲ್ಲ. ಮಹಾತ್ಮನಾದ ವಾಲಿಯು – 'ನ ತ್ವಾಂ ಜಿಘಾಂಸಾಮಿ ಚರ – ನಾನು ನಿನ್ನನ್ನು ಸಂಹರಿಸುವುದಿಲ್ಲ. ಹೊರಟುಹೋಗು'–ಎಂದೇ ಹೇಳಿದ್ದನು. ಆ ಮಾತು ಧೀರೋದಾತ್ತನಾದ ಅವನಿಗೆ ಅನುರೂಪವಾಗಿಯೇ ಇದ್ದಿತು. ಅವನು ಹೇಳಿದಂತೆಯೇ ನಡೆದುಕೊಂಡನು. ಆದರೆ ನನ್ನ ಮಾತು ಮತ್ತು ಕೃತಿಗಳು ನನ್ನ ಅಲ್ಪತನಕ್ಕೆ ಅನುರೂಪವಾಗಿವೆ.*

---

* ವಾಲಿಯನ್ನು ಕೊಲ್ಲುವಂತೆ ನಿನಗೆ ಹೇಳಿದುದು ಮತ್ತು ವಾಲಿಯನ್ನು ಯುದ್ಧಕ್ಕೆ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ರಾಜ್ಯಲಾಭದಿಂದಾಗುವ ಸುಖ, ಅಣ್ಣನ ವಧೆಯಿಂದಾಗುವ ದುಃಖ- ಇವೆರಡರಲ್ಲಿ ಯಾವುದು ಪ್ರಬಲವೆಂಬುದನ್ನು ಪರಿಶೀಲಿಸಿದನಂತರ ಸ್ವಾರ್ಥಿಯೇ ಆದರೂ ಯಾವನು ತಾನೇ ನನ್ನಂತೆ ಕಾಮೈಕಪ್ರಧಾನನಾಗಿ ರಾಜ್ಯಲಾಭವನ್ನೇ ಪ್ರಧಾನವನ್ನಾಗಿಟ್ಟುಕೊಂಡು ಮಹಾಗುಣಶಾಲಿಯಾದ ಅಣ್ಣನ ವಧೆಗೆ ಸಮ್ಮತಿಸುವನು? ತನ್ನ ಮಾಹಾತ್ಮ್ಯವನ್ನು ಅತಿಕ್ರಮಿಸಿ ನಡೆಯಬಾರದೆಂಬ ಅಭಿಪ್ರಾಯದಿಂದಾಗಿ ವಾಲಿಗೆ ನನ್ನನ್ನು ವಧಿಸುವ ಇಚ್ಛೆಯುಂಟಾಗಲಿಲ್ಲ. ಆದರೆ ದುಷ್ಟಬುದ್ಧಿಯಿಂದಾಗಿ ಅಣ್ಣನ ಪ್ರಾಣಗಳನ್ನೇ ಅಪಹರಿಸುವ ಮರ್ಯಾದಾತೀತವಾದ ಮನಸ್ಸು ನನಗುಂಟಾಯಿತು. ವಾಲಿಯೊಡನೆ ಯುದ್ಧಮಾಡುತ್ತಿದ್ದಾಗ ಮರದ ರೆಂಬೆಗಳಿಂದ ಅಪ್ಪಳಿಸಲ್ಪಟ್ಟ ನಾನು ಭಗ್ನನಾಗಿ ಕೆಳಕ್ಕೆ ಬಿದ್ದು ಮುಹೂರ್ತಕಾಲದವರೆಗೆ ದೈನ್ಯದಿಂದ ಕೂಗಿಕೊಳ್ಳುತ್ತಿದ್ದೆನು. ಆ ಸಮಯದಲ್ಲಿ ನಮ್ಮಣ್ಣನೇ ನನ್ನ ಬಳಿಗೆ ಬಂದು ನನ್ನನ್ನು ಪರಿ-ಪರಿಯಾಗಿ ಸಂತೈಸುತ್ತಾ – 'ಪುನಃ ನೀನು ನನ್ನೊಡನೆ ಯುದ್ಧಕ್ಕೆ ಬರಬೇಡ'-ಎಂದು ಎಚ್ಚರಿಸಿ ಹೋದನು. ಹೀಗೆ ಮಾಡಿ ವಾಲಿಯು ಭ್ರಾತೃತ್ವವನ್ನೂ, ಆರ್ಯರ ಹಿರಿಮೆಯನ್ನೂ ಮತ್ತು ಧರ್ಮವನ್ನೂ ರಕ್ಷಿಸಿದನು. ಇದಕ್ಕೆ ಪ್ರತಿಯಾಗಿ ನಾನು ಕೋಪವನ್ನೂ, ಕಾಮವನ್ನೂ, ಕಪಿತ್ವವನ್ನೂ (ಬುದ್ಧಿಯ ಅಸ್ಥಿರತೆಯನ್ನೂ) ಪ್ರದರ್ಶಿಸಿದೆನು. ಇಂದ್ರನು ತ್ವಷ್ಟೃವಿನ ಮಗನಾದ ವಿಶ್ವರೂಪನನ್ನು (ವೃತ್ರಾಸುರನನ್ನು) ವಧಿಸಿ ಮಹಾಪಾಪವನ್ನು ಗಳಿಸಿದಂತೆ – ನಾನು ನಮ್ಮಣ್ಣನಾದ ವಾಲಿಯ ವಧೆಗೆ ಕಾರಣನಾಗಿ ಸ್ಮರಿಸಲು ಸಹ ಯೋಗ್ಯವಲ್ಲದ, ಪರಿತ್ಯಾಗಕ್ಕೆ ಯೋಗ್ಯವಾದ, ಅಪೇಕ್ಷಿಸಲು ಅನರ್ಹವಾದ ಅತ್ಯಂತ ಜುಗುಪ್ಸಿತವಾದ ಈ ಮಹಾಪಾಪವನ್ನು ಪಡೆದುಕೊಂಡೆನು. ಇಂದ್ರನು ಮಾಡಿದ ಬ್ರಹ್ಮಹತ್ಯಾಪಾಪವನ್ನು ಭೂಮಿಯೂ, ನೀರೂ, ವೃಕ್ಷಗಳೂ, ಸ್ತ್ರೀಯರೂ ಸ್ವೇಚ್ಛೆಯಿಂದಲೇ ಮುಂದೆ ಬಂದು ಹಂಚಿಕೊಂಡರು. ಆದರೆ ಖ್ಯಾತಿಯನ್ನು ಪಡೆಯುವ ಇಚ್ಛೆಯಿಂದ ಕಪಿಯೊಂದು ಮಾಡಿದ ಮಹಾಪಾಪವನ್ನು ಯಾರು ತಾನೇ

---

ಕರೆದು ಅವನೊಡನೆ ಯುದ್ಧಮಾಡುತ್ತಾ ನಿನ್ನಿಂದ ಅವನ ವಧೆಯನ್ನು ಮಾಡಿಸಿದುದು- ಈ ವಾಕ್ಯವರ್ಗಗಳು ಕೃತಘ್ನನಾದ ನನಗೆ ಅನುರೂಪವಾಗಿಯೇ ಇವೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

ಪರಿಗ್ರಹಿಸಲು ಮುಂದೆ ಬರುವರು?* ಅಧರ್ಮಯುಕ್ತವಾದ, ಕುಲದ ವಿನಾಶಕ್ಕೇ ಕಾರಣವಾದ, ಅಣ್ಣನ ವಧೆಯ ರೂಪವಾದ ದುಷ್ಕರ್ಮವನ್ನು ಮಾಡಿರುವ ನಾನು – ಪ್ರಜೆಗಳು ಮಾಡುವ ಸನ್ಮಾನಕ್ಕೂ ಯೋಗ್ಯನಲ್ಲ. ಯುವರಾಜನಾಗುವುದಕ್ಕೂ ನನಗೆ ಅರ್ಹತೆಯಿಲ್ಲ. ಹೀಗಿರುವಾಗ ರಾಜ್ಯವನ್ನು ಪಡೆದು ರಾಜನಾಗಲು ಹೇಗೆತಾನೇ ಯೋಗ್ಯನಾಗುವೆನು? ಲೋಕಕ್ಕೇ ಅಪಕಾರಕಾರಿಯಾದ, ಅತ್ಯಂತನಿಂದ್ಯವೂ, ಅತ್ಯಂತಕ್ಷುದ್ರವೂ ಆಗಿರುವ ಪಾಪಕಾರ್ಯವನ್ನು ನಾನು ಮಾಡಿರುವೆನು. ಮಳೆಯ ನೀರಿನ ಪ್ರವಾಹವು ತಗ್ಗಿನ ಪ್ರದೇಶಕ್ಕೆ ಅತ್ಯಂತವೇಗವಾಗಿ ಹರಿದು ಹೋಗುವಂತೆ– ಮಹಾಶೋಕಪ್ರವಾಹವು ಅತ್ಯಂತವೇಗವಾಗಿ ನನ್ನ ಬಳಿಗೆ ಬಂದು ನನ್ನನ್ನೇ ಸುತ್ತುಗಟ್ಟಿ ನಿಂತಿದೆ.

ಸಹೋದರನ ವಧೆಯೆಂಬುದೇ ಬೆನ್ನು ಮತ್ತು ಬಾಲವಾಗಿರುವ, ಸಂತಾಪವೇ ಕೈ-ಕಣ್ಣು-ತಲೆ-ಕೊಂಬುಗಳಾಗಿರುವ ಪಾಪರೂಪದ ಕೊಬ್ಬಿದ ಆನೆಯು, ಹೆಚ್ಚುತ್ತಿರುವ ಪ್ರವಾಹವು ನದಿಯ ತೀರವನ್ನು ಕೊರೆಯುವಂತೆ– ನನ್ನ ಮನಸ್ಸನ್ನು ಬಹಳವಾಗಿ ಸಂಕಟಪಡಿಸುತ್ತಿದೆ. ಮೂಸೆಗೆ ಹಾಕಿದ ಚಿನ್ನವು ತನ್ನಲ್ಲಿರುವ ಗಸ್ಟನ್ನು ಬೆಂಕಿಯಲ್ಲೇ ಬಿಟ್ಟು ಹೊರಬರುವಂತೆ – ನನ್ನಲ್ಲಿರುವ ಸಾಧುಸ್ವಭಾವವು ನಾನು ಮಾಡಿರುವ ಪಾಪವನ್ನು ನನ್ನ ಹೃದಯದಲ್ಲಿಯೇ ಬಿಟ್ಟು ಹೊರಬರುತ್ತಿದೆ.[1] ನನ್ನ ಕಾರಣದಿಂದಲೂ ಅಂಗದನ ಶೋಕ-ತಾಪಗಳ ಕಾರಣದಿಂದಲೂ ಮಹಾಬಲಿಷ್ಠರಾಗಿರುವ ಕಪಿಮುಖ್ಯರಿಂದ ಕೂಡಿರುವ ನಮ್ಮ ಕುಲವೀಗ ಅರ್ಧಪ್ರಾಣವಾಗಿದೆಯೆಂದು ನಾನು ಭಾವಿಸುತ್ತೇನೆ. ಒಳ್ಳೆಯವನಾದ, ವಿಧೇಯನಾದ ಪುತ್ರನನ್ನು ಪಡೆದುಕೊಳ್ಳಬಹುದು. ಆದರೆ ಸಕಲಸದ್ಗುಣಗಳಿಂದ ಸಂಪನ್ನನಾದ ಅಂಗದನಿಗೆ ಸಮಾನನಾದ ಪುತ್ರನು ಎಲ್ಲಿ ಸಿಕ್ಕುವನು? ವಾಲಿಯಂತಹ ಸೋದರನ

---

* ಇಂದ್ರನ ಬ್ರಹ್ಮಹತ್ಯಾಪಾಪವು ಭೂಮಿಯಲ್ಲಿ ಚೌಳುಮಣ್ಣಿನ ರೂಪದಲ್ಲಿಯೂ, ನೀರಿನಲ್ಲಿ ನೊರೆಯ ರೂಪದಲ್ಲಿಯೂ, ಮರಗಳಲ್ಲಿ ಅಂಟಿನ ರೂಪದಲ್ಲಿಯೂ, ಸ್ತ್ರೀಯರಲ್ಲಿ ರಜೋರೂಪದಲ್ಲಿಯೂ ಕಾಣಿಸಿಕೊಳ್ಳುತ್ತದೆ.

[1] ನಾನು ಮಾಡಿರುವ ಈ ಮಹಾಪಾಪದಿಂದ ನನ್ನ ಸಚ್ಚಾರಿತ್ರ ಗಳೆಲ್ಲವೂ ನಾಶವಾಗಿ ನಾನೀಗ ಮಹಾಪಾಪಿಷ್ಠನಾಗಿರುತ್ತೇನೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಸಾನ್ನಿಧ್ಯವಿರುವ ದೇಶವು ತಾನೇ ಎಲ್ಲಿ ಸಿಕ್ಕುತ್ತದೆ? ಅಂಗದನೇನಾದರೂ ಬದುಕಿದ್ದುದೇ ಆದರೆ ತಾಯಿಯಾದ ತಾರೆಯೂ ಮಗನ ಸಂರಕ್ಷಣೆಗಾಗಿ ಜೀವಿಸಿದ್ದಾಳು. ಪತಿವಿಯೋಗಸಂಕಟದಿಂದ ಅತಿದೀನಳಾಗಿರುವ ತಾರೆಯು ಮಗನಿಲ್ಲದೇ ಖಂಡಿತವಾಗಿಯೂ ಬದುಕಿರಲಾರಳೆಂಬುದೇ ನನ್ನ ದೃಢನಿಶ್ಚಯವಾಗಿದೆ. ಅಣ್ಣನೊಡನೆಯೂ ಮತ್ತು ಪುತ್ರನಾದ ಅಂಗದನೊಡನೆಯೂ ಸಖ್ಯವನ್ನು ಬಯಸುತ್ತಾ ನಾನು ಪ್ರದೀಪ್ತವಾಗಿರುವ ಅಗ್ನಿಯನ್ನು ಪ್ರವೇಶಿಸುತ್ತೇನೆ. ರಾಘವ! ಈ ಕಪಿಮುಖ್ಯರೆಲ್ಲರೂ ನಿನ್ನ ಆಜ್ಞಾಪರಿಪಾಲಕರಾಗಿದ್ದು ಸೀತೆಯನ್ನು ಹುಡುಕಿಕೊಡುತ್ತಾರೆ.* ನಾನು ಮೃತನಾದರೂ ನಿನ್ನ ಕಾರ್ಯವು ಸಂಪೂರ್ಣವಾಗುತ್ತದೆ. ಕುಲಧ್ವಂಸಕನಾದ, ಮಹಾಪಾಪಕಾರ್ಯವನ್ನು ಮಾಡಿರುವ ಮತ್ತು ಬದುಕಿರಲೂ ಅನರ್ಹನಾದ ನನಗೆ ಅಗ್ನಿಪ್ರವೇಶಮಾಡಲು ಅನುಮತಿಯನ್ನು ದಯಪಾಲಿಸು."

ಸುಗ್ರೀವನ ದೈನ್ಯದ ಮತ್ತು ದುಃಖದ ಮಾತುಗಳನ್ನು ಕೇಳಿ ರಘುಕುಲತಿಲಕನಾದ ಶ್ರೀರಾಮನ ಮನಸ್ಸು ಕ್ಷಣಕಾಲ ಕದಡಿಹೋಯಿತು. ಕಣ್ಣುಗಳಲ್ಲಿ ನೀರು ತುಂಬಿಕೊಂಡಿತು. ಕ್ಷಮೆಯಲ್ಲಿ ಭೂದೇವಿಗೆ ಸದೃಶನಾಗಿದ್ದ ಶ್ರೀರಾಮನನ್ನು ತಾರೆಯು ಬಾರಿ-ಬಾರಿಗೂ ನೋಡುತ್ತಿದ್ದಳು. ವ್ಯಸನಸಾಗರದಲ್ಲಿ ಮುಳುಗಿಹೋಗಿದ್ದ ತಾರೆಯನ್ನು ಶ್ರೀರಾಮನು ಉತ್ಸುಕತೆಯಿಂದ ನೋಡಿದನು. ಶ್ರೀರಾಮನು ಸಮೀಪಕ್ಕೆ ಬಂದುದನ್ನು ನೋಡಿ ಕಪಿಶ್ರೇಷ್ಠರಿಗೆ ನಾಥನಾದ ವಾಲಿಯನ್ನೇ ಆಲಿಂಗಿಸಿಕೊಂಡು ವಿಲಪಿಸುತ್ತಾ, ಮಲಗಿದ್ದ, ಸುಂದರಕಣ್ಣುಗಳ, ಮಹಾಸತ್ತ್ವಶಾಲಿನಿಯಾದ ತಾರೆಯನ್ನು ಕಪಿಮುಖ್ಯರೆಲ್ಲರೂ ಸೇರಿ ಸಮಾಧಾನಗೊಳಿಸುತ್ತಾ ಮೇಲಕ್ಕೆಬ್ಬಿಸಿದರು. ಮಂತ್ರಿಮುಖ್ಯರು ತಾರೆಯನ್ನು ಹಿಡಿದೆಬ್ಬಿಸಿ ಕರೆತರಲು ಪ್ರಯತ್ನಿಸು-

---

* ವಾಲಿಯ ಮಗನಾದ ಅಂಗದನನ್ನು ತನ್ನ ಮಗನೆಂಬುದಾಗಿ ಸುಗ್ರೀವನು ಹೇಗೆ ಹೇಳಿದನು?–ಎಂಬುದಕ್ಕೆ ವ್ಯಾಖ್ಯಾನಕಾರರು ಮನುಸ್ಮೃತಿಯನ್ನು ಆಧರಿಸಿ ಹೇಳಿದ್ದಾರೆ: ಭ್ರಾತೄಣಾಮೇಕಜಾತಾನಾಂ ಯದ್ಯೇಕಃ ಪುತ್ರವಾನ್ಭವೇತ್ । ತೇನ ಪುತ್ರೇಣ ತೇ ಸರ್ವೇ ಪುತ್ರಿಣೋ ಮನುರಬ್ರವೀತ್ ॥ ಒಬ್ಬನೇ ತಂದೆಯಿಂದ ಜನಿಸಿರುವ ಅಣ್ಣ-ತಮ್ಮಂದಿರಲ್ಲಿ ಒಬ್ಬನು ಪುತ್ರವಂತನಾದರೂ ಉಳಿದ ಸಹೋದರರೂ ಪುತ್ರವಂತರೆನಿಸಿಕೊಳ್ಳುತ್ತಾರೆ. ಉಳಿದೆಲ್ಲ ಸಹೋದರರಿಗೂ ಅವನೇ ಪುತ್ರನಾಗುತ್ತಾನೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

ತ್ತಿದ್ದರೂ ಅವಳು ಪತಿಯ ಸಮೀಪದಲ್ಲಿಯೇ ಇರಲು ತವಕಿಸುತ್ತಿದ್ದಳು. ಇತರ ವಾನರಸ್ತ್ರೀಯರೂ ತಾರೆಯನ್ನು ತಬ್ಬಿಕೊಂಡು ಕರೆತರಲು ಪ್ರಯತ್ನಿಸುತ್ತಿದ್ದರು. ಆ ಸಮಯದಲ್ಲಿ ತನ್ನ ತೇಜಸ್ಸಿನಿಂದ ಸೂರ್ಯನಂತೆಯೇ ಪ್ರಜ್ವಲಿಸುತ್ತಿದ್ದ, ಸಮೀಪದಲ್ಲಿಯೇ ನಿಂತಿದ್ದ ಶ್ರೀರಾಮನನ್ನು ತಾರೆಯು ನೋಡಿದಳು. ಸಮಸ್ತರಾಜಲಕ್ಷಣಗಳಿಂದಲೂ ಸಂಪನ್ನನಾಗಿದ್ದ, ಸುಂದರವಾದ ಕಣ್ಣುಗಳಿಂದ ಕೂಡಿದ್ದ, ಹಿಂದೆಂದೂ ಕಾಣದಿದ್ದ ಆ ಪುರುಷೋತ್ತಮನನ್ನು ಮರಿಜಿಂಕೆಯ ಕಣ್ಣುಗಳಂತೆ ಚಂಚಲವಾದ ಕಣ್ಣುಗಳಿಂದ ಕೂಡಿದ್ದ ತಾರಾದೇವಿಯು ನೋಡಿದಳು. ಈ ಪುರುಷೋತ್ತಮನೇ ಆ ಕಾಕುತ್ಸ್ಥನು-ಎಂದವಳು ತಿಳಿದಳು. ಪತಿವಿಯೋಗದ ಸಂಕಟದಿಂದ ಬಹಳವಾಗಿ ದುಃಖಪಡುತ್ತಿದ್ದ ಪೂಜ್ಯಳಾದ ತಾರೆಯು ತತ್ತರಿಸಿಕೊಂಡು ನಡೆಯುತ್ತಾ, ಇಂದ್ರಸದೃಶನಾದ, ದುರಾಸದನಾದ, ಮಹಾನುಭಾವನಾದ ಶ್ರೀರಾಮನ ಸಮೀಪಕ್ಕೆ ಬಹಳ ಬೇಗ ಹೋದಳು. ಶೋಕದಿಂದ ಭ್ರಾಂತವಾದ ಮನಸ್ಸಿನಿಂದಲೂ ಮತ್ತು ಶರೀರದಿಂದಲೂ ಕೂಡಿದ್ದ, ಮನಸ್ವಿನಿಯಾದ ತಾರಾದೇವಿಯು ವಿಶುದ್ಧವಾದ ಮನಸ್ಸಿನಿಂದ ಕೂಡಿದ್ದ, ಶ್ರೇಷ್ಠವಾದ ಲಕ್ಷ್ಯಭೇದನಸಿದ್ಧಿಯನ್ನು ಪಡೆದಿದ್ದ ಶ್ರೀರಾಮನನ್ನು ಸಂಧಿಸಿ ಹೇಳಿದಳು :

"ರಾಘವ! ನೀನು ಅಪ್ರಮೇಯನು. ನಿನ್ನ ವೀರ್ಯ-ಪರಾಕ್ರಮಗಳನ್ನು ಅಳೆಯಲು ಯಾರಿಂದಲೂ ಸಾಧ್ಯವಾಗುವುದಿಲ್ಲ. ಶತ್ರುಗಳಿಂದ ಎದುರಿಸಲು ಅಸಾಧ್ಯನಾದವನು. ಜಿತೇಂದ್ರಿಯನು. ಪರಮಧಾರ್ಮಿಕನು. ಯಾವಾಗಲೂ ನಶಿಸದಿರುವ ಕೀರ್ತಿಯುಳ್ಳವನು. ವ್ಯವಹಾರಕುಶಲನು. ಭೂದೇವಿಯಂತೆ ಕ್ಷಮಾಗುಣವುಳ್ಳವನು. ರಕ್ತದಂತೆ ಕೆಂಪಾದ ಕಣ್ಣುಗಳುಳ್ಳವನು. ದುಷ್ಟಶಿಕ್ಷಣ-ಶಿಷ್ಟಪರಿಪಾಲನೆಗಾಗಿ ಯಾವಾಗಲೂ ಧನುರ್ಬಾಣಗಳನ್ನು ಕೈಯಲ್ಲೇ ಹಿಡಿದಿರತಕ್ಕವನು. ಶರೀರದಾರ್ಢ್ಯವುಳ್ಳವನು. ನಿನ್ನ ಪ್ರಭಾವದಿಂದಾಗಿ ವಾಲಿಯು ಮನುಷ್ಯದೇಹದಲ್ಲಿ ಅನುಭವಿಸಬಹುದಾದ ಸುಖಗಳನ್ನು ತೊರೆದು ದಿವ್ಯದೇಹದ ಸೌಭಾಗ್ಯವನ್ನು ಹೊಂದಿದ್ದಾನೆ. ಯಾವ ಒಂದೇ ಒಂದು ಬಾಣದಿಂದ ನನ್ನ ಪ್ರಿಯನನ್ನು ನೀನು ಸಂಹರಿಸಿದೆಯೋ-ಅದೇ ಬಾಣದಿಂದ ನನ್ನನ್ನೂ ಸಂಹರಿಸು. ನಾನು ಹತಳಾದೊಡನೆಯೇ ದಿವ್ಯದೇಹವನ್ನು ಪಡೆದು ಇವನ ಬಳಿಗೆ ಹೋಗುತ್ತೇನೆ. ಏಕೆಂದರೆ :

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ನಾನಿಲ್ಲದೇ ವಾಲಿಯು ಎಂದಿಗೂ ಸುಖವಾಗಿರತಕ್ಕವನಲ್ಲ. ತಾವರೆಯ ದಳಗಳಂತೆ ಸ್ವಚ್ಛವಾದ ಕಣ್ಣುಗಳುಳ್ಳ ನನ್ನ ಪತಿಯು ಸ್ವರ್ಗದಲ್ಲಿ ಅಪ್ಸರೆಯರೊಡನೆ ಕಲೆತಾಗ-ಸುತ್ತಲೂ ಕಣ್ಣು ಹಾಯಿಸಿ ಅಲ್ಲಿ ನಾನಿಲ್ಲದಿರುವುದನ್ನು ಕಂಡು-ಮುಡಿಯಲ್ಲಿ ನಾನಾವಿಧವಾದ ಕೆಂಪು ಹೂಗಳನ್ನು ಮುಡಿದಿರುವ



ವಿಚಿತ್ರತರವಾದ ವೇಷ-ಭೂಷಣಗಳಿಂದ ಅಲಂಕೃತರಾದ ಅವರಾರನ್ನೂ ಕಾಮಿಸುವುದಿಲ್ಲ. ಅತ್ಯಂತರಮ್ಯವಾದ ಋಷ್ಯಮೂಕಪರ್ವತದ ವಿಶಾಲವಾದ ತಪ್ಪಲುಪ್ರದೇಶದಲ್ಲಿ ವಿದೇಹಕನ್ಯೆಯಾದ ಸೀತೆಯಿಂದ ವಿರಹಿತನಾದ ನೀನು ಯಾವ ರೀತಿಯಲ್ಲಿ ಸಂತೋಷವನ್ನು ಹೊಂದಲಾರೆಯೋ-ಯಾವಾಗಲೂ ಕುಂದಿದ ಮುಖವುಳ್ಳವನಾಗಿರುವೆಯೋ-ಅದೇ ರೀತಿಯಲ್ಲಿ ನಾನಿಲ್ಲದ

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

ಕಾರಣ ವಾಲಿಯು ಸ್ವರ್ಗಲೋಕದಲ್ಲಿಯೂ ದುಃಖಪಡುತ್ತಾನೆ. ಅವನ ಮುಖವೂ ಕೂಡ ಬಾಡಿಹೋಗುತ್ತದೆ. ಯೌವನಸ್ಥನಾದ ಪುರುಷನು ಸ್ತ್ರೀ ವಿಯೋಗದಿಂದಾಗಿ ಎಂತಹ ವೇದನೆಯನ್ನು ಅನುಭವಿಸುವನೆಂಬ ವಿಷಯವು ನಿನಗೆ ಅನುಭವದಿಂದಲೇ ತಿಳಿದಿದೆ. ಆದುದರಿಂದ ಸ್ವರ್ಗತನಾಗಿರುವ ವಾಲಿಯು ನನ್ನ ವಿಯೋಗದುಃಖವನ್ನು ಅನುಭವಿಸದಂತೆ ನನ್ನನ್ನೀಗಲೇ ಸಂಹರಿಸು. ಮಹಾತ್ಮನಾದ ನೀನು 'ಸ್ತ್ರೀಯನ್ನು ವಧಿಸಿದ ದೋಷವು ನನಗುಂಟಾಗಬಾರದು'–ಎಂದು ನನ್ನನ್ನು ವಧಿಸಲು ಸಂದೇಹಿಸಬಹುದು. ಹಾಗೆ ನೀನು ಭಾವಿಸುವ ಕಾರಣವಿಲ್ಲ. ನೀನು ನನ್ನನ್ನು ಸಂಹರಿಸುವಾಗ ಸ್ತ್ರೀಯೆಂದು–ಭಾವಿಸಬೇಡ. ವಾಲಿಯ ಆತ್ಮವೆಂದೇ ಭಾವಿಸಿ ಸಂಹರಿಸು. ಹಾಗೆ ಮಾಡುವುದರಿಂದ ಸ್ತ್ರೀಹತ್ಯೆಯ ದೋಷವು ನಿನಗೆ ಬರುವುದಿಲ್ಲ.

ಶಾಸ್ತ್ರಪ್ರಯೋಗಾದ್ವಿವಿಧಾಚ್ಚ ವೇದಾ-
ದಾತ್ಮಾ ಹ್ಯನನ್ಯಃ ಪುರುಷಸ್ಯ ದಾರಾಃ ।
ದಾರಪ್ರದಾನಾನ್ನ ಹಿ ದಾನಮನ್ಯ-
ತ್ಪ್ರದೃಶ್ಯತೇ ಜ್ಞಾನವತಾಂ ಹಿ ಲೋಕೇ ॥ ೩೮ ॥

ಶಾಸ್ತ್ರೋಕ್ತವಾದ ಯಜ್ಞವೇ ಮೊದಲಾದ ಕರ್ಮಗಳಲ್ಲಿ ಪತಿ-ಪತ್ನಿಯರಿಗೆ ಜೊತೆಗೂಡಿಯೇ ಅಧಿಕಾರವಿರುತ್ತದೆ. ಪತ್ನಿಯು ಜೊತೆಯಲ್ಲಿಲ್ಲದಿದ್ದರೆ ಪತಿಯು ಯಜ್ಞಕರ್ಮವನ್ನು ಮಾಡಲಾರನು. ಇದೂ ಅಲ್ಲದೇ ನಾನಾ ಪ್ರಕಾರವಾದ ವೈದಿಕಶ್ರುತಿಗಳಲ್ಲಿ ಪತ್ನಿಯು ಪತಿಯ ಅರ್ಧಶರೀರವೆಂದೇ ಹೇಳುತ್ತಾರೆ. ಪತ್ನಿಯು ಪತಿಯಿಂದ ಯಾವಾಗಲೂ ಅಭಿನ್ನಳು. ಆದುದರಿಂದ ನನ್ನನ್ನು ಸಂಹರಿಸುವುದರಿಂದ ನಿನಗೆ ಸ್ತ್ರೀವಧೆಮಾಡಿದ ದೋಷವುಂಟಾಗುವುದಿಲ್ಲ. ಮೇಲಾಗಿ ದಾನಮಾಡಿದ ಪುಣ್ಯವೇ ಲಭಿಸುತ್ತದೆ. ನನ್ನನ್ನು ಕೊಂದು ನನ್ನ ಪತಿಯ ಬಳಿಗೆ ಕಳುಹಿಸಿಬಿಟ್ಟರೆ ಪರಲೋಕದಲ್ಲಿರುವ ನನ್ನ ಪತಿಗೆ ನನ್ನನ್ನು ದಾನಮಾಡಿದಂತೆಯೇ ಆಗುತ್ತದೆ. ಆದುದರಿಂದಲೇ ಜ್ಞಾನಿಗಳು ದಾರಪ್ರದಾನಕ್ಕಿಂತಲೂ ವಿಶೇಷವಾದ ದಾನವು ಮತ್ತೊಂದಿಲ್ಲವೆಂದು ಹೇಳುತ್ತಾರೆ.

ನೀನು ಈ ಧರ್ಮವನ್ನು ಸೂಕ್ಷ್ಮಬುದ್ಧಿಯಿಂದ ಪರಿಶೀಲಿಸಿ ನನ್ನನ್ನು

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.


ಸಂಹರಿಸಿ ನನ್ನ ಪ್ರಿಯನಿಗೆ ದಾನಮಾಡಿದೆಯಾದರೆ-ಈ ದಾನದಿಂದ ನೀನು ಖಂಡಿತವಾಗಿಯೂ ಅಧರ್ಮದ ಸಂಪರ್ಕವನ್ನು ಹೊಂದುವುದಿಲ್ಲ. ರಾಘವ! ನಾನು ದುಃಖಪೀಡಿತಳಾಗಿದ್ದೇನೆ. ಅನಾಥೆಯಾಗಿದ್ದೇನೆ. ಪತಿಯಿಂದ ದೂರಳಾಗಿದ್ದೇನೆ. ಇಂತಹ ದುರವಸ್ಥೆಯಲ್ಲಿರುವ ನನ್ನನ್ನು ಸಂಹರಿಸದೇ ಇರುವುದು ಖಂಡಿತವಾಗಿಯೂ ನಿನಗೆ ಉಚಿತವಲ್ಲ. ಮದಿಸಿದ ಆನೆಯಂತೆ ಅಟ್ಟಹಾಸದಿಂದ ಹೆಜ್ಜೆಗಳನ್ನಿಡುತ್ತಿದ್ದ, ಧೀಮಂತನಾದ, ಕಪಿಶ್ರೇಷ್ಠನಾದ, ಸರ್ವೋತ್ತಮನಾದ, ಸುವರ್ಣಮಾಲೆಯಿಂದ ವಿಭೂಷಿತನಾಗಿದ್ದ ವಾಲಿಯನ್ನು ಬಿಟ್ಟು ನಾನು ಹೆಚ್ಚುಕಾಲ ಖಂಡಿತವಾಗಿಯೂ ಬದುಕಿರಲಾರೆ."

ತಾರೆಯು ಹೀಗೆ ಹೇಳಲು ವಿಭುವಾದ, ಮಹಾತ್ಮನಾದ ಶ್ರೀರಾಮನು ತಾರೆಯನ್ನು ಸಮಾಧಾನಗೊಳಿಸುತ್ತಾ ಹಿತಕರವಾದ ಈ ಮಾತುಗಳನ್ನು ಹೇಳಿದನು:

"ವೀರಪತ್ನಿಯೇ! ಮನಸ್ಸನ್ನು ಕೆಡಿಸಿಕೊಳ್ಳಬೇಡ. ಲೋಕವೆಲ್ಲವೂ ಬ್ರಹ್ಮನಿಂದ ವಿಹಿತವಾದ ರೀತಿಯಲ್ಲಿಯೇ ನಡೆಯುತ್ತದೆ. ಸಕಲವಿಧವಾದ ಸುಖ-ದುಃಖಗಳ ಯೋಗವೂ ಬ್ರಹ್ಮನಿಂದಲೇ ವಿಧಿಸಲ್ಪಡುವುದೆಂದು ಲೋಕವೇ ಹೇಳುತ್ತದೆ. ಸಕಲವಿಧವಾದ ಕಾರ್ಯಗಳಿಗೂ ಮನುಷ್ಯರ ಸುಖ-ದುಃಖಗಳಿಗೂ ವಿಧಿಯೇ ಕಾರಣವಾಗುತ್ತದೆ. ಮೂರು ಲೋಕಗಳಲ್ಲಿರುವವರೆಲ್ಲರೂ ಬ್ರಹ್ಮನ ಅಧಿಕಾರಕ್ಕೇ ಒಳಪಟ್ಟವರಾಗಿರುತ್ತಾರೆ. ಅವನ ನಿಯಮವನ್ನು ಮೀರಿ ಯಾರೂ ನಡೆಯಲಾರರು. ನಿನ್ನ ಮಗನೇ ಮುಂದೆ ಈ ರಾಜ್ಯಕ್ಕೆ ಯುವರಾಜನಾಗುತ್ತಾನೆ. ನೀನು ಹಿಂದಿನಂತೆಯೇ ಪರಮಸಂತೋಷವನ್ನು ಪಡೆಯಲಿರುವೆ. ಇದು ಬ್ರಹ್ಮನೇ ವಿಧಿಸಿರುವ ವಿಧಾನವಾಗಿದೆ. ಇದು ಹೀಗೆಯೇ ನಡೆಯಬೇಕು. ಶೂರನಾದವನ ಪತ್ನಿಯರು ಎಂದೂ ದುಃಖಪಡುವುದಿಲ್ಲ."

ಶತ್ರುತಾಪನನಾದ, ಮಹಾತ್ಮನಾದ, ಪ್ರಭಾವಶಾಲಿಯಾದ ಶ್ರೀರಾಮನು ಹೀಗೆ ಸಮಾಧಾನಕರವಾದ ಮಾತುಗಳನ್ನಾಡಲು, ರೋದನ



CC-0. Bhagavad Ramanuja National Research Institute, Melukote Collection.

 Funding: Tattva Heritage Foundation, Kolkata. Digitization: eGangotri.

ಮಾಡುತ್ತಿದ್ದ ವೀರಪತ್ನಿಯಾದ ತಾರೆಯು ಸಮಾಧಾನಹೊಂದಿದ ಮುಖ ಭಾವವನ್ನು ತಾಳಿ ಅಳುವನ್ನು ನಿಲ್ಲಿಸಿದಳು.

೨೪ನೆಯ ಸರ್ಗವು ಮುಗಿಯಿತು.

ಕಿಷ್ಕಿಂಧಾಕಾಂಡ

## ೨೫ನೆಯ ಸರ್ಗ

**ಶ್ರೀರಾಮನು ಸುಗ್ರೀವನನ್ನೂ, ತಾರೆಯನ್ನೂ, ಅಂಗದನನ್ನೂ ಸಮಾಧಾನಗೊಳಿಸುತ್ತಾ ವಾಲಿಗೆ ದಹನಸಂಸ್ಕಾರಮಾಡಲು ಆಜ್ಞಾಪಿಸಿದುದು: ಅಂಗದನಿಂದ ವಾಲಿಯ ದೇಹಸಂಸ್ಕಾರ**

ಸುಗ್ರೀವಂ ಚೈವ ತಾರಾಂ ಚ ಸಾಙ್ಗದಾಂ ಸಹಲಕ್ಷ್ಮಣಃ ।
ಸಮಾನಶೋಕಃ ಕಾಕುತ್ಸ್ಥಃ ಸಾನ್ತ್ವಯನ್ನಿದಮಬ್ರವೀತ್ ॥೧॥

ಸುಗ್ರೀವ, ಅಂಗದ, ತಾರೆಯರಂತೆಯೇ ಶೋಕಾವಿಷ್ಟನಾಗಿದ್ದ ಲಕ್ಷ್ಮಣಸಹಿತನಾಗಿದ್ದ ಶ್ರೀರಾಮನು, ಅಂಗದನೊಡನಿದ್ದ ಸುಗ್ರೀವನನ್ನೂ ತಾರೆಯನ್ನೂ ಸಮಾಧಾನಗೊಳಿಸುತ್ತಾ ಹೇಳಿದನು:

ನ ಶೋಕಪರಿತಾಪೇನ ಶ್ರೇಯಸಾ ಯುಜ್ಯತೇ ಮೃತಃ ।
ಯದತ್ರಾನನ್ತರಂ ಕಾರ್ಯಂ ತತ್ಸಮಾಧಾತುಮರ್ಹಥ ॥೨॥

" ಇತರರು ತನಗಾಗಿ ಶೋಕಪಡುವುದರಿಂದಾಗಲೀ ಪರಿತಾಪಪಡುವುದ ರಿಂದಾಗಲೀ ಸತ್ತವರು ಉತ್ತಮಗತಿಯನ್ನು ಹೊಂದುವುದಿಲ್ಲ. ಮುಂದೆ ಯಾವ ಕಾರ್ಯವನ್ನು ಮಾಡಬೇಕೋ–ಯಾವ ಕಾರ್ಯವನ್ನು ಮಾಡುವುದ ರಿಂದ ಮೃತನಿಗೆ ಉತ್ತಮಗತಿಯು ಲಭಿಸುವುದೋ – ಆ ಕಾರ್ಯವನ್ನು ನೀವು ಮಾಡಬೇಕು.

ಲೋಕವೃತ್ತಮನುಷ್ಠೇಯಂ ಕೃತಂ ವೋ ಬಾಷ್ಪಮೋಕ್ಷಣಮ್ ।
ನ ಕಾಲಾದುತ್ತರಂ ಕಿಂಚಿತ್ಕರ್ಮ ಶಕ್ಯಮುಪಾಸಿತುಮ್ ॥೩॥

ಸತ್ತವರಿಗೆ ಅಳಬೇಕೆಂಬ ಲೋಕಾಚಾರವನ್ನು ಅನುಷ್ಠಾನಮಾಡಲೇ ಬೇಕು. ಅದರಂತೆ ನೀವೆಲ್ಲರೂ ವಾಲಿಯ ಸಲುವಾಗಿ ಬೇಕಾದಷ್ಟು ಕಣ್ಣೀರು ಸುರಿಸಿರುವಿರಿ. ಕಾಲವನ್ನು ಅತಿಕ್ರಮಿಸಿ ಯಾವುದೇ ಅಲ್ಪವಾದ ಕಾರ್ಯ ವನ್ನಾದರೂ ಮಾಡಲು ಸಾಧ್ಯವಾಗುವುದಿಲ್ಲ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ನಿಯತಿಃ ಕಾರಣಂ ಲೋಕೇ ನಿಯತಿಃ ಕರ್ಮಸಾಧನಮ್ ।
ನಿಯತಿಃ ಸರ್ವಭೂತಾನಾಂ ನಿಯೋಗೇಷ್ವಿಹ ಕಾರಣಮ್ ॥೪॥

ಲೋಕದಲ್ಲಿ ವಿಧಿ ಎಂಬುದೇ ಎಲ್ಲಕ್ಕೂ ಕಾರಣವಾಗಿರುತ್ತದೆ. ವಿಧಿಯೇ ಕರ್ಮಕ್ಕೂ ಸಾಧನಭೂತವಾಗಿರುತ್ತದೆ. ವಿಧಿಯೇ ಎಲ್ಲ ಪ್ರಾಣಿಗಳ ಪ್ರೇರಣೆಯಲ್ಲಿ ಮುಖ್ಯಕಾರಣವಾಗಿರುತ್ತದೆ.*

ನ ಕರ್ತಾ ಕಸ್ಯಚಿತ್ಕಶ್ಚಿನ್ನಿಯೋಗೇ ಚಾಪಿ ನೇಶ್ವರಃ ।
ಸ್ವಭಾವೇ ವರ್ತತೇ ಲೋಕಸ್ತಸ್ಯ ಕಾಲಃ ಪರಾಯಣಮ್ ॥೫॥

ಯಾವನೇ ಮನುಷ್ಯನೂ ಸ್ವತಂತ್ರವಾಗಿ ಯಾವ ಕೆಲಸವನ್ನೂ ಮಾಡಲಾರನು. ಬೇರೆಯವನನ್ನಾದರೂ ಯಾವ ಕೆಲಸದಲ್ಲೂ ತೊಡಗಿಸಲಾರನು. ಸ್ವಭಾವಕ್ಕೆ ಈ ಜಗತ್ತು ಅಧೀನವಾಗಿದೆ. ಆ ಸ್ವಭಾವಕ್ಕೆ ಕಾಲವೇ ಪರಮಾಶ್ರಯವು.[1]

ನ ಕಾಲಃ ಕಾಲಮತ್ಯೇತಿ ನ ಕಾಲಃ ಪರಿಹೀಯತೇ ।
ಸ್ವಭಾವಂ ಚ ಸಮಾಸಾದ್ಯ ನ ಕಶ್ಚಿದತಿವರ್ತತೇ ॥೬॥

ಕಾಲಸ್ವರೂಪನಾದ ಭಗವಂತನು ಮಾಡಿರುವ ಜನನ-ಮರಣರೂಪವಾದ ಕಾಲದ ವ್ಯವಸ್ಥೆಯನ್ನು ಮೀರಿ ನಡೆಯಲು ಯಾರಿಂದಲೂ ಸಾಧ್ಯವಾಗುವುದಿಲ್ಲ. ಕಾಲವು ಎಂದಿಗೂ ನಾಶವಾಗತಕ್ಕುದಲ್ಲ. ಸ್ವಭಾವವನ್ನು ಹೊಂದಿದನಂತರ (ಕರ್ಮಾನುಗುಣವಾಗಿ ಜನ್ಮವನ್ನು ಪಡೆದನಂತರ) ಕಾಲವನ್ನು ಅತಿಕ್ರಮಿಸಿ ನಡೆಯಲು ಯಾರಿಗೂ ಸಾಧ್ಯವಾಗುವುದಿಲ್ಲ.

---

* ನಿಯತಿಃ ಕೇನ ಲಙ್ಘ್ಯೇತ ನಿಜಚ್ಛಾಯಾನುಸಾರಿಣೀ = ತನ್ನ ನೆಳಲಿನಂತೆಯೇ ಎಡೆಬಿಡದೇ ಜೊತೆಯಲ್ಲಿಯೇ ಇರುವ ವಿಧಿಯನ್ನು ಯಾರು ತಾನೇ ಉಲ್ಲಂಘಿಸಲು ಸಾಧ್ಯವಿದೆ? 1) ನಿಯಮ್ಯತೇ ಅನೇನ ಇತಿ ನಿಯತಿಃ 2) ನಿಯಮ್ಯತೇ ತತ್ತತ್ಕರ್ಮಣಿ ಪ್ರವರ್ತ್ಯತೇ ಇತಿ ನಿಯತಿಃ–ಇವನಿಂದ ನಿಯಮನಮಾಡಲ್ಪಡುತ್ತದೆ. ಇವನಿಂದ ಕರ್ಮದಲ್ಲಿ ಪ್ರವರ್ತಿಸಲ್ಪಡುತ್ತದೆ. ಇದು ನಿಯತಿ–ಇದು ಕಾಲವೂ ಆಗಬಹುದು; ವಿಧಿಯೂ (ಕರ್ಮವೂ) ಆಗಬಹುದು; ಈಶ್ವರನೂ ಆಗಬಹುದು.

1. ಒಬ್ಬನು ಭಾಗ್ಯಶಾಲಿಯಾಗುವುದಕ್ಕೆ ಅಥವಾ ದರಿದ್ರನಾಗುವುದಕ್ಕೆ ಮತ್ತೊಬ್ಬನು ಕಾರಣನಾಗುವುದಿಲ್ಲ. ಒಬ್ಬನನ್ನು ಕಾರ್ಯದಲ್ಲಿ ಪ್ರೇರೇಪಿಸಲೂ ಮತ್ತೊಬ್ಬನು ಸಮರ್ಥನಾಗುವುದಿಲ್ಲ. ಸ್ವಭಾವಾನುಸಾರವಾಗಿ ಕಾಲಪರತಂತ್ರನಾಗಿ ಮನುಷ್ಯನು ಕರ್ಮಗಳನ್ನು ಮಾಡುತ್ತಾ ಹೋಗುತ್ತಾನೆ. ಸ್ವಭಾವವಾದ ಎಂಬುದೊಂದು ಸಿದ್ಧಾಂತವಿದೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.


ನ ಕಾಲಸ್ಯಾಸ್ತಿ ಬನ್ಧುತ್ವಂ ನ ಹೇತುರ್ನ ಪರಾಕ್ರಮಃ ।
ನ ಮಿತ್ರಜ್ಞಾತಿಸಂಬನ್ಧಃ ಕಾರಣಂ ನಾತ್ಮನೋ ವಶಃ ॥೭॥

ಕಾಲನಿಗೆ ಯಾರಲ್ಲಿಯೂ ಬಂಧುತ್ವವಿಲ್ಲ. ಅವನು ಯಾರನ್ನೂ ಪಕ್ಷಪಾತದಿಂದ ಕಾಣುವುದಿಲ್ಲ. ಕಾಲನು ಯಾವುದಕ್ಕೂ ಕಾರಣವನ್ನು ಕೊಡತಕ್ಕವನಲ್ಲ. ಕಾಲನ ಕಾರ್ಯಗಳನ್ನೂ ಕಾರಣಗಳನ್ನೂ ಸಮರ್ಥಿಸುವುದಕ್ಕಾಗುವುದಿಲ್ಲ. ಬ್ರಹ್ಮಾಂಡವನ್ನೇ ನಿಯಂತ್ರಿಸುವ ಕಾಲನಿಗೆ ಪರಾಕ್ರಮವೆಂಬುದೇನೂ ಇಲ್ಲ. ಅವನ ಇಚ್ಛಾಮಾತ್ರದಿಂದಲೇ ಎಲ್ಲವೂ ನಡೆಯುತ್ತಿರುತ್ತದೆ. ಕಾಲನಿಗೆ ಮಿತ್ರ-ಜ್ಞಾತಿ ಮುಂತಾದ ಯಾವ ಸಂಬಂಧವೂ ಇಲ್ಲ. ವಿಧಿಚೋದಿತವಾದ ಕಾರ್ಯಗಳಿಗೆ ಕಾರಣವನ್ನು ನಿರೂಪಿಸುವ ಸಾಧ್ಯತೆಯಿಲ್ಲ. ಕಾಲನು ಯಾವೊಬ್ಬನ ವಶದಲ್ಲಿಯೂ ಇರತಕ್ಕವನಲ್ಲ.

ಕಿಂ ತು ಕಾಲಪರೀಣಾಮೋ ದ್ರಷ್ಟವ್ಯಃ ಸಾಧು ಪಶ್ಯತಾ ।
ಧರ್ಮಶ್ಚಾರ್ಥಶ್ಚ ಕಾಮಶ್ಚ ಕಾಲಕ್ರಮಸಮಾಹಿತಾಃ ॥೮॥

ಆದರೆ ಚೆನ್ನಾಗಿ ಪರಿಶೀಲನೆಮಾಡುವವನಿಗೆ ಕಾಲದ ಪರಿಣಾಮವು ಎಲ್ಲೆಲ್ಲಿಯೂ ಕಂಡುಬರುತ್ತದೆ. ಧರ್ಮಾರ್ಥ-ಕಾಮಗಳು ಕಾಲಾನುಗುಣವಾಗಿ ಕಾಲನ ಒಲುಮೆಯಿಂದ ಸಂಪಾದಿಸಲ್ಪಡುತ್ತವೆ. ಪ್ಲವಗೇಶ್ವರನಾದ ವಾಲಿಯು ಸಾಮ-ದಾನ-ಭೇದ-ದಂಡೋಪಾಯಗಳನ್ನು ಸಮಯೋಚಿತವಾಗಿ ಪ್ರಯೋಗಿಸುತ್ತಾ ಧರ್ಮಾರ್ಥಗಳ ಸಾಧನೆಗಳಿಂದ ಪವಿತ್ರವಾದ ಕರ್ಮಫಲವನ್ನು ಪಡೆದುಕೊಂಡಿರುತ್ತಾನೆ. ಆದುದರಿಂದಲೇ ಈ ಭೂಮಿಯನ್ನು

---

ಪ್ರಪಂಚದ ಸೃಷ್ಟಿ-ಸ್ಥಿತಿ-ಲಯಗಳು ಸ್ವಭಾವಸಿದ್ಧವಾದುವುಗಳು. ಇದಕ್ಕೆ ಬೇರೆ ಯಾರೂ ಕಾರಣರಲ್ಲ. ಸೂರ್ಯನು ತನ್ನ ಸ್ವಭಾವದಂತೆ ಉದಯಿಸುತ್ತಾನೆ. ಬೆಳಗುತ್ತಾನೆ. ಬೆಂಕಿಯು ತನ್ನ ಸ್ವಭಾವದಂತೆ ಸುಡುತ್ತದೆ. ಮನುಷ್ಯನು ತನ್ನ ಸ್ವಭಾವಕ್ಕೆ ಅನುಗುಣವಾಗಿ ಕಾರ್ಯಮಾಡುತ್ತಾನೆ. ಹೀಗೆ ಎಲ್ಲವೂ ಸ್ವಭಾವದಿಂದ ನಡೆಯತಕ್ಕುವುಗಳೇ ಹೊರತು ಈ ಜಗತ್ತಿನ ಸೃಷ್ಟಿ-ಸ್ಥಿತಿ-ಲಯಗಳಿಗೆ ಬೇರೆ ಯಾವ ಕಾರಣವೂ ಇಲ್ಲ. ಇದಕ್ಕೆ ಸ್ವಭಾವವಾದ ಅಥವಾ ಸ್ವಭಾವಸಿದ್ಧಾಂತ ಎನ್ನುತ್ತಾರೆ. ಸೂತಸಂಹಿತೆಯಲ್ಲಿ ಈ ಸ್ವಭಾವಸಿದ್ಧಾಂತದ ವಿಷಯವಾಗಿ ಶಿವನು ಬ್ರಾಹ್ಮಣರಿಗೆ ಹೀಗೆ ಹೇಳಿದ್ದಾನೆ: ಸ್ವಭಾವಾದೇವ ಸಂಭೂತಂ ಸಮಸ್ತಮಿತಿ ಕೇಚನ । ತನ್ನ ಸಿಧ್ಯತಿ ವಿಪ್ರೇನ್ದ್ರಾ ದೇಶಕಾಲಾದ್ಯಪೇಕ್ಷಣಾತ್ ॥ ಮತ್ತಃ ಕರ್ಮಾನುರೂಪೇಣ ಜಗಜ್ಜನ್ಮಾದಿ ಜಾಯತೇ । ಏಷ ಸ್ವಭಾವೋ ವಿಪ್ರೇನ್ದ್ರಾ ಇತಿ ವೇದಾರ್ಥನಿರ್ಣಯಃ ॥ ನ ಮಯಾ ಕೇವಲೇನಾಪಿ ನ ಚ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಬಿಟ್ಟುಹೋಗಿರುವ ವಾಲಿಯು ಸ್ವರೂಪದಲ್ಲಿ ಲೀನವಾಗಿಬಿಟ್ಟಿದ್ದಾನೆ. ಆದುದರಿಂದ ವಾಲಿಯ ವಿಷಯವಾಗಿ ದುಃಖಪಡಬೇಕಾದ ಕಾರಣವಿಲ್ಲ. ಮಹಾತ್ಮನಾದ ವಾಲಿಯು ತನಗೆ ವಿಹಿತವಾದ ಧರ್ಮಾನುಷ್ಠಾನಗಳನ್ನು ಮಾಡುತ್ತಿದ್ದುದರಿಂದ ಸ್ವರ್ಗವನ್ನೂ ಜಯಿಸಿದ್ದನು. ಯುದ್ಧಸಮಯದಲ್ಲಿ ಕೂಡ ಪ್ರಾಣಗಳನ್ನು ರಕ್ಷಿಸಿಕೊಳ್ಳಲು ಪ್ರಯತ್ನಿಸದೇ ಆಯುಧಪ್ರಹಾರದಿಂದ ಪ್ರಾಣಪರಿತ್ಯಾಗಮಾಡಿರುವುದರಿಂದ ವಾಲಿಯು ಸ್ವರ್ಗವನ್ನೇ ಪಡೆದಿರುತ್ತಾನೆ. ಕಪಿಮುಖ್ಯನಾದ ವಾಲಿಯು ಹೋಗಿರುವ ಮಾರ್ಗವು ಪರಮ ಶ್ರೇಷ್ಠವಾಗಿದೆ. ಆದುದರಿಂದ ಅವನ ಸಂಬಂಧವಾದ ಪರಿತಾಪವನ್ನು ನಿಲ್ಲಿಸಿರಿ. ಈಗ ಮಾಡಬೇಕಾಗಿರುವ ಕರ್ತವ್ಯವನ್ನು ಮಾಡಿರಿ."

ಹೀಗೆ ಶ್ರೀರಾಮನು ಹೇಳಲು ಶತ್ರುವೀರಹಂತಕನಾದ ಲಕ್ಷ್ಮಣನು ಅಣ್ಣನ ಮರಣದಿಂದಾಗಿ ಸ್ವಾಸ್ಥ್ಯವನ್ನು ಕಳೆದುಕೊಂಡಿದ್ದ ಸುಗ್ರೀವನಿಗೆ ನಯ-ವಿನಯಗಳಿಂದ ಕೂಡಿದ ಈ ಮಾತನ್ನು ಹೇಳಿದನು :

"ಸುಗ್ರೀವ ! ಶೀಘ್ರವಾಗಿ ವಾಲಿಯ ಪ್ರೇತಕಾರ್ಯಗಳನ್ನು ಮಾಡು. ಪ್ರೇತಕಾರ್ಯಗಳನ್ನು ಹೇಗೆ ಮಾಡಬೇಕೆಂಬುದರ ಬಗೆಗೆ ತಾರೆಯೊಡನೆಯೂ ಅಂಗದನೊಡನೆಯೂ ಸಮಾಲೋಚಿಸು. ವಾಲಿಯ ದೇಹವನ್ನು ಅಗ್ನಿಯ ಮೂಲಕ ಸಂಸ್ಕರಿಸುವುದಕ್ಕಾಗಿ ಒಣಗಿರುವ ದಿವ್ಯವಾದ ಮತ್ತು ಸುಗಂಧಯುಕ್ತವಾದ ಗಂಧದ ಮರದ ತುಂಡುಗಳನ್ನು ಯಥೇಚ್ಛವಾಗಿ ತರುವಂತೆ ಸೇವಕರಿಗೆ ಆಜ್ಞಾಪಿಸು. ದೀನನಾಗಿರುವ, ತಂದೆಯ ಮರಣದಿಂದ ಭಯ

---

ಕೇವಲಕರ್ಮಣಾ | ಪ್ರಾಣಿನಾಂ ಕರ್ಮಪಾಕೇನ ಮಯಾ ಚ ಮುನಿಸತ್ತಮಾಃ | ಜಗತಃ ಸಂಭವೋ ನಾಶಃ ಸ್ಥಿತಿಶ್ಚ ಭವತಿ ದ್ವಿಜಾಃ || ಬ್ರಾಹ್ಮಣರೇ ! ಸ್ವಭಾವದಿಂದಲೇ ಎಲ್ಲವೂ ಹುಟ್ಟಿರುವುದೆಂಬುದು ಕೆಲವರ ಅಭಿಮತವಾಗಿದೆ. ಸ್ವಭಾವಮಾತ್ರದಿಂದಲೇ ಎಲ್ಲವೂ ಸಿದ್ಧಿಸುವುದಿಲ್ಲ. ದೇಶ-ಕಾಲಾಪೇಕ್ಷೆಯಿಂದ ಕರ್ಮಕ್ಕೆ ಅನುಗುಣವಾಗಿ ಜಗತ್ತು, ಪ್ರಾಣಿಗಳೇ ಮೊದಲಾದುವು ನನ್ನಿಂದ ಹುಟ್ಟುತ್ತವೆ. ಕರ್ಮಾನುರೂಪವಾಗಿ ಪ್ರಾಣಿಗಳು ಹುಟ್ಟುವುದಕ್ಕೇ 'ಸ್ವಭಾವ' ಎಂದು ಹೆಸರು. ವೇದಾರ್ಥಗಳೂ ಹೀಗೆಯೇ ನಿರ್ಣಯಿಸಿವೆ. ಕೇವಲ ನನ್ನೊಬ್ಬನಿಂದಲೂ ಜಗತ್ತಿನ ಸೃಷ್ಟಿಯು ಸಾಧ್ಯವಾಗುವುದಿಲ್ಲ. ಕೇವಲ ಕರ್ಮದಿಂದಲೂ ಜಗತ್ತಿನ ಸೃಷ್ಟಿಯು ಸಾಧ್ಯವಾಗುವುದಿಲ್ಲ. ಪ್ರಾಣಿಗಳ ಕರ್ಮವಿಪಾಕದಿಂದಲೂ ಮತ್ತು ನನ್ನ ಪ್ರಭಾವದಿಂದಲೂ ಈ ಜಗತ್ತಿನ ಸೃಷ್ಟಿ, ನಾಶ ಮತ್ತು ಸ್ಥಿತಿಗಳು ಉಂಟಾಗುತ್ತವೆ"

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಗೊಂಡಿರುವ ಅಂಗದನನ್ನು ಸಮಾಧಾನಗೊಳಿಸು. ಈಗ ಕಿಷ್ಕಿಂಧಾ ಪಟ್ಟಣವು ನಿನ್ನ ಅಧೀನದಲ್ಲಿದೆ. ಆದುದರಿಂದ ಬಾಲಿಶಬುದ್ಧಿಯವನಾಗ ಬೇಡ. ವಾಲಿಯ ದಹನಸಂಸ್ಕಾರಕ್ಕೆ ಬೇಕಾಗುವ ಹೂವಿನ ಮಾಲೆಗಳು, ವಿಧ-ವಿಧವಾದ ವಸ್ತ್ರಗಳು, ತುಪ್ಪ, ಎಣ್ಣೆ, ಸುಗಂಧದ್ರವ್ಯಗಳು–ಈ ಎಲ್ಲ ವನ್ನೂ ಅಂಗದನು ಬೇಗನೆ ತರಲಿ."

ಬಳಿಕ ಲಕ್ಷ್ಮಣನು ತಾರನೆಂಬ ಕಪಿಮುಖ್ಯನಿಗೆ ಹೇಳುತ್ತಾನೆ :

"ತಾರ ! ನೀನು ಶೀಘ್ರವಾಗಿ ಕಿಷ್ಕಿಂಧೆಗೆ ಹೋಗಿ ಪಲ್ಲಕ್ಕಿಯನ್ನು ತೆಗೆದುಕೊಂಡು ಬಾ. ತ್ವರಾ ಗುಣವತೀ ಯುಕ್ತಾ ಹ್ಯಸ್ಮಿನ್ಕಾಲೇ ವಿಶೇಷತಃ || ಕಾರ್ಯವನ್ನು ಶೀಘ್ರವಾಗಿ ಮುಗಿಸುವುದು ಯುಕ್ತವಾಗಿದೆ. ಅದರಲ್ಲಿಯೂ ವಿಶೇಷವಾಗಿ ಇಂತಹ ಸಮಯಗಳಲ್ಲಿ ಎಲ್ಲವೂ ತ್ವರೆಯಿಂದಲೇ ನಡೆಯಬೇಕು. ಪಲ್ಲಕ್ಕಿಯನ್ನು ಹೊರಲು ಯೋಗ್ಯರಾದ ವಾನರರು ಸಿದ್ಧ ರಾಗಲಿ. ಸಮರ್ಥರೂ ಬಲಶಾಲಿಗಳೂ ಆದ ಅವರು ವಾಲಿಯನ್ನು ಪಲ್ಲಕ್ಕಿ ಯಲ್ಲಿ ಹೊತ್ತು ಸಾಗಿಸುವರು."

ಸುಮಿತ್ರೆಯ ಆನಂದವನ್ನು ಹೆಚ್ಚಿಸುವ ಶತ್ರುವೀರಹಂತಕನಾದ ಲಕ್ಷ್ಮಣನು ಸುಗ್ರೀವನಿಗೆ ಹೀಗೆ ಹೇಳಿ ಅಣ್ಣನಾದ ಶ್ರೀರಾಮನ ಬಳಿಯಲ್ಲಿ ನಿಂತುಕೊಂಡನು. ಲಕ್ಷ್ಮಣನ ಮಾತನ್ನು ಕೇಳಿ ಸಡಗರದಿಂದ ತಾರನು ಶಿಬಿಕೆಯನ್ನು ತರುವುದರಲ್ಲಿ ಆಸಕ್ತವಾದ ಮನಸ್ಸಿನಿಂದ ಕಿಷ್ಕಿಂಧೆಯ ಗುಹೆಯನ್ನು ಪ್ರವೇಶಿಸಿದನು. ಶಿಬಿಕೆಯನ್ನು ಹೊರಲು ಸಮರ್ಥರಾದ ಶೂರರಾದ ವಾನರರೊಡನೆ ಶಿಬಿಕೆಯನ್ನು ಹೊರಿಸಿಕೊಂಡು ಬಹಳ ಶೀಘ್ರ ವಾಗಿಯೇ ಹಿಂದಿರುಗಿದನು. ದಿವ್ಯವಾಗಿದ್ದ ಆ ಶಿಬಿಕೆಯು ಭದ್ರಾಸನದಿಂದ ಕೂಡಿದ್ದಿತು, ದಿವ್ಯವಾದ ರಥದಂತೆಯೇ ಕಾಣುತ್ತಿದ್ದಿತು. ಕೃತಕಪಕ್ಷಿ ಗಳಿಂದ ಚಿತ್ರಿತವಾಗಿದ್ದಿತು. ಶಿಬಿಕೆಯ ಮೇಲೆ ಪಕ್ಷಿಗಳನ್ನೂ ವೃಕ್ಷ ಗಳನ್ನೂ ಸುಂದರವಾಗಿ ಚಿತ್ರಿಸಿದ್ದರು. ಸುತ್ತಲೂ ಸಾಲುಗಳಲ್ಲಿ ಪದಾತಿ ಸೈನ್ಯವನ್ನು ಚಿತ್ರಿಸಿದ್ದರು. ಆ ಶಿಬಿಕೆಗೆ ಶೋಭಾಯಮಾನವಾದ ಪ್ರವೇಶ ದ್ವಾರವಿದ್ದಿತು ಬಲೆಯಂತಹ ಕಿಟಕಿಗಳಿಂದ ಕೂಡಿದ್ದು ಸಿದ್ಧರ ವಿಮಾನ ದಂತೆಯೇ ಕಾಣುತ್ತಿದ್ದಿತು. ವಿಶಾಲವಾಗಿಯೂ ಮನೋಹರವಾಗಿಯೂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಶಿಲ್ಪಿಗಳಿಂದ ನಿರ್ಮಿಸಲ್ಪಟ್ಟಿದ್ದಿತು. ಮರದಿಂದ ಮಾಡಿ ಬಣ್ಣಹಾಕಿದ ಕ್ರೀಡಾ ಪರ್ವತಗಳಿಂದ ಕೂಡಿದ್ದಿತು. ಕುಶಲಕರ್ಮಿಗಳಿಂದ ಮಾಡಲ್ಪಟ್ಟಿದ್ದ ಸುಂದರ ಚಿತ್ರಗಳಿಂದ ಸಮಲಂಕೃತವಾಗಿದ್ದಿತು. ಶ್ರೇಷ್ಠವಾದ ಆಭರಣಗಳಿಂದಲೂ, ವಿಚಿತ್ರವಾದ ಮಾಲೆಗಳಿಂದಲೂ ಕೂಡಿ ಅತ್ಯಂತಶೋಭಾಯಮಾನವಾಗಿ ಕಾಣುತ್ತಿದ್ದಿತು. ಕೃತ್ರಿಮವಾದ ಗುಹೆಗಳಿಂದಲೂ ಕಾನನಗಳಿಂದಲೂ ವ್ಯಾಪ್ತವಾಗಿದ್ದಿತು. ಆ ಶಿಬಿಕೆಯನ್ನು ರಕ್ತಚಂದನದಿಂದ ಅಲಂಕರಿಸಿದ್ದರು. ಹೂಗಳ ಗೊಂಚಲುಗಳಿಂದಲೂ ಮಾಲೆಗಳಿಂದಲೂ ಸಿಂಗರಿಸಿದ್ದರು. ಬಾಲ ಸೂರ್ಯನ ವರ್ಣದಂತೆ ಪ್ರಕಾಶಿಸುತ್ತಿದ್ದ ಕಮಲಪುಷ್ಪದ ಮಾಲೆಗಳಿಂದ ಅದು ಸಮಾವೃತವಾಗಿದ್ದಿತು. ಅಂತಹ ಅನುಪಮವಾದ ಶಿಬಿಕೆಯನ್ನು ತಾರನು ಕಿಷ್ಕಿಂಧೆಯಿಂದ ತೆಗೆಸಿಕೊಂಡುಬಂದನು.

ದಿವ್ಯವಾದ ಆ ಶಿಬಿಕೆಯನ್ನು ನೋಡಿ ರಾಮನು ಲಕ್ಷ್ಮಣನಿಗೆ ಹೇಳಿದನು :

" ತಮ್ಮ ! ಇನ್ನು ತಡಮಾಡುವುದು ಬೇಡ. ಈ ಶಿಬಿಕೆಯ ಮೂಲಕ ಒಡನೆಯೇ ವಾಲಿಯನ್ನು ಚಿತೆಯ ಬಳಿಗೆ ವಾನರಶ್ರೇಷ್ಠರು ಕೊಂಡೊಯ್ಯಲಿ. ಪ್ರೇತಕಾರ್ಯಗಳು ಈಗಲೇ ಪ್ರಾರಂಭವಾಗಲಿ."

ಶ್ರೀರಾಮನು ಹೀಗೆ ಹೇಳಲು ಸುಗ್ರೀವನು ಅಂಗದನೊಡನೆ ವಾಲಿಯನ್ನೆತ್ತಿ ಗಟ್ಟಿಯಾಗಿ ರೋದನಮಾಡುತ್ತಾ ಶಿಬಿಕೆಯಲ್ಲಿರಿಸಿದನು. ವಿಧ-ವಿಧವಾದ ಮಾಲೆಗಳಿಂದಲೂ, ವಸ್ತ್ರಗಳಿಂದಲೂ, ಅಲಂಕಾರಗಳಿಂದಲೂ ವಿಭೂಷಿತನಾಗಿದ್ದ ವಾಲಿಯನ್ನು ಪಲ್ಲಕ್ಕಿಯಲ್ಲಿರಿಸಿ ರಾಜನಾದ ಸುಗ್ರೀವನು–" ಆರ್ಯನಾದ ವಾಲಿಗೆ ರಾಜರುಗಳಿಗೆ ಮಾಡುವಂತೆಯೇ ಔರ್ಧ್ವದೈಹಿಕಕರ್ಮಗಳನ್ನು ಮಾಡಿರಿ "–ಎಂದು ಆಜ್ಞಾಪಿಸಿದನು. " ಕಪಿಮುಖ್ಯರು ವಿಧ-ವಿಧವಾದ ರತ್ನಗಳನ್ನು ದಾರಿಯುದ್ದಕ್ಕೂ ಎರಚಿಕೊಂಡು ಮುಂದೆ ಹೋಗಲಿ. ಅನಂತರ ಪಲ್ಲಕ್ಕಿಯು ಹೋಗಲಿ. ಲೋಕದಲ್ಲಿ ಆಯಾ ರಾಜರ ಐಶ್ವರ್ಯ ಸಮೃದ್ಧಿಗೆ ಅನುಗುಣವಾಗಿ ಉತ್ತರಕ್ರಿಯೆಗಳನ್ನು ಮಾಡುತ್ತಾರೆ. ವಾನರ ಪ್ರಮುಖರು ಮಹೈಶ್ವರ್ಯಸಂಪನ್ನನಾದ ವಾಲಿಗೆ ಅನುರೂಪವಾದ ರೀತಿಯಲ್ಲಿ ಉತ್ತರಕ್ರಿಯೆಯನ್ನು ಮಾಡಲಿ "–ಎಂದು ಸುಗ್ರೀವನು ಕಪಿಮುಖ್ಯರಿಗೆ ಆಜ್ಞೆಮಾಡಿದನು. ಸುಗ್ರೀವನು ಹೀಗೆ ಹೇಳಲು ತಾರನೇ ಮುಂತಾದ ಕಪಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಮುಖ್ಯರು ಅಂಗದನೊಡನೆ ಕೂಡಿಕೊಂಡು ಮಹಾರಾಜನಿಗೆ ಯೋಗ್ಯವಾದ ರೀತಿಯಲ್ಲಿ ವಾಲಿಯ ಅಪರಕರ್ಮಗಳನ್ನು ಮಾಡಿದರು.

ವಾಲಿಯನ್ನು ಕಳೆದುಕೊಂಡ ತಾರೆಯೇ ಮೊದಲಾದ ವಾನರ ಸ್ತ್ರೀಯರೂ ಮತ್ತು ಬಂಧುಗಳೂ–' ವೀರನೇ ! ನಮ್ಮನ್ನಗಲಿ ಹೋದೆಯಾ ! ಅಯ್ಯೋ ! ಮುಂದೆ ನಮ್ಮ ಗತಿಯೇನು ? '– ಮುಂತಾಗಿ ಹೇಳಿಕೊಂಡು ಗೋಳಾಡುತ್ತಿದ್ದರು. ಕರುಣಾಜನಕವಾದ ಸ್ವರದಿಂದ ರೋದನಮಾಡುತ್ತಿದ್ದ ವಾನರಸ್ತ್ರೀಯರೆಲ್ಲರೂ ವಾಲಿಯ ಶಿಬಿಕೆಯನ್ನೇ ಅನುಸರಿಸಿಹೋದರು. ಅವರ ಆ ರೋದನಶಬ್ದದಿಂದ ಅರಣ್ಯದ ಮಧ್ಯದಲ್ಲಿದ್ದ ವನಗಳೂ ಪರ್ವತಗಳೂ ರೋದನಮಾಡುತ್ತಿವೆಯೋ ಎಂಬಂತೆ ಕಾಣುತ್ತಿದ್ದಿತು. ಶೋಕಪೀಡಿತರಾಗಿದ್ದ ವಾನರಪ್ರಮುಖರು ಏಕಾಂತದಲ್ಲಿದ್ದ, ನೀರಿನಿಂದ ಸುತ್ತುವರಿಯಲ್ಪಟ್ಟದ್ದ, ಗಿರಿನದಿಯ ಮಳಲಿನ ದಿಬ್ಬದ ಪ್ರದೇಶದಲ್ಲಿ ಚಿತೆಯನ್ನು ಒಟ್ಟಿದರು. ಶಿಬಿಕೆಯನ್ನು ಹೊತ್ತಿದ್ದ ವಾನರಪ್ರಮುಖರು ಆ ಸ್ಥಳದಲ್ಲಿ ಶಿಬಿಕೆಯನ್ನು ಹೆಗಲಿನಿಂದ ಕೆಳಗಿಳಿಸಿ ಶೋಕಪೀಡಿತರಾಗಿ ಏಕಾಂತವನ್ನಾಶ್ರಯಿಸಿ ಮೌನವಾಗಿ ಕುಳಿತುಕೊಂಡರು.

ಬಳಿಕ ತಾರೆಯು ಶಿಬಿಕೆಯ ಕೆಳಭಾಗದಲ್ಲಿ ಮಲಗಿರುವನಂತೆಯೇ ಕಾಣುತ್ತಿದ್ದ ವಾಲಿಯನ್ನು ನೋಡಿ ಅವನ ತಲೆಯನ್ನು ತನ್ನ ತೊಡೆಯ ಮೇಲಿಟ್ಟುಕೊಂಡು ಅತ್ಯಂತದುಃಖಿತೆಯಾಗಿ ಗಳ-ಗಳನೆ ಅಳತೊಡಗಿದಳು :

" ಹಾ ವಾನರೇಶ್ವರ ! ಹಾ ಮಹಾರಾಜ ! ಹಾ ನಾಥ ! ಮಮವತ್ಸಲ ! ಹಾ ಮಹಾರ್ಹ ! ಮಹಾಬಾಹೋ ! ಹಾ ಪ್ರಿಯ ! ನನ್ನನ್ನು ಒಮ್ಮೆಯಾದರೂ ನೋಡು, ಮಾನದನೇ ! ನಿನ್ನ ವಿರಹಶೋಕದಿಂದ ಪೀಡಿತರಾಗಿರುವ ಈ ಜನಸಮೂಹವನ್ನು ನೀನೇಕೆ ನೋಡುತ್ತಿಲ್ಲ ? ನೀನೀಗ ಪ್ರಾಣರಹಿತನೇ ಆಗಿದ್ದರೂ ನಿನ್ನ ಮುಖವು ನಗುವಿನಿಂದ ಕೂಡಿರುವಂತೆಯೇ ಕಾಣುತ್ತಿದೆ. ಬದುಕಿದ್ದಾಗಲೂ ನಿನ್ನ ಮುಖವು ಅಸ್ತಮಾನಹೊಂದುತ್ತಿರುವ ಸೂರ್ಯನಂತೆಯೇ ಪ್ರಕಾಶಿಸುತ್ತಿದ್ದಿತು. ಈಗಲೂ ನಿನ್ನ ಮುಖವು ಹಾಗೆಯೇ ಕಾಣುತ್ತಿದೆ. ಈ ಕಾಲನು ( ಯಮನು ) ನಿನ್ನನ್ನು ರಾಮನ ರೂಪದಿಂದ ಸೆಳೆದುಕೊಂಡು ಹೋಗುತ್ತಿದ್ದಾನೆ. ರಾಮನ ಒಂದೇ ಬಾಣದಿಂದ ನಿನ್ನ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಪತ್ನಿಯರಾದ ನಾವೆಲ್ಲರೂ ವಿಧವೆಯರಾಗಿಬಿಟ್ಟೆವು. ರಾಜೇಂದ್ರನೇ! ಈ ವಾನರಸ್ತ್ರೀಯರೆಲ್ಲರೂ ನಿನ್ನ ಭಾರ್ಯೆಯರೇ ಆಗಿದ್ದಾರೆ. ಇವರೆಲ್ಲರೂ ನಿನ್ನ ಸಲುವಾಗಿ ಬಹಳ ದೂರದಿಂದ ನಡೆದುಬಂದಿರುತ್ತಾರೆ. ಇಷ್ಟು ಕಷ್ಟಪಟ್ಟು ಕೊಂಡು ಇವರಿಲ್ಲಿಗೆ ಬಂದಿರುವರೆಂಬುದೂ ನಿನಗೆ ತಿಳಿಯದೇ? ಚಂದ್ರವದನೆ ಯರಾದ ಇವರೆಲ್ಲರೂ ನಿನ್ನ ಪ್ರೀತಿಪಾತ್ರರಾದ ಭಾರ್ಯೆಯರೇ ಅಲ್ಲವೇ? ಇವರನ್ನೂ ತಮ್ಮನಾದ ಸುಗ್ರೀವನನ್ನೂ ಈಗೇಕೆ ನೀನು ನೋಡುತ್ತಿಲ್ಲ? ತಾರನೇ ಮೊದಲಾದ ನಿನ್ನ ಸಚಿವರೂ ಪುರವಾಸಿಗಳಾದ ಈ ಜನರೂ ನಿನ್ನನ್ನು ಸುತ್ತುವರಿದು ನಿಂತು ಅಳುತ್ತಿದ್ದಾರೆ. ಹಿಂದೆ ನೀನು ಇವರೆಲ್ಲರಿಗೂ ಯಥಾಯೋಗ್ಯವಾದ ಸಲಹೆಗಳನ್ನುಕೊಟ್ಟು ಕಳುಹಿಸುತ್ತಿದ್ದಂತೆ ಈಗಲೂ ಇವರನ್ನು ಕಳುಹಿಸಿಕೊಡು. ಬಳಿಕ ಉತ್ಕಟವಾದ ಕಾಮಾಸಕ್ತಿಯನ್ನು ಹೊಂದಿರುವ ನಾವೆಲ್ಲರೂ ಈ ವನಪ್ರದೇಶದಲ್ಲಿ ಸ್ವೇಚ್ಛೆಯಿಂದ ವಿಹರಿ ಸೋಣ."

ಪತಿಯ ಶೋಕದಲ್ಲಿಯೇ ಮುಳುಗಿಹೋಗಿ ಹೀಗೆಲ್ಲಾ ರೋದಿಸುತ್ತಿದ್ದ ತಾರೆಯನ್ನು ಶೋಕಪೀಡಿತರಾಗಿದ್ದ ವಾನರಸ್ತ್ರೀಯರು ಸಮಾಧಾನಹೇಳುತ್ತಾ ಮೇಲಕ್ಕೆಬ್ಬಿಸುತ್ತಿದ್ದರು. ಬಳಿಕ ಶೋಕಸಾಗರದಲ್ಲಿ ಮುಳುಗಿಹೋಗಿದ್ದ ಅಂಗದನು ಸುಗ್ರೀವನೊಡನೆ ಗಟ್ಟಿಯಾಗಿ ರೋದನಮಾಡುತ್ತಾ ತಂದೆಯ ಶರೀರವನ್ನು ಚಿತೆಯ ಮೇಲಿಟ್ಟನು. ವಾಲಿಯಿದ್ದ ಚಿತೆಗೆ ಅಗ್ನಿಯನ್ನು ಯಥಾವಿಧಿಯಾಗಿ ಹೊತ್ತಿಸಿ ಬಹುದೂರದ ಹಾದಿಯಲ್ಲಿ ಪ್ರಯಾಣ ಹೊರಟಿದ್ದ ತಂದೆಗೆ ಅಪಸವ್ಯಕ್ರಮದಿಂದ ಸುತ್ತುಹಾಕಿದನು. ಹೀಗೆ ವಾಲಿಗೆ ವಿಧಿವತ್ತಾಗಿ ಅಗ್ನಿಸಂಸ್ಕಾರವಾದನಂತರ ಕಪಿಶ್ರೇಷ್ಠರೆಲ್ಲರೂ ವಾಲಿಗೆ ಜಲ ತರ್ಪಣವನ್ನು ಕೊಡಲು ಮಂಗಳದಾಯಕವಾಗಿದ್ದ ಮತ್ತು ಶುಭಜಲದಿಂದ ಕೂಡಿದ್ದ ನದಿಯ ಬಳಿಗೆ ಬಂದರು. ವಾನರಮುಖ್ಯರೆಲ್ಲರೂ ಸುಗ್ರೀವ-ತಾರೆಯರಿಂದೊಡಗೂಡಿ ಅಂಗದನನ್ನು ಮುಂದಿಟ್ಟುಕೊಂಡು ವಾಲಿಗೆ ಜಲಾಂಜಲಿಯನ್ನು ಕೊಟ್ಟರು. ದೀನನಾದ ಸುಗ್ರೀವನ ದುಃಖಕ್ಕೆ ಸಮಾನ ವಾದ ದುಃಖವನ್ನೇ ಅನುಭವಿಸುತ್ತಿದ್ದ ಮಹಾಬಲನಾದ ಶ್ರೀರಾಮನು ಸುಗ್ರೀವನ ಮೂಲಕ ವಾಲಿಯ ಪ್ರೇತಕಾರ್ಯಗಳನ್ನು ಯಥಾವಿಧಿಯಾಗಿ ಮಾಡಿಸಿದನು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಹೀಗೆ ಸುಗ್ರೀವನು – ರಾಮನ ನಿರ್ದೇಶನದಂತೆ ಶ್ರೇಷ್ಠ ಪರಾಕ್ರಮನಾದ, ಸುಪ್ರಸಿದ್ಧನಾದ, ಇಕ್ಷ್ವಾಕುಶ್ರೇಷ್ಠನಾದ ಶ್ರೀರಾಮನ ಬಾಣದಿಂದ ಹತನಾದ, ಪ್ರದೀಪ್ತವಾದ ಅಗ್ನಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ವಾಲಿಯ ಶರೀರವನ್ನು ಚಿತೆಯಲ್ಲಿರಿಸಿ ವಿಧಿವತ್ತಾಗಿ ಅಗ್ನಿಸಂಸ್ಕಾರವನ್ನು ಮಾಡಿ ಲಕ್ಷ್ಮಣನೊಡನಿದ್ದ ಶ್ರೀರಾಮನ ಬಳಿಗೆ ಬಂದನು.

೨೫ನೆಯ ಸರ್ಗವು ಮುಗಿಯಿತು.

ಕಿಷ್ಕಿಂಧಾಕಾಂಡ ೨೬ನೆಯ ಸರ್ಗ

## ನಗರಪ್ರವೇಶಕ್ಕೆ ಶ್ರೀರಾಮನ ನಿರಾಕರಣೆ : ಸುಗ್ರೀವಾಂಗದರ ಪಟ್ಟಾಭಿಷೇಕ

ತತಃ ಶೋಕಾಭಿಸಂತಪ್ತಂ ಸುಗ್ರೀವಂ ಕ್ಲಿನ್ನವಾಸಸಮ್ ।
ಶಾಖಾಮೃಗಮಹಾಮಾತ್ರಾಃ ಪರಿವಾರ್ಯೋಪತಸ್ಥಿರೇ ॥೧॥

ವಾನರಾಧಿಪತಿಯ ಪ್ರಧಾನಿಗಳು – ಶೋಕಾಭಿಭೂತನಾಗಿದ್ದ, ಸಚೇಲಸ್ನಾನಮಾಡಿ ಒದ್ದೆಯ ವಸ್ತ್ರವನ್ನು ಧರಿಸಿದ್ದ ಸುಗ್ರೀವನನ್ನು ಸುತ್ತುವರಿದು ನಿಂತರು. ಒಡನೆಯೇ ಸುಗ್ರೀವನೂ ಮೇಲೆದ್ದು ಹೊರಟನು. ಅವನನ್ನು ಮುಂದೆ ಮಾಡಿಕೊಂಡು ವಾನರಪ್ರಮುಖರೆಲ್ಲರೂ ಕ್ಲಿಷ್ಟವಾದ ಕಾರ್ಯವನ್ನಾದರೂ ಬಹಳ ಸುಲಭವಾಗಿ ಮಾಡುವ ಸಾಮರ್ಥ್ಯವನ್ನು ಹೊಂದಿದ್ದ ಶ್ರೀರಾಮನ ಬಳಿಗೆ ಬಂದು – ಪಿತಾಮಹನಾದ ಬ್ರಹ್ಮನನ್ನು ಮಹರ್ಷಿಗಳು ಸುತ್ತುವರಿದು ನಿಲ್ಲುವಂತೆ – ಕೈಮುಗಿದುಕೊಂಡು ಶ್ರೀರಾಮನ ಸುತ್ತಲೂ ನಿಂತುಕೊಂಡರು. ಅನಂತರ ಸುಮೇರುಪರ್ವತದ ಮತ್ತು ಬಾಲಸೂರ್ಯನ ಕಾಂತಿಯಂತೆ ಅತ್ಯುಜ್ವಲವಾದ ಕಾಂತಿಯಿಂದ ಬೆಳಗುತ್ತಿದ್ದ, ವಾಯುಪುತ್ರನಾದ ಹನುಮಂತನು ಕೈಮುಗಿದುಕೊಂಡು ಶ್ರೀರಾಮನಿಗೆ ಹೇಳಿದನು :

" ಪ್ರಭುವೇ ! ಸುಂದರವಾದ ಕೋರೆಹಲ್ಲುಗಳಿಂದ ಶೋಭಿತರಾಗಿದ್ದ, ವೀರ್ಯ-ಬಲಸಂಪನ್ನರಾಗಿರುವ ಮಹಾತ್ಮರಾದ ವಾನರರ ಈ ಕಿಷ್ಕಿಂಧಾರಾಜ್ಯವನ್ನು ನಿನ್ನ ಅನುಗ್ರಹದಿಂದಲೇ ಸುಗ್ರೀವನು ಪಡೆದುಕೊಂಡನು. ಇದು ಅವನಿಗೆ ತಾತ-ಮುತ್ತಾತಂದಿರ ಕಾಲದಿಂದ ಬಂದಿರುವ ರಾಜ್ಯ. ಸಂಪಾದಿಸಲು ಕಷ್ಟಸಾಧ್ಯವಾಗಿದ್ದ ಈ ರಾಜ್ಯವು ನಿನ್ನ ಅನುಗ್ರಹದಿಂದಲೇ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಅವನಿಗೆ ಇಂದು ಲಭಿಸಿದೆ. ನಿನ್ನ ಆಜ್ಞೆಯಂತೆ ಸುಗ್ರೀವನು ಶುಭೋದಯವಾದ ಕಿಷ್ಕಿಂಧಾಪಟ್ಟಣವನ್ನು ಪ್ರವೇಶಿಸಿ ಅಲ್ಲಿ ಮಾಡಬೇಕಾಗಿರುವ ಎಲ್ಲ ಕಾರ್ಯಗಳನ್ನೂ ಸುಹೃದರೊಡನೆ ಸೇರಿ ಮಾಡಲಿರುವನು. ಅದಕ್ಕೆ ಮೊದಲು ಅವನು ಹಲವು ಬಗೆಯ ಗಂಧೋದಕಗಳಿಂದಲೂ ಓಷಧಿಲತೆಗಳಿಂದ ಸಮ್ಮಿಶ್ರವಾದ ಪವಿತ್ರೋದಕಗಳಿಂದಲೂ ಸ್ನಾನಮಾಡಿ ಯಥಾವಿಧಿಯಾಗಿ ಪಟ್ಟಾಭಿಷಿಕ್ತನಾದ ನಂತರ ನಿನ್ನನ್ನು ಪುಷ್ಪಮಾಲಿಕೆಗಳಿಂದಲೂ ರತ್ನಹಾರಗಳಿಂದಲೂ ವಿಶೇಷವಾಗಿ ಪೂಜಿಸಿ ಗೌರವಿಸುವನು. ಆದುದರಿಂದ ನೀನೀಗಲೇ ಸುರಮ್ಯವಾಗಿರುವ ಗಿರಿಗುಹೆಗೆ ( ಕಿಷ್ಕಿಂಧಾಪಟ್ಟಣಕ್ಕೆ ) ಆಗಮಿಸುವುದು ಉಚಿತವಾಗಿದೆ. ಸುಗ್ರೀವನ ಪಟ್ಟಾಭಿಷೇಕಮಹೋತ್ಸವದಲ್ಲಿ ಪಾಲುಗೊಳ್ಳುವುದರ ಮೂಲಕ ವಾನರೇಶ್ವರರೊಡನೆ ವಿಶೇಷವಾದ ಸಂಬಂಧವನ್ನು ಬೆಳೆಸಿ ವಾನರರಾದ ನಮ್ಮೆಲ್ಲರನ್ನೂ ಸಂತೋಷಗೊಳಿಸು."

ಹನುಮಂತನು ಹೀಗೆ ಹೇಳಲು ಶತ್ರುವೀರಹಂತಕನಾದ, ವಾಕ್ಯಕೋವಿದನಾದ, ರಘುವಂಶಪ್ರದೀಪಕನಾದ, ಮೇಧಾವಿಯಾದ ಶ್ರೀರಾಮನು ಹೇಳಿದನು :

" ಸೌಮ್ಯನೇ ! ಹನುಮಂತ ! ತಂದೆಯ ಆಜ್ಞೆಯನ್ನು ಪರಿಪಾಲಿಸುವುದರಲ್ಲಿ ದೀಕ್ಷಿತನಾಗಿರುವ ನಾನು ಹದಿನಾಲ್ಕು ವರ್ಷಗಳ ಕಾಲ ಗ್ರಾಮವನ್ನಾಗಲೀ ಪಟ್ಟಣವನ್ನಾಗಲೀ ಪ್ರವೇಶಿಸುವುದಿಲ್ಲ. ವಾನರಶ್ರೇಷ್ಠನಾದ ವೀರನಾದ ಸುಗ್ರೀವನು ಸಕಲವಿಧವಾದ ಸಾಮಗ್ರಿಗಳಿಂದಲೂ ಸಮೃದ್ಧವಾಗಿರುವ, ರಮ್ಯವಾಗಿರುವ ಕಿಷ್ಕಿಂಧಾಪಟ್ಟಣವನ್ನು ಪ್ರವೇಶಿಸಿ ರಾಜ್ಯದಲ್ಲಿ ವಿಧಿವತ್ತಾಗಿ ಅಭಿಷಿಕ್ತನಾಗಲಿ. "

ಹನುಮಂತನಿಗೆ ಹೀಗೆ ಹೇಳಿ ಬಳಿಕ ಸತ್ಸಂಪ್ರದಾಯ-ಸದಾಚಾರಗಳನ್ನು ತಿಳಿದಿದ್ದ ಶ್ರೀರಾಮನು ಸದಾಚಾರಸಂಪನ್ನನಾದ, ಬಲ-ಪರಾಕ್ರಮಗಳಿಂದ ಯುಕ್ತನಾದ, ವೀರನಾದ ಸುಗ್ರೀವನಿಗೂ ಹೇಳಿದನು :

" ಸುಗ್ರೀವ ! ನೀನು ಪಟ್ಟಾಭಿಷಿಕ್ತನಾದನಂತರ ಈ ಅಂಗದನನ್ನು ವಿಧಿವತ್ತಾಗಿ ಯುವರಾಜನನ್ನಾಗಿ ಮಾಡಿಕೊ. ನಿನ್ನ ಅಣ್ಣನ ಜ್ಯೇಷ್ಠಪುತ್ರನಾಗಿರುವ, ತಂದೆಯ ಪರಾಕ್ರಮಕ್ಕೆ ಅನುರೂಪವಾದ ಪರಾಕ್ರಮವನ್ನು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಹೊಂದಿರುವ, ಧೀರ-ವೀರನಾದ ಈ ಅಂಗದನು ಯುವರಾಜಪದವಿಗೆ ಅತ್ಯಂತ ಯೋಗ್ಯನಾಗಿದ್ದಾನೆ.

ಮಳೆಯನ್ನು ಸುರಿಸುವ ಮಾಸಗಳೆಂದು ಪರಿಗಣಿಸಲ್ಪಟ್ಟಿರುವ ನಾಲ್ಕು ವಾರ್ಷಿಕಮಾಸಗಳಲ್ಲಿ ಈಗ ನಡೆಯುತ್ತಿರುವ ಶ್ರಾವಣಮಾಸವೇ ಮೊದಲನೆಯದು. ನಾಲ್ಕು ಮಾಸಗಳು ಮಳೆಗಾಲವಾದುದರಿಂದ ಈ ಕಾಲವು ಯಾವುದೇ ಕಾರ್ಯವನ್ನು ಮಾಡಲೂ ಯೋಗ್ಯವಾದ ಕಾಲವಾಗಿರುವುದಿಲ್ಲ. ಆದುದರಿಂದ ನೀನೀಗಲೇ ಪರಿವಾರದೊಡನೆ ಕಿಷ್ಕಿಂಧಾಪಟ್ಟಣಕ್ಕೆ ಹೋಗು. ನಾನು ಈ ಪರ್ವತದಲ್ಲಿಯೇ ಮಳೆಗಾಲವು ಕಳೆಯುವವರೆಗೂ ಇರುತ್ತೇನೆ.* ಇಲ್ಲಿರುವ ಈ ಗಿರಿಗುಹೆಯೂ ರಮ್ಯವಾಗಿದೆ. ವಿಶಾಲವಾಗಿದೆ. ಒಳ್ಳೆಯ ವಾತಾವರಣದಿಂದ ಕೂಡಿದೆ. ಇದರ ಸಮೀಪದಲ್ಲಿಯೇ ಕಮಲಗಳಿಂದಲೂ ಕನ್ನೈದಿಲೆಗಳಿಂದಲೂ ಸಮೃದ್ಧವಾಗಿರುವ ಜಲಪೂರ್ಣವಾದ ಸರೋವರವೂ ಇದೆ. ಕಾರ್ತಿಕಮಾಸವು ಪ್ರಾರಂಭವಾಗುತ್ತಲೇ ನೀನು ರಾವಣನ ವಧೆಗೆ (ಸೀತೆಯನ್ನು ಹುಡುಕಲು) ಪ್ರಯತ್ನಿಸು. ಇದು ನಮ್ಮ ಸಂಕೇತವಾಗಿ

---

*ಪೂರ್ವೋऽಯಂ ವಾರ್ಷಿಕೋ ಮಾಸಃ ಶ್ರಾವಣಃ–ಇದು ಶ್ಲೋಕದ ಪೂರ್ವಾರ್ಧ. ಶ್ರಾವಣಮಾಸವು ವರ್ಷರ್ತುವಿನ ಮೊದಲನೆಯ ಮಾಸ ಎಂಬುದು ಸಮಂಜಸವಾಗಿಯೇ ಇದೆ. ಶ್ರಾವಣ-ಭಾದ್ರಪದಗಳು ವರ್ಷರ್ತುವಿನ ಎರಡು ಮಾಸಗಳು. ಮುಂದೆ ಉತ್ತರಾರ್ಧದಲ್ಲಿ ಶ್ರೀರಾಮನು ಚತ್ವಾರೋ ಮಾಸಾಃ ವಾರ್ಷಿಕಸಂಜ್ಞಿಕಾಃ ನಾಲ್ಕು ಮಾಸಗಳು ವಾರ್ಷಿಕಸಂಜ್ಞೆಯಿಂದ ಕೂಡಿದುವುಗಳು ಎಂದು ಹೇಳುತ್ತಾನೆ. ಈ ಹಿಂದೆ ಹೇಳಿದಂತೆ ಶ್ರಾವಣಮಾಸವು ವಾರ್ಷಿಕಮಾಸವಾದರೆ ಮುಂದಿನ ಭಾದ್ರಪದ-ಅಶ್ವಯುಜ ಮತ್ತು ಕಾರ್ತಿಕ ಮಾಸಗಳು ವಾರ್ಷಿಕಸಂಜ್ಞೆಯನ್ನು ಪಡೆದಿರತಕ್ಕುವುಗಳು–ಎಂದು ಅರ್ಥವಾಗುತ್ತದೆ. ಆದರೆ ಮುಂದೆ ಬರುವ ಶ್ಲೋಕದಲ್ಲಿಯೇ ಶ್ರೀರಾಮನು 'ಕಾರ್ತಿಕೇ ಸಮನುಪ್ರಾಪ್ತೇ' ಎಂದು ಹೇಳುತ್ತಾನೆ. ಕಾರ್ತಿಕಮಾಸವು ಹುಟ್ಟಿದೊಡನೆಯೇ ರಾವಣನ ವಧೆಗಾಗಿ ಪ್ರಯತ್ನಿಸು–ಎನ್ನುತ್ತಾನೆ. ಮುಂದೆ ಕಾರ್ತಿಕಮಾಸವು ಪ್ರಾರಂಭವಾಗುತ್ತಲೇ ಶರದೃತುವಿನ ವರ್ಣನೆಯನ್ನು ಶ್ರೀರಾಮನು ಮಾಡುತ್ತಾನೆ. ಹೀಗಿರುವಾಗ ಚತ್ವಾರೋ ಮಾಸಾಃ ವಾರ್ಷಿಕಸಂಜ್ಞಿಕಾಃ ಎಂಬುದು ಹೇಗೆ ಸಮಂಜಸವಾಗುತ್ತದೆ? ಎಂಬುದಕ್ಕೆ ವ್ಯಾಖ್ಯಾನಕಾರರು ಬಗೆ-ಬಗೆಯಾಗಿ ವ್ಯಾಖ್ಯಾನಿಸಿದ್ದಾರೆ. 'ಪಕ್ಷಾ ವೈ ಮಾಸಾಃ' ಎಂದು ಶ್ರುತಿವಾಕ್ಯವಿರುವುದರಿಂದ ಶ್ರಾವಣ ಮೊದಲ್ಗೊಂಡು ಬರುವ ನಾಲ್ಕು ಪಕ್ಷಗಳೇ ನಾಲ್ಕು ವರ್ಷರ್ತುವಿನ ಮಾಸಗಳು–ಎಂದು ಒಬ್ಬ ವ್ಯಾಖ್ಯಾನಕಾರರು ಸಮಾಧಾನ ಹೇಳಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.


ರುತ್ತದೆ. ನೀನಿನ್ನು ಕಿಷ್ಕಿಂಧೆಗೆ ಹೋಗು. ಪಟ್ಟಾಭಿಷಿಕ್ತನಾಗಿ ಸುಹೃದರನ್ನು ಹರ್ಷಗೊಳಿಸು."[1]

ಶ್ರೀರಾಮನ ಅನುಜ್ಞೆಯಂತೆ ವಾನರಶ್ರೇಷ್ಠನಾದ ಸುಗ್ರೀವನು ವಾಲಿಯು ರಕ್ಷಿಸುತ್ತಿದ್ದ ಸುರಮ್ಯವಾದ ಕಿಷ್ಕಿಂಧೆಯನ್ನು ಪ್ರವೇಶಿಸಿದನು. ಅವನನ್ನೇ ಅಭಿನಂದಿಸುತ್ತಾ ಸಾವಿರಾರು ವಾನರರು ಸುತ್ತುವರಿದು ಅವನೊಡನೆ ನಗರವನ್ನು ಪ್ರವೇಶಿಸಿದರು. ಪಟ್ಟಣಗಳಲ್ಲಿಯೇ ಇದ್ದ ಪ್ರಜೆಗಳೆಲ್ಲರೂ ಸುಗ್ರೀವನನ್ನು ನೋಡಿ ಏಕಾಗ್ರಚಿತ್ತರಾಗಿ ದೀರ್ಘದಂಡನಮಸ್ಕಾರ ಮಾಡಿದರು. ಸುಗ್ರೀವನು ಎಲ್ಲರನ್ನೂ ಮೇಲೆಬ್ಬಿಸಿ ಅವರೊಡನೆ ಆದರಪೂರ್ವಕವಾಗಿ ಮಾತನಾಡಿ ಪ್ರಶಾಂತವಾಗಿದ್ದ ಅಣ್ಣನ ಅಂತಃಪುರವನ್ನು ಪ್ರವೇಶಿಸಿದನು. ಅನಂತರ ಹೊರಬಂದು ಸಭಾಮಂಟಪವನ್ನಲಂಕರಿಸಿದ ಸುಗ್ರೀವನಿಗೆ–ದೇವತೆಗಳು ಇಂದ್ರನಿಗೆ ಪಟ್ಟಗಟ್ಟಿದಂತೆ–ಸುಗ್ರೀವನ ಸುಹೃದರು ವಿಧಿವತ್ತಾಗಿ ಪಟ್ಟಾಭಿಷೇಕಮಾಡಿದರು. ಆ ಸಮಯದಲ್ಲಿ ಸುಗ್ರೀವನ ಪಟ್ಟಾಭಿಷೇಕಕ್ಕಾಗಿ ಕಪಿಮುಖ್ಯರು ಸುವರ್ಣಮಯವಾದ ಶ್ವೇತಚ್ಛತ್ರವನ್ನೂ, ಸುವರ್ಣಮಯವಾದ ದಂಡಗಳಿಂದ ಕೂಡಿದ್ದ ಕೀರ್ತಿಕರವಾದ ಎರಡು ಬಿಳಿಯ ಚಾಮರಗಳನ್ನೂ, ಸಕಲವಿಧವಾದ ರತ್ನಗಳನ್ನೂ,

---

ದ್ದಾರೆ. ಆದರೆ ಮುಂದೆ ಶ್ರೀರಾಮನು ಕಾರ್ತಿಕೇ ಸಮನುಪ್ರಾಪ್ತೇ–ಎಂದು ಕಾರ್ತಿಕಮಾಸವನ್ನೇ ನಿರ್ದೇಶಿಸಿ ಹೇಳಿರುವುದರಿಂದ ಆಶ್ವಯುಜಮಾಸವು ಬಿಟ್ಟೇಹೋಗುತ್ತದೆ. 'ಈ ಶ್ರಾವಣಮಾಸವು ಮಳೆಗರೆಯುವ ವರ್ಷರ್ತುವಿನ ಮೊದಲನೆಯ ಮಾಸವಾಗಿದೆ. ನಾಲ್ಕು ಮಾಸಗಳು (ಆಷಾಢ-ಶ್ರಾವಣ-ಭಾದ್ರಪದ-ಆಶ್ವಯುಜ ಮಾಸಗಳು) ಮಳೆಯುಳ್ಳ ಮಾಸಗಳೆಂದು ಪ್ರಸಿದ್ಧವಾಗಿವೆ.' ಹೀಗೆ ಅರ್ಥಮಾಡಿದರೆ ಎಲ್ಲವೂ ಹೊಂದಿಕೊಳ್ಳುತ್ತದೆ. ಇದನ್ನೇ ಒಬ್ಬ ವ್ಯಾಖ್ಯಾನಕಾರರು ಹೀಗೆ ಸಮರ್ಥಿಸಿದ್ದಾರೆ. ಆಶ್ವಯುಜಾಷಾಢಾಭ್ಯಾಂ ಚತುಷ್ಟ್ವಮಿತಿ ಜ್ಞೇಯಂ ಛತ್ರಿನ್ಯಾಯಾತ್ । ವರ್ಷಮುಖತ್ವಾದ್ವರ್ಷಾನಂತರಕಾಲತ್ವಾಚ್ಚ ಚತ್ವಾರೋಽಪಿ ಯುದ್ಧಯೋಗ್ಯಾ ನ ಭವನ್ತಿ ॥

1 ವ್ಯಾಖ್ಯಾನಕಾರರೊಬ್ಬರು ರಾಮನ ವನವಾಸಕಾಲವನ್ನು ಹೀಗೆ ಪಟ್ಟಿಮಾಡಿ ಹೇಳಿದ್ದಾರೆ: ಶ್ರೀರಾಮನು ಅಯೋಧ್ಯೆಯಿಂದ ಹೊರಟುದು ಚೈತ್ರಮಾಸದಲ್ಲಿ. ಅಗಸ್ತ್ಯಾಶ್ರಮಕ್ಕೆ ಬರುವ ವೇಳೆಗೆ ಹತ್ತು ವರ್ಷಗಳ ವನವಾಸವು ಕಳೆದಿರುತ್ತದೆ. ಮುಂದೆ ಪಂಚವಟಿಯಲ್ಲಿ ಮೂರು ವರ್ಷಗಳು. ಹದಿನಾಲ್ಕನೆಯ ವರ್ಷದ ಚೈತ್ರಮಾಸದಲ್ಲಿ ಶೂರ್ಪಣಖೆಯ ಕಿವಿ-ಮೂಗುಗಳನ್ನು ಕತ್ತರಿಸಿದುದು, ಖರವಧೆ ಇತ್ಯಾದಿಗಳು. ಅದೇ

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.

ಬೀಜಗಳನ್ನೂ, ಓಷಧಿರಸಗಳನ್ನೂ, ಆಗ ತಾನೇ ಕತ್ತರಿಸಿ ತೊಟ್ಟಿಕ್ಕುತ್ತಿದ್ದ ಹಾಲಿನಿಂದಲೂ ಚಿಗುರೆಲೆಗಳಿಂದಲೂ ಕೂಡಿದ್ದ ಮರದ ಎಳೆಕೊಂಬೆಗಳನ್ನೂ, ಕುಸುಮಗಳನ್ನೂ, ಬಿಳಿಯ ವಸ್ತ್ರಗಳನ್ನೂ, ಕರ್ಪೂರಾದಿ ಬಿಳಿಯ ಅನುಲೇಪನಗಳನ್ನೂ, ಸುಗಂಧಯುಕ್ತವಾದ ಪುಷ್ಪಮಾಲೆಗಳನ್ನೂ, ನೆಲದಲ್ಲಿ ಮತ್ತು ನೀರಿನಲ್ಲಿ ಬೆಳೆಯುವ ಕಮಲಪುಷ್ಪಗಳನ್ನೂ, ದಿವ್ಯಚಂದನಗಳನ್ನೂ, ಅಗರುವೇ ಮೊದಲಾದ ವಿಧ-ವಿಧವಾದ ಮತ್ತು ಅನೇಕಪ್ರಕಾರವಾದ ಗಂಧಗಳನ್ನೂ, ಸುವರ್ಣಮಯವಾದ ಅಕ್ಷತೆಯನ್ನೂ, ಹಿಪ್ಪಲಿಯನ್ನೂ, ನವಣೆ ಮುಂತಾದ ಧಾನ್ಯಗಳನ್ನೂ, ಜೇನುತುಪ್ಪವನ್ನೂ, ತುಪ್ಪವನ್ನೂ, ಮೊಸರನ್ನೂ, ಹುಲಿಯಚರ್ಮವನ್ನೂ, ಹಂದಿಯ ಚರ್ಮದ ಪಾದರಕ್ಷೆಗಳನ್ನೂ, ಅನುಲೇಪನದ್ರವ್ಯಗಳನ್ನೂ, ಗೋರೋಚನವನ್ನೂ, ಮಣಿಶಿಲೆಯನ್ನೂ ತಂದರು. ಪಟ್ಟಾಭಿಷೇಕದ ಸಮಯದಲ್ಲಿ ಮಂಗಳದ್ರವ್ಯಗಳೊಡನೆ ಶ್ರೇಷ್ಠರಾದ ಹದಿನಾರು ಮಂದಿ ಕನ್ಯೆಯರು ಸಂತೋಷದಿಂದ ಸುಗ್ರೀವನ ಬಳಿಗೆ ಆಗಮಿಸಿದರು. ಸುಗ್ರೀವನ ಸುಹೃದರು ರತ್ನ-ವಸ್ತ್ರಪ್ರದಾನಗಳಿಂದಲೂ, ಭಕ್ಷ್ಯ-ಭೋಜ್ಯಾದಿಗಳಿಂದಲೂ ಬ್ರಾಹ್ಮಣರನ್ನು ಸಂತೋಷಗೊಳಿಸಿ, ವಾನರಶ್ರೇಷ್ಠನಾದ ಸುಗ್ರೀವನಿಗೆ ಯಥಾವಿಧಿಯಾಗಿ ಅಭಿಷೇಕಮಾಡಲು ಪ್ರಾರಂಭಿಸಿದರು. ಮಂತ್ರಜ್ಞರು ದರ್ಭೆಯ ಪರಿಸ್ತರಣದಿಂದ ಸುಶೋಭಿತವಾಗಿ ಚೆನ್ನಾಗಿ ಹುತಮಾಡಲ್ಪಟ್ಟಿದ್ದ ಯಜ್ಞೇಶ್ವರನಲ್ಲಿ ಮಂತ್ರಪೂತವಾದ ಹವಿಸ್ಸುಗಳನ್ನು ಹೋಮಮಾಡಿದರು.

ಅನಂತರ ರಮ್ಯವಾದ ಪ್ರಾಸಾದದ ಅಗ್ರಭಾಗದಲ್ಲಿದ್ದ, ಸುವರ್ಣಮಯವಾದ, ನಾಲ್ಕು ಕಾಲುಗಳಿಂದ ಕೂಡಿದ್ದ, ಶ್ರೇಷ್ಠವಾದ ಮೇಲುಹೊದ್ದಿಕೆಯಿಂದ ಮುಚ್ಚಲ್ಪಟ್ಟಿದ್ದ, ಚಿತ್ರ-ವಿಚಿತ್ರವಾದ ಪುಷ್ಪಮಾಲೆಗಳಿಂದ ಅಲಂಕರಿ

---

ಚೈತ್ರಮಾಸದ ಕಡೆಯಲ್ಲಿ ರಾವಣನಿಂದ ಸೀತಾಪಹರಣ. ಅದೇ ವರ್ಷ ಆಷಾಢದಲ್ಲಿ ವಾಲಿಯ ವಧೆ; ಶ್ರಾವಣದಲ್ಲಿ ಸುಗ್ರೀವನ ಪಟ್ಟಾಭಿಷೇಕ. ಶ್ರಾವಣಮಾಸದಿಂದ ಕಾರ್ತಿಕಮಾಸದವರೆಗೆ ವಿಶ್ರಾಂತಿ. ಮಾರ್ಗಶೀರ್ಷದಲ್ಲಿ ಸೀತಾನ್ವೇಷಣೆಗಾಗಿ ವಾನರರ ಪ್ರಸ್ಥಾನ. ಅನಂತರ ಬಹುಕಾಲ ಸ್ವಯಂಪ್ರಭಾಬಿಲದಲ್ಲಿ ಕಾಲಯಾಪನೆ. ಫಾಲ್ಗುಣ ಶುದ್ಧತ್ರಯೋದಶಿಯಲ್ಲಿ ಹನುಮಂತನಿಂದ ಸಮುದ್ರೋಲ್ಲಂಘನ. ಚತುರ್ದಶಿಯ ದಿವಸ ಪುನರಾಗಮನ. ಪೌರ್ಣಮಾಸ್ಯೆಯಂದು ಶ್ರೀರಾಮನ ದಂಡಯಾತ್ರೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.


ಪಲ್ಪಟ್ಟ ಅತ್ಯಂತಶೋಭಾಯಮಾನವಾಗಿ ಕಾಣುತ್ತಿದ್ದ, ಶ್ರೇಷ್ಠವಾದ ಸಿಂಹಾಸನದಲ್ಲಿ ಕಪೀಶ್ವರನಾದ ಸುಗ್ರೀವನನ್ನು ಪೂರ್ವಾಭಿಮುಖವಾಗಿ ಕುಳ್ಳಿರಿಸಿದರು.

ಭೂಮಂಡಲದ ಎಲ್ಲ ನದೀ-ನದ-ಸಮುದ್ರಗಳಿಂದಲೂ ಸುವರ್ಣಮಯವಾದ ಕುಂಭಗಳಲ್ಲಿ ತಂದಿದ್ದ ಶುಭೋದಕಗಳನ್ನು ವಾನರಶ್ರೇಷ್ಠರಾದ ಗಜ, ಗವಾಕ್ಷ, ಗವಯ, ಶರಭ, ಗಂಧಮಾದನ, ಮೈಂದ, ದ್ವಿವಿದ, ಹನುಮಂತ, ಜಾಂಬವಂತ, ನಲ-ಇವರೆಲ್ಲರೂ ಎತ್ತಿನ ಕೊಂಬುಗಳಿಂದಲೂ, ಸುವರ್ಣಮಯವಾದ ಕಲಶಗಳಿಂದಲೂ ಮಹರ್ಷಿವಿಹಿತವಾದ ಮತ್ತು ಶಾಸ್ತ್ರ ದೃಷ್ಟವಾದ ವಿಧಿಯಿಂದ ಸುಗ್ರೀವನಿಗೆ ಅಭಿಷೇಕಮಾಡಿದರು. ಹೀಗೆ ಸುಗ್ರೀವನ ಸುಹೃದರು ತಿಳಿಯಾದ ಮತ್ತು ಸುಗಂಧಯುಕ್ತವಾಗಿದ್ದ ಆ ಶುಭಜಲದಿಂದ ದೇವತೆಗಳು ಇಂದ್ರನಿಗೆ ಅಭಿಷೇಕಮಾಡಿದಂತೆ – ಸುಗ್ರೀವನಿಗೆ ಅಭಿಷೇಕಮಾಡಿದರು. ಪಟ್ಟಾಭಿಷೇಕವಾದೊಡನೆಯೇ ಲಕ್ಷ-ಲಕ್ಷ ಸಂಖ್ಯೆಯಲ್ಲಿದ್ದ ಮಹಾತ್ಮರಾದ ಎಲ್ಲ ವಾನರಶ್ರೇಷ್ಠರೂ ಒಕ್ಕೊರಲಿನಿಂದ 'ಸುಗ್ರೀವನಿಗೆ ಜಯವಾಗಲಿ!'–ಎಂದು ಉಚ್ಚಧ್ವನಿಯಲ್ಲಿ ಜಯಘೋಷಗಳನ್ನು ಮಾಡಿದರು.

ಶ್ರೀರಾಮನ ಆದೇಶದಂತೆ ಸುಗ್ರೀವನು ಅಂಗದನನ್ನು ಗಾಢವಾಗಿ ಆಲಿಂಗನೆಮಾಡಿಕೊಂಡು ಭದ್ರಾಸನದಲ್ಲಿ ಕುಳ್ಳಿರಿಸಿ ಅವನಿಗೆ ಯುವರಾಜ ಪಟ್ಟಕಟ್ಟಿದನು. ಅಂಗದನಿಗೆ ಅಭಿಷೇಕವಾದ ಬಳಿಕ ಮಹಾತ್ಮರಾದ ಕಪಿಶ್ರೇಷ್ಠರು ಸುಗ್ರೀವನ ಆ ಕಾರ್ಯವನ್ನು ಶ್ಲಾಘಿಸುತ್ತಾ–'ಸಾಧು; ಸಾಧು ನೀನು ಮಾಡಿರುವುದು ಸಮಂಜಸವಾಗಿದೆ'–ಎಂದು ಅವನನ್ನು ಅಭಿನಂದಿಸಿದರು. ಸಕಲಸಂಭ್ರಮದೊಡನೆ ಪಟ್ಟಾಭಿಷೇಕಮಹೋತ್ಸವವು ಹೀಗೆ ನಡೆಯುತ್ತಿರುವಾಗ ವಾನರರೆಲ್ಲರೂ ಪರಮಪ್ರೀತರಾಗಿ ಆ ಸಮಾರಂಭಕ್ಕೆ ಕಾರಣಭೂತರಾದ ರಾಮ-ಲಕ್ಷ್ಮಣರನ್ನು ಬಾರಿ-ಬಾರಿಗೂ ಸ್ತೋತ್ರ ಮಾಡಿದರು.

ಗಿರಿಯ ಗುಹೆಯಲ್ಲಿದ್ದ ಕಿಷ್ಕಿಂಧಾಪಟ್ಟಣವು ಆ ಸಮಯದಲ್ಲಿ ಹೃಷ್ಟರಾದ ಮತ್ತು ಪುಷ್ಟರಾದ ಪ್ರಜೆಗಳಿಂದಲೂ, ಪತಾಕಾ-ಧ್ವಜಗಳಿಂದಲೂ,

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

ತಳಿರುತೋರಣಗಳಿಂದಲೂ ಶೋಭಾಯಮಾನವಾಗಿದ್ದು ಅತ್ಯಂತಸುಂದರವಾಗಿ ಕಂಗೊಳಿಸುತ್ತಿದ್ದಿತು.

ಅನಂತರ ವಾನರಸೇನಾಧೀಶನಾದ ವೀರ್ಯವಂತನಾದ ಸುಗ್ರೀವನು ಶ್ರೀರಾಮನ ಬಳಿಗೆ ಹೋಗಿ ತಾನು ಪಟ್ಟಾಭಿಷಿಕ್ತನಾದುದನ್ನೂ ಮತ್ತು ಅಂಗದನಿಗೆ ಯೌವರಾಜ್ಯಪಟ್ಟಾಭಿಷೇಕವನ್ನು ಮಾಡಿದುದನ್ನೂ ನಿವೇದಿಸಿದನು. ಹೀಗೆ ಸುಗ್ರೀವನು ಶ್ರೀರಾಮನ ಸಹಾಯದಿಂದ ಭಾರ್ಯೆಯಾದ ರುಮೆಯನ್ನು ಪಡೆದುಕೊಂಡು-ಇಂದ್ರನು ಮೂರು ಲೋಕಗಳ ಅಧಿಪತ್ಯವನ್ನು ಪಡೆದುಕೊಂಡಂತೆ-ಕಿಷ್ಕಿಂಧಾರಾಜ್ಯವನ್ನೂ ಪಡೆದುಕೊಂಡನು.

೨೬ನೆಯ ಸರ್ಗವು ಮುಗಿಯಿತು.

ಕಿಷ್ಕಿಂಧಾಕಾಂಡ ೨೭ನೆಯ ಸರ್ಗ

## ಪ್ರಸ್ರವಣಗಿರಿಯ ತಪ್ಪಲಿನಲ್ಲಿ ರಾಮ-ಲಕ್ಷ್ಮಣರ ಸಂಭಾಷಣೆ

ಅಭಿಷಿಕ್ತೇ ತು ಸುಗ್ರೀವೇ ಪ್ರವಿಷ್ಟೇ ವಾನರೇ ಗುಹಾಮ್ ।
ಆಜಗಾಮ ಸಹ ಭ್ರಾತ್ರಾ ರಾಮಃ ಪ್ರಸ್ರವಣಂ ಗಿರಿಮ್ ॥೧॥

ಪಟ್ಟಾಭಿಷಿಕ್ತನಾದ ಸುಗ್ರೀವನು ಶ್ರೀರಾಮನ ಬಳಿಗೆ ಬಂದು ಅವನ ಅನುಮತಿಯನ್ನು ಪಡೆದು ಕಿಷ್ಕಿಂಧೆಗೆ ಹಿಂದಿರುಗಿದ ನಂತರ ಶ್ರೀರಾಮನು ತಮ್ಮನಾದ ಲಕ್ಷ್ಮಣನೊಡನೆ ಪ್ರಸ್ರವಣಪರ್ವತಕ್ಕೆ ಬಂದನು. ಆ ಪರ್ವತವು ಹುಲಿಗಳಿಂದಲೂ ಇತರ ಮೃಗಗಳಿಂದಲೂ ನಿನಾದಿತವಾಗಿದ್ದಿತು. ಭಯಂಕರವಾದ ಸಿಂಹಗಳಿಂದ ವ್ಯಾಪ್ತವಾಗಿದ್ದಿತು. ಅನೇಕವಿಧವಾದ ಪೊದರುಗಳಿಂದಲೂ ಲತೆಗಳಿಂದಲೂ ಆಚ್ಛಾದಿತವಾಗಿದ್ದಿತು. ಅನೇಕವಿಧವಾದ ವೃಕ್ಷಗಳಿಂದ ಸಮಾಕುಲವಾಗಿದ್ದಿತು. ಕರಡಿ, ಕಪಿ, ಗೋಪುಚ್ಛ-ಬೆಕ್ಕು ಇವೇ ಮೊದಲಾದ ಪ್ರಾಣಿಗಳಿಗೆ ಆವಾಸಸ್ಥಾನವಾಗಿದ್ದಿತು. ಮೇಘಗಳ ರಾಶಿಯಂತೆಯೇ ಕಾಣುತ್ತಿದ್ದ ಆ ಪರ್ವತದಲ್ಲಿ ಸ್ವಚ್ಛವಾದ ಜಲಾಶಯಗಳಿದ್ದುವು. ಅಂತಹ ಪರ್ವತಕ್ಕೆ ರಾಮ-ಲಕ್ಷ್ಮಣರು ಆಗಮಿಸಿದರು. ಶ್ರೀರಾಮನು ಲಕ್ಷ್ಮಣನೊಡನೆ ವಾಸಮಾಡಿಕೊಂಡಿರಲು ಆ ಪರ್ವತದಲ್ಲಿ ದೊಡ್ಡದಾಗಿಯೂ ವಿಸ್ತಾರವಾಗಿಯೂ ಇದ್ದ ಗುಹೆಯೊಂದನ್ನು ಆರಿಸಿಕೊಂಡನು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.


ಸುಗ್ರೀವನೊಡನೆ ಸಮಯದ ಗಡುವನ್ನು ಮಾಡಿಕೊಂಡನಂತರ ಪುಣ್ಯಶಾಲಿಯಾದ ಶ್ರೀರಾಮನು ವಿನಯಶೀಲನಾದ ಲಕ್ಷ್ಮಣನಿಗೆ ತತ್ಕಾಲೋಚಿತವಾದ ಮಾತುಗಳನ್ನು ಹೇಳಿದನು :

"ಲಕ್ಷ್ಮಣ ! ಈ ಗಿರಿಗುಹೆಯು ಸುಂದರವಾಗಿದೆ. ವಿಶಾಲವಾಗಿದೆ. ಇಲ್ಲಿ ಆಹ್ಲಾದಕರವಾದ ವಾತಾವರಣವಿದೆ. ನಾವು ಮಳೆಗಾಲವು ಮುಗಿಯುವವರೆಗೂ ಈ ಗುಹೆಯಲ್ಲಿಯೇ ವಾಸಮಾಡಿಕೊಂಡಿರೋಣ. ಈ ಪ್ರಸ್ರವಣ ಪರ್ವತವಂತೂ ನೋಡಲು ಬಹಳ ರಮ್ಯವಾಗಿದೆ. ಇದರ ಶಿಖರವು ಸುಂದರವಾಗಿದ್ದು ಬಿಳಿ-ಕಪ್ಪು-ಕೆಂಪುಬಣ್ಣಗಳ ಕಲ್ಲುಗಳಿಂದ ಅತ್ಯಂತಶೋಭಾಯಮಾನವಾಗಿ ಕಾಣುತ್ತಿದೆ. ಈ ಪರ್ವತವು ನಾನಾವಿಧವಾದ ಗೈರಿಕಾದಿ ಧಾತುಗಳಿಂದ ವ್ಯಾಪ್ತವಾಗಿದ್ದು ಪೊಟರೆಗಳಿಂದಲೂ, ಝರಿಗಳಿಂದಲೂ ಕಳಕಳಿಸುತ್ತಿದೆ. ವಿಧ-ವಿಧವಾದ ವೃಕ್ಷಗಳ ಸಮೂಹಗಳಿಂದ ಕೂಡಿರುವ ಸುಂದರವಾದ ಮತ್ತು ಚಿತ್ರ-ವಿಚಿತ್ರವಾದ ಲತೆಗಳಿಂದ ತುಂಬಿಹೋಗಿದೆ. ನಾನಾವಿಧವಾದ ಪಕ್ಷಿಗಳಿಂದ ನಿನಾದಿತವಾಗಿಯೂ, ಮದಿಸಿದ ನವಿಲುಗಳ ಧ್ವನಿಗಳಿಂದ ಶಬ್ದಿತವಾಗಿಯೂ, ಮಾಲತೀ ಮತ್ತು ಕುಂದಗಳ ಪೊದರುಗಳಿಂದ ಸಮಲಂಕೃತವಾಗಿಯೂ ಇದೆ. ಸುಪುಷ್ಪಿತವಾದ ಸಿಂಧುವಾರ ವೃಕ್ಷಗಳಿಂದಲೂ, ಬಾಗೇಮರಗಳಿಂದಲೂ, ಕದಂಬವೃಕ್ಷಗಳಿಂದಲೂ, ಅರ್ಜುನ ವೃಕ್ಷಗಳಿಂದಲೂ, ಸರ್ಜವೃಕ್ಷಗಳಿಂದಲೂ ತುಂಬಿದ್ದು ಈ ಪರ್ವತದ ಶಿಖರವು ಅತ್ಯಂತಶೋಭಾಯಮಾನವಾಗಿ ಕಾಣುತ್ತಿದೆ. ವಿಕಸಿತವಾದ ಕಮಲಗಳಿಂದ ಸಮಲಂಕೃತವಾಗಿರುವ ಸರೋವರವೂ ನಮ್ಮ ಗುಹೆಗೆ ಹತ್ತಿರದಲ್ಲಿಯೇ ಇದೆ. ಶಿಖರದ ಈಶಾನ್ಯದಿಕ್ಕಿನ ಕೆಳಭಾಗದಲ್ಲಿ ಈ ಗುಹೆಯಿರುವುದರಿಂದ ಇದು ನಮ್ಮ ವಾಸಕ್ಕೆ ಬಹಳ ಯೋಗ್ಯವಾಗಿದೆ. ಗುಹೆಯ ನೈಋತ್ಯಭಾಗದಲ್ಲಿ ಎತ್ತರವಾದ ದಿಬ್ಬವಿರುವುದರಿಂದ ಗಾಳಿಯ ಹೊಡೆತವಿರುವುದಿಲ್ಲ. ಸಮನಾದ ವಾತಾವರಣವಿರುತ್ತದೆ. ಗುಹೆಯ ಬಾಗಿಲಿನಲ್ಲಿಯೇ ಕಾಡಿಗೆಯ ರಾಶಿಯಂತೆ ಕಪ್ಪಾಗಿಯೂ, ವಿಶಾಲವಾಗಿಯೂ, ಸಮತಟ್ಟಾಗಿಯೂ ಇರುವ ಮಂಗಳಕರವಾದ ಹಾಸುಬಂಡೆಯಿದೆ.

ಲಕ್ಷ್ಮಣ ! ನೀನು ಈ ಶಿಖರವನ್ನು ಉತ್ತರದಿಕ್ಕಿನಿಂದ ನೋಡು.



CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

ತುಂಡು-ತುಂಡಾದ ಕಾಡಿಗೆಗಳ ರಾಶಿಯಂತೆಯೂ–ಆಗ ತಾನೇ ಮೇಲೆದ್ದ
ಕಾರ್ಮುಗಿಲಿನಂತೆಯೂ ಕಾಣುತ್ತಿದೆ. ದಕ್ಷಿಣದಿಕ್ಕಿನಲ್ಲಿ ನಿಂತು ನೋಡಿದರೆ
ಕೈಲಾಸಪರ್ವತದ ಶಿಖರದಂತೆಯೇ ಕಾಣುತ್ತಿದ್ದು ನಾನಾವಿಧವಾದ ಗೈರಿಕಾದಿ
ಧಾತುಗಳಿಂದ ವಿರಾಜಿಸುತ್ತಾ ಮತ್ತೊಂದು ಶ್ವೇತಪರ್ವತದಂತೆಯೇ ಕಾಣು
ತ್ತಿದೆ. ಈ ಗುಹೆಯ ಪೂರ್ವದಿಕ್ಕಿನಲ್ಲಿ ಪೂರ್ವಕ್ಕೆ ಹರಿಯುವ ಸ್ವಲ್ಪ,
ವಾದರೂ ಕೆಸರಿಲ್ಲದಿರುವ, ತ್ರಿಕೂಟಪರ್ವತದಲ್ಲಿನ ಗಂಗಾನದಿಯಂತೆಯೇ
ಕಾಣುತ್ತಿರುವ ನದಿಯು ಹರಿಯುತ್ತಿದೆ. ಈ ನದಿಯ ತೀರಪ್ರದೇಶಗಳು
ಚಂದನ-ತಿಲಕವೃಕ್ಷಗಳಿಂದಲೂ, ತಾಳೇಮರ-ಹೊಂಗೇಮರಗಳಿಂದಲೂ,
ಪುಂಡ್ರಕೀಗಿಡಗಳಿಂದಲೂ, ಪದ್ಮಕ-ಸರಲವೃಕ್ಷಗಳಿಂದಲೂ, ಅಶೋಕವೃಕ್ಷ
ಗಳಿಂದಲೂ ಶೋಭಿತವಾಗಿದ್ದು ಈ ನದಿಯು ಅತ್ಯಂತಶೋಭಾಯಮಾನವಾಗಿ
ಕಾಣುತ್ತದೆ. ಎರಡು ತೀರಪ್ರದೇಶಗಳಲ್ಲಿಯೂ ಹುಟ್ಟಿ ಬೆಳೆದಿರುವ ನಿರು
ವಂಜಿಗಿಡಗಳಿಂದಲೂ, ಚಳ್ಳೀಗಿಡಗಳಿಂದಲೂ, ಕೇದಗೇಮರಗಳಿಂದಲೂ,
ಕಗ್ಗಲೀಮರಗಳಿಂದಲೂ, ನಿಮ್ಮಿಗಿಡಗಳಿಂದಲೂ, ಹಿಂತಾಳವೃಕ್ಷಗಳಿಂದಲೂ,
ಕದಂಬವೃಕ್ಷಗಳಿಂದಲೂ, ಬೆತ್ತದ ಗಿಡಗಳಿಂದಲೂ ಈ ನದಿಯು ವಸ್ತ್ರಾ
ಭರಣಗಳಿಂದ ಸಮಲಂಕೃತಳಾದ ಪ್ರಮದೆಯಂತೆಯೇ ಕಾಣುತ್ತಿದೆ.
ನಾನಾವಿಧವಾದ ಪಕ್ಷಿಗಳ ಸಮೂಹಗಳಿಂದ ಈ ನದಿಯು ಸಮಾವೃತವಾ
ಗಿದ್ದು ಅವುಗಳ ಕಲಕಲಧ್ವನಿಯಿಂದ ನಿನಾದಿತವಾಗಿದೆ. ಪರಸ್ಪರವಾಗಿ
ಅನುರಕ್ತವಾದ ಚಕ್ರವಾಕಪಕ್ಷಿಗಳಿಂದ ಸಮಲಂಕೃತವಾಗಿದೆ. ಅತ್ಯಂತ
ರಮಣೀಯವಾದ ಮರಳುದಿಣ್ಣೆಗಳಿಂದ ವ್ಯಾಪ್ತವಾಗಿರುವ, ಹಂಸ-ಸಾರಸಪಕ್ಷಿ
ಗಳಿಂದ ಸರ್ವಕಾಲಗಳಲ್ಲಿಯೂ ಸೇವಿಸಲ್ಪಡುತ್ತಿರುವ ಈ ನದಿಯು–ರತ್ನಾ
ಭರಣಗಳಿಂದ ಸಮಲಂಕೃತಳಾಗಿ ನಸುನಗುತ್ತಿರುವ ಹೆಂಗಸಿನಂತೆಯೇ
ಪ್ರಕಾಶಮಾನವಾಗಿ ಕಾಣುತ್ತಿದೆ. ಈ ನದಿಯ ಕೆಲವು ಕಡೆಗಳಲ್ಲಿ ಕಪ್ಪಾದ
ಕನ್ನೈದಿಲೆಗಳೂ, ಕೆಲವು ಕಡೆಗಳಲ್ಲಿ ಕೆಂಪಾದ ಕಮಲಪುಷ್ಪಗಳೂ ಇದ್ದು
ಅತ್ಯಂತಪ್ರಕಾಶಮಾನವಾಗಿ ಕಾಣುತ್ತಿದೆ. ಕೆಲವು ಕಡೆಗಳಲ್ಲಿ ಈ ನದಿಯು
ಬೆಳ್ದಾವರೆಗಳಿಂದ ವ್ಯಾಪ್ತವಾಗಿದ್ದು ಶೋಭಾಯಮಾನವಾಗಿ ಕಾಣುತ್ತಿದೆ.
ಕೆಲವು ಕಡೆಗಳಲ್ಲಿ ದಿವ್ಯವಾದ ಕಮಲದ ಮೊಗ್ಗುಗಳಿಂದ ಕೂಡಿದ್ದು ಬಹಳ
ಸುಂದರವಾಗಿ ಕಾಣುತ್ತಿದೆ. ನೂರಾರು ಜಲಚರಪ್ರಾಣಿಗಳಿಗೆ ಆಶ್ರಯ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ವಾಗಿರುವ ಈ ನದಿಯು ನವಿಲುಗಳಿಂದಲೂ ಕ್ರೌಂಚಪಕ್ಷಿಗಳಿಂದಲೂ ನಿನಾದಿತ ವಾಗಿದೆ. ಮುನಿಗಳ ಸಮೂಹಗಳಿಂದ ಸೇವಿಸಲ್ಪಡುತ್ತಿರುವ ಸೌಮ್ಯವಾದ ಪ್ರವಾಹದಿಂದ ಕೂಡಿರುವ ಈ ನದಿಯು ಅತ್ಯಂತರಮಣೀಯವಾಗಿದೆ.

ಈ ನದಿಯು ಎರಡು ತೀರಗಳಲ್ಲಿಯೂ ಹೀಗೆಯೇ ಇರಬೇಕೆಂದು ಸಂಕಲ್ಪಿಸಿ ಒಂದೇ ಬಾರಿಗೆ ಮೇಲೆದ್ದು ನಿಂತಿವೆಯೋ ಎಂಬಂತೆ ಕಾಣುತ್ತಿರುವ ಚಂದನವೃಕ್ಷಗಳ ಮತ್ತು ಕಕುಭವೃಕ್ಷಗಳ ಸಾಲುಗಳನ್ನು ನೋಡು, ತಮ್ಮ! ನಿಶ್ಚಯವಾಗಿಯೂ ಈ ಪ್ರದೇಶವು ಅತ್ಯಂತಮನೋಹರವಾಗಿದೆ. ನಾವಿಲ್ಲಿ ಸುಖವಾಗಿ ವಾಸಮಾಡಿಕೊಂಡಿರೋಣ. ಯಥೇಚ್ಛವಾಗಿ ವಿಹರಿಸೋಣ. ವಿಚಿತ್ರವಾದ ಅರಣ್ಯದಿಂದ ಸಮಾವೃತವಾಗಿರುವ ಬಹುರಮ್ಯವಾಗಿರುವ ಸುಗ್ರೀವನ ಕಿಷ್ಕಿಂಧಾಪಟ್ಟಣವು ಇಲ್ಲಿಗೆ ಸ್ವಲ್ಪದೂರದಲ್ಲಿಯೇ ಇದೆ. ಕಿಷ್ಕಿಂಧೆಯಲ್ಲಾಗುತ್ತಿರುವ ಗಾಯನ ಮತ್ತು ವಾದ್ಯವಿಶೇಷಗಳ ಧ್ವನಿಯು ಇಲ್ಲಿಗೂ ಕೇಳಿಸುತ್ತದೆ. ಮೃದಂಗಾದಿಗಳ ಆಡಂಬರಗಳೊಡನೆ ಕೋಲಾಹಲ ಧ್ವನಿಮಾಡುತ್ತಿರುವ ವಾನರರ ಗರ್ಜನೆಗಳೂ ಇಲ್ಲಿಗೆ ಕೇಳಿಸುತ್ತವೆ. ಕಪಿ ಶ್ರೇಷ್ಠನಾದ ಸುಗ್ರೀವನು ಭಾರ್ಯೆಯನ್ನೂ ರಾಜ್ಯವನ್ನೂ ಪಡೆದು ಮಹೈಶ್ವರ್ಯವನ್ನೂ ಹೊಂದಿ ಸುಹೃದರೊಡನೆ ನಿಶ್ಚಯವಾಗಿಯೂ ಆನಂದ ಪಡುತ್ತಾನೆ."

ಹೀಗೆ ಶ್ರೀರಾಮನು ಪ್ರಸ್ರವಣಗಿರಿಯ ಸುತ್ತಮುತ್ತಲಿನ ಎಲ್ಲ ಪ್ರದೇಶಗಳನ್ನು ಲಕ್ಷ್ಮಣನಿಗೆ ವರ್ಣಿಸಿ ಹೇಳಿದನು. ಪ್ರೇಕ್ಷಣೀಯವಾದ ಅನೇಕ ದರಿಗಳಿಂದಲೂ ಲತೆಗಳ ಪೊದರುಗಳಿಂದಲೂ ಕೂಡಿದ್ದ ಆ ಗಿರಿಗುಹೆ ಯಲ್ಲಿ ಶ್ರೀರಾಮನು ಲಕ್ಷ್ಮಣನೊಡನೆ ವಾಸಮಾಡತೊಡಗಿದನು.

ಸೀತೆಯು ಶ್ರೀರಾಮನಿಗೆ ಪ್ರಾಣಗಳಿಗಿಂತಲೂ ಪ್ರಿಯಳಾದವಳು. ರಾಕ್ಷಸನಿಂದ ಅಪಹೃತಳಾಗಿದ್ದ ಆ ಭಾರ್ಯೆಯನ್ನು ಅಡಿಗಡಿಗೂ ಸ್ಮರಿಸಿ ಕೊಳ್ಳುತ್ತಿದ್ದ ಶ್ರೀರಾಮನಿಗೆ ಪುಷ್ಪ-ಫಲಸಮೃದ್ಧವಾಗಿದ್ದ ಅತ್ಯಂತಸುಖಾ ವಹವಾಗಿದ್ದ ಗಿರಿಗುಹೆಯ ವಾಸವೂ ಸಂತೋಷದಾಯಕವಾಗಿರಲಿಲ್ಲ. ಅದ ರಲ್ಲಿಯೂ ವಿಶೇಷವಾಗಿ ಉದಯಾಚಲದಿಂದ ಹುಟ್ಟಿದ ಚಂದ್ರನನ್ನು ನೋಡಿ ದೊಡನೆಯೇ ಶ್ರೀರಾಮನು ಸಂತೋಷಪಡುವುದಕ್ಕಿಂತಲೂ ಹೆಚ್ಚಾಗಿ ದುಃಖ

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.



ವನ್ನೇ ಅನುಭವಿಸುತ್ತಿದ್ದನು. ರಾತ್ರಿಯಲ್ಲಿ ಅವನಿಗೆ ನಿದ್ರೆಯೂ ಬರುತ್ತಿರಲಿಲ್ಲ. ಭಾರ್ಯಾವಿರಹಶೋಕದಿಂದ ಶ್ರೀರಾಮನು ಯಾವಾಗಲೂ ಕಣ್ಣೀರು ಸುರಿಸುತ್ತಿದ್ದನು. ಅವನ ಮನಸ್ಸು ಕಂಗೆಟ್ಟುಹೋಗಿದ್ದಿತು. ನಿತ್ಯವೂ ಶೋಕಪರಾಯಣನಾಗಿಯೇ ಇರುತ್ತಿದ್ದನು. ಸುಖವಾಗಿರಬೇಕೆಂದು ಲಕ್ಷ್ಮಣನೊಡನೆ ಹೇಳಿದ್ದವನು ಒಂದು ದಿವಸವಾದರೂ ಪ್ರಕೃತಿಯ ಆ ಸೊಬಗಿನ ಸುಖವನ್ನು ಅನುಭವಿಸಲಿಲ್ಲ. ಲಕ್ಷ್ಮಣನಿಗೂ ಅದೇ ಪರಿಯಾದ ದುಃಖವಿದ್ದಿತು. ಆದರೂ ಸಮಾಧಾನವನ್ನು ತಂದುಕೊಂಡು ಅಣ್ಣನನ್ನು ಸಂತೈಸುತ್ತಾ ಹೇಳಿದನು:

ಅಲಂ ವೀರ ವ್ಯಥಾಂ ಗತ್ವಾ ನ ತ್ವಂ ಶೋಚಿತುಮರ್ಹಸಿ ।
ಶೋಚತೋ ಹ್ಯವಸೀದನ್ತಿ ಸರ್ವಾರ್ಥಾ ವಿದಿತಂ ಹಿ ತೇ ॥೩೨॥

“ವೀರನೇ! ಶೋಕವನ್ನು ಸಾಕುಮಾಡು. ಶೋಕಪಡುವುದು ನಿನ್ನಂತಹವನಿಗೆ ಉಚಿತವಲ್ಲ. ಶೋಕಪಡುತ್ತಲೇ ಇರುವ ಜನರ ಎಲ್ಲ ಕಾರ್ಯಗಳೂ ಹಾಳಾಗುತ್ತವೆಯೆಂಬ ವಿಷಯವು ನಿನಗೆ ತಿಳಿಯದೇ ಇಲ್ಲ.

ನೀನು ಯಾವಾಗಲೂ ಕಾರ್ಯತತ್ಪರನಾಗಿರತಕ್ಕವನು. ದೈವವನ್ನೇ ಆಶ್ರಯಿಸಿರತಕ್ಕವನು. ಆಸ್ತಿಕನು. ಧರ್ಮಶೀಲನು ಮತ್ತು ಉದ್ಯೋಗಶೀಲನು. ನೀನೇನಾದರೂ ಶೋಕದಿಂದ ಉದ್ಯೋಗಶೀಲನಾಗದಿದ್ದರೆ ವಂಚಕನಾದ ಶತ್ರುವನ್ನು, ಅದರಲ್ಲಿಯೂ ವಿಶೇಷವಾಗಿ ರಾಕ್ಷಸನನ್ನು ಪರಾಕ್ರಮಗಳಿಂದ ಸಂಹರಿಸಲು ಸಮರ್ಥನಾಗುವುದಿಲ್ಲ. ನಿನಗುಂಟಾಗಿರುವ ಶೋಕವನ್ನು ಬೇರುಸಹಿತವಾಗಿ ಕಿತ್ತುಹಾಕು, ಉದ್ಯೋಗಶೀಲನಾಗು. ನೀನು ಕಾರ್ಯದಲ್ಲಿ ತೊಡಗಿದಾಗಲೇ ರಾಕ್ಷಸನನ್ನು ಪರಿವಾರದೊಡನೆ ಸಂಹರಿಸಲು ಸಮರ್ಥನಾಗುವೆ. ನೀನು ಸಾಗರ-ವನ-ಪರ್ವತಗಳಿಂದ ಕೂಡಿರುವ ಈ ಭೂಮಿಯನ್ನೇ ತಲೆಕೆಳಗುಮಾಡಲು ಸಮರ್ಥನಾಗಿರುವಾಗ ರಾವಣನೊಬ್ಬನ ವಿಷಯವಾಗಿ ಹೇಳತಕ್ಕದ್ದೇನಿದೆ? ಅಣ್ಣ! ಈಗ ತಾನೇ ವರ್ಷಾಕಾಲವು ಪ್ರಾರಂಭವಾಗಿದೆ. ಶರತ್ಕಾಲವು ಬರುವವರೆಗೂ ಸ್ವಲ್ಪ ಸಮಾಧಾನದಿಂದಿರು. ಆನಂತರ ರಾಷ್ಟ್ರಪರಿವಾರಗಳೊಂದಿಗೆ ರಾವಣನನ್ನು ಸಂಹರಿಸುವೆಯಂತೆ. ಬೂದಿಮುಚ್ಚಿದ ಕೆಂಡವನ್ನು ಬೇಕಾದ ಸಮಯಗಳಲ್ಲಿ ಆಹುತಿಗಳಿಂದ ಉದ್ದೀಪನಗೊಳಿಸಿ ಪ್ರಜ್ವಲಿಸುವಂತೆ, ನಾನು ನಿನ್ನಲ್ಲಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಪ್ರಸುಪ್ತವಾಗಿರುವ ಪರಾಕ್ರಮವನ್ನು ಯಥಾಸಮಯದಲ್ಲಿ ಉದ್ದೀಪನಗೊಳಿಸುತ್ತೇನೆ."

ಶ್ರೀರಾಮನು ಲಕ್ಷ್ಮಣನ ಹಿತಕರವೂ ಶುಭಕರವೂ ಆದ ಆ ಮಾತುಗಳನ್ನು ಗೌರವಿಸುತ್ತಾ ಸೌಹಾರ್ದಪೂರ್ವಕವಾದ ಮತ್ತು ಪ್ರೀತಿಪೂರ್ವಕವಾದ ಮಾತನ್ನು ಹೇಳಿದನು :



"ಲಕ್ಷ್ಮಣ! ಅನುರಕ್ತನಾದವನು, ಸ್ನೇಹಪರನಾದವನು, ಹಿತಚಿಂತಕನು, ಸತ್ಯನಿಷ್ಠನು ಮತ್ತು ಪರಾಕ್ರಮಿಯು ಯಾವ ಮಾತನ್ನು ಹೇಳಬೇಕೋ ಅದೇ ಮಾತನ್ನೇ ನೀನೂ ಹೇಳಿರುವೆ. ಸರ್ವಕಾರ್ಯಗಳಿಗೂ ವಿಘಾತವನ್ನುಂಟುಮಾಡುತ್ತಾ ನನ್ನ ಪರಾಕ್ರಮವನ್ನೇ ವಿಸ್ಮರಣೆಗೊಳಿಸು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ತ್ತಿರುವ ಈ ಶೋಕವನ್ನು ತೊರೆಯುತ್ತೇನೆ. ಪರಾಕ್ರಮವನ್ನು ತೋರಿಸ ಬೇಕಾದ ಸಮಯದಲ್ಲಿ ನನ್ನ ಅಪ್ರತಿಹತವಾದ ತೇಜಸ್ಸನ್ನು ಉದ್ದೀಪನ ಗೊಳ್ಳುವಂತೆ ಮಾಡುತ್ತೇನೆ. ನಿನ್ನ ಮಾತಿನಂತೆಯೇ ನಡೆದುಕೊಳ್ಳಲು ಬಯಸಿರುವ ನಾನು ಸುಗ್ರೀವನ ಅನುಗ್ರಹವನ್ನೂ, ಈಗ ತುಂಬಿಹರಿಯುತ್ತಿ ರುವ ನದಿಗಳ ಪ್ರಸನ್ನತೆಯನ್ನೂ ಪಡೆದುಕೊಳ್ಳುವ ಸಲುವಾಗಿ ಶರತ್ಕಾಲದ ವರೆಗೂ ನಿರೀಕ್ಷಣೆಮಾಡುತ್ತೇನೆ.

ಉಪಕಾರೇಣ ವೀರಸ್ತು ಪ್ರತಿಕಾರೇಣ ಯುಜ್ಯತೇ ।
ಅಕೃತಜ್ಞೋಽಪ್ರತಿಕೃತೋ ಹನ್ತಿ ಸತ್ತ್ವವತಾಂ ಮನಃ ॥೪೩॥

ಉಪಕಾರವನ್ನು ಪಡೆದ ವೀರನು ಪ್ರತ್ಯುಪಕಾರವನ್ನು ಮಾಡಿಯೇ ತೀರಬೇಕು. ಪಡೆದ ಉಪಕಾರವನ್ನು ಮರೆತು ಪ್ರತ್ಯುಪಕಾರಮಾಡದವನು ಧೀರರಾದ ಸತ್ಪುರುಷರ ಮನಸ್ಸನ್ನು ಕೆಡಿಸುತ್ತಾನೆ."

ಶ್ರೀರಾಮನು ಹೀಗೆ ಹೇಳಲು ಲಕ್ಷ್ಮಣನು ಅವನಿಗೆ ನಮಸ್ಕರಿಸಿ ಕೈಮುಗಿದು ಅವನ ಮಾತನ್ನು ಶ್ಲಾಘಿಸಿದನು. ಶುಭಪ್ರದವಾದ ತನ್ನ ಅಭಿ ಪ್ರಾಯವನ್ನು ವ್ಯಕ್ತಪಡಿಸುತ್ತಾ ಆನಂದದರ್ಶನನಾದ ಶ್ರೀರಾಮನಿಗೆ ಲಕ್ಷ್ಮಣನು ಪುನಃ ಹೇಳಿದನು :

"ನರೇಂದ್ರನೇ ! ನೀನು ಹೇಳಿದಂತೆಯೇ ಸರಿ. ನಮ್ಮ ಅಪೇಕ್ಷೆ ಯೆಲ್ಲವನ್ನೂ ನಿನ್ನ ಆಜ್ಞೆಯಂತೆ ಸುಗ್ರೀವನು ನಡೆಸಿಕೊಡುತ್ತಾನೆ. ಶತ್ರು ನಿಗ್ರಹದಲ್ಲಿ ದೃಢಸಂಕಲ್ಪನಾಗಿರುವ ನೀನು ವರ್ಷಾಕಾಲವು ಮುಗಿಯುವ ವರೆಗೆ ಸಹನೆಯಿಂದಿರು. ಶರತ್ಕಾಲವನ್ನು ಎದುರುನೋಡುತ್ತಿರು. ಶತ್ರು ವಧೆಯಲ್ಲಿ ಉದ್ಯುಕ್ತನಾಗಿರುವ ನೀನು ಭಾರ್ಯಾಪಹರಣದಿಂದಾಗಿ ರಾಕ್ಷಸನ ಮೇಲೆ ಉಂಟಾಗಿರುವ ಕೋಪವನ್ನು ತಾತ್ಕಾಲಿಕವಾಗಿ ಉಪಶಮನಗೊಳಿಸು. ಶರತ್ಕಾಲವನ್ನು ಎದುರುನೋಡುತ್ತಿರು. ನಾಲ್ಕು ತಿಂಗಳ ಪರ್ಯಂತವಾಗಿ ಸಿಂಹಗಳಿಂದ ಆಶ್ರಯಿಸಲ್ಪಟ್ಟಿರುವ ಈ ಪರ್ವತದಲ್ಲಿ ಸಂಚರಿಸುತ್ತಾ ನನ್ನೊಡನೆ ವಾಸಮಾಡುತ್ತಿರು."

೨೭ನೆಯ ಸರ್ಗವು ಮುಗಿಯಿತು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಕಿಷ್ಕಿಂಧಾಕಾಂಡ ೨೮ನೆಯ ಸರ್ಗ

## ವರ್ಷರ್ತುವಿನ ವರ್ಣನೆ

ಸ ತಥಾ ವಾಲಿನಂ ಹತ್ವಾ ಸುಗ್ರೀವಮಭಿಷಿಚ್ಯ ಚ ।
ವಸನ್ಮಾಲ್ಯವತಃ ಪೃಷ್ಠೇ ರಾಮೋ ಲಕ್ಷ್ಮಣಮಬ್ರವೀತ್ ॥೧॥

ಹೀಗೆ ಶ್ರೀರಾಮನು ವಾಲಿಯನ್ನು ಕೊಂದು ಸುಗ್ರೀವನಿಗೆ ಪಟ್ಟಾಭಿಷೇಕವನ್ನು ಮಾಡಿಸಿ ಮಾಲ್ಯವತ್ಪರ್ವತದ ಹಿಂಭಾಗದಲ್ಲಿ ವಾಸಮಾಡುತ್ತಿರುವಾಗ ಒಮ್ಮೆ ಲಕ್ಷ್ಮಣನಿಗೆ ಹೇಳಿದನು :

"ಲಕ್ಷ್ಮಣ ! ಹಲವಾರು ದಿವಸಗಳಿಂದ ನಿರೀಕ್ಷಿಸುತ್ತಿದ್ದ ವರ್ಷಾಕಾಲವು ಈಗ ಬಂದಿದೆ. ಪರ್ವತಾಕಾರದ ಮೇಘಗಳಿಂದ ಆಕಾಶವು ಮುಚ್ಚಿಹೋಗಿರುವುದನ್ನು ನೋಡು. ಆಕಾಶವು ಹಿಂದೆ ಸೂರ್ಯಕಿರಣಗಳ ಮೂಲಕವಾಗಿ ಸಮುದ್ರಗಳ ನೀರನ್ನು ಕುಡಿದು ಒಂಬತ್ತು ಮಾಸಗಳವರೆಗೂ ತನ್ನ ಗರ್ಭದಲ್ಲಿ ಧಾರಣೆಮಾಡಿಕೊಂಡಿದ್ದು ಈಗ ಷಡ್ರಸಗಳಿಗೂ ಕಾರಣಭೂತವಾದ ನೀರನ್ನು ಸುರಿಸುತ್ತದೆ. ಮೇಘರೂಪವಾದ ಸೋಪಾನದ ಮೆಟ್ಟಲುಗಳ ಮೂಲಕವಾಗಿ ಆಕಾಶಕ್ಕೆ ಹತ್ತಿ ಶುಭ್ರವಾದ ಬೆಟ್ಟದ ಮಲ್ಲಿಗೆ ಹೂಗಳ ಮಾಲಿಕೆಗಳಿಂದ ಸೂರ್ಯನನ್ನು ಅಲಂಕರಿಸಲು ಈ ಸಮಯದಲ್ಲಿ ಶಕ್ಯವಾಗುತ್ತದೆ. ಸಂಧ್ಯಾರಾಗದಿಂದ ನೆನೆಸಿ ಕೆಂಪಾಗಿರುವ, ಅಂಚುಗಳಲ್ಲಿ ಬೆಳ್ಳಗಿರುವ, ನೀರಿನಿಂದ ಒದ್ದೆಯಾಗಿರುವ, ಬಿಳೀಮೋಡಗಳ ತುಂಡುಗಳಿಂದ ಕೂಡಿರುವ ಆಕಾಶವು–ಅಂಚುಗಳಲ್ಲಿ ಬೆಳ್ಳಗಿರುವ ಮತ್ತು ತೋಯ್ದುಹೋಗಿರುವ ಕೆಂಪು ಬಟ್ಟೆಯ ಚೂರುಗಳಿಂದ ಕಟ್ಟಲ್ಪಟ್ಟ ಗಾಯಗಳುಳ್ಳವನಂತೆ ಕಾಣುತ್ತಿದೆ.* ಮಂದಮಾರುತವೆಂಬ ನಿಃಶ್ವಾಸದಿಂದ ಕೂಡಿದ ಸಂಧ್ಯಾರಾಗವೆಂಬ ಕೆಂಪುಚಂದನದಿಂದ ಶೋಭಿತವಾಗಿರುವ, ಎಲ್ಲ ಕಡೆ

* ಸಂಧ್ಯಾರಾಗದಿಂದ ಕೆಂಪಾಗಿಯೂ, ತುದಿಯಲ್ಲಿ ಬೆಳ್ಳಗೂ, ಬಹುಮೃದುವಾಗಿಯೂ ಇರುವ ಮೇಘಗಳೆಂಬ ವಸ್ತ್ರಗಳ ಚೂರುಗಳಿಂದ ಕಟ್ಟಲ್ಪಟ್ಟ ಗಾಯಗಳುಳ್ಳವನಂತೆ ಅಂಬರತಲವು ಕಾಣುತ್ತಿದೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಗಳಲ್ಲಿಯೂ ಬೆಳ್ಳಗಿರುವ, ಮೋಡಗಳಿಂದ ಸಮಾವೃತವಾಗಿರುವ ಆಕಾಶವು ಕಾಮಾತುರವಾಗಿರುವಂತೆ ಕಾಣುತ್ತಿದೆ.*

ಬಿಸಿಲಿನಿಂದ ಪರಿತಪಿಸುತ್ತಿದ್ದ ಈ ಭೂಮಿಯು ನೂತನವಾದ ನೀರಿನಿಂದ ತೋಯಿಸಲ್ಪಟ್ಟು ಹಬೆಯನ್ನು ಹೊರಸೂಸುತ್ತಾ ವಿರಹವೇದನೆಯಿಂದ ಶೋಕತಪ್ತಳಾದ ಸೀತೆಯಂತೆ ಕಂಬನಿಗರೆಯುತ್ತಿರುವುದೋ ಎಂಬಂತೆ ಕಾಣುತ್ತಿದೆ.[1] ಮೇಘದ ಮಧ್ಯಭಾಗದಿಂದ ಹೊರಬರುತ್ತಿರುವ, ಕಲ್ಹಾರಪುಷ್ಪಗಳಿಂದ ಸುಖಕರವೂ ಶೀತಲವೂ ಆಗಿರುವ, ಕೇತಕೀಪುಷ್ಪಗಳ ವಾಸನೆಯನ್ನು ಹೊಂದಿರುವ ಈ ತಂಗಾಳಿಯನ್ನು ಬೊಗಸೆಯಿಂದ ಕುಡಿಯಬಹುದೇನೋ–ಎಂದೆನಿಸುತ್ತದೆ. ಪುಷ್ಪಿತವಾದ ಅರ್ಜುನವೃಕ್ಷಗಳಿಂದ ಕೂಡಿರುವ ಕೇದಗೇ ಹೂಗಳ ವಾಸನೆಯಿಂದ ವಾಸಿತವಾಗಿರುವ ಈ ಪರ್ವತವು–ಪ್ರಶಾಂತಶತ್ರುವಾದ ಸುಗ್ರೀವನು ಅಭಿಷಿಕ್ತನಾದಂತೆ–ವರ್ಷಧಾರೆಗಳಿಂದ ಅಭಿಷೇಚಿಸಲ್ಪಡುತ್ತಿದೆ. ಮೇಘರೂಪವಾದ ಕೃಷ್ಣಾಜಿನವನ್ನೂ ವರ್ಷಧಾರಾರೂಪವಾದ ಯಜ್ಞೋಪವೀತವನ್ನೂ ಧರಿಸಿರುವ, ಗಾಳಿಯಿಂದ ತುಂಬಲ್ಪಟ್ಟು ಶಬ್ದಮಾಡುತ್ತಿರುವ ಗುಹೆಗಳಿಂದ ಕೂಡಿರುವ ಈ ಪರ್ವತಗಳು ವೇದಶಾಸ್ತ್ರಗಳನ್ನು ಅಧ್ಯಯನಮಾಡುತ್ತಿರುವ ಬ್ರಾಹ್ಮಣರಂತೆಯೇ ಕಾಣುತ್ತಿವೆ. ಆಕಾಶವು ಮಿಂಚುಗಳೆಂಬ ಸುವರ್ಣಮಯವಾದ ಚಾವಟಿಗಳಿಂದ ಹೊಡೆಯಲ್ಪಟ್ಟು

---

* ಕಾಮಾತುರನು ತನ್ನ ಪ್ರೇಯಸಿಯನ್ನು ನೆನಸಿಕೊಂಡು ಕ್ಷಣ-ಕ್ಷಣಕ್ಕೂ ನಿಟ್ಟುಸಿರು ಬಿಡುತ್ತಿರುತ್ತಾನೆ. ಮಂದಮಾರುತವೇ ಆಕಾಶದ ನಿಃಶ್ವಾಸರೂಪವಾಗಿದೆ. ಕಾಮಿಯು ಪ್ರೇಯಸಿಯ ಸಲುವಾಗಿ ಚಂದನಚರ್ಚಿತನಾಗಿರುತ್ತಾನೆ. ಆಕಾಶವು ಸಂಜೆಯ ಎಣೆಗೆಂಪಿನಿಂದ ಶೋಭಾಯಮಾನವಾಗಿದೆ. ಪ್ರೇಯಸಿಯನ್ನು ಕಾಣದ ಕಾಮಿಯ ಮುಖವು ಬಿಳಿಚಿಕೊಂಡಿರುತ್ತದೆ. ತೇಜೋಹೀನವಾಗಿರುತ್ತದೆ. ಆಕಾಶವು ಬಿಳಿಯ ಮೋಡಗಳಿಂದ ಆವೃತವಾಗಿದೆ. ಆದುದರಿಂದ ಶ್ರೀರಾಮನ ಕಣ್ಣಿಗೆ ಆಕಾಶವು ಕಾಮಾತುರನಂತೆ ಕಾಣುತ್ತದೆ. ಕಾಮೀಸ್ವತಾಂ ಪಶ್ಯತಿ–ಎಂಬಂತೆ ಕಾಮಿಯು ತನ್ನ ಸಾಮ್ಯವನ್ನೇ ಪ್ರಕೃತಿಯಲ್ಲೂ ನೋಡುತ್ತಾನೆ.

[1] ಭೂದೇವಿಯು ಬಿಸಿಲಿನಿಂದ ತಪ್ತಳಾಗಿದ್ದಾಳೆ. ಸೀತಾದೇವಿಯು ಶೋಕದಿಂದ ತಪ್ತಳಾಗಿದ್ದಾಳೆ. ಸೀತೆಯು ಕಂಬನಿಗರೆಯುತ್ತಾಳೆ. ನವೋದಕವು ಭೂಮಿಯ ಮೇಲೆ ಬಿದ್ದಿದೆ. ಆ ನವೋದಕದಿಂದ ಆವಿಯು ಹೊರಹೊಮ್ಮುತ್ತಿದೆ. ಅದನ್ನು ನೋಡಿದರೆ ಭೂದೇವಿಯು ಪರಿತಾಪದಿಂದ ಕಂಬನಿಗರೆಯುತ್ತಿರುವಳೋ ಎಂಬಂತೆ ಕಾಣುತ್ತಿದೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಮೇಘಧ್ವನಿರೂಪದಲ್ಲಿ ರೋದಿಸುತ್ತಾ ಅಂತರಂಗದಲ್ಲಿ ವೇದನೆಯಿಂದ ಕೂಡಿರುವಂತಿದೆ. ಕಾರ್ಮುಗಿಲನ್ನಾಶ್ರಯಿಸಿ ಪ್ರಕಾಶಿಸುತ್ತಿರುವ ಈ ಮಿಂಚು-ರಾವಣನಿಂದ ಒಯ್ಯಲ್ಪಟ್ಟಾಗ ಆತನ ತೊಡೆಯಲ್ಲಿ ಪ್ರಕಾಶಿಸುತ್ತಿರುವ ತಪಸ್ವಿನಿಯಾದ ವೈದೇಹಿಯಂತೆ ನನಗೆ ಭಾಸವಾಗುತ್ತಿದೆ. ಮೇಘಗಳಿಂದ ಅನುಲೇಪನವಾಡಲ್ಪಟ್ಟಂತಿರುವ, ಅದೃಶ್ಯವಾದ ಗ್ರಹ-ನಕ್ಷತ್ರ-ಚಂದ್ರರುಳ್ಳ, ಅದರಿಂದಲೇ ಕಾಂತಿಹೀನವಾಗಿರುವ ಈ ದಿಕ್ಕುಗಳು ಕಾಮಾಸಕ್ತರಾದ ಸ್ತ್ರೀ-ಪುರುಷರಿಗೆ ಹಿತಕರವಾಗಿವೆ. ಬೆಟ್ಟದ ತಪ್ಪಲುಗಳಲ್ಲಿ ವರ್ಷರ್ತುವಿನ ಆಗಮನದಿಂದ ಉತ್ಸುಕವಾಗಿರುವಂತೆ ಕಾಣುತ್ತಿರುವ, ನವಜಲಬಿಂದುಗಳ ರೂಪದಲ್ಲಿ ಆನಂದಬಾಷ್ಪಗಳನ್ನು ಸುರಿಸುತ್ತಿರುವ, ಶೋಕಾಭಿಭೂತನಾಗಿರುವ ನನ್ನ ಕಾಮವನ್ನು ಉದ್ದೀಪನಗೊಳಿಸುತ್ತಿರುವ ಸುಪುಷ್ಪಿತವಾದ ಬೆಟ್ಟದಮಲ್ಲಿಗೇಗಿಡಗಳನ್ನು ನೋಡು, ಲಕ್ಷ್ಮಣ! ವರ್ಷಾಕಾಲವು ಪ್ರಾರಂಭವಾಗುತ್ತಲೇ ಭೂಮಿಯ ಧೂಳಿಯು ಉಡುಗಿಹೋಗಿದೆ. ವಾಯುವು ಶೀತಲವಾಗಿದೆ. ಬಿಸಿಲಿನ ಬೇಗೆಯು ಶಾಂತವಾಗಿದೆ. ಭೂಮಂಡಲದ ರಾಜರ ಯುದ್ಧಯಾತ್ರೆಯು ನಿಂತಿದೆ. ಪ್ರವಾಸಿಗಳು ತಮ್ಮ ದೇಶಗಳಿಗೆ ಹಿಂದಿರುಗುತ್ತಿದ್ದಾರೆ. ಮಾನಸಸರೋವರದಲ್ಲಿ ವಾಸ ಮಾಡಲು ಅತಿಶಯವಾದ ಆಸಕ್ತಿಯನ್ನು ಹೊಂದಿದ ಹಂಸಪಕ್ಷಿಗಳು ಅಲ್ಲಿಗೇ ಹೊರಟುಹೋದುವು. ಚಕ್ರವಾಕಪಕ್ಷಿಗಳು ಈಗ ತಮ್ಮ ಪ್ರೇಯಸಿಯರೊಂದಿಗೆ ಕೂಡಿಕೊಂಡಿವೆ. ಪುನಃ ಪುನಃ ಬೀಳುತ್ತಿರುವ ಮಳೆಯಿಂದ ಹಾಳಾಗಿರುವ ಮಾರ್ಗಗಳಲ್ಲಿ ರಥವೇ ಮೊದಲಾದ ವಾಹನಗಳು ಸಂಚರಿಸುತ್ತಿಲ್ಲ. ಅಲ್ಲಲ್ಲಿ ಚದುರಿರುವಂತೆ ಹರಡಿರುವ ಮೇಘಗಳಿಂದ ಕೂಡಿರುವ ಆಕಾಶವು ಕೆಲವು ಕಡೆಗಳಲ್ಲಿ ಪ್ರಕಾಶಮಾನವಾಗಿಯೂ ಕೆಲವು ಕಡೆಗಳಲ್ಲಿ ಮೊಬ್ಬಾಗಿಯೂ ಕಾಣುತ್ತಿದ್ದು ಕೆಲವು ಕಡೆಗಳಲ್ಲಿ ಪರ್ವತದಿಂದ ತಡೆಯಲ್ಪಟ್ಟು ಅಲೆಗಳಿಲ್ಲದ ಪ್ರಶಾಂತವಾದ ಸಮುದ್ರದಂತೆಯೇ ಪ್ರಕಾಶಿಸುತ್ತಿದೆ. ಬಿಳೀಮತ್ತೀಹೂಗಳಿಂದಲೂ ಕದಂಬಪುಷ್ಪಗಳಿಂದಲೂ ಸಮ್ಮಿಶ್ರವಾದ ನೀರನ್ನೂ, ಪರ್ವತದಲ್ಲಿರುವ ಗೈರಿಕಾದಿ ಧಾತುಗಳ ಮೇಲೆ ಹರಿದು ಕೆಂಪಾಗಿರುವ ನೀರನ್ನೂ, ನವಿಲುಗಳ ಕೇಕಾನಿನಾದಗಳಿಂದ ಅನುಸೃತವಾದ ಹೊಚ್ಚ ಹೊಸದಾದ ಜಲವನ್ನೂ ಗಿರಿನದಿಗಳು ಬಹಳ ಬೇಗ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಸಮುದ್ರಕ್ಕೆ ಒಯ್ಯುತ್ತಿವೆ. ರಸದಿಂದ ತುಂಬಿರುವ, ದುಂಬಿಗಳಂತೆಯೇ ಕಪ್ಪಾಗಿ ಕಾಣುವ ನೇರಳೇಹಣ್ಣನ್ನು ಈ ಸಮಯದಲ್ಲಿ ಜನರು ಬಹಳವಾಗಿ ಆಸ್ವಾದಿಸುತ್ತಾರೆ. ಹಲವಾರು ಬಣ್ಣಗಳಿಂದ ಕೂಡಿರುವ ವಿಶೇಷವಾಗಿ ಪಕ್ವವಾಗಿರುವ ಮಾವಿನಹಣ್ಣುಗಳು ಗಾಳಿಯಿಂದ ಅಲ್ಲಾಡಿಸಲ್ಪಟ್ಟು ತೊಪ-ತೊಪನೆ ಕೆಳಕ್ಕೆ ಬೀಳುತ್ತಿವೆ. ಮಿಂಚುಗಳೇ ಪತಾಕೆಗಳ ರೂಪದಲ್ಲಿರುವ ಬೆಳ್ಳಕ್ಕಿಗಳ ಸಾಲುಗಳೆಂಬ ಮಾಲೆಗಳಿಂದ ಕೂಡಿರುವ ದೊಡ್ಡ-ದೊಡ್ಡ ಪರ್ವತಶಿಖರಗಳಿಗೆ ಸಮಾನವಾಗಿರುವ ಮೇಘಗಳು-ರಣರಂಗದಲ್ಲಿ ಬಹಳ ಗಟ್ಟಿಯಾಗಿ ಘೀಳಿಡುವ ಮದಿಸಿದ ಆನೆಗಳಂತೆಯೇ ಗರ್ಜನೆಮಾಡುತ್ತಿವೆ. ವರ್ಷಾಕಾಲದ ಮಳೆಯಿಂದ ಚಿಗುರಿದ ಗರಿಕೆಗಳಿಂದ ಕೂಡಿರುವ, ನೃತ್ಯೋದ್ಯುಕ್ತವಾದ ನವಿಲುಗಳಿಂದ ಶೋಭಾಯಮಾನವಾಗಿ ಕಾಣುತ್ತಾ, ಮಳೆಯನ್ನು ಸುರಿಸುವ ಮೇಘಗಳಿಂದ ಕೂಡಿರುವ ಈ ಅರಣ್ಯಗಳು ಸಾಯಂಕಾಲದ ವೇಳೆಯಲ್ಲಿ ಅತ್ಯಂತಮನೋಹರವಾಗಿ ಕಾಣುತ್ತಿವೆ. ಬೆಳ್ಳಕ್ಕಿಗಳ ಸಾಲುಗಳಿಂದ ಕೂಡಿ, ನೀರಿನ ಭಾರವನ್ನು ಹೊತ್ತಿರುವ ಮೇಘಗಳು ಗರ್ಜನೆ ಮಾಡುತ್ತಾ ಪರ್ವತಗಳ ದೊಡ್ಡ-ದೊಡ್ಡ ಶಿಖರಗಳಲ್ಲಿ ವಿಶ್ರಮಿಸಿಕೊಳ್ಳುತ್ತಾ ಮುಂದೆ-ಮುಂದೆ ಹೋಗುತ್ತಿವೆ. ಗರ್ಭಧಾರಣೆಯ ನಿಮಿತ್ತವಾಗಿ ಮೇಘಗಳ ಆವಿರ್ಭಾವವನ್ನು ಬಯಸುತ್ತಾ, ಮೇಘವು ಹುಟ್ಟಿದೊಡನೆಯೇ ಆನಂದವಶವಾಗಿ ಅವುಗಳ ಕಡೆಗೆ ಧಾವಿಸುವ ಬೆಳ್ಳಕ್ಕಿಗಳ ಸಾಲು-ಗಾಳಿಯಿಂದ ಹಾರಿಸಲ್ಪಟ್ಟು-ಉದ್ದವಾಗಿ ರಚಿಸಲ್ಪಟ್ಟಿರುವ ಆಕಾಶದುದ್ದಕ್ಕೂ ಹಾಕಿರುವ ಬಿಳೀ ಕಮಲಗಳ ಸುಂದರವಾದ ಮಾಲೆಯಂತೆಯೇ ಕಾಣುತ್ತಿದೆ. ಚಿಕ್ಕ-ಚಿಕ್ಕ ಮಿಣುಕುಹುಳುಗಳಿಂದ ಚಿತ್ರಿತವಾಗಿ ಕಾಣುವ ಹಚ್ಚಹಸಿರಾದ ಗರಿಕೆಹುಲ್ಲುಗಳಿಂದ ಕೂಡಿರುವ ಭೂಮಿಯು-ಗಿಳಿಯಂತೆ ಹಸಿರು ಬಣ್ಣವುಳ್ಳ, ಮಧ್ಯ-ಮಧ್ಯದಲ್ಲಿ ಲಾಕ್ಷಾರಸದ ಬಣ್ಣದಿಂದ (ಕೆಂಪುಬಣ್ಣದಿಂದ) ಯುಕ್ತವಾಗಿರುವ ಕಂಬಳರೂಪದ ಶರೀರಾವರಣವನ್ನು ಧರಿಸಿರುವ ನಾರಿಯಂತೆ ಪ್ರಕಾಶಿಸುತ್ತಿದೆ.

ಈಗ ನಿದ್ರಾದೇವಿಯು ಮೆಲ್ಲ-ಮೆಲ್ಲನೆ ಮಹಾವಿಷ್ಣುವಿನ ಬಳಿಗೆ ಹೋಗುತ್ತಾಳೆ.* ನದಿಯು ಬಹಳ ವೇಗವಾಗಿ ಸಮುದ್ರದ ಕಡೆಗೆ

*ಭಗವಂತನಿಗೆ ಆಷಾಢೇ ಸ್ವಾಪಾರಂಭಃ ಶ್ರಾವಣೇ ನಿದ್ರಾಸಕ್ತಿಃ-ಎಂಬಂತೆ ಆಷಾಢಮಾಸದಲ್ಲಿ ಮಲಗುವಿಕೆ ಮತ್ತು ಶ್ರಾವಣಮಾಸದಲ್ಲಿ ನಿದ್ರೆಯಲ್ಲಿ ಆಸಕ್ತಿ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಹೋಗುತ್ತದೆ. ಮೋಡವನ್ನು ನೋಡಿದೊಡನೆಯೇ ಸಂತೋಷಗೊಂಡ ಬೆಳ್ಳಕ್ಕಿಗಳು ಮೋಡದ ಕಡೆಗೆ ಆನಂದದಿಂದ ಧಾವಿಸುತ್ತವೆ. ಪ್ರೇಯಸಿಯು ಕಾಮಾಸಕ್ತಳಾಗಿ ಪ್ರಿಯನ ಬಳಿಗೆ ಹೋಗುತ್ತಾಳೆ. ಅರಣ್ಯದ ಮಧ್ಯ ಪ್ರದೇಶಗಳು ನರ್ತನಮಾಡುತ್ತಿರುವ ನವಿಲುಗಳಿಂದ ಕಂಗೊಳಿಸುತ್ತಿವೆ. ಕದಂಬವೃಕ್ಷಗಳು ಕುಸುಮಗಳಿಂದ ಯುಕ್ತವಾದ ರೆಂಬೆಗಳಿಂದ ಶೋಭಿಸುತ್ತಿವೆ. ಹೋರಿಗಳು ಹಸುಗಳಲ್ಲಿ ಸಮಾನವಾದ ಕಾಮಾಸಕ್ತಿಯನ್ನು ಹೊಂದಿರುತ್ತವೆ. ಭೂಮಿಯು ಸಸ್ಯಗಳಿಂದಲೂ ವನಶ್ರೀಯಿಂದಲೂ ಕೂಡಿದ್ದು ಸುಮನೋಹರವಾಗಿ ಕಾಣುತ್ತದೆ. ನದಿಗಳು ತುಂಬಿಹರಿಯುತ್ತಿವೆ. ಮೇಘಗಳು ಮಳೆಗರೆಯುತ್ತಿವೆ. ಮದಿಸಿದ ಆನೆಗಳು ಘೀಂಕರಿಸುತ್ತಿವೆ. ಅರಣ್ಯದ ಮಧ್ಯಪ್ರದೇಶಗಳು ಅತ್ಯಂತಪ್ರಕಾಶಮಾನವಾಗಿರುತ್ತವೆ. ಪ್ರೇಯಸಿಯರಿಂದ ವಿಹೀನರಾದ ಪುರುಷರು ಚಿಂತಾಮಗ್ನರಾಗಿದ್ದಾರೆ. ನವಿಲುಗಳು ಆನಂದದಿಂದ ಜಾಗರವಾಡುತ್ತಿವೆ. ಕಪಿಗಳು ಸಮೃದ್ಧವಾದ ಫಲಗಳು ಅರಣ್ಯದಲ್ಲಿ ಸಿಕ್ಕುವುದರಿಂದ ಸಮಾಧಾನಪಟ್ಟುಕೊಳ್ಳುತ್ತಿವೆ. ಕೇದಗೇ ಹೂಗಳ ವಾಸನೆಯನ್ನು ಆಘ್ರಾಣಿಸಿ ಪ್ರಹರ್ಷಿತವಾದ ಮದಗಜಗಳು ಅರಣ್ಯದಲ್ಲಿರುವ ಸಣ್ಣನದಿಗಳ ಜಲಪಾತಶಬ್ದದಿಂದ ಒಡನೆಯೇ ವ್ಯಾಕುಲಗೊಂಡು ಮದದಿಂದ ನೃತ್ಯಮಾಡುತ್ತಿರುವ ನವಿಲುಗಳೊಡನೆ ಗರ್ಜನೆಮಾಡುತ್ತಿವೆ. ಕದಂಬವೃಕ್ಷಗಳ ರೆಂಬೆಗಳಲ್ಲಿ ಜೋತುಬಿದ್ದಿರುವ ದುಂಬಿಗಳು ಧಾರಾಕಾರವಾದ ಮಳೆಯಿಂದ ಪ್ರಹರಿಸಲ್ಪಟ್ಟು ಆಗತಾನೇ ಕುಡಿದ ಪುಷ್ಪರಸದಿಂದ ಉಂಟಾದ ಮದವನ್ನು ಮೆಲ್ಲ-ಮೆಲ್ಲನೆ ತ್ಯಜಿಸುತ್ತವೆ. ಇದ್ದಿಲುಪುಡಿಯ ರಾಶಿಯಂತೆ ಕಪ್ಪಾಗಿರುವ, ರಸದಿಂದ ತುಂಬಿರುವ ನೇರಳೇಹಣ್ಣುಗಳ ಭಾರದಿಂದ ಬಗ್ಗಿರುವ ರೆಂಬೆಗಳು ದುಂಬಿಗಳ ಸಮೂಹಗಳಿಂದ ಸಮಾವೃತವಾಗಿ ನಿಗೂಢವಾಗಿರುವಂತೆ ಪ್ರಕಾಶಿಸುತ್ತಿವೆ. ಮಿಂಚೆಂಬ ಪತಾಕೆಗಳಿಂದ ಸಮಲಂಕೃತವಾಗಿರುವ, ಗರ್ವಯುಕ್ತವಾದ ಮತ್ತು ಗಂಭೀರವಾದ ಮಹಾಗರ್ಜನೆಯಿಂದ ಕೂಡಿರುವ, ಮಹಾಮೇಘಗಳು ಯುದ್ಧಕ್ಕೆ ಹೊರಟಿರುವ ಮದಿಸಿದ ಆನೆಗಳಂತೆಯೇ ಕಾಣುತ್ತಿವೆ.

ಪರ್ವತಪ್ರದೇಶದಲ್ಲಿ ಸಂಚಾರಮಾಡುವ ಸ್ವಭಾವವುಳ್ಳ, ವನಪ್ರದೇಶವನ್ನು ಅನುಸರಿಸಿ ಹೋಗುತ್ತಿರುವ ಮದಿಸಿದ ದೊಡ್ಡ ಸಲಗವು ತನ್ನ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಹಿಂಬದಿಯಲ್ಲಾದ ಮೇಘದ ಶಬ್ದವನ್ನು ಕೇಳಿ, ತನ್ನ ವಿರೋಧಿಯಾದ ಆನೆಯೇ ಗರ್ಜಿಸುತ್ತಿರುವುದೋ ಎಂದು ಶಂಕಿಸುತ್ತಾ ಯುದ್ಧಾಪೇಕ್ಷಿಯಾಗಿ ಹಿಂದಿರುಗಿಹೋಗುತ್ತದೆ. ಅನೇಕವಿಧವಾದ ಭಾವಗಳಿಗೆ ಆಶ್ರಯವನ್ನಿತ್ತಿರುವ ಅರಣ್ಯದ ಪರಿಸರಪ್ರದೇಶಗಳು ಕೆಲವೆಡೆಗಳಲ್ಲಿ ದುಂಬಿಗಳ ಸಮೂಹಗಳಿಂದ ಗಾಯನಮಾಡುತ್ತಿರುವಂತೆಯೂ, ನವಿಲುಗಳಿಂದ ನೃತ್ಯಮಾಡುತ್ತಿರುವಂತೆಯೂ, ಮದಿಸಿದ ಆನೆಗಳಿಂದ ಘೀಂಕರಿಸುತ್ತಿರುವಂತೆಯೂ ಕಾಣುತ್ತಿವೆ. ಈಚಲು, ಹೊನ್ನೆ ಮತ್ತು ಅರ್ಜುನವೃಕ್ಷಗಳ ಪುಷ್ಪಗಳಿಂದ ಸಮೃದ್ಧವಾಗಿರುವ, ಮಧುವಿನಂತೆ ಮಧುರವಾದ ನೀರಿನಿಂದ ಪೂರ್ಣವಾಗಿರುವ ಅರಣ್ಯಪ್ರದೇಶಗಳು ನವಿಲುಗಳ ಮದಯುಕ್ತವಾದ ಕೇಕಾರವದಿಂದಲೂ ನೃತ್ಯಗಳಿಂದಲೂ ಕೂಡಿ ಪಾನಭೂಮಿಗಳಂತೆಯೇ ಕಾಣುತ್ತಿವೆ. ನಾನಾವಿಧವಾದ ಬಣ್ಣಗಳುಳ್ಳ ರೆಕ್ಕೆಗಳಿಂದ ಕೂಡಿರುವ ಬಾಯಾರಿದ ಪಕ್ಷಿಗಳು ಇಂದ್ರದತ್ತವಾದ, ಸುನಿರ್ಮಲವಾದ, ದೊನ್ನೆಯ ರೂಪದ ಹಸಿರೆಲೆಗಳ ಮೇಲಿರುವ ಮುತ್ತಿಗೆ ಸಮಾನವಾದ ನೀರನ್ನು ಕುಡಿಯುತ್ತಿವೆ. ಕೆಲವೆಡೆಗಳಲ್ಲಿ ದುಂಬಿಗಳು ವೀಣೆಗಳಂತೆ ಮಧುರನಿನಾದ ಮಾಡುತ್ತಿವೆ. ಕಪ್ಪೆಗಳು ತಾಳಗಳಂತೆಯೇ ವಟಗುಟ್ಟುತ್ತಿವೆ. ಮೇಘಗಳು ಮೃದಂಗದಂತೆ ಶಬ್ದಮಾಡುತ್ತಿವೆ. ಇದನ್ನು ನೋಡಿದರೆ ಅರಣ್ಯದಲ್ಲಿ ಸಂಗೀತೋತ್ಸವವೇನಾದರೂ ನಡೆಯುತ್ತಿರುವುದೋ ಎಂಬಂತೆ ಭಾಸವಾಗುತ್ತಿದೆ. ಅಗಲವಾಗಿ ಬಿಚ್ಚಿಕೊಂಡಿರುವ ಗರಿಗಳನ್ನೇ ಆಭರಣಗಳ ರೂಪದಲ್ಲಿ ಹೊಂದಿರುವ ನವಿಲುಗಳು ಅರಣ್ಯದ ಕೆಲವೆಡೆಗಳಲ್ಲಿ ನೃತ್ಯಮಾಡುತ್ತಿವೆ. ಕೆಲವೆಡೆಗಳಲ್ಲಿ ಕೇಕೆ ಹಾಕುತ್ತಿವೆ. ವೃಕ್ಷಗಳ ತುದಿಗಳಲ್ಲಿ ಶರೀರವನ್ನು ಪಸರಿಸಿಕೊಂಡು ಕುಳಿತಿವೆ. ಹೀಗೆ ನವಿಲುಗಳು ಸಂಗೀತೋತ್ಸವವನ್ನು ನಡೆಸುತ್ತಿವೆಯೋ ಎಂಬಂತೆ ಕಾಣುತ್ತಿದೆ. ನಾನಾವಿಧವಾದ ರೂಪಗಳನ್ನೂ, ಆಕೃತಿಗಳನ್ನೂ, ಬಣ್ಣಗಳನ್ನೂ, ಧ್ವನಿಗಳನ್ನೂ ಹೊಂದಿರುವ ಕಪ್ಪೆಗಳು ಮೇಘಗಳ ಶಬ್ದದಿಂದ ಬಹಿರ್ವ್ಯಾಪಾರನಿರೋಧಕವಾಗಿದ್ದ ನಿದ್ರೆಯಿಂದ ಎಚ್ಚೆತ್ತು ನವನೂತನವಾದ ನೀರಿನ ಧಾರೆಗಳಿಂದ ಪ್ರಹರಿಸಲ್ಪಟ್ಟು ವಟ-ವಟಗುಟ್ಟುತ್ತಿವೆ. ಪೂರ್ಣವಾಗಿ ತುಂಬಿ ಹರಿಯುತ್ತಿರುವ, ಚಕ್ರವಾಕಪಕ್ಷಿಗಳ ರೂಪವಾದ ಸ್ತನಗಳಿಂದ ಕೂಡಿರುವ ಕೊಬ್ಬಿದ ನದಿಗಳು, ನೂತನವಾಗಿ ಬಂದ

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri


ನೀರಿನ ಪೂರ್ಣಪ್ರವಾಹವೆಂಬ ಕುಪ್ಪಸಗಳಿಂದ ಆವೃತವಾದ ದೇಹವುಳ್ಳವು ಗಳಾಗಿ ಜೀರ್ಣವಾಗಿ ಹೋಗಿರುವ ತೀರಪ್ರದೇಶವನ್ನು ಕೊಚ್ಚಿಕೊಂಡು ಪತಿಯಾದ ಸಮುದ್ರರಾಜನ ಕಡೆಗೆ ಬಹಳ ರಭಸದಿಂದ ಹೋಗುತ್ತಿವೆ. ನೂತನವಾದ ನೀರಿನಿಂದ ಪೂರ್ಣವಾದ ನೀಲಮೇಘಗಳು ನೀಲವಾಗಿರುವ ಇತರ ಮೇಘಗಳಲ್ಲಿ ಸೇರಿಕೊಂಡು ಕಾಡುಗಿಚ್ಚಿನಿಂದ ಸುಟ್ಟುಹೋಗಿರುವ ಪರ್ವತಗಳಲ್ಲಿ ಕಾಡುಗಿಚ್ಚಿನಿಂದಲೇ ಸುಟ್ಟುಹೋಗಿರುವ ಇತರ ಪರ್ವತಗಳು ದೃಢವಾಗಿ ಬಂದು ಸೇರಿಕೊಂಡಂತೆ ಪ್ರಕಾಶಿಸುತ್ತಿವೆ. ಹರ್ಷಾತಿರೇಕದಿಂದ ಧ್ವನಿ ಮಾಡುತ್ತಿರುವ ನವಿಲುಗಳಿಂದಲೂ, ವಜ್ರಕೀಟಗಳಿಂದ ವ್ಯಾಪ್ತವಾದ ಗರಿಕೇ ಹುಲ್ಲುಗಳ ಪ್ರದೇಶದಿಂದಲೂ, ಕದಂಬ ಮತ್ತು ಅರ್ಜುನವೃಕ್ಷಗಳ ಸುವಾಸನೆಯಿಂದಲೂ ಕೂಡಿರುವ ಸುರಮ್ಯವಾದ ಅರಣ್ಯಗಳ ಮಧ್ಯದಲ್ಲಿ ಆನೆಗಳು ಸ್ವೇಚ್ಛೆಯಿಂದ ಸಂಚರಿಸುತ್ತಿವೆ. ದುಂಬಿಗಳು ನೂತನವಾದ ಜಲಧಾರೆಯಿಂದ ವಿನಾಶಹೊಂದಿದ ಕುಸುರುಗಳುಳ್ಳ ಕಮಲಗಳನ್ನು ಶೀಘ್ರವಾಗಿ ಪರಿತ್ಯಜಿಸಿ ಕುಸುರುಗಳಿಂದ ಕೂಡಿರುವ ಈಚಲಹೂಗಳ ರಸವನ್ನು ಪಾನಮಾಡುತ್ತಿವೆ. ಈಗ ಈ ಅರಣ್ಯದಲ್ಲಿ ಮದಿಸಿದ ಆನೆಗಳು ಹೇರಳವಾಗಿವೆ. ಸಂತೋಷಗೊಂಡಿರುವ ಗೂಳಿಗಳಿವೆ. ವಿಶ್ರಾಂತಿಸುಖವನ್ನು ಅನುಭವಿಸುತ್ತಿರುವ ಸಿಂಹಗಳಿವೆ. ಸುರಮ್ಯವಾದ ಪರ್ವತಗಳಿವೆ. ರಾಜರು ಯುದ್ಧೋತ್ಸಾಹದಿಂದ ವಿರಮಿಸಿದ್ದಾರೆ. ದೇವೇಂದ್ರನು ಮೋಡಗಳೊಡನೆ ವಿಹರಿಸುತ್ತಿದ್ದಾನೆ. ಮೇಘಗಳು ಸಮುದ್ರದಂತೆ ಭೋರ್ಗರೆಯುತ್ತಾ ಜಲರಾಶಿಯನ್ನೇ ತುಂಬಿಕೊಂಡು ಅಂತರಿಕ್ಷವನ್ನು ಆಶ್ರಯಿಸಿದ್ದು ನದೀ-ನದ-ತಟಾಕ-ಸರಸ್ಸುಗಳನ್ನೂ, ವಾಪೀ-ಕೂಪಗಳನ್ನೂ ನೀರಿನಿಂದ ತುಂಬಿಸಿ ಭೂಮಿಯನ್ನು ನೀರಿನಲ್ಲಿಯೇ ಮುಳುಗಿಸಿಬಿಡುತ್ತಿವೆ. ಈ ಕಾಲದಲ್ಲಿ ಧಾರಾಕಾರವಾಗಿ ಮಳೆಸುರಿಯುತ್ತಿದೆ. ವೇಗಯುಕ್ತವಾದ ಗಾಳಿಯು ಬೀಸುತ್ತಿದೆ. ಕೊಚ್ಚಿಹೋಗಿರುವ ತೀರ ಪ್ರದೇಶಗಳುಳ್ಳ ನದಿಗಳು ನೀರಿನ ವೇಗದಿಂದ ಅವಕಾಶವು ಸಿಕ್ಕಿದ ಕಡೆಗಳಲ್ಲಿ ನುಗ್ಗುತ್ತಾ ರಭಸದಿಂದ ಪ್ರವಹಿಸುತ್ತಿವೆ. ಮನುಷ್ಯರಿಂದ ರಾಜರು ಅಭಿಷೇಕಿಸಲ್ಪಡುವಂತೆ ಪರ್ವತಗಳು–ದೇವೇಂದ್ರನಿಂದ ಕೊಡಲ್ಪಟ್ಟ, ವಾಯುವಿನಿಂದ ತರಲ್ಪಟ್ಟ ಮೇಘರೂಪವಾದ ಕುಂಭಗಳಿಂದ ಅಭಿಷೇಕಿಸಲ್ಪಟ್ಟವುಗಳಾಗಿ ತಮ್ಮ ಸುಂದರರೂಪವನ್ನೂ ಮತ್ತು ತಮ್ಮಲ್ಲಡಗಿರುವ ಖನಿಜರೂಪದ

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

ಸಂಪತ್ತನ್ನೂ ತೋರಿಸಿಕೊಳ್ಳುತ್ತಿವೆಯೋ ಎಂಬಂತೆ ಕಾಣುತ್ತಿದೆ. ಅಂತರಿಕ್ಷವು ಮೋಡಗಳಿಂದ ಮುಚ್ಚಿಹೋಗಿದೆ. ನಕ್ಷತ್ರಗಳಾಗಲೀ ಸೂರ್ಯನಾಗಲೀ ಕಾಣಿಸುತ್ತಿಲ್ಲ. ನೂತನವಾದ ಜಲಪ್ರವಾಹದಿಂದ ಭೂಮಿಯು ಪೂರ್ಣವಾಗಿ ತೃಪ್ತಿಗೊಂಡಿದೆ. ದಿಕ್ಕುಗಳೂ ಕತ್ತಲಿನಿಂದ ಮುಚ್ಚಿಹೋಗಿ ಹಿಂದಿನಂತೆ ಪ್ರಕಾಶಮಾನವಾಗಿ ಕಾಣುತ್ತಿಲ್ಲ. ಪರ್ವತಗಳಲ್ಲಿರುವ ದೊಡ್ಡ-ದೊಡ್ಡ ಶಿಖರಗಳು ಜಲಧಾರೆಗಳಿಂದ ತೊಳೆಯಲ್ಪಟ್ಟು ಹೆಚ್ಚು ಪ್ರಕಾಶಿಸುತ್ತಿವೆ. ಪರ್ವತಗಳು ಉದ್ದವಾಗಿಯೂ ಮತ್ತು ವಿಸ್ತಾರವಾಗಿಯೂ ಇರುವ ಪ್ರಪಾತಗಳಿಂದ ಜೋಲಾಡುತ್ತಿರುವ ಮುತ್ತಿನ ಮಾಲೆಗಳಿಂದ ಅಲಂಕೃತವಾಗಿವೆಯೋ ಎಂಬಂತೆ ಕಾಣುತ್ತಿವೆ. ಅತಿಯಾದ ವೇಗವುಳ್ಳ, ವಿಸ್ತಾರವಾದ ಗಿರಿನದಿಗಳು ಶಿಖರಗಳನ್ನೂ ತಪ್ಪಲುಪ್ರದೇಶಗಳನ್ನೂ ತೊಳೆಯುತ್ತಾ ಮುಕ್ತಾಹಾರಗಳಂತೆ ಕೆಳಗೆ ಬೀಳುತ್ತಾ ದೊಡ್ಡ-ದೊಡ್ಡ ಗುಹೆಗಳೆಂಬ ಕಟಿಪ್ರದೇಶಗಳಿಂದ ಧರಿಸಲ್ಪಡುತ್ತಿವೆ. ಸುರತಕ್ರೀಡೆಯ ಕಾಲದಲ್ಲಿ ಪರಸ್ಪರಸಂಘರ್ಷದಿಂದ ಕಿತ್ತುಹೋದ ಸ್ವರ್ಗದ ಸ್ತ್ರೀಯರ ಮುತ್ತಿನ ಹಾರಗಳ ಮುಕ್ತಾಮಣಿಗಳೋ ಎಂಬಂತೆ ಎಲ್ಲ ದಿಕ್ಕುಗಳಲ್ಲಿಯೂ ವ್ಯಾಪ್ತವಾಗಿರುವ ಜಲಧಾರೆಗಳು ಸುತ್ತಲೂ ಬೀಳುತ್ತಿವೆ. ಗೂಡುಗಳಲ್ಲಿ ಸೇರಿಕೊಳ್ಳುತ್ತಿರುವ ಪಕ್ಷಿಗಳಿಂದಲೂ, ಮುಚ್ಚಿಕೊಳ್ಳುತ್ತಿರುವ ಕಮಲಗಳಿಂದಲೂ, ಅರಳುತ್ತಿರುವ ಮಾಲತೀಕುಸುಮಗಳಿಂದಲೂ ಸೂರ್ಯನು ಅಸ್ತನಾಗುತ್ತಿರುವುದು ತಿಳಿದು ಬರುತ್ತಿದೆ. ರಾಜರ ಯುದ್ಧಯಾತ್ರೆಯು ನಿಂತಿದೆ. ಸೈನ್ಯವೂ ಹಿಂದಿರುಗುತ್ತಿದೆ. ನೀರಿನಿಂದಾಗಿ ದ್ವೇಷಗಳು ಶಾಂತವಾಗಿವೆ. ಮಾರ್ಗಗಳೂ ನೀರಿನಿಂದ ಮುಚ್ಚಿಹೋಗಿ ಹಳ್ಳ-ತಿಟ್ಟುಗಳು ತಿಳಿಯದಂತಾಗಿವೆ. ಭಾದ್ರಪದ ಮಾಸದಲ್ಲಿ ವೇದವನ್ನು ಅಧ್ಯಯನಮಾಡಲು ಇಚ್ಛಿಸುವ ಸಾಮಕಬ್ರಾಹ್ಮಣರಿಗೆ ಇದು ವೇದಾರಂಭಕ್ಕೆ ಕಾಲವಾಗಿದೆ. ಸಮಸ್ತವಾದ ಗೃಹೋಪಕರಣಗಳ ಸಂಗ್ರಹಕಾರ್ಯವನ್ನು ಮುಗಿಸಿದವರಾಗಿ, ಜೀವನಕ್ಕೆ ಸಾಧನಭೂತವಾದ ಧನ-ಧಾನ್ಯಗಳನ್ನು ಸಂಗ್ರಹಿಸಿರುವ, ಕೋಸಲಾಧಿಪತಿಯಾದ ಭರತನು ಆಷಾಢಮಾಸದ ಹುಣ್ಣಿಮೆಯ ದಿನ ವಿಶೇಷವಾದ ವ್ರತವನ್ನು ಕೈಗೊಂಡಿರುವುದು ನಿಶ್ಚಯ. ತುಂಬಿ ಹರಿಯುತ್ತಿರುವ ಸರಯೂನದಿಯ ವೇಗವು-ಅಯೋಧ್ಯೆಗೆ ಅಭಿಮುಖವಾಗಿ ಆಗಮಿಸುತ್ತಿರುವ ನನ್ನನ್ನು ನೋಡಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri


ಅಯೋಧ್ಯಾಪಟ್ಟಣದಲ್ಲಾಗುವ ಪೌರರ 'ಜಯ ಜಯ' ಶಬ್ದಗಳಂತೆ–ಭೋರ್ಗರೆಯುವ ಶಬ್ದದೊಡನೆ ವೃದ್ಧಿಹೊಂದುತ್ತಿದೆ. ಈ ವರ್ಷಾಕಾಲವು ವೃದ್ಧಿಗೊಳಿಸುವ ಗುಣಗಳಿಂದ ಕೂಡಿದೆ. ಶತ್ರುವನ್ನು ಜಯಿಸಿ, ಭಾರ್ಯಾಸಮೇತನಾಗಿ, ಮಹಾರಾಜ್ಯದ ಸಿಂಹಾಸನವನ್ನು ಮಂಡಿಸಿರುವ ಸುಗ್ರೀವನು ಈಗ ಹೆಚ್ಚು ಸುಖವನ್ನು ಅನುಭವಿಸುತ್ತಿದ್ದಾನೆ. ನಾನಾದರೋ ಹೆಂಡತಿಯನ್ನು ಕಳೆದುಕೊಂಡಿದ್ದೇನೆ. ಮಹಾರಾಜ್ಯದಿಂದಲೂ ಭ್ರಷ್ಟನಾಗಿದ್ದೇನೆ. ಸಂಪೂರ್ಣವಾಗಿ ನೆನೆದುಹೋಗಿರುವ ನದಿಯ ದಡವು ಕುಸಿಯುವಂತೆ–ಕುಸಿದುಹೋಗಿದ್ದೇನೆ. ನನ್ನ ಶೋಕವು ಬಹಳ ದೀರ್ಘವಾಗಿದೆ. ಈ ವರ್ಷಾಕಾಲವನ್ನು ಕಳೆಯುವುದೇ ಅಸಾಧ್ಯವಾಗಿ ಕಾಣುತ್ತಿದೆ. ರಾವಣನು ಮಹಾಶತ್ರುವಾಗಿದ್ದಾನೆ. ಈ ಮೂರೂ ನನಗೆ ದುಸ್ತರವಾಗಿ ಭಾಸವಾಗುತ್ತಿದೆ. ರಾಜರ ದಂಡಯಾತ್ರೆಗೆ ಇದು ಅಕಾಲವಾಗಿರುವುದನ್ನೂ, ಮಾರ್ಗಗಳು ಅತಿದುರ್ಗಮವಾಗಿರುವುದನ್ನೂ ಗಮನಿಸಿ, ವಿನಯಭಾವದಿಂದ ಸೀತಾನ್ವೇಷಣೆಗೆ ಸಿದ್ಧನಾಗಿದ್ದ ಸುಗ್ರೀವನಿಗೆ ನಾನು ಯಾವ ಮಾತನ್ನೂ ಹೇಳಲಿಲ್ಲ. ಅದೂ ಅಲ್ಲದೇ ಬಹಳ ಕಾಲದಿಂದಲೂ ಸಂಕಟವನ್ನೇ ಅನುಭವಿಸುತ್ತಿದ್ದು ಬಹಳ ಕಾಲಾನಂತರ ಭಾರ್ಯೆಯೊಡನೆ ಸಮಾಗಮವನ್ನು ಹೊಂದಿರುವ ಸುಗ್ರೀವನಿಗೆ ನನ್ನ ಕಾರ್ಯವು ಅತಿದೊಡ್ಡದಾಗಿದ್ದುದರಿಂದ ಅಲ್ಪಕಾಲದಲ್ಲಿ ಮುಗಿಯುವ ಸಾಧ್ಯತೆಯಿಲ್ಲದ್ದರಿಂದ ಯಾವ ಮಾತನ್ನೂ ನಾನು ಅವನೊಡನೆ ಹೇಳಲು ಬಯಸಲಿಲ್ಲ.

ಸುಗ್ರೀವನು ಸ್ವಲ್ಪಕಾಲದವರೆಗೆ ವಿಶ್ರಮಿಸಿಕೊಂಡು ಸೀತಾನ್ವೇಷಣೆಗೆ ಯೋಗ್ಯವಾದ ಶರತ್ಕಾಲವು ಪ್ರಾಪ್ತವಾದೊಡನೆಯೇ ತಾನಾಗಿಯೇ ಕಾರ್ಯಪ್ರವೃತ್ತನಾಗುತ್ತಾನೆ. ಅವನು ನಾನು ಮಾಡಿರುವ ಉಪಕಾರವನ್ನು ಸ್ಮರಿಸುತ್ತಾನೆ. ಇದರಲ್ಲಿ ಸಂಶಯವೇ ಇಲ್ಲ. ಲಕ್ಷ್ಮಣ! ಈ ಕಾರಣಗಳಿಂದ ನಾನು ಸುಗ್ರೀವನ ಮತ್ತು ನದಿಗಳ ಪ್ರಸನ್ನತೆಯನ್ನು ಆಸಕ್ತಿಯಿಂದ ನಿರೀಕ್ಷಿಸುತ್ತಾ ಉಚಿತಕಾಲದ ಪ್ರತೀಕ್ಷೆಯಲ್ಲಿದ್ದೇನೆ. ಉಪಕಾರವನ್ನು ಹೊಂದಿದ ವೀರನು ಪ್ರತ್ಯುಪಕಾರವನ್ನು ಮಾಡುತ್ತಾನೆ. ತಾನು ಪಡೆದ ಉಪಕಾರವನ್ನು ಸ್ಮರಿಸದೇ ಪ್ರತ್ಯುಪಕಾರವನ್ನು ಮಾಡದೇ ಇರುವವನು ಸತ್ಪುರುಷರ ಮನಸ್ಸನ್ನು ನೋಯಿಸುತ್ತಾನೆ."

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಹೀಗೆ ಶ್ರೀರಾಮನು ಹೇಳಲು ಲಕ್ಷ್ಮಣನು ಕೈಮುಗಿದುಕೊಂಡು ಅಣ್ಣನ ಮಾತನ್ನು ಶ್ಲಾಘಿಸುತ್ತಾ ತನ್ನ ಅಭಿಮತವನ್ನು ವ್ಯಕ್ತಪಡಿಸುತ್ತಾ ಮನೋಹರದರ್ಶನನಾದ ಶ್ರೀರಾಮನಿಗೆ ಹೇಳಿದನು :

"ನರೇಂದ್ರನೇ! ನೀನು ಹೇಳಿದಂತೆ ನಿನ್ನ ಇಷ್ಟಾರ್ಥಗಳೆಲ್ಲವನ್ನೂ ಸುಗ್ರೀವನು ಬಹಳ ಬೇಗ ನೆರವೇರಿಸಿ ಕೊಡುತ್ತಾನೆ. ಶತ್ರುವಿನ ನಿಗ್ರಹದಲ್ಲಿ ದೃಢವಾಗಿ ನಿಶ್ಚಯಿಸಿರುವ ನೀನು ಶರತ್ಕಾಲವನ್ನು ಪ್ರತೀಕ್ಷಿಸುತ್ತಿರು. ಈ ಮಳೆಗಾಲವನ್ನು ಸಹಿಸಿಕೊ."

೨೮ನೆಯ ಸರ್ಗವು ಮುಗಿಯಿತು.

ಕಿಷ್ಕಿಂಧಾಕಾಂಡ — ೨೯ನೆಯ ಸರ್ಗ

## ಹನುಮಂತನ ಸಲಹೆಯಂತೆ ಸುಗ್ರೀವನು ವಾನರಸೈನ್ಯವೆಲ್ಲವನ್ನೂ ಒಂದೆಡೆಯಲ್ಲಿ ಸೇರಿಸುವಂತೆ ನೀಲನಿಗೆ ಆದೇಶವನ್ನಿತ್ತುದು

ಸಮೀಕ್ಷ್ಯ ವಿಮಲಂ ವ್ಯೋಮ ಗತವಿದ್ಯುದ್ಬಲಾಹಕಮ್ ।
ಸಾರಸಾರವಸಂಘುಷ್ಟಂ ರಮ್ಯಜ್ಯೋತ್ಸ್ನಾನುಲೇಪನಮ್ ॥೧॥

ಆಕಾಶವು ನಿರ್ಮಲವಾಯಿತು. ಗುಡುಗು-ಮಿಂಚುಗಳಾಗಲೀ, ಮೋಡಗಳಾಗಲೀ ಆಗ ಅಲ್ಲಿ ಇರಲಿಲ್ಲ. ಅಂತರಿಕ್ಷದಲ್ಲಿ ಸಾರಸಪಕ್ಷಿಗಳು ಹಾರಾಡುತ್ತಿದ್ದುವು. ಅವುಗಳ ಧ್ವನಿಯೂ ಕೇಳಿಸುತ್ತಿದ್ದಿತು. ಚಂದ್ರೋದಯವಾದ ನಂತರ ಆಕಾಶವು– ಶ್ವೇತಚಂದನದಿಂದ ಲೇಪಿತವಾದಂತೆ–ಬೆಳದಿಂಗಳಿನಿಂದ ಸರ್ವತ್ರವ್ಯಾಪ್ತವಾಗಿದ್ದಿತು. ಶರತ್ಕಾಲವು ಆರಂಭವಾಗಿದ್ದಿತು. ಇವೆಲ್ಲವನ್ನೂ ಹನುಮಂತನು ಗಮನಿಸಿದನು.

ವಾಯುಪುತ್ರನಾದ ಹನುಮಂತನು ಶಾಸ್ತ್ರಗಳ ನಿಶ್ಚಿತಸಿದ್ಧಾಂತಗಳನ್ನು ತಿಳಿದವನಾಗಿದ್ದನು. ಯಾವುದನ್ನು ಯಾವಾಗ ಮಾಡಬೇಕು? ಯಾವುದನ್ನು ಯಾವಾಗ ಮಾಡಬಾರದು?–ಎಂಬುದರ ಯಥಾರ್ಥಜ್ಞಾನವೂ ಅವನಿಗಿದ್ದಿತು. ಕೆಲವು ಸನ್ನಿವೇಶಗಳಲ್ಲಿ ಕೆಲವು ವಿಶೇಷಧರ್ಮಗಳನ್ನು ಪರಿಪಾಲಿಸಬೇಕಾಗುವುದೆಂಬ ರಹಸ್ಯವನ್ನೂ ಅವನು ಚೆನ್ನಾಗಿ ತಿಳಿದಿದ್ದನು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಮಾತನಾಡುವುದರಲ್ಲಿ ನಿಪುಣನಾಗಿದ್ದನು. ಸಾಮ-ದಾನ-ಅರ್ಥ-ನೀತಿ–ಇವೆಲ್ಲ ವನ್ನೂ ಚೆನ್ನಾಗಿ ತಿಳಿದಿದ್ದನು.

ಶ್ರೀರಾಮನು ಕಾಲದ ನಿರ್ಣಯಮಾಡಿ ಹೇಳಿದ್ದಂತೆ ಸೀತಾನ್ವೇಷಣೆಗೆ ಸಿದ್ಧತೆಗಳನ್ನು ಮಾಡಬೇಕಾಗಿದ್ದ ಸುಗ್ರೀವನು ತನ್ನ ಪ್ರಯೋಜನವನ್ನು ಪೂರ್ಣವಾಗಿ ಪಡೆದುಕೊಂಡಿದ್ದನಾದ ಕಾರಣ ಧರ್ಮಾರ್ಥಗಳ ವಿಷಯದಲ್ಲಿ ಆಸಕ್ತನಾಗಿರಲಿಲ್ಲ. ಅಸತ್ಪುರುಷರ ಮಾರ್ಗವನ್ನೇ ಅವಲಂಬಿಸಿದ್ದನು. ಕಾಮಚಾರದಲ್ಲಿಯೇ ಆಸಕ್ತನಾಗಿದ್ದನು. ಅವನ ಮನಸ್ಸು ಯಾವಾಗಲೂ ಅಂತಃಪುರದಲ್ಲಿಯೇ ಇರುತ್ತಿದ್ದಿತು. ವಾಲಿಯ ಸಂಹಾರಕಾರ್ಯವು ಮುಗಿ ದಿದ್ದುದರಿಂದ ನಿರ್ಭೀತನಾಗಿ ಸರ್ವದಾ ಪ್ರಮದೆಯರಲ್ಲಿಯೇ ಆಸಕ್ತನಾಗಿರು ತ್ತಿದ್ದನು. ಇಷ್ಟವಾದ ಕಾಮನೆಗಳೆಲ್ಲವೂ ಅವನ ಅಧೀನದಲ್ಲಿದ್ದುವು. ಇಷ್ಟ ಳಾಗಿದ್ದ ತನ್ನ ಪತ್ನಿಯಾದ ರುಮೆಯನ್ನೂ ಬಹಳ ಕಾಲದಿಂದ ಆಶಿಸಿದ್ದ ತಾರೆಯನ್ನೂ ಅವನು ದೀರ್ಘಕಾಲಾನಂತರ ಪಡೆದುಕೊಂಡಿದ್ದನು. ಈ ಕಾರಣದಿಂದ ಸುಗ್ರೀವನು ಹಗಲು-ರಾತ್ರಿಗಳೆಂಬ ವ್ಯತ್ಯಾಸವೇ ಇಲ್ಲದೇ ಸರ್ವದಾ ಪತ್ನಿಯರ ಜೊತೆಯಲ್ಲಿಯೇ ಇರುತ್ತಿದ್ದನು. ಅವನು ಕೃತಾ ರ್ಥನೂ ನಿರಾತಂಕನೂ ಆಗಿದ್ದನು. ಗಂಧರ್ವಾಪ್ಸರೆಯರೊಡನೆ ವಿಹರಿಸುವ ಇಂದ್ರನಂತೆಯೇ ಇದ್ದನು. ಸಂಪೂರ್ಣವಾದ ರಾಜ್ಯಾಡಳಿತಗಳನ್ನು ಮಂತ್ರಿಗಳಿಗೆ ವಹಿಸಿಬಿಟ್ಟಿದ್ದನು. ಮಂತ್ರಿಗಳು ಮಾಡಿದ ಕಾರ್ಯಗಳನ್ನು ಪರಾಮರ್ಶಿಸುತ್ತಲೂ ಇರಲಿಲ್ಲ. ರಾಜ್ಯದ ಸಂಬಂಧದಲ್ಲಿ ಅವನಿಗೆ ಯಾವ ಗಮನವೂ ಇರಲಿಲ್ಲ. ಅವನು ಕಾಮಚಾರಿಯಾಗಿದ್ದನು. ಮಾತನಾಡು ವುದರಲ್ಲಿ ನಿಪುಣನಾಗಿದ್ದನು.

ಇಂತಹ ವಾನರಾಧಿಪತಿಯಾದ ಸುಗ್ರೀವನು ಕರ್ತವ್ಯವೇನೆಂಬುದನ್ನೇ ಮರೆತುದನ್ನು ಕಂಡು ಹನುಮಂತನು ಅವನ ಬಳಿಗೆ ಹೋಗಿ ವಿಧ-ವಿಧವಾದ ತರ್ಕಬದ್ಧವಾದ ಮತ್ತು ಮನೋಹರವಾದ ಮಾತುಗಳಿಂದ ಸುಗ್ರೀವನನ್ನು ಪ್ರಸನ್ನಗೊಳಿಸಿ ಹಿತವೂ, ನಿಶ್ಚಿತವೂ, ಪಥ್ಯವೂ, ಸಾಮ-ಧರ್ಮಾರ್ಥನೀತಿ ಯುಕ್ತವೂ, ಪ್ರಣಯದಿಂದಲೂ ಪ್ರೀತಿಯಿಂದಲೂ ಕೂಡಿದ್ದು ಆಪ್ತವಾಕ್ಯ ವೆಂಬ ವಿಶ್ವಾಸವನ್ನು ಹುಟ್ಟಿಸುವ ಈ ಮಾತನ್ನು ಹೇಳಿದನು :



CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.

"ವಾನರೇಶ್ವರನೇ! ನೀನು ರಾಜ್ಯವನ್ನೂ ಐಶ್ವರ್ಯವನ್ನೂ ಪಡೆದುಕೊಂಡೆ. ನಿನ್ನ ಕುಲಕ್ಕೆ ಸಂಬಂಧಿಸಿದ ಐಶ್ವರ್ಯವೂ ವೃದ್ಧಿಹೊಂದಿದೆ. ಆದರೆ ಮಿತ್ರಸಂಗ್ರಹಕಾರ್ಯವು (ಮಿತ್ರನಿಗೆ ಮಾಡಬೇಕಾಗಿರುವ ಕಾರ್ಯವು) ಹಾಗೆಯೇ ಉಳಿದಿದೆ. ಆದುದರಿಂದ ಈಗ ಆ ಕಾರ್ಯವನ್ನು ಮಾಡುವುದು ನಿನಗೆ ಉಚಿತವಾಗಿದೆ.

ಯೋ ಹಿ ಮಿತ್ರೇಷು ಕಾಲಜ್ಞಃ ಸತತಂ ಸಾಧು ವರ್ತತೇ ।
ತಸ್ಯ ರಾಜ್ಯಂ ಚ ಕೀರ್ತಿಶ್ಚ ಪ್ರತಾಪಶ್ಚಾಭಿವರ್ಧತೇ ॥೧೦॥

ಯಾವ ಮನುಷ್ಯನು ಉಚಿತವಾದ ಕಾಲವನ್ನು ತಿಳಿದು ಮಿತ್ರರ ವಿಷಯದಲ್ಲಿ ಯಾವಾಗಲೂ ಒಳ್ಳೆಯ ರೀತಿಯಿಂದ ವರ್ತಿಸುವನೋ-ಅಂತಹವನ ರಾಜ್ಯವೂ, ಕೀರ್ತಿಯೂ ಮತ್ತು ಪ್ರತಾಪವೂ ವೃದ್ಧಿಯನ್ನು ಹೊಂದುತ್ತವೆ.

ಯಸ್ಯ ಕೋಶಶ್ಚ ದಣ್ಡಶ್ಚ ಮಿತ್ರಾಣ್ಯಾತ್ಮಾ ಚ ಭೂಮಿಪ ।
ಸಮವೇತಾನಿ ಸರ್ವಾಣಿ ಸ ರಾಜ್ಯಂ ಮಹದಶ್ನುತೇ ॥೧೧॥

ಮಹಾರಾಜ! ಯಾವ ರಾಜನಿಗೆ ಕೋಶ, ದಂಡ, ಮಿತ್ರರು, ತಾನು-ಈ ಎಲ್ಲವೂ ಒಂದನ್ನೊಂದು ಹೊಂದಿಕೊಂಡಿರುತ್ತವೆಯೋ, ಸ್ವದೇಹದಂತೆ ಭಾವಿಸಿ ಯಾವನು ಈ ಎಲ್ಲವನ್ನೂ ಪರಿಪಾಲಿಸುವನೋ ಅಂತಹ ರಾಜನು ಮಹಾರಾಜ್ಯವನ್ನೇ ಪಡೆದುಕೊಳ್ಳುತ್ತಾನೆ.

ಸಚ್ಚಾರಿತ್ರ್ಯದಿಂದ ಕೂಡಿರುವ ಮತ್ತು ಸನ್ಮಾರ್ಗಪ್ರವೃತ್ತನಾಗಿರುವ ನೀನು ಮಿತ್ರನ ಸಲುವಾಗಿ ಮತ್ತು ಪ್ರತಿಜ್ಞಾಪೂರಣಕ್ಕಾಗಿ ಯಥಾಯೋಗ್ಯವಾದ ಕಾರ್ಯವನ್ನು ಮಾಡುವುದು ಉಚಿತವಾಗಿದೆ. ಯಾವನು ಮಿತ್ರನ ಸಲುವಾಗಿ ಸ್ವಭೋಗಸಾಧಕಗಳಾದ ಸಕಲಕಾರ್ಯಗಳನ್ನೂ ಬಿಟ್ಟು ಉತ್ಸಾಹದಿಂದ ಆದರಪೂರ್ವಕವಾಗಿ ಕಾರ್ಯಮಾಡುವನೋ-ಅಂತಹವನು ಅನರ್ಥಪರಂಪರೆಗಳನ್ನು ಎದುರಿಸಬೇಕಾಗುವುದಿಲ್ಲ. ಯಾವನು ಕಾಲವು ಮೀರಿ ಹೋದನಂತರ ಮಿತ್ರರ ಕಾರ್ಯದಲ್ಲಿ ತೊಡಗುವನೋ-ಅವನು ಮಹತ್ಕಾರ್ಯಗಳನ್ನೇ ಮಾಡಿದರೂ-ಆ ಕಾರ್ಯಗಳು ಮಿತ್ರನ ಅರ್ಥಸಿದ್ಧಿಗೆ ಸಾಧಕಗಳಾಗುವುದಿಲ್ಲ. ಮಿತ್ರನ ಸಂಬಂಧವಾಗಿ ನಾವು ಮಾಡಬೇಕಾಗಿದ್ದ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಕಾರ್ಯವು ಈಗಾಗಲೇ ಕಾಲಾತೀತವಾಗಿಹೋಗಿದೆ. ಮಿತ್ರನಾದ ರಾಘವನ ಪತ್ನಿಯಾದ ಸೀತೆಯನ್ನು ಹುಡುಕುವ ಕಾರ್ಯವನ್ನು ಅತಿಶೀಘ್ರವಾಗಿ ಮಾಡು. ಸಮಯಜ್ಞನಾದ, ನಿನ್ನ ಆಶ್ರಯದಲ್ಲಿರುವ, ಪ್ರಾಜ್ಞನಾದ ರಾಘವನು ಸೀತಾನ್ವೇಷಣೆಯಲ್ಲಿ ಅತ್ಯಾತುರವುಳ್ಳವನಾಗಿದ್ದರೂ ಕಾಲಾತೀತವಾಯಿತೆಂಬ ವಿಷಯವನ್ನು ನಿನ್ನೊಡನೆ ಹೇಳುವುದಿಲ್ಲ. ತಾನು ಜನ್ಮಪಡೆದ ವಂಶದ ಪ್ರಾಶಸ್ತ್ಯಕ್ಕೆ ಮೂಲಕಾರಣನಾದ, ದೀರ್ಘಬಂಧುವಾಗಿರುವ ರಾಘವನು ಅಪ್ರಮೇಯವಾದ ಪ್ರಭಾವವುಳ್ಳವನು. ಗುಣಗಳಿಂದಲೂ ಅವನು ಅಪ್ರತಿಮನು. ಹಿಂದೆ ಅವನು ನಿನ್ನ ಕಾರ್ಯವನ್ನು ಮಾಡಿಕೊಟ್ಟಿದ್ದಾನೆ. ಈಗ ನೀನು ಅವನ ಕಾರ್ಯವನ್ನು ಮಾಡಿಕೊಡಬೇಕು. ಸೀತಾನ್ವೇಷಣೆಗೆ ವಾನರಶ್ರೇಷ್ಠರಿಗೆ ಆಜ್ಞೆಮಾಡುವುದು ಯುಕ್ತವಾಗಿದೆ.

ಶ್ರೀರಾಮನು ಪ್ರೇರಣೆಮಾಡುವ ಮೊದಲೇ ನಾವು ಸೀತಾನ್ವೇಷಣೆಯ ಕಾರ್ಯವನ್ನು ಕೈಗೊಂಡೆವಾದರೆ ಅದು ಕಾಲಾತೀತವೆನಿಸುವುದಿಲ್ಲ. ಶ್ರೀರಾಮನು ನಮಗೆ ಪ್ರೇರಣೆಮಾಡಿದನಂತರ ನಾವು ಕಾರ್ಯದಲ್ಲಿ ತೊಡಗಿದೆವಾದರೆ–ಅದು ಕಾಲಾತೀತವೆನಿಸಿಕೊಳ್ಳುತ್ತದೆ. ಆದುದರಿಂದ ಶ್ರೀರಾಮನು ಆಜ್ಞೆಮಾಡುವ ಮೊದಲೇ ನಾವು ಸೀತಾನ್ವೇಷಣೆಯ ಕಾರ್ಯದಲ್ಲಿ ತೊಡಗುವುದು ಯುಕ್ತವಾಗಿದೆ.

ಹರಿಗಣೇಶ್ವರನೇ! ಯಾವುದೇ ಉಪಕಾರವನ್ನು ಮಾಡದೇ ಇರುವವನಿಗೂ ಉಪಕಾರಮಾಡುವ ಸ್ವಭಾವವು ನಿನ್ನದಾಗಿದೆ. ಹೀಗಿರುವಾಗ ರಾಜ್ಯದ ವಿಷಯದಲ್ಲಿಯೂ ವಾಲಿಯ ವಧೆಯ ವಿಷಯದಲ್ಲಿಯೂ ನಿನಗೆ ಮಹೋಪಕಾರವನ್ನೇ ಎಸಗಿರುವ ಶ್ರೀರಾಮನ ವಿಷಯವಾಗಿ ಹೇಳುವುದೇನಿದೆ? ನೀನು ಅವಶ್ಯವಾಗಿ ಶ್ರೀರಾಮನ ಕಾರ್ಯವನ್ನು ಮಾಡಿಕೊಡುವೆಯೆಂಬುದರಲ್ಲಿ ಸಂಶಯವೇ ಇಲ್ಲ. ನೀನು ಅತಿಸಮರ್ಥನು. ಮಹಾಪರಾಕ್ರಮಿಯು. ಆದರೂ ಶ್ರೀರಾಮನಿಗೆ ಪ್ರೀತಿಯನ್ನುಂಟುಮಾಡುವ ಸಲುವಾಗಿ ಸೀತೆಯನ್ನು ಹುಡುಕುವಂತೆ ವಾನರಶ್ರೇಷ್ಠರಿಗೆ ಆಜ್ಞೆಮಾಡಲು ನೀನೇಕಿನ್ನೂ ಸಿದ್ಧನಾಗಿಲ್ಲ? ದಶರಥಪುತ್ರನಾದ ಶ್ರೀರಾಮನು ಬಾಣಗಳ ಸಹಾಯದಿಂದಲೇ ಸುರಾಸುರ-ಮಹೋರಗರನ್ನೂ ಸ್ವಾಧೀನಪಡಿಸಿಕೊಳ್ಳಲು ಸಮರ್ಥನು. ಆದರೆ ನೀನು ಮಾಡಿಕೊಟ್ಟಿರುವ ಪ್ರತಿಜ್ಞೆಯನ್ನು ನಿರೀಕ್ಷಿಸು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ತ್ತಿದ್ದಾನೆ. ತನಗೆ ಯಾವ ಅಪಕಾರವನ್ನೂ ಮಾಡದಿದ್ದ ವಾಲಿಯನ್ನು ನಿನಗೋಸ್ಕರ ಶಂಕೆಯಿಲ್ಲದೇ ಸಂಹರಿಸಿದ ಶ್ರೀರಾಮನು ನಿನಗೆ ಮಹೋಪಕಾರವನ್ನೇ ಮಾಡಿದ್ದಾನೆ. ಅವನು ಮಾಡಿರುವ ಉಪಕಾರಕ್ಕೆ ಪ್ರತ್ಯುಪಕಾರ ರೂಪವಾಗಿ ನಾವು ಭೂಮಿಯಲ್ಲಾಗಲೀ ಅಂತರಿಕ್ಷದಲ್ಲಾಗಲೀ ಅವನ ಪ್ರಿಯಭಾರ್ಯೆಯಾವ ವೈದೇಹಿಯನ್ನು ಹುಡುಕಲೇಬೇಕು. ದೇವ-ದಾನವ-ಗಂಧರ್ವರಾಗಲೀ, ಮರುದ್ಗಣಗಳಿಂದ ಕೂಡಿರುವ ಅಸುರರಾಗಲೀ, ಯಕ್ಷರಾಗಲೀ ಯುದ್ಧದಲ್ಲಿ ಶ್ರೀರಾಮನಿಗೆ ಭಯವನ್ನುಂಟುಮಾಡಲಾರರು. ಹೀಗಿರುವಾಗ ರಾಕ್ಷಸರು ಹೇಗೆ ತಾನೇ ರಾಮನಿಗೆ ಭಯವನ್ನುಂಟುಮಾಡಬಲ್ಲರು? ಪಿಂಗೇಶನೇ! ಹೀಗೆ ಮಹಾಶಕ್ತಿವಂತನಾದ, ಹಿಂದೆ ನಿನಗೆ ಉಪಕಾರವನ್ನು ಮಾಡಿರುವ ಶ್ರೀರಾಮನಿಗೆ ಎಲ್ಲ ರೀತಿಗಳಿಂದಲೂ ಪ್ರಿಯವನ್ನುಂಟುಮಾಡುವುದು ನಿನ್ನ ಕರ್ತವ್ಯವಾಗಿದೆ.

ನಿನ್ನ ಆಜ್ಞೆಯಾಯಿತೆಂದರೆ ಪಾತಾಳದಲ್ಲಾಗಲೀ, ಭೂಮಿಯಲ್ಲಾಗಲೀ, ನೀರಿನಲ್ಲಾಗಲೀ, ಅಂತರಿಕ್ಷದಲ್ಲಾಗಲೀ-ನಮ್ಮನ್ನು ಯಾರೂ ತಡೆಯಲಾರರು. ಎದುರಿಸಲು ಅಸಾಧ್ಯರಾದ ಕೋಟಿಸಂಖ್ಯೆಯನ್ನೂ ಮೀರಿರುವ ಕಪೀಶ್ವರರು ನಿನ್ನ ಅಧೀನದಲ್ಲಿದ್ದಾರೆ. ನಿನ್ನ ಸಲುವಾಗಿ ಯಾರು ಯಾವ ಸ್ಥಳದಲ್ಲಿ ಏನುಮಾಡಬೇಕು ?-ಎಂಬುದನ್ನು ಅಜ್ಞಾಪಿಸು."

ಸಕಾಲದಲ್ಲಿ ಸಮೀಚಿನವಾಗಿ ವಿವರಿಸಿ ಹೇಳಿದ ಹನುಮಂತನ ಆ ಮಾತುಗಳನ್ನು ಕೇಳಿ ಸತ್ತ್ವಸಂಪನ್ನನಾದ ಸುಗ್ರೀವನು ತನ್ನ ಬುದ್ಧಿಯನ್ನು ಉತ್ತಮಪಡಿಸಿಕೊಂಡನು. ಎಲ್ಲ ದಿಕ್ಕುಗಳಲ್ಲಿಯೂ ಇರುವ ತನ್ನ ಸಮಸ್ತಸೈನಿಕರನ್ನೂ ಕರೆತರುವ ಸಲುವಾಗಿ ನಿರಂತರವಾಗಿ ಪ್ರಯತ್ನಶೀಲನಾದ ನೀಲನನ್ನು ನಿಯೋಜಿಸಿ ಹೇಳಿದನು :

" ನೀಲ ! ಸಮಗ್ರ ಕಪಿಸೈನ್ಯವೂ, ಎಲ್ಲ ಕಡೆಗಳಲ್ಲಿಯೂ ಇರುವ ನನ್ನ ಯೂಥಪತಿಗಳೂ ಸೇನಾನಾಯಕರೊಡನೆ ಶೀಘ್ರವಾಗಿ ಇಲ್ಲಿಗೆ ಬರುವಂತೆ ವ್ಯವಸ್ಥೆಗೊಳಿಸು. ಅತಿದೂರದಲ್ಲಿರುವ ಸೇನಾಧೀಶರೂ, ಶೀಘ್ರವಾಗಿ ಪ್ರಯಾಣಮಾಡಲು ಸಾಮರ್ಥ್ಯವಿರುವವರೂ, ಉದ್ಯೋಗಶೀಲರೂ ನನ್ನ ಆಜ್ಞಾನುಸಾರವಾಗಿ ವಿಳಂಬವಾಗದಂತೆ ಸೈನ್ಯದೊಡನೆ ಇಲ್ಲಿಗೆ ಆಗಮಿಸಲಿ. ಸೈನ್ಯಸಂಗ್ರಹವಾದನಂತರ ಮಾಡಬೇಕಾದ ಕಾರ್ಯವನ್ನು ನೀನೇ ಸ್ವತಃ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ನೋಡಿಕೊಳ್ಳಬೇಕು. ಇಂದಿಗೆ ಹದಿನೈದು ದಿವಸಗಳಿಗೊಳಗಾಗಿ ಎಲ್ಲರೂ ಇಲ್ಲಿ ಬಂದು ಸೇರಬೇಕು. ಈ ಅವಧಿಯು ಕಳೆಯುವುದರೊಳಗೆ ಯಾವ ವಾನರನು ಇಲ್ಲಿಗೆ ಬರುವುದಿಲ್ಲವೋ ಅಂತಹವನಿಗೆ ಮರಣದಂಡನೆಯು ಶಿಕ್ಷೆಯಾಗುತ್ತದೆ. ಈ ವಿಷಯದಲ್ಲಿ ಪುನಃ ವಿಚಾರಿಸಬೇಕಾದ ಆವಶ್ಯಕತೆಯೇ ಇಲ್ಲ. ನಿಶ್ಚಿತವಾಗಿರುವ ಈ ನನ್ನ ಆಜ್ಞೆಯನ್ನು ಅಧಿಕರಿಸಿ ಅಂಗದನೊಡನೆ ನೀನೇ ವೃದ್ಧವಾನರರ ಬಳಿಗೆ ಹೋಗಿ ಅವರಿಗೂ ತಿಳಿಸಬೇಕು."

ಹರಿಪುಂಗವರಿಗೆ ಈಶ್ವರನಾದ, ವೀರ್ಯವಂತನಾದ ಸುಗ್ರೀವನು ಸೈನಿಕರನ್ನು ಕರೆತರಲು ಹೀಗೆ ವ್ಯವಸ್ಥೆಯನ್ನು ಮಾಡಿ ತನ್ನ ಅರಮನೆಯನ್ನು ಪ್ರವೇಶಿಸಿದನು.

೨೯ನೆಯ ಸರ್ಗವು ಮುಗಿಯಿತು.

ಕಿಷ್ಕಿಂಧಾಕಾಂಡ ೩೦ನೆಯ ಸರ್ಗ

## ಶರದೃತುವಿನ ವರ್ಣನೆ: ಶ್ರೀರಾಮನು ಲಕ್ಷ್ಮಣನಿಗೆ ಸುಗ್ರೀವನ ಬಳಿಗೆ ಹೋಗಲು ಆಜ್ಞೆ ಮಾಡಿದುದು

ಗುಹಾಂ ಪ್ರವಿಷ್ಟೇ ಸುಗ್ರೀವೇ ವಿಮುಕ್ತೇ ಗಗನೇ ಘನೈಃ ।
ವರ್ಷರಾತ್ರೋಷಿತೋ ರಾಮಃ ಕಾಮಶೋಕಾಭಿಪೀಡಿತಃ ॥೧॥

ಸುಗ್ರೀವನು ಕಪಿಸೈನ್ಯವನ್ನು ಕರೆತರುವಂತೆ ನೀಲನಿಗೆ ಆಜ್ಞಾಪಿಸಿ ಗುಹೆಯನ್ನು ಪ್ರವೇಶಿಸಿದನು. ಆಗ ಆಕಾಶವು ಮೋಡಗಳಿಂದ ಮುಕ್ತವಾಗಿ ಸ್ವಚ್ಛವಾಗಿದ್ದಿತು. ವರ್ಷಾಕಾಲದ ರಾತ್ರಿಗಳಲ್ಲಿ ಏಕಾಕಿಯಾಗಿದ್ದು ವಿರಹ ವೇದನೆಯ ಶೋಕದಿಂದ ಪೀಡಿತನಾಗಿದ್ದ, ಅತಿಯಾದ ಮನೋವ್ಯಾಕುಲತೆಯಿಂದ ಕೂಡಿದ್ದ ಶ್ರೀರಾಮನು ನಿರ್ಮಲವಾದ ಆಕಾಶವನ್ನೂ, ವಿಶುದ್ಧವಾದ ಚಂದ್ರಮಂಡಲವನ್ನೂ, ಬೆಳದಿಂಗಳಿನಿಂದ ಅನುಲೇಪಿತವಾಗಿದ್ದ ಶರತ್ಕಾಲದ ರಾತ್ರಿಯನ್ನೂ ನೋಡಿ, ಕಾಮವೃತ್ತನಾದ ಸುಗ್ರೀವನನ್ನೂ ನಷ್ಟಳಾಗಿ ಹೋಗಿದ್ದ ಸೀತೆಯನ್ನೂ ಜ್ಞಾಪಿಸಿಕೊಂಡು, ಕಾಲವು ಮೀರಿಹೋಯಿತೆಂದು ಭಾವಿಸಿ ಮೋಹವಶನಾದನು. ಮೇಧಾವಿಯಾದ ರಾಘವನು ಸ್ವಲ್ಪಹೊತ್ತು ಕಳೆದನಂತರ ಎಚ್ಚರಗೊಂಡು ಮನಸ್ಸಿನಲ್ಲಿಯೇ ಸ್ಥಿರವಾಗಿ ನೆಲೆಸಿದ್ದ ವೈದೇಹಿಯನ್ನು ಚಿಂತಿಸತೊಡಗಿದನು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

ಮಿಂಚುಗಳಿಂದಲೂ ಮೋಡಗಳಿಂದಲೂ ವಿಹೀನವಾಗಿದ್ದ, ಸಾರಸಪಕ್ಷಿಗಳ ಧ್ವನಿಯಿಂದ ನಿನಾದಿತವಾಗಿದ್ದ, ನಿರ್ಮಲವಾಗಿದ್ದ ಆಕಾಶವನ್ನು ನೋಡಿ ಶ್ರೀರಾಮನು ಸಂಕಟದಿಂದ ಕೂಡಿದ ಧ್ವನಿಯಿಂದ ವಿಲಪಿಸತೊಡಗಿದನು. ಸುವರ್ಣಮಯವಾದ ಧಾತುಗಳಿಂದ ಸಮಲಂಕೃತವಾಗಿದ್ದ ಪರ್ವತದ ಅಗ್ರಭಾಗದಲ್ಲಿ ಕುಳಿತಿದ್ದ ಶ್ರೀರಾಮನು ಶರತ್ಕಾಲದ ನಿರ್ಮಲಾಕಾಶವನ್ನು ನೋಡಿ ಪ್ರಿಯೆಯಾದ ಸೀತೆಯನ್ನು ಮನಸ್ಸಿನಿಂದಲೇ ಸ್ಮರಿಸಿದನು.

" ಸಾರಸಪಕ್ಷಿಗಳ ಮಧುರಧ್ವನಿಯಂತೆ ಸುಮಧುರವಾಗಿ ಮಾತನಾಡುತ್ತಿದ್ದ ಬಾಲೆಯಾದ ಸೀತೆಯು ಹಿಂದೆ ಆಶ್ರಮದಲ್ಲಿ ಸಾರಸಪಕ್ಷಿಗಳ ಧ್ವನಿಯನ್ನು ಕೇಳಿ ಸಂತೋಷಿಸುತ್ತಿದ್ದಳು. ನಾನಿಲ್ಲದಿರುವಾಗ ಈಗ ಅವಳು ಹೇಗೆ ತಾನೇ ಕ್ರೀಡಿಸಿಯಾಳು ? ಪುಷ್ಪಭರಿತವಾಗಿರುವುದರಿಂದ ಸುವರ್ಣದ ವೃಕ್ಷಗಳಂತೆ ಕಾಣುತ್ತಿರುವ ನಿರ್ಮಲವಾದ ಹೊನ್ನೇಮರಗಳನ್ನು ನೋಡಿ ನನ್ನನ್ನು ಕಾಣದೇ ಆ ಬಾಲೆಯು ಹೇಗೆ ತಾನೇ ಕ್ರೀಡಿಸಬಲ್ಲಳು ? ಸುಮಧುರವಾದ ಮಾತುಗಳನ್ನಾಡುವ, ಸರ್ವಾಂಗಸುಂದರಳಾದ ಯಾವ ಸೀತೆಯು ಹಿಂದೆ ರಾಜಹಂಸಗಳ ಕಲ-ಕಲನಿನಾದಗಳಿಂದ ಎಚ್ಚರಗೊಳ್ಳುತ್ತಿದ್ದಳೋ–ಅವಳು ಈಗ ಹೇಗೆ ಎಚ್ಚರಗೊಳ್ಳುವಳು ? ಸಹಚಾರಿಗಳಾದ ಚಕ್ರವಾಕಪಕ್ಷಿಗಳ ಧ್ವನಿಯನ್ನು ಕೇಳಿ ಕಮಲದಂತೆ ವಿಶಾಲವಾದ ಕಣ್ಣುಗಳಿಂದ ಕೂಡಿರುವ ಆ ನನ್ನ ಸೀತೆಯು ಈಗ ಆ ಕಲ-ಕಲನಿನಾದವನ್ನು ಕೇಳಿ ಹೇಗಿರುವಳೋ ತಿಳಿಯದಾಗಿದೆ. ಚಿಗರೇಮರಿಗಳ ಕಣ್ಣುಗಳಂತೆ ಚಂಚಲವಾದ ಕಣ್ಣುಗಳಿಂದ ಕೂಡಿರುವ ಸೀತಾದೇವಿಯಿಲ್ಲದೇ ಸರೋವರಗಳ ಪ್ರದೇಶಗಳಲ್ಲಿಯೂ, ನದಿಗಳ ದಂಡೆಗಳಲ್ಲಿಯೂ, ಹೊಂಡಗಳ ಸಮೀಪದಲ್ಲಿಯೂ, ದೊಡ್ಡ ಅರಣ್ಯಗಳಲ್ಲಿಯೂ, ಸಣ್ಣ ವನಗಳಲ್ಲಿಯೂ ಸಂಚರಿಸುತ್ತಿರುವ ನಾನು ಯಾವ ವಿಧವಾದ ಮಾನಸಿಕಸುಖವನ್ನೂ ಹೊಂದುತ್ತಿಲ್ಲ. ಶರತ್ಕಾಲದ ಆತ್ಯಾಕರ್ಷಕವಾದ ಗುಣಸಾಧನಗಳಿಂದ ಪರಿಪೂರ್ಣನಾದ ಕಾಮದೇವನು ನನ್ನ ಭಾಮಿನಿಯನ್ನು, ಸೌಕುಮಾರ್ಯದ ಕಾರಣದಿಂದಲೂ ನನ್ನ ಅಗಲಿಕೆಯ ಕಾರಣದಿಂದಲೂ ಮರಣಪರ್ಯಂತವಾಗಿ ಪೀಡಿಸುತ್ತಲೇ ಇರಬಹುದಲ್ಲವೇ ? "

ಚಾತಕಪಕ್ಷಿಯು ಇಂದ್ರನಿಂದ ನೀರನ್ನಪೇಕ್ಷಿಸಿ ( ಮಳೆಯ ನೀರಿಗಾಗಿ )

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ವಿಲಪಿಸುತ್ತಿರುವಂತೆ-ರಾಜಕುಮಾರನಾದ ನರಶ್ರೇಷ್ಠನಾದ ಶ್ರೀರಾಮನು ಇವೇ ಮುಂತಾಗಿ ಹೇಳಿಕೊಂಡು ವಿಲಪಿಸುತ್ತಿದ್ದನು. ಆ ಸಮಯದಲ್ಲಿ ಕಂದ-ಮೂಲ-ಫಲಗಳನ್ನು ತರುವ ಸಲುವಾಗಿ ಬೆಟ್ಟದ ತಪ್ಪಲುಗಳಲ್ಲಿ ಸಂಚರಿಸುತ್ತಿದ್ದು ಆಶ್ರಮದ ಕಡೆಗೆ ಹಿಂದಿರುಗಿದ ಕಾಂತಿಯುಕ್ತನಾಗಿದ್ದ ಲಕ್ಷ್ಮಣನು-ಖಿನ್ನವಾದ ಮುಖಭಾವದಿಂದ ಕೂಡಿದ್ದ ಅಣ್ಣನನ್ನು ನೋಡಿದನು. ಜಿತೇಂದ್ರಿಯನಾದ ಅಣ್ಣನು ವಿಷಾದಿಸುತ್ತಿದ್ದುದರಿಂದ ಅತ್ಯಂತದೀನನಾಗಿದ್ದ ಲಕ್ಷ್ಮಣನು ಸಹಿಸಲು ಅಸಾಧ್ಯವಾದ ಸೀತಾವಿರಹದ ಚಿಂತೆಯಿಂದ ಕೂಡಿ, ಆ ಕಾರಣದಿಂದಲೇ ಬುದ್ಧಿಗೆಟ್ಟವನಂತಿದ್ದ, ಏಕಾಕಿಯಾಗಿದ್ದ ಶ್ರೀರಾಮನನ್ನು ಜನರಹಿತವಾಗಿದ್ದ ಅರಣ್ಯಪ್ರದೇಶದಲ್ಲಿ ನೋಡಿ ಅವಸರದಿಂದ ಹೀಗೆ ಹೇಳಿದನು :

ಕಿಮಾರ್ಯ ಕಾಮಸ್ಯ ವಶಂಗತೇನ
ಕಿಮಾತ್ಮಪೌರುಷ್ಯಪರಾಭವೇನ ।
ಅಯಂ ಸದಾ ಸಂಹ್ರಿಯತೇ ಸಮಾಧಿಃ
ಕಿಮತ್ರ ಯೋಗೇನ ನಿವರ್ತಿತೇನ ॥೧೬॥

"ಆರ್ಯನೇ ! ಕಾಮಕ್ಕೆ ಮನಸ್ಸನ್ನು ವಶಪಡಿಸುವುದರಿಂದ ಪ್ರಯೋಜನವೇನಿದೆ ? ಕಾಮವಶನಾಗಿ ಆತ್ಮಪೌರುಷವನ್ನು ಹಾಳುಮಾಡಿಕೊಳ್ಳುವುದರಿಂದ ಪ್ರಯೋಜನವೇನಿದೆ ? ಶೋಕದಿಂದ ಚಿತ್ತೈಕಾಗ್ರತೆಯು ಹಾಳಾಗುತ್ತದೆ. ಚಿತ್ತೈಕಾಗ್ರತೆಯನ್ನು ಹಾಳುಮಾಡಿಕೊಳ್ಳುವುದರಿಂದ ಆಗುವ ಪ್ರಯೋಜನವೇನು ?

ಕ್ರಿಯಾಭಿಯೋಗಂ ಮನಸಃ ಪ್ರಸಾದಂ
ಸಮಾಧಿಯೋಗಾನುಗತಂ ಚ ಕಾಲಮ್ ।
ಸಹಾಯಸಾಮರ್ಥ್ಯಮದೀನಸತ್ತ್ವ
ಸ್ವಕರ್ಮಹೇತುಂ ಚ ಕುರುಷ್ವ ಹೇತುಮ್ ॥೧೭॥

ಧೀರನೇ ! ಕಾರ್ಯದಲ್ಲಿ ಆಸಕ್ತಿಯನ್ನು ಹೊಂದು. ಮನಸ್ಸನ್ನು ಪ್ರಸನ್ನಗೊಳಿಸು. ಎಲ್ಲ ಸಮಯಗಳಲ್ಲಿಯೂ ಚಿತ್ತವನ್ನು ಏಕಾಗ್ರಗೊಳಿಸು. ಸಹಾಯಕರ ಸಾಮರ್ಥ್ಯವನ್ನು ತಿಳಿದುಕೊ. ನಿನ್ನ ಕಾರ್ಯಸಾಧನೆಗೆ ಕಾರಣಭೂತವಾದ ಕರ್ಮವನ್ನು ಮಾಡು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.

ನ ಜಾನಕೀ ಮಾನವವಂಶನಾಥ
ತ್ವಯಾ ಸನಾಥಾ ಸುಲಭಾ ಪರೇಣ ।
ನ ಚಾಗ್ನಿಚೂಡಾಂ ಜ್ವಲಿತಾಮುಪೇತ್ಯ
ನ ದಹ್ಯತೇ ವೀರವರಾರ್ಹ ಕಶ್ಚಿತ್ ॥೧೮॥

ಮಾನವವಂಶಕ್ಕೇ ಸ್ವಾಮಿಯಾಗಿರುವವನೇ ! ವೀರಶ್ರೇಷ್ಠರೆಲ್ಲರಿಗೂ ಶ್ರೇಷ್ಠನಾಗಿರುವವನೇ ! ನಿನ್ನಿಂದ ಸನಾಥೆಯಾಗಿರುವ ಜಾನಕಿಯನ್ನು ಇತರರು ಸುಲಭವಾಗಿ ಪಡೆಯಲಾರರು. ಪ್ರಜ್ವಲಿಸುತ್ತಿರುವ ಅಗ್ನಿಯ ಜ್ವಾಲೆಯ ಮಧ್ಯಕ್ಕೆ ಹೋದವನು ದಹಿಸಲ್ಪಡದೇ ಇರುವುದಿಲ್ಲವಷ್ಟೇ ! ”*

ಲಕ್ಷ್ಮಣನು ಹೇಳಿದ ಆ ಮಾತುಗಳನ್ನು ಕೇಳಿ ಶ್ರೀರಾಮನು–ರಾಜ ಲಕ್ಷಣಗಳಿಂದ ಕೂಡಿದ್ದ, ಶತ್ರುಗಳಿಂದ ಎದುರಿಸಲು ಅಸಾಧ್ಯನಾಗಿದ್ದ ಲಕ್ಷ್ಮಣನಿಗೆ ಹಿತಕರವೂ, ಪಥ್ಯವೂ, ನೀತಿಶಾಸ್ತ್ರಕ್ಕೆ ಅನುಗುಣವೂ, ಸಾಂತ್ವನಸಹಿತವೂ, ಧರ್ಮಾರ್ಥಯುಕ್ತವೂ, ಸ್ವಭಾವಸಹಿತವೂ ಆಗಿರುವ ಮಾತುಗಳನ್ನು ಹೇಳಿದನು :

“ ಕುಮಾರ ! ಸೀತಾನ್ವೇಷಣೆಯ ಕಾರ್ಯದ ಕಡೆಗೆ ಗಮನವನ್ನು ಕೊಡಬೇಕು. ಇದರಲ್ಲಿ ಸಂಶಯವೇ ಇಲ್ಲ. ಇದಕ್ಕಾಗಿ ಉತ್ಸಾಹಾದಿ ವಿಶೇಷ ವಾದ ಉಪಾಯವನ್ನೂ ಅನುಸರಿಸಬೇಕು. ಈಗ ಮಾಡಬೇಕಾಗಿರುವ ಅತ್ಯಂತದುರಾಸದವಾದ ಸೀತಾನ್ವೇಷಣೆಯೆಂಬ ಕಾರ್ಯದ ಫಲವೇನೆಂಬು ದನ್ನು ಚಿಂತಿಸಬೇಡವೇ ? ”

ಬಳಿಕ ಶ್ರೀರಾಮನು ಪದ್ಮಪತ್ರದಂತೆ ವಿಶಾಲವಾದ ಕಣ್ಣುಗಳುಳ್ಳವ ಳಾಗಿದ್ದ ಮೈಥಿಲಿಯನ್ನು ಸ್ಮರಿಸುತ್ತಾ ಬಾಡಿಹೋದ ಮುಖದಿಂದ ಕೂಡಿದವ ನಾಗಿ ಪುನಃ ಲಕ್ಷ್ಮಣನಿಗೆ ಹೇಳಿದನು :

“ ಲಕ್ಷ್ಮಣ ! ಇಂದ್ರನು ನೀರಿನಿಂದ ಭೂಮಿಯನ್ನು ತೃಪ್ತಿಗೊಳಿಸಿ ಸಸ್ಯಗಳನ್ನು ಪಕ್ವಗೊಳಿಸಿ ಕೃತಕೃತ್ಯನಾಗಿದ್ದಾನೆ. ಸ್ನಿಗ್ಧವಾದ ಮತ್ತು ಗಂಭೀರವಾದ ಗರ್ಜನೆಗಳಿಂದ ಕೂಡಿರುವ, ಪರ್ವತದಲ್ಲಿರುವ ವೃಕ್ಷಗಳ

* ಅಗ್ನಿಯ ಜ್ವಾಲೆಗಳ ಮಧ್ಯೆ ಹೋದವನು ಭಸ್ಮವಾಗಿ ಹೋಗುವಂತೆ–ನಿನ್ನ ರಕ್ಷಣೆಗೆ ಒಳಪಟ್ಟಿರುವ ಸೀತಾದೇವಿಯನ್ನು ಮುಟ್ಟಲು ಹೋದವನು ವಿನಾಶಹೊಂದುತ್ತಾನೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.


ಮುಂಭಾಗದಲ್ಲಿ ಸಂಚರಿಸುವ ಮೇಘಗಳು ತಮ್ಮಲ್ಲಿದ್ದ ನೀರನ್ನು ಸುರಿಸಿ ಆಯಾಸದಿಂದ ಬಳಲಿವೆ. ಕನ್ನೈದಿಲೆಯ ದಳಗಳಂತೆ ಶ್ಯಾಮಲವರ್ಣದಿಂದ ಕೂಡಿರುವ ಮೇಘಗಳು ಹತ್ತು ದಿಕ್ಕುಗಳನ್ನೂ ಕಪ್ಪಾಗಿಮಾಡಿ ಈಗ ಮದ ರಹಿತವಾಗಿರುವ ಆನೆಗಳಂತೆ ಶಾಂತವಾದ ವೇಗವುಳ್ಳವುಗಳಾಗಿವೆ. ನೀರನ್ನೇ ಗರ್ಭದಲ್ಲಿ ಧರಿಸಿರುವ (ನೀರಿನ ತುಂತುರುಗಳಿಂದ ಕೂಡಿರುವ), ಗೋರಂಟೀ ಮತ್ತು ಬಿಳೀಮತ್ತೀಹೂಗಳ ವಾಸನೆಯಿಂದ ವಾಸಿತವಾಗಿರುವ, ಮಹಾವೇಗ ಯುಕ್ತವಾದ ಮತ್ತು ಮಳೆಗರೆಯುವ ಮಾರುತಗಳು ಸರ್ವತ್ರ ಸಂಚರಿಸಿ ಈಗ ಶಾಂತವಾಗಿವೆ. ಮೇಘಗಳ ಆರ್ಭಟವೂ, ಆನೆಗಳ ಘೀಂಕಾರಗಳೂ, ನವಿಲುಗಳ ಕೇಕಾರವಗಳೂ, ಗಿರಿನದಿಗಳ ಜುಳು-ಜುಳುಶಬ್ದಗಳೂ ಬಹಳ ಬೇಗ ಶಾಂತವಾಗಿಬಿಟ್ಟವೆ. ಮಹಾಮೇಘಗಳ ಮಳೆಗರೆಯುವಿಕೆಯಿಂದ ನಿರ್ಮಲವಾದ, ಚಿತ್ರಿತವಾದ ತಪ್ಪಲುಗಳಿಂದ ವಿಶಿಷ್ಟವಾದ ಪರ್ವತಗಳು– ಕಾಂತಿಯುಕ್ತವಾದ ಹಲವಾರು ಬಣ್ಣಗಳಿಂದ ಅನುಲೇಪಿತವಾಗಿರುವುವೋ ಎಂಬಂತೆ ಕಾಣುತ್ತಿವೆ. ಶರದೃತುವು ಏಳೆಲೇಬಾಳೇಗಿಡಗಳ ಕೊಂಬೆ ಗಳಲ್ಲಿಯೂ, ನಕ್ಷತ್ರ-ಸೂರ್ಯ-ಚಂದ್ರರ ಕಾಂತಿಗಳಲ್ಲಿಯೂ, ಉತ್ಕೃಷ್ಟವಾದ ಆನೆಗಳ ಕ್ರೀಡಾವಿಹಾರಗಳಲ್ಲಿಯೂ ತನ್ನ ಕಾಂತಿಯನ್ನು ಹಂಚಿಕೊಂಡು ಆವಿರ್ಭವಿಸಿದೆ. ಈ ಸಮಯದಲ್ಲಿ ಶರತ್ಕಾಲದ ಗುಣಗಳಿಂದ ಸಂಪನ್ನವಾದ ಕಾಂತಿಯು ಅನೇಕವಸ್ತುಗಳ ಆಶ್ರಯವನ್ನು ಹೊಂದಿ ವಿಚಿತ್ರವಾದ ಶೋಭೆ ಯಿಂದ ಪ್ರಕಾಶಿಸುತ್ತಿದ್ದರೂ ಸೂರ್ಯನ ಪ್ರಾತಃಕಾಲದ ಕಿರಣಗಳಿಂದ ವಿಕಸಿತವಾದ ಕಮಲಸರೋವರಗಳಲ್ಲಿ ಹೆಚ್ಚಾಗಿ ಅದು ಪ್ರಕಾಶಿಸುತ್ತದೆ. ವಾಯುವನ್ನೇ ಅನುಸರಿಸಿ ಹೋಗುವ ಶರತ್ಕಾಲವು ಏಳೆಲೇಬಾಳೆಗಳ ಹೂಗಳ ಗಂಧವನ್ನು ಧರಿಸಿದೆ. ಆ ವಾಯುವನ್ನೇ ಅನುಸರಿಸಿ ದುಂಬಿಗಳು ಗಾಯನಮಾಡುತ್ತಿವೆ. ಆನೆಗಳ ದರ್ಪವನ್ನು ಹೆಚ್ಚಿಸುವ ಈ ಶರದೃತುವು ಹೆಚ್ಚು ಪ್ರಕಾಶಮಾನವಾಗಿ ಕಾಣುತ್ತಿದೆ.

ಮಾನಸಸರೋವರದಿಂದ ಬರುತ್ತಿರುವ, ಮನೋಮೋಹಕವಾದ ಮತ್ತು ವಿಶಾಲವಾದ ರೆಕ್ಕೆಗಳನ್ನು ಹೊಂದಿರುವ, ಸರೋವರದಲ್ಲಿಯೇ ಪ್ರೀತಿ ಯುಳ್ಳ, ಕಮಲದ ಧೂಳಿಯಿಂದ ಧೂಸರಿತವಾಗಿರುವ, ಮಹಾನದಿಗಳ ಮರಳಿನ ಮೇಲಿರುವವರು ಚಕ್ರವಾಕಗಳೊಡನೆ ಹಂಸಪಕ್ಷಿಗಳು ವಿಹರಿಸುತ್ತಿವೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

ಮದದಿಂದ ಕೂಡಿರುವ ಆನೆಗಳಲ್ಲಿಯೂ, ಕೊಬ್ಬಿದ ಹಸುಗಳ ಸಮೂಹ ಗಳಲ್ಲಿಯೂ, ಪ್ರಸನ್ನವಾದ ನೀರುಳ್ಳ ನದಿಗಳಲ್ಲಿಯೂ ಶರದೃತುವಿನ ಕಾಂತಿಯು ಅನೇಕಪ್ರಕಾರವಾಗಿ ವಿಭಾಗಿಸಲ್ಪಟ್ಟು ಪ್ರಕಾಶಿಸುತ್ತಿದೆ. ನವಿಲು ಗಳು ಮೇಘಗಳಿಲ್ಲದ ಅಂತರಿಕ್ಷವನ್ನು ನೋಡಿ ಆಭರಣರೂಪವಾದ ರೆಕ್ಕೆ ಗಳಿಂದ ವಿಮುಕ್ತಿಯನ್ನು ಹೊಂದಿ, ಹೆಣ್ಣುನವಿಲುಗಳಲ್ಲಿ ಆಸಕ್ತಿಯಿಲ್ಲದೇ ಶೋಭೆಯನ್ನು ಕಳೆದುಕೊಂಡು ಯಾವ ವಿಧವಾದ ಆನಂದವೂ ಇಲ್ಲದೇ ಯೋಚಿಸುತ್ತಾ ಕುಳಿತಿವೆ. ಮನಸ್ಸಿಗೆ ಆಹ್ಲಾದವನ್ನುಂಟುಮಾಡುವ, ಸುಗಂಧಯುಕ್ತವಾದ ಪುಷ್ಪಭಾರದಿಂದ ಬಗ್ಗಿದ ಅಗ್ರಭಾಗದ ರೆಂಬೆಗಳಿಂದ ಕೂಡಿರುವ, ಸುವರ್ಣದಂತೆ ಹೊಂಬಣ್ಣದಿಂದ ಕಂಗೊಳಿಸುತ್ತಿರುವ, ಬಹು ಸಂಖ್ಯಾತವಾದ ಪ್ರೇಂಖಣವೃಕ್ಷಗಳಿಂದ ಅರಣ್ಯದ ಮಧ್ಯಪ್ರದೇಶಗಳು ಪ್ರಕಾಶಗೊಳಿಸಲ್ಪಟ್ಟವೆಯೋ ಎಂಬಂತೆ ಕಾಣುತ್ತಿದೆ. ಪ್ರೇಯಸಿಯರೊಡನೆ ಕೂಡಿರುವ, ಸರೋವರಗಳಲ್ಲಿ ಕ್ರೀಡಿಸುವುದರಲ್ಲಿಯೇ ಆಸಕ್ತಿಯುಳ್ಳ, ಅರಣ್ಯ ದಲ್ಲಿಯೇ ಆಸಕ್ತವಾದ, ಏಳೆಲೇಬಾಳೆಗಳ ಕುಸುಮದ ಆಘ್ರಾಣದಿಂದ ಕೊಬ್ಬಿ ರುವ, ಮದದಿಂದ ಉದ್ಧತವಾಗಿರುವ, ಮದದಿಂದ ಹುಟ್ಟಿದ ಕಾಮೋಪಭೋಗ ಗಳಲ್ಲಿಯೇ ವಿಶೇಷವಾಗಿ ಆಸಕ್ತಿಯುಳ್ಳ ಶ್ರೇಷ್ಠವಾದ ಆನೆಗಳ ಸಂಚಾರವು ಈಗ ಮಂದವಾಗಿದೆ. ಮೇಘವಿಲ್ಲದ ಆಕಾಶವು ಸಾಣೆಹಿಡಿದ ಕತ್ತಿಯ ಬಣ್ಣದಂತಿದೆ. ನದಿಗಳಲ್ಲಿ ನೀರು ಬತ್ತಿಹೋಗಿದೆ. ಕಲ್ಹಾರಪುಷ್ಪಗಳ ವಾಸನೆ ಯನ್ನು ಹೊತ್ತಿರುವ ವಾಯುವು ಶೀತಲವಾಗಿ ಬೀಸುತ್ತಿದೆ. ದಿಕ್ಕುಗಳು ಕತ್ತಲಿನಿಂದ ಕವಿದಿರದೇ ಪ್ರಕಾಶಮಾನವಾಗಿ ಕಾಣುತ್ತಿವೆ. ಸೂರ್ಯನ ಬಿಸಿ ಲಿನ ವ್ಯಾಪನೆಯಿಂದ ಈಗ ಭೂಮಿಯಲ್ಲಿ ಕೆಸರಿಲ್ಲ. ಅದು ದಟ್ಟವಾದ ಧೂಳಿ ನಿಂದ ಸಮಾವೃತವಾಗಿದೆ. ಪರಸ್ಪರ ವೈರಭಾವದಿಂದ ಕೂಡಿರುವ ರಾಜರಿಗೆ ಇದು ಯುದ್ಧೋದ್ಯೋಗದ ಕಾಲವಾಗಿದೆ. ಶರತ್ಕಾಲದ ವಾತಾವರಣದಿಂದ ಅತಿಶಯವಾದ ರೂಪದಿಂದಲೂ ಕಾಂತಿಯಿಂದಲೂ ಕೂಡಿರುವ, ಬಹಳವಾಗಿ ಸಂತೋಷಗೊಂಡಿರುವ, ಧೂಳಿನಿಂದ ಮುಚ್ಚಿಹೋದ ಶರೀರದಿಂದ ಕೂಡಿರುವ, ಮದದಿಂದ ಕೊಬ್ಬಿರುವ, ಕಾಳಗದಲ್ಲಿಯೇ ಆಸಕ್ತವಾಗಿರುವ ಗೂಳಿಗಳು ಈಗ ಹಸುಗಳ ಮಧ್ಯಭಾಗಕ್ಕೆ ಹೋಗಿ ಗುಟುರುಹಾಕುತ್ತಿವೆ. ಕಾಮೋದ್ರಿಕ್ತವಾಗಿ ಆ ಕಾರಣದಿಂದಲೇ ತೀವ್ರವಾದ ಅನುರಾಗವನ್ನು ಹೊಂದಿರುವ, ಮಂದಗಮನ

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.


ವುಳ್ಳ, ಒಳ್ಳೆಯ ಜಾತಿಯಲ್ಲಿ ಹುಟ್ಟಿರುವ ಹೆಣ್ಣಾನೆಗಳು ಅರಣ್ಯದಲ್ಲಿ ಹೋಗುತ್ತಿರುವ, ಮದದಿಂದ ಕೊಬ್ಬಿರುವ ಗಂಡಾನೆಯನ್ನು ಎಡೆಬಿಡದೆ ಹಿಂಬಾಲಿಸಿ ಹೋಗುತ್ತಿವೆ. ನದಿಗಳ ತೀರಪ್ರದೇಶದಲ್ಲಿರುವ ನವಿಲುಗಳು ಶರೀರಕ್ಕೆ ಭೂಷಣಪ್ರಾಯವಾಗಿದ್ದ ಶ್ರೇಷ್ಠವಾದ ರೆಕ್ಕೆಗಳನ್ನು ಕಳಚಿಹಾಕಿ, ಸಾರಸ ಪಕ್ಷಿಗಳ ಸಮೂಹಗಳಿಂದ ಭಯಗೊಳಿಸಲ್ಪಡುತ್ತಿವೆಯೋ ಎಂಬಂತೆ ದೀನವಾದ ಮತ್ತು ಕುಂದಿದ ಮನಸ್ಸಿನಿಂದ ಕೂಡಿ ಬೇರೆಡೆಗೆ ಹೊರಟುಹೋಗುತ್ತಿವೆ. ಗಂಡಸ್ಥಳಗಳಲ್ಲಿ ಮದೋದಕವನ್ನು ಸುರಿಸುತ್ತಿರುವ ದೊಡ್ಡ-ದೊಡ್ಡ ಆನೆಗಳು ವಿಕಸಿತವಾದ ಕಮಲಗಳಿಂದ ಶೋಭಾಯಮಾನವಾಗಿ ಕಾಣುತ್ತಿರುವ ಸರೋವರಗಳಲ್ಲಿರುವ ನೀರುಕೋಳಿಗಳನ್ನೂ ಚಕ್ರವಾಕಪಕ್ಷಿಗಳನ್ನೂ ಗಟ್ಟಿಯಾದ ಘೀಂಕಾರಗಳಿಂದ ಭಯಪಡಿಸುತ್ತಾ ಸರೋವರದ ನೀರನ್ನು ಅಲ್ಲೋಲ-ಕಲ್ಲೋಲಗೊಳಿಸುತ್ತಾ ನೀರನ್ನು ಕುಡಿಯುತ್ತಿವೆ. ಶರತ್ಕಾಲದಲ್ಲಿ ನದಿಗಳಲ್ಲಿ ಕೆಸರಿರುವುದಿಲ್ಲ. ಪ್ರವಾಹವು ಬತ್ತಿಹೋಗಿರುವುದರಿಂದ ಮರಳುದಿಬ್ಬಗಳು ಎದ್ದುಕಾಣುತ್ತವೆ. ಪ್ರವಾಹವು ಶಾಂತವಾಗಿರುತ್ತದೆ. ಗೋವುಗಳು ಹಿಂಡು-ಹಿಂಡಾಗಿ ನೀರುಕುಡಿಯಲು ನದಿಯ ಬಳಿಗೆ ಬರುತ್ತಿವೆ. ನದಿಗಳು ಸಾರಸಪಕ್ಷಿಗಳ ಧ್ವನಿಗಳಿಂದ ಶಬ್ದಾಯಮಾನವಾಗಿರುತ್ತವೆ. ಅಂತಹ ನದಿಗಳಲ್ಲಿ ಹಂಸಪಕ್ಷಿಗಳು ಅತ್ಯಂತಸಂತೋಷದಿಂದ ಧುಮುಕುತ್ತಿವೆ. ನದಿಗಳಲ್ಲಿನ ಪ್ರವಾಹಶಬ್ದಗಳೂ, ಗಿರಿನದಿಗಳ ಪ್ರಪಾತ ಶಬ್ದಗಳೂ, ನವಿಲುಗಳ ಕೇಕಾರವಗಳೂ, ಕಪ್ಪೆಗಳ ವಟವಟ ಶಬ್ದಗಳೂ ಈಗ ಸಂಪೂರ್ಣವಾಗಿ ನಿಂತುಹೋಗಿವೆ. ವರ್ಷಾಕಾಲದಲ್ಲಿ ಹೊಸದಾಗಿ ಮೂಡಿಬಂದ ಮೇಘಗಳು ಮಳೆಗರೆಯುವಾಗ ವರ್ಷಾಕಾಲವು ಮುಗಿಯುವವರೆಗೂ ಸರ್ಪಗಳು ಬಿಲಗಳಲ್ಲಿಯೇ ಉಡುಗಿಕೊಂಡಿರುತ್ತವೆ. ಅಷ್ಟು ದಿವಸಗಳು ಅವಕ್ಕೆ ಆಹಾರವಿಲ್ಲದೆ ಅತ್ಯಂತಕೃಶವಾಗಿ ಅವು ಸಾಯುವ ಸ್ಥಿತಿಯಲ್ಲಿರುತ್ತವೆ. ಶರತ್ಕಾಲವು ಪ್ರಾರಂಭವಾಗಿರುವುದರಿಂದ ಘೋರವಾದ ವಿಷವನ್ನು ಹೊಂದಿರುವ ಅನೇಕವರ್ಣಗಳ ಸರ್ಪಗಳು ಹಸಿವಿನಿಂದ ಬಳಲಿ ಬಿಲದಿಂದ ಹೊರಕ್ಕೆ ಬರುತ್ತಿವೆ. ಶೋಭಾಯಮಾನವಾದ ಚಂದ್ರಕಿರಣಗಳ ಸ್ಪರ್ಶದಿಂದ ಹರ್ಷಗೊಂಡು ವಿಕಸಿತವಾದ ನಕ್ಷತ್ರಗಳಿಂದ ಕೂಡಿರುವ ಸಂಧ್ಯಾದೇವಿಗೆ–ಎಷ್ಟು

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

ಅನುರಾಗ (ಕೆಂಪುಬಣ್ಣ)! ತಾನಾಗಿಯೇ ಅಂಬರ (ವಸ್ತ್ರ, ಆಕಾಶ) ವನ್ನು ತೊರೆದು ಬಿಟ್ಟಿದ್ದಾಳೆ. ಇದು ನಿಶ್ಚಯವಾಗಿಯೂ ಆಶ್ಚರ್ಯಕರವಾಗಿದೆ.*

ಶರತ್ಕಾಲದ ರಾತ್ರಿಯೆಂಬ ಹೆಂಗಸಿಗೆ ಆಗತಾನೇ ಉದಯಿಸಿದ ಸೌಮ್ಯನಾದ ಚಂದ್ರನೇ ಮುಖರೂಪದಲ್ಲಿದ್ದಾನೆ. ನಕ್ಷತ್ರಗಳ ಸಮೂಹಗಳೇ ಅರಳಿದ ಕಣ್ಣುಗಳಂತಿವೆ. ಬೆಳದಿಂಗಳ ಆವರಣವೇ ರಾತ್ರಿಯೆಂಬ ಅಂಗನೆಯು ಉಟ್ಟಿರುವ ಬಿಳಿಯ ವಸ್ತ್ರವಾಗಿದೆ. ಚೆನ್ನಾಗಿ ಪಕ್ವವಾಗಿರುವ ಬತ್ತದ ತೆನೆಗಳನ್ನು ತಿಂದು ಪರಮಹೃಷ್ಟವಾದ ಸಾರಸಪಕ್ಷಿಗಳ ಸುಮನೋಹರವಾದ ಸಾಲುಗಳು ಗಾಳಿಯಿಂದ ಹಾರಿಸಲ್ಪಡುತ್ತಿರುವ ಹೂಮಾಲೆಯಂತೆ ಶೀಘ್ರವಾದ ವೇಗದಿಂದ ಆಕಾಶವನ್ನು ಆಕ್ರಮಿಸುತ್ತಿದೆ. ಮಲಗಿರುವ ಒಂದೇ ಒಂದು ಹಂಸದಿಂದ ಕೂಡಿರುವ, ಬಿಳಿಯ ನೈದಿಲೆಗಳಿಂದ ವ್ಯಾಪ್ತವಾಗಿರುವ, ದೊಡ್ಡದಾದ ಸರೋವರದಲ್ಲಿರುವ ನೀರು–ರಾತ್ರಿಯಲ್ಲಿ ನಕ್ಷತ್ರಗಳಿಂದ ಸುತ್ತುವರಿಯಲ್ಪಟ್ಟು ಚಂದ್ರನಿರುವ, ಮೋಡಗಳಿಲ್ಲದ ಅಂತರಿಕ್ಷದಂತೆಯೇ ಪ್ರಕಾಶಿಸುತ್ತಿದೆ.[1] ಸುತ್ತಲೂ ಹರಡಿಕೊಂಡಿರುವ ಹಂಸಗಳನ್ನೇ ನಡುಪಟ್ಟಿಯನ್ನಾಗಿಯೂ ಕಮಲಗಳನ್ನೂ ಕನ್ನೈದಿಲೆಗಳನ್ನೂ ಮಾಲೆಗಳನ್ನಾಗಿಯೂ ಹೊಂದಿರುವ ಶ್ರೇಷ್ಠವಾದ ಕಲ್ಲುಕುಂಟೆಗಳ ಶೋಭೆಯು ಈಗ ಒಡ್ಯಾಣ ಮತ್ತು ಮಾಲೆಗಳಿಂದ ಸಿಂಗರಿಸಲ್ಪಟ್ಟ ಸುಂದರಸ್ತ್ರೀಯರಂತೆ ಅತ್ಯಂತರಮಣೀಯವಾಗಿದೆ.[2]

ವೇಣುಸ್ವನವ್ಯಞ್ಜಿತತೂರ್ಯಮಿಶ್ರಃ
ಪ್ರತ್ಯೂಷಕಾಲಾನಿಲಸಂಪ್ರವೃದ್ಧಃ ।
ಸಂಮೂರ್ಛಿತೋ ಗಹ್ವರಗೋವೃಷಾಣಾ-
ಮನ್ಯೋನ್ಯಮಾಪೂರಯತೀವ ಶಬ್ದಃ ॥೫೦॥

---

* ರಾಗ = ಅನುರಾಗ ; ಕೆಂಪುಬಣ್ಣ. ಅಂಬರ = ವಸ್ತ್ರ ; ಆಕಾಶ

1 ಸರೋವರದಲ್ಲಿ ಹಂಸಪಕ್ಷಿಯು ಚಂದ್ರನಂತಿದೆ. ಬಿಳಿನೈದಿಲೆಗಳು ನಕ್ಷತ್ರಗಳಂತಿವೆ. ನಿರ್ಮಲಜಲವು ಮೋಡಗಳಿಂದ ರಹಿತವಾದ ಆಕಾಶದಂತಿದೆ.

2 ಕುಂಟೆಗಳ ನಡುಭಾಗದಲ್ಲಿ ಹಂಸಗಳ ಸಾಲಿದೆ. ಅದು ವರಾಂಗನೆಯರ ಬೆಳ್ಳಿಯ ನಡುಪಟ್ಟಿಯಂತೆ ಕಾಣುತ್ತಿದೆ. ಕುಂಟೆಯ ಸುತ್ತಲೂ ಅರಳಿರುವ ಕಮಲ ಮತ್ತು ಕನ್ನೈದಿಲೆಗಳ ಸಮೂಹವಿದೆ. ಇದು ಶ್ರೇಷ್ಠಸ್ತ್ರೀಯರು ಧರಿಸಿರುವ ಹಾರಗಳಂತೆ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಕೊಳಲಿನ ಸ್ವರದ ರೂಪದಲ್ಲಿ ವ್ಯಕ್ತವಾಗುತ್ತಿರುವ, ವಾದ್ಯಘೋಷ ದಿಂದ ಸಮ್ಮಿಶ್ರವಾದ ಮತ್ತು ಪ್ರಾತಃಕಾಲದಲ್ಲಿ ಬೀಸುವ ವಾಯುವಿನಿಂದ ವೃದ್ಧಿಗೊಂಡ ಶಬ್ದವೂ, ಗುಹೆಗಳಲ್ಲಿರುವ ಮತ್ತು ಅರಣ್ಯದಲ್ಲಿರುವ ಗೂಳಿಗಳ ಶಬ್ದವೂ ಸರ್ವತ್ರ ವ್ಯಾಪಿಸಿ ಪರಸ್ಪರವಾಗಿ ತುಂಬಿಸುತ್ತಿವೆಯೋ ಎಂಬಂತೆ ಕೇಳಿಬರುತ್ತಿದೆ.*

ನದಿಗಳ ದಡಗಳು-ಮಂದಮಾರುತದಿಂದ ಅಲ್ಲಾಡಿಸಲ್ಪಡುತ್ತಾ ಅದರಿಂದಲೇ ನಗುವಿನಂತೆ ಕಾಣುತ್ತಿರುವ ಕುಸುಮಗಳುಳ್ಳ ವೃಕ್ಷ ಗಳಿಂದಲೂ, ಚೆನ್ನಾಗಿ ಒಗೆಯಲ್ಪಟ್ಟ ರೇಷ್ಮೆಯ ವಸ್ತ್ರದಂತೆ ಪ್ರಕಾಶಮಾನ ವಾಗಿ ಕಾಣುತ್ತಿರುವ ನೂತನವಾದ ಜಂಬುಹುಲ್ಲುಗಳಿಂದಲೂ ಶೋಭಿಸು ತ್ತಿದೆ.[1] ಅರಣ್ಯಪ್ರದೇಶಗಳಲ್ಲಿ ಸ್ವಚ್ಛಂದಚಾರಿಗಳಾದ, ಕುಸುಮಗಳ ಮಧು ವನ್ನು ಪಾನಮಾಡುವುದರಲ್ಲಿ ಅತ್ಯಂತಾಸಕ್ತವಾಗಿರುವ, ಕಮಲಗಳ ಮತ್ತು ಹೊನ್ನೇಮರಗಳ ಧೂಳಿಯಿಂದ ಬಿಳುಪಾಗಿರುವ, ಮದಿಸಿರುವ ಗಂಡುದುಂಬಿಗಳು ಹೆಣ್ಣುದುಂಬಿಗಳೊಡನೆ ಕೂಡಿಕೊಂಡು ಅತ್ಯಂತ

---

ಕಾಣುತ್ತಿದೆ. ಈ ಸಮಯದಲ್ಲಿ ವರಾಂಗನೆಯರ ಸೌಂದರ್ಯಕ್ಕಿಂತಲೂ ಹಂಸ ಗಳಿಂದಲೂ ಕಮಲಪುಷ್ಪಗಳಿಂದಲೂ ಯುಕ್ತವಾಗಿರುವ ಕುಂಟೆಗಳ ಸೌಂದರ್ಯವೇ ಅಧಿಕವಾಗಿ ಕಾಣುತ್ತಿರುವುದೆಂದು ಶ್ರೀರಾಮನು ಹೇಳುತ್ತಾನೆ.

* ಈ ಶ್ಲೋಕದಲ್ಲಿ ಮೂರು ಪಾಠಭೇದಗಳಿವೆ. ವೇಣುಸ್ವರಃ-ವೇಣುಸ್ವನಃ, ಪ್ರತ್ಯೂಷಕಾಲೇ-ಪ್ರತ್ಯೂಷಕಾಲಾನಿಲಃ. ಗಹ್ವರಗೋವೃಷಾಣಾಂ = ಗರ್ಗರಗೋವೃ ಷಾಣಾಂ. ಮೊದಲನೆಯ ಎರಡು ಪಾಠಭೇದಗಳು ಅರ್ಥದಲ್ಲಿ ಹೆಚ್ಚು ವ್ಯತ್ಯಾಸಕೊಡ ದಿದ್ದರೂ, ಮೂರನೆಯ ಪಾಠಭೇದವು ಅರ್ಥದಲ್ಲಿ ಹೆಚ್ಚು ವ್ಯತ್ಯಾಸವನ್ನು ಹೊಂದಿದೆ. ಗುಹೆಗಳು ಎಂಬುದಕ್ಕೆ ಬದಲಾಗಿ ಮೊಸರು ಕಡೆಯುವ ಗರ-ಗರ ಶಬ್ದವೆಂದು ಅರ್ಥ ವಾಗುತ್ತದೆ. ವೇಣುಸ್ವರದಿಂದ ವ್ಯಂಜಿತವಾದ ತೂರ್ಯಮಿಶ್ರಃ-ಎಂದರೆ ಕೊಳಲಿನಿಂದ ಕೂಡಿದ ಮಂಗಳವಾದ್ಯಮಿಶ್ರವಾದ-ಎಂದೂ ಅರ್ಥಮಾಡಬಹುದು. ಕಾಡಿನಲ್ಲಿರುವ ಬಿದಿರುಮೆಳೆಗಳ ಶಬ್ದವೇ ಮಂಗಳವಾದ್ಯದಂತೆ ಕೇಳಿಬರುತ್ತಿದೆ. ಅದರಿಂದ ಮಿಶ್ರ ವಾದುದು-ಎಂದೂ ಅರ್ಥಮಾಡಬಹುದು. ಪ್ರಾತಃಕಾಲದ ಗಾಳಿಯಿಂದ ಉಂಟಾಗುವ ಶಬ್ದವು ಮಂಗಳವಾದ್ಯದಿಂದ ಸಮ್ಮಿಶ್ರವಾಗಿ ಗುಹೆಗಳ ಮತ್ತು ಗೂಳಿಗಳ ಶಬ್ದವನ್ನು

---

1 ಕುಸುಮರೂಪವಾದ ನಗುವಿನಿಂದಲೂ ಜಂಬುಹುಲ್ಲಿನ ರೂಪವಾದ ವಸ್ತ್ರದಿಂದಲೂ ನದಿಯ ದಡಗಳು ಪ್ರಕಾಶಿಸುತ್ತಿವೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಸಂತೋಷದಿಂದ ಗಾಳಿಯನ್ನು ಅನುಸರಿಸಿ ಅರಣ್ಯದಲ್ಲಿ ಹೋಗುತ್ತಿವೆ. ಸ್ವಚ್ಛವಾಗಿರುವ ನೀರು, ವಿಕಸಿತವಾಗಿರುವ ಬಿಳಿಯ ನೈದಿಲೇಹೂಗಳು, ಕ್ರೌಂಚಪಕ್ಷಿಗಳ ಧ್ವನಿ, ಪಕ್ವವಾದ ತೆನೆಗಳಿಂದ ಕೂಡಿರುವ ಬತ್ತದ ಗದ್ದೆ, ಮಂದಮಾರುತ, ವಿಮಲನಾದ ಚಂದ್ರ–ಇವು ಶರತ್ಕಾಲವು ಬಂದಿರುವುದನ್ನೂ ವರ್ಷಾಕಾಲವು ಕಳೆದುಹೋಗಿರುವುದನ್ನೂ ಸೂಚಿಸುತ್ತವೆ.

ಪ್ರಿಯತಮನಿಂದ ಉಪಭೋಗಿಸಲ್ಪಟ್ಟು ಬಳಲಿ-ಬೆಂಡಾಗಿ ಪ್ರಾತಃಕಾಲದಲ್ಲಿ ಮಂದವಾದ ನಡಿಗೆಯುಳ್ಳ ಕಾಮಿನಿಯರಂತೆ–ಮೀನುಗಳನ್ನೇ ನಡುಪಟ್ಟಿಯ ರೂಪದಲ್ಲಿ ಹೊಂದಿರುವ, ನದಿಗಳೆಂಬ ವಧುಗಳ ಗಮನವು ಮಂದವಾಗಿದೆ.* ಚಕ್ರವಾಕಪಕ್ಷಿಗಳಿಂದಲೂ, ಪಾಚಿಗಳಿಂದಲೂ, ರೇಷ್ಮೆಯ ವಸ್ತ್ರದಂತಿರುವ ಜೊಂಡುಹುಲ್ಲುಗಳಿಂದಲೂ ವ್ಯಾಪ್ತವಾಗಿರುವ ನದೀಮುಖಗಳು – ಪತ್ರಲೇಖಗಳಿಂದಲೂ, ಗೋರೋಚನದಿಂದಲೂ, ಅವಕುಂಠನದಿಂದಲೂ ಕೂಡಿರುವ ಸ್ತ್ರೀಯರ ಮುಖಗಳಂತೆ–ಶೋಭಾಯಮಾನವಾಗಿ ಕಾಣುತ್ತಿವೆ. ವಿಕಸಿತವಾದ ಪುಷ್ಪಗಳುಳ್ಳ ಬಾಣವೃಕ್ಷಗಳಿಂದಲೂ ಮತ್ತು ಸರ್ಜವೃಕ್ಷಗಳಿಂದಲೂ, ವಿಚಿತ್ರವಾಗಿ ಕಾಣುತ್ತಿರುವ, ಪ್ರಹೃಷ್ಟವಾದ ದುಂಬಿಗಳಿಂದ ಶಬ್ದಾಯಮಾನವಾಗಿರುವ ಅರಣ್ಯಗಳಲ್ಲಿ ಕಾಮದೇವನು ಧನುಸ್ಸನ್ನು ಹಿಡಿದು ಪ್ರಚಂಡವಾದ ಬಾಣಗಳನ್ನು ಮೇಲೆತ್ತಿಕೊಂಡು ಸಂಚರಿಸುತ್ತಿದ್ದಾನೆ. ಲೋಕವನ್ನು (ಜನರನ್ನು) ಸುವೃಷ್ಟಿ

---

ತುಂಬುತ್ತಿದೆಯೋ ಎಂಬಂತೆ ಕಾಣುತ್ತಿದೆ. ಗೂಳಿಯ ಗುಟುರನ್ನೂ ಗುಹೆಯಿಂದ ಹೊರಹೊರಡುವ ಗಾಳಿಯ ಸೊಯ್ ಎಂಬ ಶಬ್ದವನ್ನೂ ಅನುಕರಿಸುತ್ತಿದೆ. ಅಥವಾ ಪ್ರಾತಃಕಾಲದಲ್ಲಿ ಗಾಳಿಯಿಂದ ಸಮುದ್ಭೂತವಾದ ಬಿದಿರು ಮೆಳೆಯ ಶಬ್ದದಿಂದ ವ್ಯಕ್ತವಾಗುತ್ತಿರುವ ಮಂಗಳವಾದ್ಯಧ್ವನಿಯಿಂದ ಸಮ್ಮಿಶ್ರವಾದ ಮತ್ತು ಸರ್ವತ್ರ ವ್ಯಾಪ್ತವಾದ ಶಬ್ದವು ಗಹ್ವರಗೋವೃಷಗಳ ಶಬ್ದವನ್ನು ಪರಸ್ಪರವಾಗಿ ಸೇರಿಸುತ್ತಿದೆಯೋ ಎಂಬಂತೆ ಕಾಣುತ್ತಿದೆ–ಎಂದೂ ಅರ್ಥಮಾಡಬಹುದಾಗಿದೆ. ಒಟ್ಟಿನ ತಾತ್ಪರ್ಯವು ಹೀಗೆ ಬರುತ್ತದೆ. ಬಿದಿರುಗಳ ರಂಧ್ರದಿಂದ ಹೊರಬರುವ ಶಬ್ದವೂ, ಪ್ರಾತಃಕಾಲದಲ್ಲಿ ಗಾಳಿಯು ಬೀಸುವ ಶಬ್ದವೂ, ಗುಹೆಗಳಿಂದ ಬರುವ ಪ್ರತಿಧ್ವನಿಯೂ, ಗುಹೆಗಳ ಗರ್ಜನೆಯ ಶಬ್ದವೂ ಪರಸ್ಪರವಾಗಿ ವೃದ್ಧಿಗೊಳಿಸುತ್ತಿರುವಂತೆ ಕಾಣುತ್ತಿವೆ.

* ವರ್ಷಾಕಾಲವು ಕಳೆದಿರುವುದರಿಂದ ನದಿಗಳು ಮಂದವಾದ ಪ್ರವಾಹವುಳ್ಳವುಗಳಾಗಿವೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಯಿಂದ ಸಂತೋಷಗೊಳಿಸಿ, ನದಿಗಳನ್ನೂ ಕೆರೆ-ಕುಂಟೆಗಳನ್ನೂ ತುಂಬಿ, ಭೂಮಿಯನ್ನು ಸಸ್ಯಸಮೃದ್ಧವನ್ನಾಗಿ ಮಾಡಿ ಮೋಡಗಳು ಆಕಾಶವನ್ನು ತ್ಯಜಿಸಿ ಹೋಗಿವೆ. ಪ್ರಥಮಸಮಾಗಮಕಾಲದಲ್ಲಿ ಸ್ತ್ರೀಯರು ನಾಚಿಕೆಗೊಂಡು ಪ್ರಿಯತಮನಿಗೆ ಜಘನಪ್ರದೇಶವನ್ನು ಮೆಲ್ಲ-ಮೆಲ್ಲನೆ ತೋರಿಸುವಂತೆ–ಶರತ್ಕಾಲದ ನದಿಗಳು ನೀರನ್ನು ಕಡಿಮೆಮಾಡಿಕೊಂಡು ತಮ್ಮಲ್ಲಿರುವ ಮರಳದಿಣ್ಣೆಗಳನ್ನು ಮೆಲ್ಲ-ಮೆಲ್ಲನೆ ತೋರಿಸುತ್ತಿವೆ. ಜಲಾಶಯಗಳು ಹೆಣ್ಣುಕ್ರೌಂಚಪಕ್ಷಿಗಳಿಂದ ನಿನದಿತವಾಗಿಯೂ ಚಕ್ರವಾಕಪಕ್ಷಿಗಳಿಂದ ತುಂಬಿಯೂ ಪ್ರಕಾಶಿಸುತ್ತಿವೆ.

ಪರಸ್ಪರವಾಗಿ ಬದ್ಧವೈರಿಗಳಾದ, ವಿಜಯಾಕಾಂಕ್ಷಿಗಳಾದ ರಾಜರ ಯುದ್ಧೋದ್ಯೋಗಸಮಯವು ಸನ್ನಿಹಿತವಾಗಿದೆ. ವರ್ಷಾಕಾಲದ ನಂತರ ರಾಜರಿಗೆ ಇದು ಮೊದಲನೆಯ ಯುದ್ಧಯಾತ್ರೆಯ ಸಮಯವಾಗಿದೆ. ಆದರೆ ಪ್ರತಿಜ್ಞೆಮಾಡಿಕೊಟ್ಟ ಸುಗ್ರೀವನನ್ನಾಗಲೀ ಪ್ರತಿಜ್ಞಾಸಂಬಂಧವಾದ ಪ್ರಯತ್ನಗಳನ್ನಾಗಲೀ ನಾನು ಕಾಣುತ್ತಿಲ್ಲ. ಕೆಂಪು ಮತ್ತೀಮರಗಳೂ, ಏಳೆಲೆಯ ಬಾಳೇಗಿಡಗಳೂ, ಕಂಚವಾಳದ ಗಿಡಗಳೂ, ದಾಸವಾಳದ ಗಿಡಗಳೂ, ಹೊಂಗೇಮರಗಳೂ ಹೂಗಳಿಂದ ತುಂಬಿ ಪರ್ವತದ ತಪ್ಪಲು ಪ್ರದೇಶಗಳಲ್ಲಿ ಶೋಭಿಸುತ್ತಿವೆ. ನದಿಯ ಮರಳುದಿಬ್ಬಗಳು ಹಂಸ-ಸಾರಸ-ಚಕ್ರವಾಕ-ಕ್ರೌಂಚಪಕ್ಷಿಗಳಿಂದ ತುಂಬಿರುವುದನ್ನು ನೋಡು, ಲಕ್ಷ್ಮಣ!

ಸೀತೆಯನ್ನು ಕಾಣದೇ ಶೋಕಾಭಿಭೂತನಾಗಿರುವ ನನಗೆ ವರ್ಷರ್ತುವಿನ ಸಂಬಂಧವಾದ ಈ ನಾಲ್ಕು ಮಾಸಗಳು ನೂರು ವರ್ಷಗಳಂತೆ ಕಳೆದುವು. ವರಾಂಗನೆಯಾದ ಸೀತೆಯು–ಹೆಣ್ಣು ಚಕ್ರವಾಕವು ಪತಿಯನ್ನು ಅನುಸರಿಸಿ ಹೋಗುವಂತೆ–ಅರಣ್ಯಕ್ಕೆ ನನ್ನನ್ನೇ ಅನುಸರಿಸಿ ಬಂದಳು. ಘೋರವಾದ ದಂಡಕಾರಣ್ಯವನ್ನು ಉದ್ಯಾನವನವೆಂದೇ ಭಾವಿಸಿದಳು. ಪ್ರಿಯೆಯಿಂದ ವಿಹೀನನಾಗಿರುವ, ದುಃಖದಿಂದ ಪರಿತಪಿಸುತ್ತಿರುವ, ರಾಜ್ಯಭ್ರಷ್ಟನಾಗಿರುವ ನನ್ನ ವಿಷಯದಲ್ಲಿ ಸುಗ್ರೀವನು ದಯೆಯನ್ನು ತೋರುತ್ತಿಲ್ಲ. ‹ ಈ ರಾಮನು ಅನಾಥನು. ಇವನಿಗೆ ಹೇಳುವವರು ಕೇಳುವವರು ಯಾರೂ ಇಲ್ಲ. ರಾಜ್ಯಭ್ರಷ್ಟನಾಗಿದ್ದಾನೆ. ರಾವಣನಿಂದಲೂ ಅವಮಾನಿತನಾಗಿದ್ದಾನೆ. ದೀನನಾಗಿದ್ದಾನೆ. ಮನೆಯಿಂದ ಬಹಳ ದೂರ ಬಂದಿದ್ದಾನೆ. ಕಾಮಿಯಾಗಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.


ದ್ದಾನೆ. ನನ್ನನ್ನೇ ಶರಣುಹೊಂದಿದ್ದಾನೆ.'–ಹೀಗೆ ಭಾವಿಸಿಕೊಂಡು ವಾನರ ರಾಜನಾದ, ದುರಾತ್ಮನಾದ ಸುಗ್ರೀವನು ನನ್ನನ್ನು ತಿರಸ್ಕಾರದೃಷ್ಟಿಯಿಂದ ಕಾಣುತ್ತಿದ್ದಾನೆ. ದುರ್ಮತಿಯಾದ ಸುಗ್ರೀವನು ತನ್ನ ಕಾರ್ಯವನ್ನು ಸಾಧಿಸಿಕೊಂಡು ಸೀತಾದೇವಿಯನ್ನು ಹುಡುಕುವ ವಿಷಯದಲ್ಲಿ ಪ್ರತಿಜ್ಞೆಯನ್ನು ಮಾಡಿ ಕಾಲವನ್ನು ಎಣಿಸಿ ವರ್ಷಾಕಾಲವು ಮುಗಿಯಿತೆಂಬುದನ್ನು ತಿಳಿದೂ ಸೀತಾನ್ವೇಷಣೆಯ ಕಾರ್ಯದಲ್ಲಿ ತೊಡಗಬೇಕೆಂಬುದನ್ನು ಅರಿಯುತ್ತಿಲ್ಲ.

ಲಕ್ಷ್ಮಣ! ನೀನೀಗಲೇ ಕಿಷ್ಕಿಂಧೆಗೆ ಹೋಗಿ ವಾನರಶ್ರೇಷ್ಠನಾದ, ಗ್ರಾಮ್ಯಸುಖದಲ್ಲಿಯೇ ಆಸಕ್ತನಾಗಿರುವ, ಮೂರ್ಖನಾದ ಸುಗ್ರೀವನನ್ನು ಕಂಡು ಈ ಮಾತುಗಳನ್ನು ಹೇಳು :

ಅರ್ಥಿನಾಮುಪಪನ್ನಾನಾಂ ಪೂರ್ವಂ ಚಾಪ್ಯುಪಕಾರಿಣಾಮ್ ।
ಆಶಾಂ ಸಂಶ್ರುತ್ಯ ಯೋ ಹನ್ತಿ ಸ ಲೋಕೇ ಪುರುಷಾಧಮಃ ॥೭೧॥

ಬಲ-ವೀರ್ಯಸಂಪನ್ನರಾಗಿ ಹಿಂದೆ ಉಪಕಾರವನ್ನು ಮಾಡಿ ಪ್ರಕೃತದಲ್ಲಿ ಸಹಾಯವನ್ನು ಅಪೇಕ್ಷಿಸಿದವರಿಗೆ ಯಾವನು ಪ್ರತ್ಯುಪಕಾರವನ್ನು ಮಾಡುವುದಾಗಿ ಆಶೆಯನ್ನು ಹುಟ್ಟಿಸಿ ಅನಂತರ ಆ ಆಶೆಯನ್ನೂ ಮತ್ತು ಮಾಡಿಕೊಟ್ಟ ಪ್ರತಿಜ್ಞೆಯನ್ನೂ ಭಂಗಗೊಳಿಸುವನೋ–ಅವನು ಲೋಕದಲ್ಲಿ ಪುರುಷಾಧಮನೆನಿಸಿಕೊಳ್ಳುತ್ತಾನೆ.

ಶುಭಂ ವಾ ಯದಿ ವಾ ಪಾಪಂ ಯೋ ಹಿ ವಾಕ್ಯಮುದೀರಿತಮ್ ।
ಸತ್ಯೇನ ಪರಿಗೃಹ್ಣಾತಿ ಸ ವೀರಃ ಪುರುಷೋತ್ತಮಃ ॥೭೨॥

ತಾನು ಮಾಡುವುದಾಗಿ ಮಾತುಕೊಟ್ಟ ಕೆಲಸವು ಶುಭವಾಗಲೀ ಅಶುಭವಾಗಲೀ–ಯಾವನು ಕೊಟ್ಟ ಭಾಷೆಯನ್ನು ಸತ್ಯಪ್ರತಿಜ್ಞೆಯನ್ನಾಗಿ ಅಂಗೀಕರಿಸುವನೋ–ಹೇಳಿದ ಮಾತಿನಂತೆ ನಡೆದುಕೊಳ್ಳುವನೋ–ಅಂತಹ ವೀರನು ಪುರುಷಶ್ರೇಷ್ಠನು.

ಕೃತಾರ್ಥಾ ಹ್ಯಕೃತಾರ್ಥಾನಾಂ ಮಿತ್ರಾಣಾಂ ನ ಭವನ್ತಿ ಯೇ ।
ತಾನ್ಮೃತಾನಪಿ ಕ್ರವ್ಯಾದಾಃ ಕೃತಘ್ನಾನ್ನೋಪಭುಞ್ಜತೇ ॥೭೩॥

ಮತ್ತೊಬ್ಬರ ಸಹಾಯದಿಂದ ತಾವು ಕಾರ್ಯಸಿದ್ಧಿಯನ್ನು ಹೊಂದಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಅದಕ್ಕೆ ಸಹಾಯಮಾಡಿದ ಮಿತ್ರರ ಕಾರ್ಯಸಿದ್ಧಿಯು ಆಗದೇ ಇರುವಾಗ ಅವರಿಗೆ ಪ್ರತ್ಯುಪಕಾರ ಮಾಡದವರು ಕೃತಘ್ನರು. ಆ ಪಾಪಿಗಳು ಸತ್ತಾಗ ಅವರನ್ನು ಮಾಂಸಭಕ್ಷಗಳಾದ ಪ್ರಾಣಿಗಳೂ ತಿನ್ನುವುದಿಲ್ಲ.

ನಿಶ್ಚಯವಾಗಿಯೂ ನೀನು – ಸುವರ್ಣಮಯವಾದ ಹಿಂಭಾಗವನ್ನು ಹೊಂದಿರುವ, ಸುದೀರ್ಘವಾಗಿ ಸೆಳೆಯಲ್ಪಡುವ, ಮಿಂಚುಗಳಿಗೆ ಸಮಾನವಾದ ನನ್ನ ಧನುಸ್ಸಿನ ರೂಪವನ್ನು ಯುದ್ಧದಲ್ಲಿ ನೋಡಲು ಬಯಸಿರುವೆ. ಸಿಡಿಲಿನ ಗರ್ಜನೆಯಂತೆ ಗರ್ಜನೆಮಾಡುವ, ಕ್ರುದ್ಧನಾದ ನನ್ನ ಘೋರವಾದ ಮೌರ್ವಿಯ ಟಂಕಾರಶಬ್ದವನ್ನು ಯುದ್ಧದಲ್ಲಿ ಪುನಃ ಕೇಳಲು ಬಯಸಿರುವೆ "–ಎಂದು ಸುಗ್ರೀವನಿಗೆ ಹೇಳಬೇಕು.

ಲಕ್ಷ್ಮಣ! ನಿನ್ನ ಸಹಕಾರವಿರುವ ನನ್ನ ಪರಾಕ್ರಮವು ಸುಗ್ರೀವನಿಗೆ ಚೆನ್ನಾಗಿ ತಿಳಿದಿರುವುದಾದರೂ ಸೀತಾನ್ವೇಷಣಕಾರ್ಯದಲ್ಲಿ ಕಾಲಾತೀತವಾಗಿರುವುದೆಂಬ ಚಿಂತೆಯೇ ಅವನಿಗೆ ಇಲ್ಲವಾಗಿದೆ. ಕೃತಕೃತ್ಯನಾಗಿರುವ ಕಪೀಶ್ವರನು–ನಮ್ಮಿಬ್ಬರಿಗೂ ಸ್ನೇಹವು ಯಾವ ಕಾರಣದಿಂದ ಆರಂಭವಾಯಿತು ? – ಎಂಬುದನ್ನೂ ವಿವೇಚಿಸದೇ ನಿಗದಿತವಾದ ಸಮಯವನ್ನೇ ತಿಳಿಯದವನಾಗಿದ್ದಾನೆ. ವರ್ಷಾಕಾಲವು ಕಳೆದನಂತರ ಸೀತೆಯನ್ನು ಹುಡುಕಲು ಸರಿಯಾದ ಕಾಲವೆಂದೂ ಆ ಸಮಯದಲ್ಲಿ ಸೀತೆಯನ್ನು ಹುಡುಕಲು ಹೊರಡುವುದಾಗಿಯೂ ಪ್ರತಿಜ್ಞೆಮಾಡಿದ್ದ ಕಪೀಶ್ವರನು ಪತ್ನಿಯರೊಡನೆ ವಿಹರಿಸುತ್ತಾ ವರ್ಷರ್ತುವಿಗೆ ಸಂಬಂಧಿಸಿದಂತೆ ನಾಲ್ಕು ಮಾಸಗಳು ಕಳೆದುಹೋಗಿವೆಯೆಂಬುದನ್ನೂ ತಿಳಿದವನಾಗಿಲ್ಲ. ಅಮಾತ್ಯರ ಮತ್ತು ಪರಿಷದ್ವರ್ಗದವರ ಮೂಲಕವಾಗಿ ರಾಜ್ಯಭಾರವನ್ನು ನಡೆಸುತ್ತಿರುವ ಅವನು ಯಾವಾಗಲೂ ಸ್ತ್ರೀಲೋಲನಾಗಿ ಮದ್ಯಪಾನದಲ್ಲಿಯೇ ಆಸಕ್ತನಾಗಿದ್ದಾನೆ. ದುಃಖತಪ್ತರೂ ದೀನರೂ ಆಗಿರುವ ನಮ್ಮ ವಿಷಯದಲ್ಲಿ ಅನುಕಂಪವನ್ನೇ ತೋರುತ್ತಿಲ್ಲ.

ಲಕ್ಷ್ಮಣ! ಈಗಲೇ ನೀನು ಸುಗ್ರೀವನ ಬಳಿಗೆ ಹೋಗು. ನನ್ನ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ರೋಷವು ಯಾವ ಮಟ್ಟದಲ್ಲಿದೆಯೆಂಬುದನ್ನು ಅವನಿಗೆ ತಿಳಿಯಹೇಳು. ನನ್ನ ಈ ಮಾತನ್ನೂ ಅವನಿಗೆ ತಿಳಿಸು :

ನ ಚ ಸಂಕುಚಿತಃ ಪನ್ಥಾ ಯೇನ ವಾಲೀ ಹತೋ ಗತಃ ।
ಸಮಯೇ ತಿಷ್ಠ ಸುಗ್ರೀವ ಮಾ ವಾಲಿಪಥಮನ್ವಗಾಃ ॥೮೧॥

'ಸುಗ್ರೀವ! ವಾಲಿಯು ಯಾವ ದಾರಿಯನ್ನು ಹಿಡಿದು ಹೋಗಿರುವನೋ ಆ ದಾರಿಯೇನೂ ಇಕ್ಕಟ್ಟಾಗಿಲ್ಲ. ನೀನು ಕೂಡ ಹೋಗುವಷ್ಟು ಆ ಮಾರ್ಗವು ವಿಶಾಲವಾಗಿದೆ. ಮಾಡಿಕೊಟ್ಟಿರುವ ಪ್ರತಿಜ್ಞೆಯಲ್ಲಿ ಸ್ಥಿರವಾಗಿರು. ವಾಲಿಯು ಹೋದ ಮಾರ್ಗವನ್ನೇ ಅನುಸರಿಸಿ ಹೋಗಲು ಯತ್ನಿಸಬೇಡ.

ಏಕ ಏವ ರಣೇ ವಾಲೀ ಶರೇಣ ನಿಹತೋ ಮಯಾ ।
ತ್ವಾಂ ತು ಸತ್ಯಾದತಿಕ್ರಾನ್ತಂ ಹನಿಷ್ಯಾಮಿ ಸಬಾನ್ಧವಮ್ ॥೮೨॥

ಹಿಂದೆ ನಡೆದ ಯುದ್ಧದಲ್ಲಿ ವಾಲಿಯೊಬ್ಬನೇ ನನ್ನ ಬಾಣದಿಂದ ಹತನಾದನು. ಆದರೆ ಸತ್ಯವಚನವನ್ನು ಮೀರಿರುವ ನಿನ್ನನ್ನು ಬಂಧುಗಳ ಸಹಿತವಾಗಿ ವಿನಾಶಮಾಡುತ್ತೇನೆ.'

ಪುರುಷಶ್ರೇಷ್ಠನೇ! ಲಕ್ಷ್ಮಣ! ಕಾರ್ಯಸಂಬಂಧವಾದ ವಿಷಯವು ಹೀಗಿರುವಾಗ ಯಾವುದು ಹಿತಕರವಾಗಿರುವುದೋ–ಯಾವ ಮಾತು ಹೇಳಲು ಉಚಿತವಾಗಿ ಕಾಣುವುದೋ–ಆ ಮಾತನ್ನು ಸುಗ್ರೀವನಿಗೆ ಹೇಳು. ಸೀತೆಯನ್ನು ಹುಡುಕಲು ಕಾಲವು ಮೀರದಿರಲಿ. ತ್ವರೆಮಾಡು."

ಸುಗ್ರೀವನನ್ನೇ ಉದ್ದೇಶಿಸಿ ಪುನಃ ಶ್ರೀರಾಮನು ಹೇಳುತ್ತಾನೆ :

ಕುರುಷ್ವ ಸತ್ಯಂ ಮಯಿ ವಾನರೇಶ್ವರ
ಪ್ರತಿಶ್ರುತಂ ಧರ್ಮಮವೇಕ್ಷ್ಯ ಶಾಶ್ವತಮ್ ।
ಮಾ ವಾಲಿನಂ ಪ್ರೇತ್ಯ ಗತೋ ಯಮಕ್ಷಯಂ
ತ್ವಮದ್ಯ ಪಶ್ಯೇರ್ಮಮ ಚೋದಿತಃ ಶರೈಃ ॥೮೩॥

'ವಾನರೇಶ್ವರನೇ! ಸನಾತನವಾದ ಧರ್ಮದ ಮೇಲೆ ದೃಷ್ಟಿಯನ್ನು ಹರಿಸಿ ಪ್ರತಿಜ್ಞೆಮಾಡಿಕೊಟ್ಟಿದನ್ನು ಸತ್ಯವನ್ನಾಗಿ ಮಾಡು. ನನ್ನ ಬಾಣ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಗಳಿಂದ ಚೋದಿತನಾಗಿ ಮರಣಹೊಂದಿ ವಾಲಿಯನ್ನು ಕಾಣಲು ಯಮನ ಅರಮನೆಗೆ ಹೋಗಬೇಡ'- ಹೀಗೂ ಸುಗ್ರೀವನಿಗೆ ಹೇಳು."

ಶ್ರೀರಾಮನು ಹೀಗೆ ಹೇಳಲು ಉಗ್ರತೇಜಸ್ವಿಯಾದ, ಮಾನವವಂಶ ವರ್ಧಕನಾದ ಲಕ್ಷ್ಮಣನು-ತೀವ್ರತರವಾದ ಕೋಪದಿಂದ ಕೂಡಿದ್ದ, ಮತ್ತೊಮ್ಮೆ ದೈನ್ಯದಿಂದ ಬಹಳವಾಗಿ ಪ್ರಲಪಿಸುತ್ತಿದ್ದ ಅಣ್ಣನನ್ನು ನೋಡಿ ಸುಗ್ರೀವನ ವಿಷಯದಲ್ಲಿ ತೀವ್ರತರವಾದ ಭಾವನೆಯನ್ನು ಹೊಂದಿದನು.

೩೦ನೆಯ ಸರ್ಗವು ಮುಗಿಯಿತು.

ಕಿಷ್ಕಿಂಧಾಕಾಂಡ ೩೧ನೆಯ ಸರ್ಗ

## ಸುಗ್ರೀವನ ವಿಷಯದಲ್ಲಿ ಲಕ್ಷ್ಮಣನ ತೀವ್ರವಾದ ಕೋಪ: ಶ್ರೀರಾಮನಿಂದ ಸಮಾಧಾನ: ಕಿಷ್ಕಿಂಧಾಪಟ್ಟಣದ ಮಹಾದ್ವಾರಕ್ಕೆ ಬಂದ ಲಕ್ಷ್ಮಣನು ತನ್ನ ಆಗಮನವನ್ನು ಸುಗ್ರೀವನಿಗೆ ತಿಳಿಸುವಂತೆ ಅಂಗದನನ್ನು ಕಳುಹಿಸಿಕೊಟ್ಟಿದು: ವಾನರರ ಭಯ: ಪ್ಲಕ್ಷ ಮತ್ತು ಪ್ರಭಾವ-ಎಂಬ ವಾನರರಿಂದ ಸುಗ್ರೀವನಿಗೆ ರಾಜನ ಕರ್ತವ್ಯದ ವಿಷಯವಾಗಿ ಉಪದೇಶ

ಸ ಕಾಮಿನಂ ದೀನಮದೀನಸತ್ತ್ವಂ
ಶೋಕಾಭಿಪನ್ನಂ ಸಮುದೀರ್ಣಕೋಪಮ್ ।
ನರೇನ್ದ್ರಸೂನುರ್ನರದೇವಪುತ್ರಂ
ರಾಮಾನುಜಃ ಪೂರ್ವಜಮಿತ್ಯುವಾಚ ॥೧॥

ಮಾನವೇಂದ್ರನ ಮಗನಾದ, ಶ್ರೀರಾಮನ ತಮ್ಮನಾದ ಲಕ್ಷ್ಮಣನು ಸೀತಾನ್ವೇಷಣೆಯಲ್ಲಿ ಅತ್ಯಾಸಕ್ತನಾಗಿದ್ದ, ಅದರಿಂದಲೇ ದೀನನೂ, ಶೋಕಾಭಿಭೂತನೂ, ತೀವ್ರಕೋಪಿಷ್ಠನೂ ಆಗಿದ್ದ, ಮಹಾಪರಾಕ್ರಮಿಯಾದ, ದಶರಥನ ಮಗನಾದ, ಅಗ್ರಜನಾದ ಶ್ರೀರಾಮನಿಗೆ ಹೇಳಿದನು: *

---

* ದೀನಂ ಅದೀನಸತ್ತ್ವಂ - ಎಂಬ ಎರಡು ವಿಶೇಷಣಗಳನ್ನೂ ಶ್ರೀರಾಮನಿಗೆ ಇಲ್ಲಿ ಹೇಳಿದ್ದಾರೆ. ಸೀತೆಯ ವಿರಹದಿಂದಾಗಿ ಶೋಕಾಭಿಭೂತನಾಗಿದ್ದ ಶ್ರೀರಾಮನು ದೀನನಂತೆ ಕಾಣುತ್ತಿದ್ದನೇ ಹೊರತು ಅವನ ಪರಾಕ್ರಮವೆಂದಿಗೂ ದೈನ್ಯವನ್ನು ಹೊಂದಿರ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

"ಅಣ್ಣ ! ನಿಶ್ಚಯವಾಗಿಯೂ ಸುಗ್ರೀವನು ಸಚ್ಚಾರಿತ್ರ್ಯದಲ್ಲಿ ಸ್ಥಿರನಾಗಿರುವಂತೆ ಕಾಣುತ್ತಿಲ್ಲ. ಅಗ್ನಿಸಾಕ್ಷಿಯಾಗಿ ಮಾಡಿಕೊಂಡ ಸಖ್ಯದ ಫಲವಾಗಿ ವಾಲಿನಿರಸನ-ಭಾರ್ಯಾಲಾಭ-ರಾಜ್ಯಲಾಭಗಳಾದುವೆಂಬುದನ್ನು ಆ ವಾನರನು ಅರ್ಥಮಾಡಿಕೊಂಡಿರುವಂತೆ ಕಾಣುವುದಿಲ್ಲ. ಪ್ರಕೃತದಲ್ಲಿ ಅವನ ಬುದ್ಧಿಯು ನಮ್ಮ ಪ್ರಯೋಜನದ ಕಡೆಗೆ ಗಮನಹರಿಸುತ್ತಿಲ್ಲ. ಆದುದರಿಂದ ಅವನು ವಾನರರಾಜ್ಯಲಕ್ಷ್ಮಿಯನ್ನು ಹೆಚ್ಚುಕಾಲ ಉಪಭೋಗಿಸಲಾರನು.

ಸುಗ್ರೀವನು ಮತಿಗೆಟ್ಟವನಾಗಿದ್ದಾನೆ. ಈ ಕಾರಣದಿಂದಲೇ ಅವನು ಸದಾ ಗ್ರಾಮ್ಯಸುಖದಲ್ಲಿಯೇ ಆಸಕ್ತನಾಗಿಬಿಟ್ಟಿದ್ದಾನೆ. ನೀನು ಮಾಡಿರುವ ರಾಜ್ಯಪ್ರದಾನರೂಪವಾದ ಅನುಗ್ರಹಕ್ಕೆ ಅವನು ಪ್ರತ್ಯುಪಕಾರಮಾಡುವ ಬುದ್ಧಿಯನ್ನೇ ಹೊಂದಿಲ್ಲ. ಆದುದರಿಂದ ನಾನೀಗಲೇ ಅವನನ್ನು ಸಂಹರಿಸಿಬಿಡುತ್ತೇನೆ. ಪರಲೋಕದಲ್ಲಿರುವ ತನ್ನ ಅಗ್ರಜನಾದ ವಾಲಿಯನ್ನು ಅವನು ಕಾಣಲಿ. ಹೀಗೆ ಗುಣಹೀನನಾದವನಿಗೆ ನಾವು ರಾಜ್ಯವನ್ನು ಕೊಡಬಾರದಾಗಿದ್ದಿತು. ವೇಗವಾಗಿ ಉಕ್ಕಿಬರುತ್ತಿರುವ ಕೋಪವನ್ನು ನಾನು ಧರಿಸಲಾರೆನು. ಅನೃತಭಾಷಿಯಾದ ಅವನನ್ನು ನಾನೀಗಲೇ ಸಂಹರಿಸಿಬಿಡುತ್ತೇನೆ. ವಾಲಿಯ ಮಗನಾದ ಅಂಗದನಿಗೆ ಪಟ್ಟಗಟ್ಟುತ್ತೇನೆ. ಅನಂತರ ಅಂಗದನೇ ವಾನರಮುಖ್ಯರೊಡನೆ ಸೇರಿ ಜನಕನ ಮಗಳನ್ನು ಹುಡುಕಲಿ."

ಸುಗ್ರೀವನ ಬಳಿಗೆ ಹೋಗುವ ತನ್ನ ಉದ್ದೇಶವನ್ನು ನಿವೇದಿಸಿದ,

---

ಲ್ಲಿಲ್ಲ. ಶೋಕದಿಂದಾಗಲೀ-ಕಾಮದಿಂದಾಗಲೀ ಅವನು ನಿರ್ಬಲನಾಗಿರಲಿಲ್ಲ—ಎಂಬುದು ಈ ವಿಶೇಷಣಗಳಿಂದ ಅಭಿವ್ಯಕ್ತವಾಗುತ್ತದೆ.

ವ್ಯಾಖ್ಯಾನಕಾರರೊಬ್ಬರು ಈ ಶ್ಲೋಕದಲ್ಲಿ ಬಂದಿರುವ ನರದೇವಪುತ್ರಂ – ಎಂಬ ಪದದಲ್ಲಿನ 'ದೇ' ಅಕ್ಷರವು ಗಾಯತ್ರೀಮಂತ್ರದ ಹನ್ನೊಂದನೆಯ ಅಕ್ಷರವಾದ ದೇ ವರ್ಣವಾಗಿರುವುದೆಂದೂ ಇಲ್ಲಿಗೆ ಹತ್ತುಸಾವಿರ ಶ್ಲೋಕಗಳು ಮುಗಿದು ಹನ್ನೊಂದನೇ ಸಾವಿರ ಶ್ಲೋಕವು ಪ್ರಾರಂಭವಾಗಿರುವುದೆಂದೂ ಹೇಳಿರುತ್ತಾರೆ. ಪ್ರಚಲಿತವಾಗಿರುವ ಗಾಯತ್ರೀ ರಾಮಾಯಣದ ಪ್ರಕಾರ ಕಿಷ್ಕಿಂಧಾಕಾಂಡದ ೩೩ನೆಯ ಸರ್ಗದಲ್ಲಿರುವ ದೇಶಕಾಲೌ ಭಜಸ್ವಾದ್ಯ (೨೦) ಎಂಬ ಶ್ಲೋಕದ ಮೊದಲನೆಯ ಅಕ್ಷರವಾದ 'ದೇ' ಎಂಬುದು ಗಾಯತ್ರೀಮಂತ್ರದ ಹನ್ನೊಂದನೆಯ ಅಕ್ಷರವಾಗಿದೆ. ಆ ಶ್ಲೋಕವೇ ಹನ್ನೊಂದನೆಯ ಸಾವಿರದ ಮೊದಲನೆಯ ಶ್ಲೋಕ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಯುದ್ಧಸಮಯದ ಪ್ರಚಂಡಕೋಪದಿಂದ ಆವಿಷ್ಟನಾಗಿದ್ದ, ಧನುರ್ಬಾಣಗಳನ್ನು ಹಿಡಿದು ಅತಿವೇಗದಿಂದ ಎದ್ದು ಹೊರಟ ಲಕ್ಷ್ಮಣನಿಗೆ ಶತ್ರುವೀರಹಂತಕನಾದ ಶ್ರೀರಾಮನು ವಿವೇಚನೆಯಿಂದ ಕೂಡಿದ್ದ ಸಮಯೋಚಿತವಾದ ಮತ್ತು ಸಾಂತ್ವನಪೂರ್ವವಾದ ಮಾತುಗಳನ್ನು ಹೇಳಿದನು :

ನ ಹಿ ವೈ ತ್ವದ್ವಿಧೋ ಲೋಕೇ ಪಾಪಮೇವಂ ಸಮಾಚರೇತ್ ।
ಪಾಪಮಾರ್ಯೇಣ ಯೋ ಹನ್ತಿ ಸ ವೀರಃ ಪುರುಷೋತ್ತಮಃ ॥೬॥

"ಲಕ್ಷ್ಮಣ! ನಿನ್ನಂತಹ ವಿವೇಕಿಯಾದವನು ಹೀಗೆ ಪಾಪಕಾರ್ಯವನ್ನು ಮಾಡಲು ಯೋಚಿಸಬಾರದು. ಉದ್ವೇಗಪೂರ್ಣವಾಗಿ ಬಂದ ಕೋಪವನ್ನು ಯಾವನು ಒಳ್ಳೆಯ ವಿವೇಕದಿಂದ ಧ್ವಂಸಮಾಡುವನೋ - ಅವನೇ ವೀರನು; ಅವನೇ ಪುರುಷೋತ್ತಮನು.*

ನೇದಮದ್ಯ ತ್ವಯಾ ಗ್ರಾಹ್ಯಂ ಸಾಧುವೃತ್ತೇನ ಲಕ್ಷ್ಮಣ ।
ತಾಂ ಪ್ರೀತಿಮನುವರ್ತಸ್ವ ಪೂರ್ವವೃತ್ತಂ ಚ ಸಂಗತಮ್ ॥೭॥

ಸಚ್ಚರಿತ್ರನಾದ ನೀನು ಸುಗ್ರೀವನ ಸಂಹಾರವೆಂಬ ಮಿತ್ರವಧರೂಪವಾದ ಪಾಪಕಾರ್ಯವನ್ನು ಮಾಡಬಾರದು. ಹಿಂದೆ ನಡೆದುದೆಲ್ಲವನ್ನೂ ಸ್ಮರಿಸಿ ಸ್ನೇಹಸಂಬಂಧವಾದ ಆ ಪ್ರೀತಿಯನ್ನೇ ನೀನು ಸುಗ್ರೀವನಲ್ಲಿಟ್ಟುಕೊಂಡಿರಬೇಕು.

ಸಾಮೋಪಹಿತಯಾ ವಾಚಾ ರೂಕ್ಷಾಣಿ ಪರಿವರ್ಜಯನ್ ।
ವಕ್ತುಮರ್ಹಸಿ ಸುಗ್ರೀವಂ ವ್ಯತೀತಂ ಕಾಲಪರ್ಯಯೇ ॥೮॥

ಕಠಿನವಾದ ಮಾತುಗಳನ್ನು ಹೇಳದೇ ಮಾಡಬೇಕಾಗಿರುವ ಕಾರ್ಯದಲ್ಲಿ ವಿಳಂಬಮಾಡುತ್ತಿರುವ ಸುಗ್ರೀವನನ್ನು ಸಮಾಧಾನಪೂರ್ವವಾದ ಮಾತುಗಳಿಂದಲೇ ಎಚ್ಚರಿಸುವುದು ಉಚಿತ."

ಹೀಗೆ ಅಣ್ಣನು ಯಥಾಯೋಗ್ಯವಾದ ರೀತಿಯಲ್ಲಿ ಆಜ್ಞೆಮಾಡಲು ಹಾಗೆಯೇ ಆಗಲೆಂದು ಹೇಳಿ ಪುರುಷಶ್ರೇಷ್ಠನಾದ, ವೀರನಾದ, ಶತ್ರುವೀರಹಂತಕನಾದ ಲಕ್ಷ್ಮಣನು ಕಿಷ್ಕಿಂಧಾಪಟ್ಟಣಕ್ಕೆ ಹೊರಟನು. ಅಣ್ಣನಿಗೆ

---

* ಆರ್ಯಶಬ್ದಕ್ಕೆ ಸಭ್ಯ, ಸಜ್ಜನ, ಸಾಧು-ಮುಂತಾದ ಅರ್ಥಗಳಿವೆ. ಇಲ್ಲಿ ಆರ್ಯೇಣ ಎಂಬುದಕ್ಕೆ, ಸಮಯೋಚಿತವಾಗಿ 'ಸಮ್ಯಗ್ವಿವೇಕೇನ= ಒಳ್ಳೆಯ ವಿವೇಕ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಪ್ರಿಯವನ್ನುಂಟುಮಾಡುವುದರಲ್ಲಿಯೂ ಮತ್ತು ಅವನ ಹಿತದಲ್ಲಿಯೂ ಆಸಕ್ತ ನಾದ, ಶುಭಮತಿಯಾದ, ಪ್ರಾಜ್ಞನಾದ ಲಕ್ಷ್ಮಣನು ಸೀತಾನ್ವೇಷಣೆಯಲ್ಲಿ ಕಾಲಾತೀತವಾಗಿದ್ದುದರಿಂದ ಕುಪಿತನಾಗಿ ಸುಗ್ರೀವನ ಅರಮನೆಗೆ ಹೋದನು. ಪ್ರಳಯಕಾಲದ ಯಮನಿಗೆ ಸದೃಶನಾಗಿದ್ದ ಲಕ್ಷ್ಮಣನು ದೇವೇಂದ್ರನ ಬಿಲ್ಲಿನಂತಿದ್ದ, ಬೆಟ್ಟದ ಶಿಖರದ ಕಾಂತಿಗೆ ಸಮಾನವಾದ ಕಾಂತಿ ಯನ್ನು ಹೊಂದಿದ್ದ ಧನುಸ್ಸನ್ನು ಹಿಡಿದು–ಶಿಖರದಿಂದ ಕೂಡಿರುವ ಮಂದರ ಪರ್ವತದೋಪಾದಿಯಲ್ಲಿ ಕಪೀಶ್ವರನ ಅರಮನೆಗೆ ಹೋದನು. ಬುದ್ಧಿಯಲ್ಲಿ ಬೃಹಸ್ಪತಿಗೆ ಸಮಾನನಾದ, ಶ್ರೀರಾಮನ ಅನುಜನಾದ, ಅಣ್ಣನು ಹೇಳಿ ದಂತೆಯೇ ನಡೆಯುವ ಸ್ವಭಾವದವನಾಗಿದ್ದ ಲಕ್ಷ್ಮಣನು–ತಾನು ಸುಗ್ರೀವ ನೊಡನೆ ಹೇಳುವ ಮಾತು ; ಅದಕ್ಕೆ ಸುಗ್ರೀವನು ಕೊಡಬಹುದಾದ ಉತ್ತರ ; ಅವನು ಉತ್ತರಿಸಿದ ನಂತರ ಪುನಃ ತಾನು ಹೇಳಬೇಕಾದ ಮಾತು–ಇವೆಲ್ಲ ವನ್ನೂ ವಿವೇಕಬುದ್ಧಿಯಿಂದಲೇ ಯೋಚಿಸಿ ನಿರ್ಧರಿಸಿಕೊಂಡು ಸುಗ್ರೀವನ ಅರಮನೆಗೆ ಹೋದನು. ಅಣ್ಣನ ಕಾಮ-ಕ್ರೋಧಗಳಿಂದ ಹುಟ್ಟಿದ್ದ ಕ್ರೋಧಾಗ್ನಿಯಿಂದ ಲಕ್ಷ್ಮಣನು ಆವೃತನಾಗಿದ್ದನು. ಸುಗ್ರೀವನ ವಿಷಯ ದಲ್ಲಿ ಅಸಂತುಷ್ಟನಾಗಿದ್ದ ಲಕ್ಷ್ಮಣನು ಬಿರುಗಾಳಿಯೋಪಾದಿಯಲ್ಲಿ ಮಹಾ ವೇಗದಿಂದ ಸುಗ್ರೀವನ ಅರಮನೆಗೆ ತೆರಳಿದನು. ಸಾಲ-ತಾಲವೃಕ್ಷಗಳನ್ನೂ, ಬಿಳೀಮತ್ತೀಮರಗಳನ್ನೂ ಬಲಾತಿಶಯದಿಂದ ವೇಗವಾಗಿ ಕೆಳಕ್ಕೆ ಬೀಳಿ ಸುತ್ತಾ, ಅತ್ಯಂತರಭಸದಿಂದ ಬೆಟ್ಟಗಳ ಶಿಖರಗಳನ್ನೂ ಇತರ ವೃಕ್ಷಗಳನ್ನೂ ಮೂಲೋತ್ಪಾಟನಮಾಡುತ್ತಾ, ಬಿರುಸಿನಿಂದ ಹೋಗುವ ಆನೆಯಂತೆ–ಕಾಲಿಗೆ ಸಿಕ್ಕಿದ ಬಂಡೆಗಳನ್ನು ನುಚ್ಚುನೂರು ಮಾಡುತ್ತಾ, ದೂರ-ದೂರಕ್ಕೆ ಹೆಜ್ಜೆ ಗಳನ್ನಿಡುತ್ತಾ ಕಾರ್ಯವನ್ನು ಸಾಧಿಸಬೇಕೆನ್ನುವ ಆಶಯದಿಂದ ಬಹಳ ಬೇಗ ಸುಗ್ರೀವನ ಮನೆಗೆ ಹೋದನು.

ಇಕ್ಷ್ವಾಕುಕುಲಸಿಂಹನಾದ ಲಕ್ಷ್ಮಣನು – ಪರ್ವತದ ಮಧ್ಯಭಾಗದಲ್ಲಿ ಕಪಿಸೈನಿಕರಿಂದ ವ್ಯಾಪ್ತವಾಗಿದ್ದ, ದುರ್ಗಮವಾಗಿದ್ದ, ಕಪಿರಾಜನಾದ

---

ದಿಂದ '–ಎಂಬ ಅರ್ಥವನ್ನು ಎಲ್ಲ ವ್ಯಾಖ್ಯಾನಕಾರರೂ ಮಾಡಿರುತ್ತಾರೆ. ಆರ್ಯೇಣ– ಆರ್ಯಧರ್ಮಾನುಸಾರೇಣ = ಹಿರಿಯರು ಅನುಸರಿಸುವ ಧರ್ಮದಂತೆ–ಎಂದೂ ಅರ್ಥ ಮಾಡಬಹುದಾಗಿದೆ.

...and Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಸುಗ್ರೀವನ ರಾಜಧಾನಿಯಾಗಿದ್ದ ಕಿಷ್ಕಿಂಧಾಪಟ್ಟಣವನ್ನು ನೋಡಿದನು. ಸುಗ್ರೀವನ ಮೇಲಿನ ಕೋಪದಿಂದಾಗಿ ಅವನ ತುಟಿಗಳು ತರ-ತರನೆ ಅದುರುತ್ತಿದ್ದುವು. ಲಕ್ಷ್ಮಣನು ಕಿಷ್ಕಿಂಧಾಪಟ್ಟಣದ ಹೊರವಲಯದಲ್ಲಿ ಸಂಚರಿಸುತ್ತಿದ್ದ ಮಹಾಭಯಂಕರರಾದ ವಾನರರನ್ನು ನೋಡಿದನು. ಆನೆಗಳಂತೆಯೇ ಇದ್ದ ಆ ಎಲ್ಲ ವಾನರರೂ ಪರ್ವತದ ಮಧ್ಯದಲ್ಲಿದ್ದ ಪುರುಷ ಶ್ರೇಷ್ಠನಾದ ಲಕ್ಷ್ಮಣನನ್ನು ನೋಡಿದೊಡನೆಯೇ ನೂರಾರು ಬೆಟ್ಟದ ಶಿಖರಗಳನ್ನು (ಶಿಖರಗಳಲ್ಲಿದ್ದ ಬಂಡೆಗಳನ್ನೂ, ದೊಡ್ಡದಾಗಿ ಬೆಳೆದಿದ್ದ ವೃಕ್ಷಗಳನ್ನೂ) ಕಿತ್ತು ಕೈಗಳಲ್ಲೆತ್ತಿಕೊಂಡರು. ತನ್ನನ್ನು ನೋಡಿದೊಡನೆಯೇ ವೃಕ್ಷಗಳೇ ಮೊದಲಾದ ಆಯುಧಗಳನ್ನು ಹಿಡಿದು ನಿಂತ ಆ ವಾನರ ಶ್ರೇಷ್ಠರನ್ನು ನೋಡಿ ಲಕ್ಷ್ಮಣನು-ಅಪಾರವಾದ ಕಟ್ಟಿಗೆಯನ್ನು ಹಾಕಿದ ಅಗ್ನಿಯಂತೆ - ಇಮ್ಮಡಿಯಾಗಿ ಕೋಪಗೊಂಡನು. ಯುಗಾಂತಕಾಲದ ಮೃತ್ಯುಸದೃಶನಾಗಿದ್ದ, ಅತ್ಯಂತಕ್ರುದ್ಧನಾಗಿದ್ದ ಲಕ್ಷ್ಮಣನನ್ನು ನೋಡಿ ಭಯಗೊಂಡ ವಾನರರೆಲ್ಲರೂ ಗುಂಪು-ಗುಂಪುಗಳಾಗಿ ದಿಕ್ಕು-ದಿಕ್ಕಿಗೆ ಓಡಿ ಹೋದರು. ಬಳಿಕ ಆ ವಾನರಶ್ರೇಷ್ಠರು ಸುಗ್ರೀವನ ಅರಮನೆಗೆ ಹೋಗಿ ಲಕ್ಷ್ಮಣನ ಆಗಮನವನ್ನೂ ಮತ್ತು ಅವನು ಹೆಚ್ಚು ಕೋಪಗೊಂಡಿರುವುದನ್ನೂ ಸುಗ್ರೀವನಿಗೆ ನಿವೇದಿಸಿದರು. ಅತ್ಯಂತಕಾಮುಕನಾಗಿದ್ದ ಸುಗ್ರೀವನು ಆ ಸಮಯದಲ್ಲಿ ತಾರೆಯೊಡನಿದ್ದು ಅವಳಲ್ಲಿಯೇ ಆಸಕ್ತನಾಗಿದ್ದುದರಿಂದ ವಾನರಶ್ರೇಷ್ಠರು ಹೇಳಿದ ಮಾತನ್ನು ಕೇಳಲೇ ಇಲ್ಲ. ಅವರ ಮಾತಿಗೆ ಲಕ್ಷ್ಯವನ್ನೇ ಕೊಡದೇ ವಿಲಾಸದಲ್ಲಿಯೇ ಆಸಕ್ತನಾಗಿದ್ದು ಬಿಟ್ಟನು. ಲಕ್ಷ್ಮಣನ ಸ್ವರೂಪವನ್ನು ನೋಡಿ ರೋಮಾಂಚಿತರಾಗಿದ್ದ, ಪರ್ವತ-ಗಜ-ಮೇಘಗಳಂತೆಯೇ ಇದ್ದ ವಾನರರು ಹನುಮಂತನೇ ಮೊದಲಾದ ಸಚಿವರ ಆಜ್ಞೆಯಂತೆ ಪಟ್ಟಣದಿಂದ ಹೊರಟರು. ಅವರೆಲ್ಲರಿಗೂ ಉಗುರು ಮತ್ತು ಕೋರೆಹಲ್ಲುಗಳೇ ಆಯುಧಗಳಾಗಿದ್ದುವು. ಅವರು ಹುಲಿಗಳಂತೆ ದರ್ಪಿಷ್ಠರಾಗಿದ್ದರು. ಭಯಂಕರವಾಗಿ ಕಾಣುತ್ತಿದ್ದರು. ವಿಕಾರವಾದ ಮುಖಗಳನ್ನು ಹೊಂದಿದ್ದರು. ಅವರಲ್ಲಿ ಕೆಲವರು ಹತ್ತು ಆನೆಗಳ ಬಲವನ್ನು ಹೊಂದಿದ್ದರು. ದೊಡ್ಡ-ದೊಡ್ಡ ವೃಕ್ಷಗಳನ್ನೇ ಕೈಯಲ್ಲಿ ಹಿಡಿದು ನಿಂತಿದ್ದ, ಮಹಾಬಲಿಷ್ಠರಾದ ವಾನರರಿಂದ ವ್ಯಾಪ್ತವಾಗಿದ್ದ, ಪ್ರವೇಶಿಸಲು ಅಸಾಧ್ಯ

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.


ವಾಗಿದ್ದ ಕಿಷ್ಕಿಂಧಾಪಟ್ಟಣವನ್ನು ಕ್ರುದ್ಧನಾದ ಲಕ್ಷ್ಮಣನು ನೋಡುತ್ತಾ ಮುಂದೆ ಹೋದನು. ಮಹಾಸತ್ತ್ವರಾದ ಆ ವಾನರರೆಲ್ಲರೂ ಕಿಷ್ಕಿಂಧಾ ಪಟ್ಟಣದ ಕೋಟೆಯನ್ನೂ ಮತ್ತು ಕಂದರವನ್ನೂ ದಾಟಿ ಹೊರಬಂದು ತಮ್ಮ ಇರುವಿಕೆಯನ್ನು ಪ್ರಕಟಗೊಳಿಸುತ್ತಾ ಅಲ್ಲಿಯೇ ನಿಂತುಕೊಂಡರು.

ವೀರನಾದ, ಧೈರ್ಯಶಾಲಿಯಾದ ಲಕ್ಷ್ಮಣನು ಸುಗ್ರೀವನ ಪ್ರಮತ್ತತೆಯನ್ನೂ ಅಣ್ಣನಾದ ಶ್ರೀರಾಮನ ಕಾರ್ಯಸಿದ್ಧಿಯಾಗದಿರುವುದನ್ನೂ ಗಮನಿಸಿ ಮತ್ತೂ ಕೋಪಗೊಂಡು ಬಿಸಿಯಾದ ನಿಟ್ಟುಸಿರುಬಿಡುತ್ತಿದ್ದನು. ಕೋಪಾವೇಶದಿಂದಾಗಿ ಅವನ ಕಣ್ಣುಗಳು ರಕ್ತದಂತೆ ಕೆಂಪಾಗಿದ್ದುವು. ಧೂಮದಿಂದ ಆವೃತನಾದ ಯಜ್ಞೇಶ್ವರನಂತೆಯೂ, ಐದು ಹೆಡೆಗಳ ಸರ್ಪದಂತೆಯೂ ಕಾಣುತ್ತಿದ್ದನು. ಅವನ ಬಾಣಗಳ ಅಗ್ರಭಾಗವೇ ಸರ್ಪದ ಥಳಥಳಿಸುವ ನಾಲಿಗೆಯಾಗಿದ್ದಿತು. ಧನುಸ್ಸೇ ಹಾವಿನ ಹೆಡೆಯಾಗಿದ್ದಿತು. ತೇಜಸ್ಸೇ ಸರ್ಪದ ಮುಖವಾಗಿದ್ದಿತು. ಪ್ರಳಯಕಾಲದ ಅಗ್ನಿಯಂತೆ ಪ್ರಜ್ವಲಿಸುತ್ತಿದ್ದ, ಕೋಪಗೊಂಡಿರುವ ಆದಿಶೇಷನಂತಿದ್ದ ಲಕ್ಷ್ಮಣನ ಬಳಿಗೆ ಅಂಗದನು ಹೋದನು. ಲಕ್ಷ್ಮಣನು ಅತ್ಯಂತಕುಪಿತನಾಗಿದ್ದುದನ್ನು ನೋಡಿ ಅವನಿಗೆ ಬಹಳ ವಿಷಾದವಾಯಿತು. ಕೋಪದಿಂದ ಕೆಂಗಣ್ಣನಾಗಿದ್ದ ಮಹಾಯಶಸ್ವಿಯಾದ ಲಕ್ಷ್ಮಣನು ಈ ಸಂದೇಶವನ್ನು ಅಂಗದನ ಮೂಲಕವಾಗಿ ಸುಗ್ರೀವನಿಗೆ ಕಳುಹಿಸಿದನು.

ಸುಗ್ರೀವಃ ಕಥ್ಯತಾಂ ವತ್ಸ ಮಮಾಗಮನಮಿತ್ಯುತ ।
ಏಷ ರಾಮಾನುಜಃ ಪ್ರಾಪ್ತಸ್ತ್ವತ್ಸಕಾಶಮರಿಂದಮಃ ।
ಭ್ರಾತುರ್ವ್ಯಸನಸಂತಪ್ತೋ ದ್ವಾರಿ ತಿಷ್ಠತಿ ಲಕ್ಷ್ಮಣಃ ॥೩೩॥
ತಸ್ಯ ವಾಕ್ಯೇ ಯದಿ ರುಚಿಃ ಕ್ರಿಯತಾಂ ಸಾಧು ವಾನರ ।
ಇತ್ಯುಕ್ತ್ವಾ ಶೀಘ್ರಮಾಗಚ್ಛ ವತ್ಸ ವಾಕ್ಯಮಿದಂ ಮಮ ॥೩೪॥

"ವತ್ಸ! ನಾನು ಇಲ್ಲಿಗೆ ಬಂದಿರುವುದನ್ನೂ ಮತ್ತು ಈ ನನ್ನ ಸಂದೇಶವನ್ನೂ ಸುಗ್ರೀವನಿಗೆ ಹೇಳು. 'ವಾನರನೇ! ಅರಿಮರ್ದನನಾದ ಶ್ರೀರಾಮನ ಅನುಜನು ಇಲ್ಲಿಗೆ ಬಂದಿದ್ದಾನೆ. ಅಣ್ಣನ ವ್ಯಸನದಿಂದ ಸಂತಪ್ತನಾಗಿರುವ ಲಕ್ಷ್ಮಣನು ಕಿಷ್ಕಿಂಧೆಯ ಹೆಬ್ಬಾಗಿಲಿನಲ್ಲಿ ನಿಂತಿದ್ದಾನೆ. ಅವನೊಡನೆ ಮಾತ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಮಾಡುವುದರಲ್ಲಿ ಅಭಿರುಚಿಯಿದ್ದರೆ-ಯೋಗ್ಯವಾದ ಯಾವ ಕಾರ್ಯವನ್ನು ಮಾಡಬೇಕೋ ಆ ಕಾರ್ಯವನ್ನು ಮಾಡು ' – ಹೀಗೆ ಸುಗ್ರೀವನಿಗೆ ಹೇಳಿ ನೀನು ಶೀಘ್ರವಾಗಿ ಇಲ್ಲಿಗೆ ಬರಬೇಕು."

ಲಕ್ಷ್ಮಣನ ಆ ಮಾತನ್ನು ಕೇಳಿ ವಾನರರೆಲ್ಲರಿಗೂ ಆಪತ್ಕಾಲವು ಪ್ರಾಪ್ತವಾಯಿತೆಂದು ಭಾವಿಸಿ ಅಂಗದನು ಶೋಕಾವಿಷ್ಟನಾದನು. ಅಂಗದನು ಲಕ್ಷ್ಮಣನ ಆದೇಶದಂತೆ ಅವನ ಆಗಮನವನ್ನು ಅರುಹಲು ಸುಗ್ರೀವನ ಬಳಿಗೆ ಹೊರಟನು. ಸುತೀಕ್ಷ್ಣವಾದ ಲಕ್ಷ್ಮಣನ ಮಾತಿನಿಂದ ಭ್ರಾಂತ ನಾದ ಮತ್ತು ಅತ್ಯಂತದೀನವಾದ ಮುಖವನ್ನು ಹೊಂದಿದ, ವೇಗವಂತನಾದ ಅಂಗದನು ಲಕ್ಷ್ಮಣನ ಸಮೀಪದಿಂದ ಹೊರಟು ಅರಮನೆಗೆ ಬಂದು ಮೊದಲು ತಂದೆಯಾದ ಸುಗ್ರೀವನ ಪಾದಗಳಿಗೂ ಅನಂತರ ಚಿಕ್ಕತಾಯಿಯಾದ ರುಮೆಯ ಪಾದಗಳಿಗೂ ನಮಸ್ಕರಿಸಿದನು. ಮಹಾತೇಜಸ್ವಿಯಾದ ಅಂಗದನು ಮತ್ತೊಮ್ಮೆ ಸುಗ್ರೀವನ ಪಾದಗಳಿಗೂ, ತಾಯಿಯಾದ ತಾರೆಯ ಪಾದ ಗಳಿಗೂ, ಚಿಕ್ಕತಾಯಿಯಾದ ರುಮೆಯ ಪಾದಗಳಿಗೂ ನಮಸ್ಕರಿಸಿ ಲಕ್ಷ್ಮಣನು ಬಂದಿರುವ ವಾರ್ತೆಯನ್ನು ಸುಗ್ರೀವನಿಗೆ ನಿವೇದಿಸಿದನು.

ನಿದ್ರೆಯ ಮಂಪರಿನಿಂದ ವ್ಯಾಪ್ತನಾಗಿದ್ದ, ಮದ್ಯಪಾನದ ಮದದಿಂದ ಮತ್ತನೂ – ಕಾಮಮೋಹಿತನೂ ಆಗಿದ್ದ ಸುಗ್ರೀವನು ಆಗಲೂ ಎಚ್ಚರ ಗೊಳ್ಳಲೇ ಇಲ್ಲ.

ಬಹಳ ಕ್ರುದ್ಧನಾಗಿದ್ದ ಲಕ್ಷ್ಮಣನನ್ನು ನೋಡಿದ ಮಾತ್ರದಿಂದಲೇ ಭಯದಿಂದ ಭ್ರಾಂತಿಗೊಂಡ ಬುದ್ಧಿಯುಳ್ಳವರಾಗಿದ್ದ ವಾನರರು ಅವನನ್ನು ಪ್ರಸನ್ನಗೊಳಿಸುವ ಸಲುವಾಗಿ ಕಿಲ-ಕಿಲನೆ ಶಬ್ದಮಾಡುತ್ತಿದ್ದರು. ಮಹಾ ಪ್ರವಾಹದಂತೆಯೇ ಅತ್ಯಂತವೇಗದಿಂದ ಆಗಮಿಸಿದ ಲಕ್ಷ್ಮಣನನ್ನು ನೋಡಿ ಭಯವಿಹ್ವಲರಾದ ವಾನರರು ಅವನ ಸಮೀಪದಲ್ಲೇ ನಿಂತು ಸುಗ್ರೀವನನ್ನು ಎಚ್ಚರಗೊಳಿಸುವ ಸಲುವಾಗಿ ವಜ್ರಾಯುಧಕ್ಕೆ ಮತ್ತು ಸಿಡಿಲಿಗೆ ಸಮಾನ ವಾದ ಸಿಂಹನಾದಗಳನ್ನೂ ಏಕಕಾಲದಲ್ಲಿ ಮಾಡಿದರು. ಮದ್ಯದ ಅಮಲಿ ನಿಂದಾಗಿ ಸುಗ್ರೀವನ ಕಣ್ಣುಗಳು ಚಂಚಲವಾಗಿಯೂ ಮತ್ತು ಕೆಂಪಾಗಿಯೂ ಇದ್ದುವು. ಅವನು ಹಾಕಿಕೊಂಡಿದ್ದ ಹಾರಗಳು ಅಸ್ತವ್ಯಸ್ತವಾಗಿದ್ದುವು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.


ವಾನರರು ಮಾಡಿದ ಆ ಸಿಂಹಗರ್ಜನೆಗಳಿಂದ ಸುಗ್ರೀವನು ಎಚ್ಚರಗೊಂಡನು. ಅಂಗದನೊಡನೆ ಸುಗ್ರೀವನ ಬಳಿಗೆ ಬಂದಿದ್ದ, ಅರ್ಥ-ಧರ್ಮಗಳ ಮಂತ್ರಿಗಳಾದ ಪ್ಲಕ್ಷ ಮತ್ತು ಪ್ರಭಾವ ಎಂಬಿಬ್ಬರು ಮಂತ್ರಿಗಳೂ ಲಕ್ಷ್ಮಣನು ಅನೇಕ ವಿಷಯಗಳನ್ನು ಹೇಳಲು ಬಂದಿರುವನೆಂಬ ವಾರ್ತೆಯನ್ನು ಸುಗ್ರೀವನಿಗೆ ಹೇಳಿದರು. ಮರುತ್ಪತಿಯಾದ ಇಂದ್ರನನ್ನು ದೇವತೆಗಳು ಉಪಾಸಿಸುವಂತೆ-ಪ್ಲಕ್ಷ ಮತ್ತು ಪ್ರಭಾವರು ತಮ್ಮ ರಾಜನಾದ ಸುಗ್ರೀವನನ್ನು ನಿಶ್ಚಯಾರ್ಥಯುಕ್ತವಾದ ಮಾತುಗಳಿಂದ ಪ್ರಸನ್ನಗೊಳಿಸುತ್ತಾ ಹೇಳಿದರು :

"ವಾನರೇಶ್ವರನೇ ! ಸಹೋದರರಾದ ರಾಮ-ಲಕ್ಷ್ಮಣರು ಸತ್ಯಸಂಧರು ; ಮಹಾಭಾಗ್ಯಶಾಲಿಗಳು. ನಮ್ಮ ವಿಷಯದಲ್ಲಿ ಸ್ನೇಹಭಾವವನ್ನು ಹೊಂದಿರುವವರು. ರಾಜ್ಯವನ್ನು ಪಡೆಯಲು ಅರ್ಹರಾಗಿರತಕ್ಕವರು. ನಮಗೆ ರಾಜ್ಯವನ್ನು ದಯಪಾಲಿಸಿರತಕ್ಕವರು. ಆ ಸಹೋದರರಲ್ಲಿ ಒಬ್ಬನಾದ ಲಕ್ಷ್ಮಣನು ಧನುಸ್ಸನ್ನು ಹಿಡಿದು ಕಿಷ್ಕಿಂಧಾಪಟ್ಟಣದ ಮಹಾದ್ವಾರದಲ್ಲಿ ನಿಂತಿದ್ದಾನೆ. ಅವನ ದರ್ಶನಮಾತ್ರದಿಂದಲೇ ಭಯಗೊಂಡಿರುವ ನಮ್ಮ ವಾನರರು ಗಡ-ಗಡನೆ ನಡುಗುತ್ತಾ ಗಟ್ಟಿಯಾಗಿ ಕಿರುಚಿಕೊಳ್ಳುತ್ತಿದ್ದಾರೆ. ಮಹಾತ್ಮನಾದ ರಾಘವಾನುಜನಾದ ಲಕ್ಷ್ಮಣನು ಅಣ್ಣನ ಆಜ್ಞೆಯಂತೆ ಮಾತನ್ನೇ ಸಾರಥಿಯನ್ನಾಗಿಯೂ, ಪ್ರಯತ್ನವನ್ನೇ ರಥವನ್ನಾಗಿಯೂ ಮಾಡಿಕೊಂಡು ಇಲ್ಲಿಗೆ ಬಂದಿರುವನು. ತಾರಾದೇವಿಯ ಪ್ರಿಯಪುತ್ರನಾದ ಅಂಗದನನ್ನು ಲಕ್ಷ್ಮಣನು ಅವಸರದಿಂದ ನಿನ್ನ ಬಳಿಗೆ ಕಳುಹಿಸಿದ್ದಾನೆ. ವೀರ್ಯವಂತನಾದ ಲಕ್ಷ್ಮಣನು ಕಣ್ಣುಗಳಿಂದಲೇ ವಾನರರನ್ನು ದಹಿಸಿಬಿಡುವನೋ ಎಂಬಂತೆ ರೋಷದಿಂದ ತುಂಬಿದ ಕಣ್ಣುಗಳಿಂದ ಕೂಡಿದವನಾಗಿ ಕಿಷ್ಕಿಂಧಾಪಟ್ಟಣದ ಹೆಬ್ಬಾಗಿಲಿನಲ್ಲಿ ನಿಂತಿದ್ದಾನೆ. ಪುತ್ರ-ಮಿತ್ರ-ಬಂಧುಗಳೊಡನೆ ಈಗಲೇ ಅವನ ಬಳಿಗೆ ಹೋಗು. ಅವನಿಗೆ ತಲೆಬಾಗಿ ನಮಸ್ಕರಿಸಿ ಅವನ ಕೋಪವನ್ನು ಉಪಶಮನಗೊಳಿಸು. ಧರ್ಮಾತ್ಮನಾದ ಶ್ರೀರಾಮನ ಮಾತನ್ನು ಏಕಾಗ್ರವಾದ ಬುದ್ಧಿಯಿಂದ ನೆರವೇರಿಸಿಕೊಡು. ನೀನು ಮಾಡಿಕೊಟ್ಟಿರುವ ಪ್ರತಿಜ್ಞೆಯಂತೆ ನಡೆದುಕೊ. ಸತ್ಯಪ್ರತಿಜ್ಞನಾಗು."

೩೧ನೆಯ ಸರ್ಗವು ಮುಗಿಯಿತು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಕಿಷ್ಕಿಂಧಾಕಾಂಡ ೩೨ನೆಯ ಸರ್ಗ

## ಚಿಂತಾಮಗ್ನನಾಗಿದ್ದ ಸುಗ್ರೀವನನ್ನು ಹನುಮಂತನು ಸಮಾಧಾನಗೊಳಿಸಿದುದು

ಅಙ್ಗದಸ್ಯ ವಚಃ ಶ್ರುತ್ವಾ ಸುಗ್ರೀವಃ ಸಚಿವೈಃ ಸಹ ।
ಲಕ್ಷ್ಮಣಂ ಕುಪಿತಂ ಶ್ರುತ್ವಾ ಮುಮೋಚಾಸನಮಾತ್ಮವಾನ್ ॥೧॥

ಧೈರ್ಯವಂತನಾದ ಸುಗ್ರೀವನು ಅಮಾತ್ಯರೊಡನೆ ಅಂಗದನು ಹೇಳಿದ ಮಾತುಗಳನ್ನು ಕೇಳಿ, ಲಕ್ಷ್ಮಣನು ಕುಪಿತನಾಗಿರುವನೆಂಬುದನ್ನು ತಿಳಿದು ಆಸನವನ್ನು ಬಿಟ್ಟು ಮೇಲೆದ್ದನು.

ಮಂತ್ರಾಲೋಚನೆಯಲ್ಲಿ ನಿಪುಣನಾದ ಸುಗ್ರೀವನು ಕಾರ್ಯದ ಗುರು-ಲಾಘವಗಳನ್ನು ನಿಶ್ಚಯಿಸಿ ಮಂತ್ರಾಲೋಚನೆಗಳಲ್ಲಿ ನಿಪುಣರಾದ ಮಂತ್ರಿಗಳಿಗೆ ಹೇಳಿದನು :

ನ ಮೇ ದುರ್ವ್ಯಾಹೃತಂ ಕಿಂಚಿನ್ನಾಪಿ ಮೇ ದುರನುಷ್ಠಿತಮ್ ।
ಲಕ್ಷ್ಮಣೋ ರಾಘವಭ್ರಾತಾ ಕ್ರುದ್ಧಃ ಕಿಮಿತಿ ಚಿನ್ತಯೇ ॥೩॥

" ಮಂತ್ರಿಸತ್ತಮರೇ ! ಸುಹೃದರೇ ! ನಾನು ಯಾವಾಗಲೂ ಯಾವ ಕೆಟ್ಟಮಾತನ್ನೂ ಆಡಿದವನಲ್ಲ. ಕೆಟ್ಟಕಾರ್ಯವನ್ನೂ ಮಾಡಿದವನಲ್ಲ. ಹೀಗಿರುವಾಗ ಶ್ರೀರಾಮನ ತಮ್ಮನಾದ ಲಕ್ಷ್ಮಣನು ಏಕೆ ಕುಪಿತನಾಗಿರುವನೆಂಬ ವಿಷಯವಾಗಿ ಚಿಂತಿಸುತ್ತಿದ್ದೇನೆ.

ಅಸುಹೃದ್ಭಿರ್ಮಮಾಮಿತ್ರೈರ್ನಿತ್ಯಮನ್ತರದರ್ಶಿಭಿಃ ।
ಮಮ ದೋಷಾನಸಂಭೂತಾನ್ ಶ್ರಾವಿತೋ ರಾಘವಾನುಜಃ ॥೪॥

ನಿತ್ಯವೂ ನನ್ನಲ್ಲಿ ದೋಷವನ್ನೇ ಎಣಿಸುವ, ಸುಹೃದ್ಗರಲ್ಲದ, ಯಾವಾಗಲೂ ರಂಧ್ರಾನ್ವೇಷಣೆಯನ್ನೇ ಹುಡುಕುತ್ತಿರುವ ನನ್ನ ಶತ್ರುಗಳು ಲಕ್ಷ್ಮಣನಿಗೆ ನನ್ನಲ್ಲಿಲ್ಲದಿರುವ ದೋಷಗಳನ್ನು ಕಲ್ಪಿಸಿಕೊಂಡು ಹೇಳಿರಬಹುದು.

ಅತ್ರ ತಾವದ್ಯಥಾಬುದ್ಧಿ ಸರ್ವೈರೇವ ಯಥಾವಿಧಿ ।
ಭಾವಸ್ಯ ನಿಶ್ಚಯಸ್ತಾವದ್ವಿಜ್ಞೇಯೋ ನಿಪುಣಂ ಶನೈಃ ॥೫॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಈ ವಿಷಯದಲ್ಲಿ ನೀವೆಲ್ಲರೂ ಶಾಸ್ತ್ರದೃಷ್ಟಿಯಿಂದಲೂ ಮತ್ತು ಬುದ್ಧಿಶಕ್ತಿಯಿಂದಲೂ ಲಕ್ಷ್ಮಣನ ನಿಶ್ಚಿತಾಭಿಪ್ರಾಯವನ್ನೂ ಮತ್ತು ಕೋಪಕ್ಕೆ ಕಾರಣವೇನೆಂಬುದನ್ನೂ ಚೆನ್ನಾಗಿಯೂ ಮತ್ತು ಸಾವಧಾನವಾಗಿಯೂ ತಿಳಿದುಕೊಳ್ಳಬೇಕು.

ನ ಖಲ್ವಸ್ತಿ ಮಮ ತ್ರಾಸೋ ಲಕ್ಷ್ಮಣಾನ್ನಾಪಿ ರಾಘವಾತ್ ।
ಮಿತ್ರಂ ಸ್ವಸ್ಥಾನಕುಪಿತಂ ಜನಯತ್ಯೇವ ಸಂಭ್ರಮಮ್ ॥೬॥

ನನಗೆ ಲಕ್ಷ್ಮಣನಿಂದಾಗಲೀ ರಾಮನಿಂದಾಗಲೀ ಯಾವ ಭಯವೂ ಇಲ್ಲ. ಆದರೆ ಕೋಪಗೊಳ್ಳಬಾರದ ಸಮಯದಲ್ಲಿ ಕಾರಣವಿಲ್ಲದೆಯೇ ಮಿತ್ರನು ಕೋಪಗೊಂಡಿರುವುದು ನನಗೆ ಭ್ರಾಂತಿಯನ್ನುಂಟುಮಾಡಿದೆ.

ಸರ್ವಥಾ ಸುಕರಂ ಮಿತ್ರಂ ದುಷ್ಕರಂ ಪ್ರತಿಪಾಲನಮ್ ।
ಅನಿತ್ಯತ್ವಾತ್ತು ಚಿತ್ತಾನಾಂ ಪ್ರೀತಿರಲ್ಪೇಽಪಿ ಭಿದ್ಯತೇ ॥೭॥

ಸರ್ವಪ್ರಕಾರದಿಂದಲೂ ಮೈತ್ರಿಯನ್ನು ಮಾಡಿಕೊಳ್ಳುವುದು ಸುಲಭ. ಆದರೆ ಮಾಡಿಕೊಂಡ ಮೈತ್ರಿಯನ್ನು ಕಾಪಾಡಿಕೊಳ್ಳುವುದು ಅತ್ಯಂತದುಷ್ಕರವಾಗುತ್ತದೆ. ಮೈತ್ರಿಯನ್ನು ಮಾಡಿಕೊಂಡವರ ಮನಸ್ಸುಗಳು ಚಂಚಲವಾದುದರಿಂದ ಅತ್ಯಲ್ಪಕಾರಣದಿಂದಲೂ ಪ್ರೀತಿಯು ಒಡೆದುಹೋಗುತ್ತದೆ.

ಮಹಾತ್ಮನಾದ ಶ್ರೀರಾಮನು ನನಗೆ ಯಾವ ಉಪಕಾರವನ್ನು ಮಾಡಿರುವನೋ–ಆ ಉಪಕಾರಕ್ಕೆ ತಕ್ಕುದಾದ ಪ್ರತ್ಯುಪಕಾರವನ್ನು ಮಾಡಲು ಇದುವರೆಗೂ ನನಗೆ ಸಾಧ್ಯವಾಗಿಲ್ಲ. ಈ ಕಾರಣದಿಂದಲೇ ನಾನು ಭಯಗೊಂಡಿದ್ದೇನೆ."

ಸುಗ್ರೀವನು ಹೀಗೆ ಹೇಳಲು ಕಪಿಶ್ರೇಷ್ಠನಾದ ಹನುಮಂತನು ತನ್ನದೇ ಆದ ತರ್ಕದಿಂದ ವಾನರಮಂತ್ರಿಗಳ ಮಧ್ಯದಲ್ಲಿ ಸುಗ್ರೀವನಿಗೆ ಹೇಳಿದನು:

" ಹರಿಗಣೇಶ್ವರನೇ ! ನೀನು ಹೇಳಿದಂತೆ ಬಹಳವಾಗಿ ವಿಶ್ವಾಸವನ್ನಿಟ್ಟ ಶ್ರೀರಾಮನು ನಿನ್ನ ಶುಭೋದಯಕ್ಕಾಗಿ ಮಾಡಿರುವ ಉಪಕಾರವನ್ನು ನೀನು ಮರೆತಿಲ್ಲನೆಂಬುದರಲ್ಲಿ ಆಶ್ಚರ್ಯವೇನೂ ಇಲ್ಲ. ವೀರನಾದ ರಾಘವನು ನಿನಗೆ ಪ್ರಿಯವನ್ನುಂಟುಮಾಡುವ ಸಲುವಾಗಿಯೇ ಲೋಕಾಪವಾದದ ಭಯವನ್ನೂ ದೂರೀಕರಿಸಿ ಇಂದ್ರಸದೃಶಪರಾಕ್ರಮನಾದ ವಾಲಿಯನ್ನು ಸಂಹರಿಸಿದನು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri

ರಾಘವನನು ಸರ್ವಥಾ ನಿನ್ನ ಮೇಲೆ ವಿಶ್ವಾಸದಿಂದಲೇ ಕುಪಿತನಾಗಿದ್ದಾನೆ. ಇದರಲ್ಲಿ ಸಂಶಯವೇ ಇಲ್ಲ. ಆ ಕೋಪದಿಂದಲೇ ಅವನು ಲಕ್ಷ್ಮೀವರ್ಧನನಾದ ಲಕ್ಷ್ಮಣನನ್ನು ನಿನ್ನ ಬಳಿಗೆ ಕಳುಹಿಸಿಕೊಟ್ಟಿದ್ದಾನೆ. ಕಾಲಜ್ಞರಲ್ಲಿ ಶ್ರೇಷ್ಠನಾದವನೇ! ಮದ್ಯಪಾನದಿಂದ ಪ್ರಮತ್ತನಾಗಿರುವ ನೀನು ಸೀತಾನ್ವೇಷಣೆಯ ಕಾಲವು ಮೀರಿಹೋಗಿರುವುದೆಂಬುದನ್ನೂ ತಿಳಿದಿಲ್ಲ. ಅರಳಿದ ಏಳೆಲೆಯ ಬಾಳೆಹೂಗಳಂತೆ ಶ್ಯಾಮಲವರ್ಣದಿಂದ ಪರಿಶೋಭಿಸುವ ಶುಭಾವಹವಾದ ಶರದೃತುವು ಈಗಾಗಲೇ ಬಂದುಬಿಟ್ಟಿದೆ. ಆಕಾಶವು ಮೇಘಗಳಿಲ್ಲದೇ ನಿರ್ಮಲವಾದ ಗ್ರಹ-ನಕ್ಷತ್ರಗಳಿಂದ ಶೋಭಿಸುತ್ತಿದೆ. ಎಲ್ಲ ದಿಕ್ಕುಗಳೂ ಪ್ರಸನ್ನವಾಗಿವೆ. ನದಿಗಳೂ ಮತ್ತು ಸರೋವರಗಳೂ ಪ್ರಶಾಂತವಾಗಿವೆ. ಸೀತೆಯನ್ನು ಹುಡುಕಬೇಕಾದ ಕಾಲವು ಸನ್ನಿಹಿತವಾಗಿರುವುದೆಂಬುದನ್ನೂ ನೀನು ತಿಳಿದವನಾಗಿಲ್ಲ. ನೀನು ವ್ಯಮರೆತಿರುವೆಯೆಂಬುದು ಸ್ಪಷ್ಟವಾಗಿರುವುದರಿಂದಲೇ ನಿನ್ನನ್ನು ಎಚ್ಚರಿಸುವ ಸಲುವಾಗಿ ಲಕ್ಷ್ಮಣನು ಇಲ್ಲಿಗೆ ಆಗಮಿಸಿದ್ದಾನೆ. ಬೇರೊಬ್ಬನ (ಲಕ್ಷ್ಮಣನ) ಮೂಲಕವಾಗಿ ಬಂದಿರುವ, ಆರ್ತನಾದ, ಪತ್ನಿಯನ್ನು ಕಳೆದುಕೊಂಡಿರುವ, ಮಹಾತ್ಮನಾದ ರಾಘವನ ಕಠಿಣವಾದ ಮಾತುಗಳನ್ನು ನೀನು ಸಹಿಸಿಕೊಳ್ಳಲೇಬೇಕು. ರಾಘವನ ವಿಷಯದಲ್ಲಿ ಅಪರಾಧಮಾಡಿರುವ ನಿನಗೆ ಕೈಜೋಡಿಸಿಕೊಂಡು ಲಕ್ಷ್ಮಣನನ್ನು ಪ್ರಸನ್ನಗೊಳಿಸುವುದರ ಹೊರತಾಗಿ ಬೇರೆ ಯಾವ ಉಪಾಯವನ್ನೂ ನಾನು ಕಾಣೆನು.

ನಿಯುಕ್ತೈರ್ಮನ್ತ್ರಿಭಿರ್ವಾಚ್ಯೋ ಹ್ಯವಶ್ಯಂ ಪಾರ್ಥಿವೋ ಹಿತಮ್ ।
ಅತ ಏವ ಭಯಂ ತ್ಯಕ್ತ್ವಾ ಬ್ರವೀಮ್ಯವಧೃತಂ ವಚಃ ॥೧೮॥

ರಾಜಕಾರ್ಯಗಳಲ್ಲಿ ಸಲಹೆಗಳನ್ನು ಕೊಡಲು ನಿಯುಕ್ತರಾದ ಮಂತ್ರಿಗಳು ಅವಶ್ಯವಾಗಿ ರಾಜನಿಗೆ ಹಿತವಾಗುವ ಮಾತುಗಳನ್ನೇ ಹೇಳಬೇಕು. ಆದುದರಿಂದಲೇ ನಾನು ಭಯವನ್ನು ತೊರೆದು ನಿಶ್ಚಿತವಾದ ಈ ಮಾತನ್ನು ಹೇಳುತ್ತಿದ್ದೇನೆ.

ಅಭಿಕ್ರುದ್ಧಃ ಸಮರ್ಥೋ ಹಿ ಚಾಪಮುದ್ಯಮ್ಯ ರಾಘವಃ ।
ಸದೇವಾಸುರಗನ್ಧರ್ವಂ ವಶೇ ಸ್ಥಾಪಯಿತುಂ ಜಗತ್ ॥೧೯॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ನ ಸ ಕ್ಷಮಃ ಕೋಪಯಿತುಂ ಯಃ ಪ್ರಸಾದ್ಯಃ ಪುನರ್ಭವೇತ್ ।
ಪೂರ್ವೋಪಕಾರಂ ಸ್ಮರತಾ ಕೃತಜ್ಞೇನ ವಿಶೇಷತಃ ॥೨೦॥

ರಾಘವನು ಕ್ರುದ್ಧನಾಗಿ ಧನುಸ್ಸನ್ನೆತ್ತಿಕೊಂಡು ಹೊರಟನೆಂದರೆ ದೇವಾಸುರ-ಗಂಧರ್ವರಿಂದ ಯುಕ್ತವಾಗಿರುವ ಈ ಸಕಲಜಗತ್ತನ್ನೂ ಸ್ವಾಧೀನಪಡಿಸಿಕೊಳ್ಳಲು ಸಮರ್ಥನಾಗಿದ್ದಾನೆ. ಯಾವನನ್ನು ಪ್ರಸನ್ನಗೊಳಿಸಲು ಸಾಧ್ಯವೋ-ಅಂತಹವನನ್ನು ಕೋಪಗೊಳ್ಳುವಂತೆ ಮಾಡುವುದು ಸರಿಯಲ್ಲ. ಅದರಲ್ಲಿಯೂ ವಿಶೇಷವಾಗಿ ಹಿಂದೆ ಪಡೆದುಕೊಂಡಿರುವ ಉಪಕಾರವನ್ನು ಸ್ಮರಿಸಿಕೊಳ್ಳುವ ಗುಣವುಳ್ಳ ನೀನು ಈ ಸಮಯದಲ್ಲಿ ಶ್ರೀರಾಮನ ಕೋಪವನ್ನು ವೃದ್ಧಿಗೊಳಿಸುವುದು ಸರ್ವಥಾ ಯುಕ್ತವಾಗಿ ಕಾಣುವುದಿಲ್ಲ.

ತಸ್ಯ ಮೂರ್ಧ್ನಾ ಪ್ರಣಮ್ಯ ತ್ವಂ ಸಪುತ್ರಃ ಸಸುಹೃಜ್ಜನಃ ।
ರಾಜಂಸ್ತಿಷ್ಠ ಸ್ವಸಮಯೇ ಭರ್ತುರ್ಭಾರ್ಯೇವ ತದ್ವಶೇ ॥೨೧॥

ಪುತ್ರರಿಂದಲೂ ಸುಹೃದರಿಂದಲೂ ಕೂಡಿಕೊಂಡು ಶ್ರೀರಾಮನಿಗೆ ತಲೆಬಾಗಿ ನಮಸ್ಕರಿಸಿ ಪತ್ನಿಯು ಪತಿಯ ವಶಳಾಗಿರುವಂತೆ-ಶ್ರೀರಾಮನಿಗೆ ವಶನಾಗಿ ನೀನು ಕೊಟ್ಟಿರುವ ಆಣತಿಯಂತೆ ನಡೆದುಕೊ.

ನ ರಾಮರಾಮಾನುಜಶಾಸನಂ ತ್ವಯಾ
ಕಪೀನ್ದ್ರ ಯುಕ್ತಂ ಮನಸಾಪ್ಯಪೋಹಿತುಮ್ ।
ಮನೋ ಹಿ ತೇ ಜ್ಞಾಸ್ಯತಿ ಮಾನುಷಂ ಬಲಂ
ಸರಾಘವಸ್ಯಾಸ್ಯ ಸುರೇನ್ದ್ರವರ್ಚಸಃ ॥೨೨॥

ಕಪೀಂದ್ರನೇ ! ಶ್ರೀರಾಮನ ಮತ್ತು ರಾಮಾನುಜನ ಆಜ್ಞೆಯನ್ನು ಮನಸ್ಸಿನಿಂದ ಕೂಡ ಉಲ್ಲಂಘಿಸುವುದು ನಿನಗೆ ಯುಕ್ತವಲ್ಲ. ದೇವೇಂದ್ರನಂತೆ ವರ್ಚಸ್ವಿಯಾಗಿರುವ, ಲಕ್ಷ್ಮಣನೊಡಗೂಡಿರುವ ಶ್ರೀರಾಮನ ಮಾನುಷವಾದ ಬಲವೆಷ್ಟೆಂಬುದು ನಿನ್ನ ಮನಸ್ಸಿಗೆ ಚೆನ್ನಾಗಿ ತಿಳಿದಿದೆ."

ಇ೨ನೆಯ ಸರ್ಗವು ಮುಗಿಯಿತು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.


ಲಕ್ಷ್ಮಣನು ಕಿಷ್ಕಿಂಧಾಪಟ್ಟಣದ ಸೌಂದರ್ಯವನ್ನು ನೋಡುತ್ತಾ ಸುಗ್ರೀವನ ಅರಮನೆಗೆ ಹೋಗಿ ಕ್ರೋಧಪೂರ್ವಕವಾಗಿ ಧನುಸ್ಸನ್ನು ಟೇಂಕರಿಸಿದುದು: ಭಯಗೊಂಡ ಸುಗ್ರೀವನು ಲಕ್ಷ್ಮಣನನ್ನು ಸಮಾಧಾನಗೊಳಿಸಲು ತಾರೆಯನ್ನು ಕಳುಹಿಸಿಕೊಟ್ಟುದು: ತಾರೆಯು ಲಕ್ಷ್ಮಣನಿಗೆ ಸಮಾಧಾನ ಹೇಳುತ್ತಾ ಅಂತಃಪುರಕ್ಕೆ ಕರೆದೊಯ್ದುದು

ಅಥ ಪ್ರತಿಸಮಾದಿಷ್ಟೋ ಲಕ್ಷ್ಮಣಃ ಪರಿವೀರಹಾ ।
ಪ್ರವಿವೇಶ ಗುಹಾಂ ರಮ್ಯಾಂ ಕಿಷ್ಕಿಂಧಾಂ ರಾಮಶಾಸನಾತ್ ॥೧॥

ಶತ್ರುವೀರಹಂತಕನಾದ ಲಕ್ಷ್ಮಣನು ಅಂಗದಾದಿಗಳ ಮೂಲಕವಾಗಿ ಸುಗ್ರೀವನಿಂದ ಆಹ್ವಾನಿತನಾಗಿ, ಶ್ರೀರಾಮನ ಆಜ್ಞೆಯಂತೆ ರಮ್ಯವಾಗಿದ್ದ ಕಿಷ್ಕಿಂಧಾಗುಹೆಯನ್ನು ಪ್ರವೇಶಿಸಿದನು.

ಮಹಾಕಾಯರಾದ ಮತ್ತು ಮಹಾಬಲಿಷ್ಠರಾಗಿದ್ದ ಕಪಿನಾಯಕರು ಮಹಾದ್ವಾರದಲ್ಲಿ ಲಕ್ಷ್ಮಣನನ್ನು ಕಂಡೊಡನೆಯೇ ಕೈಮುಗಿದುಕೊಂಡು ನಿಂತರು. ನಿಟ್ಟುಸಿರುಬಿಡುತ್ತಿದ್ದ, ಕ್ರುದ್ಧನಾಗಿದ್ದ, ದಶರಥನ ಮಗನಾದ ಲಕ್ಷ್ಮಣನನ್ನು ನೋಡಿ ಕಪಿಪ್ರಮುಖರೆಲ್ಲರೂ ಬಹಳವಾಗಿ ಭಯಗೊಂಡರು. ಯಾರೂ ಮುಂದೆ ಬಂದು ಅವನನ್ನು ಸುತ್ತುವರಿದು ನಿಲ್ಲಲಿಲ್ಲ. ಶ್ರೀಮಂತನಾದ ಲಕ್ಷ್ಮಣನು ರತ್ನಮಯವಾಗಿದ್ದ, ನಾನಾವಿಧವಾದ ರತ್ನಗಳಿಂದ ಸಮೃದ್ಧವಾಗಿದ್ದ, ದಿವ್ಯವಾಗಿಯೂ-ರಮ್ಯವಾಗಿಯೂ ಇದ್ದ, ಸುಪುಷ್ಪಿತವಾದ ಅರಣ್ಯದಿಂದ ಸಮಾವೃತವಾಗಿದ್ದ, ದೊಡ್ಡದಾದ ಕಿಷ್ಕಿಂಧಾಗುಹೆಯನ್ನು ನೋಡಿದನು. ಮಹಾಸೌಧಗಳಿಂದಲೂ ಉಪ್ಪರಿಗೇ ಮನೆಗಳಿಂದಲೂ ನಿಬಿಡವಾಗಿದ್ದ, ನಾನಾವಿಧವಾದ ಮಾರುಕಟ್ಟೆಗಳಿಂದಲೂ ಸಮಲಂಕೃತವಾಗಿದ್ದ, ಸಕಲವಿಧವಾದ ಕಾಮನೆಗಳನ್ನೂ ಪೂರೈಸುವ ಫಲ-ಪುಷ್ಪಭರಿತವಾದ ವೃಕ್ಷಗಳಿಂದ ಶೋಭಾಯಮಾನವಾಗಿ ಕಾಣುತ್ತಿದ್ದ ಕಿಷ್ಕಿಂಧಾಗುಹೆಯನ್ನು ಲಕ್ಷ್ಮಣನು ನೋಡಿದನು. ದೇವ-ಗಂಧರ್ವರ ಮಕ್ಕಳಾದ, ಮನಬಂದಂತೆ ರೂಪಗಳನ್ನು ಧರಿಸುವ ಸಾಮರ್ಥ್ಯವುಳ್ಳ, ದಿವ್ಯ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ವಾದ ಮಾಲೆಗಳನ್ನೂ ವಸ್ತ್ರಗಳನ್ನೂ ಧರಿಸಿದ್ದ, ಮನಸ್ಸಿಗೆ ಆಹ್ಲಾದ ವಾಗುವಂತಹ ದರ್ಶನವುಳ್ಳ ವಾನರರಿಂದ ಶೋಭಾಯಮಾನವಾಗಿ ಕಾಣು ತ್ತಿದ್ದ ಕಿಷ್ಕಿಂಧಾಗುಹೆಯನ್ನು ಲಕ್ಷ್ಮಣನು ನೋಡಿದನು. ಚಂದನ, ಅಗುರು ಮತ್ತು ಕಮಲಗಳ ಗಂಧಗಳಿಂದಲೂ, ಮೈರೇಯ ಮತ್ತು ಜೇನು ತುಪ್ಪಗಳ ವಾಸನೆಯಿಂದಲೂ ಪರಿಮಳಯುಕ್ತವಾಗಿದ್ದ ಹೆದ್ದಾರಿಗಳಿಂದ ಕೂಡಿದ್ದ, ವಿಂಧ್ಯ ಮತ್ತು ಮೇರುಪರ್ವತಗಳಿಗೆ ಸಮಾನವಾಗಿದ್ದ, ಸಮ ತಟ್ಟನಲ್ಲಿದ್ದ ಪ್ರಾಸಾದಗಳಿಂದ ಶೋಭಾಯಮಾನವಾಗಿ ಕಾಣುತ್ತಿದ್ದ ಕಿಷ್ಕಿಂಧಾಪಟ್ಟಣವನ್ನೂ – ನಿರ್ಮಲವಾಗಿದ್ದ ಗಿರಿನದಿಗಳನ್ನೂ ಲಕ್ಷ್ಮಣನು ನೋಡಿದನು. ರಮ್ಯವಾಗಿದ್ದ ಅಂಗದನ ಅರಮನೆಯನ್ನೂ, ಮೈಂದ-ದ್ವಿವಿದರ ಮನೆಗಳನ್ನೂ, ಗವಯ-ಗವಾಕ್ಷ-ಗಜ-ಶರಭರ ಮತ್ತು ವಿದ್ಯು ನ್ಮಾಲೀ-ಸಂಪಾತಿ-ಸೂರ್ಯಾಕ್ಷ-ಹನುಮಂತರ ಮನೆಗಳನ್ನೂ, ವೀರಬಾಹು-ಸುಬಾಹುಗಳ ಮತ್ತು ಮಹಾತ್ಮನಾದ ನಲನ ಅರಮನೆಗಳನ್ನೂ, ಕುಮುದ-ಸುಷೇಣ-ತಾರ-ಜಾಂಬವಂತ-ದಧಿವಕ್ತ್ರ-ನೀಲ-ಸುಪಾಟಲ-ಸುನೇತ್ರರ ಮನೆ ಗಳನ್ನೂ ಲಕ್ಷ್ಮಣನು ಆ ರಾಜಮಾರ್ಗದಲ್ಲಿ ನೋಡಿದನು. ಆ ಕಪಿ ಮುಖ್ಯರ ಮನೆಗಳೆಲ್ಲವೂ ಸುಭದ್ರವಾಗಿ ನಿರ್ಮಿಸಲ್ಪಟ್ಟಿದ್ದುವು. ಬಿಳಿಯ ಮೋಡಗಳಂತೆ ಪ್ರಕಾಶಮಾನವಾಗಿದ್ದುವು. ದಿವ್ಯವಾದ ಪುಷ್ಪಮಾಲೆಗಳಿಂದ ಸಮಲಂಕೃತವಾಗಿದ್ದುವು. ವಿಪುಲವಾದ ಧನ-ಧಾನ್ಯಗಳಿಂದ ತುಂಬಿಹೋ ಗಿದ್ದುವು. ಶ್ರೇಷ್ಠರಾದ ಸ್ತ್ರೀಯರಿಂದಲೂ ಸಂಪನ್ನವಾಗಿದ್ದ ಆ ಸೌಧಗಳು ಅತ್ಯಂತಶೋಭಾಯಮಾನವಾಗಿ ಕಾಣುತ್ತಿದ್ದುವು. ಬಳಿಕ ಲಕ್ಷ್ಮಣನು ಬಿಳಿಯಬಣ್ಣದ ಪ್ರಾಕಾರದಿಂದ ಸುತ್ತುವರಿಯಲ್ಪಟ್ಟಿದ್ದ ಪ್ರವೇಶಿಸಲು ದುಃಸಾಧ್ಯವಾಗಿದ್ದ, ಇಂದ್ರನ ಅರಮನೆಯೋಪಾದಿಯಲ್ಲಿದ್ದ ಸುಗ್ರೀವನ ಬಹುರಮ್ಯವಾದ ಅರಮನೆಯನ್ನು ನೋಡಿದನು. ಕೈಲಾಸಶಿಖರದಂತೆ ಬಿಳಿಯಬಣ್ಣದ ಉಪ್ಪರಿಗೇಮನೆಗಳ ಶಿಖರಗಳಿಂದಲೂ, ಸಕಲಕಾಮನೆ ಗಳನ್ನೂ ಪೂರೈಸುವ ಫಲ-ಪುಷ್ಪಭರಿತವಾದ ವೃಕ್ಷಗಳಿಂದಲೂ ಶೋಭಾಯ ಮಾನವಾಗಿ ಕಾಣುತ್ತಿದ್ದ ಸುಗ್ರೀವನ ಅರಮನೆಯನ್ನು ಲಕ್ಷ್ಮಣನು ನೋಡಿದನು. ಮಹೇಂದ್ರನಿಂದ ಕೊಡಲ್ಪಟ್ಟಿದ್ದ, ಕಾಂತಿಯುಕ್ತವಾದ, ನೀಲಮೇಘಗಳಿಗೆ ಸಮಾನವಾಗಿದ್ದ, ಶೀತಳವಾದ ನೆಳಲಿನಿಂದ ಕೂಡಿದ್ದ,

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಮನಸ್ಸಿಗೆ ಆಹ್ಲಾದಕರವಾಗಿದ್ದ, ದಿವ್ಯವಾದ ಪುಷ್ಪ-ಫಲಗಳುಳ್ಳ ವೃಕ್ಷಗಳಿಂದ ಸುತ್ತುವರಿಯಲ್ಪಟ್ಟಿದ್ದ ಸುಗ್ರೀವನ ಅರಮನೆಯನ್ನು ಲಕ್ಷ್ಮಣನು ನೋಡಿದನು. ಶಸ್ತ್ರಪಾಣಿಗಳಾದ ಮತ್ತು ಬಲಿಷ್ಠರಾದ ವಾನರರಿಂದ ಅರಮನೆಯ ಮಹಾದ್ವಾರವು ರಕ್ಷಿಸಲ್ಪಡುತ್ತಿದ್ದಿತು.

ದಿವ್ಯವಾದ ಪುಷ್ಪಮಾಲೆಗಳಿಂದ ಸಮಲಂಕೃತವಾಗಿದ್ದ, ಪುಟಕ್ಕೆ ಹಾಕಿದ ಚಿನ್ನದ ತೋರಣಗಳಿಂದ ಕಂಗೊಳಿಸುತ್ತಿದ್ದ, ಶುಭ್ರವಾಗಿದ್ದ ಸುಗ್ರೀವನ ಅರಮನೆಯನ್ನು ಮಹಾಬಲನಾದ ಲಕ್ಷ್ಮಣನು–ಸೂರ್ಯನು ಮಹಾಮೇಘಗಳ ಮಧ್ಯೆ ನುಗ್ಗುವಂತೆ–ಯಾವ ಅಡೆ-ತಡೆಗಳೂ ಇಲ್ಲದೇ ಪ್ರವೇಶಿಸಿದನು. ಅನೇಕವಾನರರಿಂದ ಸಮಾಕುಲವಾಗಿದ್ದ ಏಳು ದ್ವಾರಗಳನ್ನೂ ದಾಟಿ, ದೊಡ್ಡ-ದೊಡ್ಡ ವಾನರರಿಂದ ರಕ್ಷಿಸಲ್ಪಡುತ್ತಿದ್ದ ವಿಶಾಲವಾದ ಅಂತಃಪುರವನ್ನು ನೋಡಿದನು. ಸುವರ್ಣಮಯವಾದ ಮತ್ತು ರಜತಮಯವಾದ ಮಂಚಗಳಿಂದಲೂ, ಶ್ರೇಷ್ಠವಾದ ಆಸನಗಳಿಂದಲೂ, ಬಹುಮೂಲ್ಯವಾದ ರತ್ನಗಂಬಳಿಗಳಿಂದಲೂ ಶೋಭಾಯಮಾನವಾಗಿ ಕಾಣುತ್ತಿದ್ದ ಸುಗ್ರೀವನ ಅಂತಃಪುರವನ್ನು ವೀಕ್ಷಿಸುತ್ತಾ ಒಳಕ್ಕೆ ಪ್ರವೇಶಿಸುತ್ತಲೇ ಲಕ್ಷ್ಮಣನು ವೀಣಾನಿನಾದದಿಂದಲೂ ಗಾಯನದಿಂದಲೂ ಸಮ್ಮಿಶ್ರವಾಗಿದ್ದ, ತಾಳಕ್ಕೆ ಹೊಂದಿಕೊಳ್ಳುವಂತೆ ಪದಾಕ್ಷರಗಳಿಂದ ಕೂಡಿದ್ದ, ಸತತವಾಗಿ ನಡೆಯುತ್ತಿದ್ದ ಸಂಗೀತದ ಸುಮಧುರವಾದ ನಿನಾದವನ್ನು ಕೇಳಿದನು. ಸುಗ್ರೀವನ ಆ ಅಂತಃಪುರದಲ್ಲಿ ರೂಪ-ಯೌವನಗಳಿಂದ ಗರ್ವಿತರಾಗಿದ್ದ, ವಿಧ-ವಿಧವಾದ ಆಕಾರಗಳನ್ನು ಹೊಂದಿದ್ದ ಬಹಳ ಮಂದಿ ಸ್ತ್ರೀಯರನ್ನು ನೋಡಿದನು. ಪುಷ್ಪಗಳಿಂದ ಪೋಣಿಸಿದ ಮಾಲೆಗಳನ್ನು ಹಿಡಿದಿದ್ದ, ಶ್ರೇಷ್ಠವಾದ ಹಾರಗಳನ್ನು ಕಟ್ಟಲು ಅವಸರಪಡುತ್ತಿದ್ದ, ಶ್ರೇಷ್ಠವಾದ ಆಭರಣಗಳಿಂದ ಸಮಲಂಕೃತರಾಗಿದ್ದ, ಸತ್ಕುಲಪ್ರಸೂತೆಯರಾದ ಸ್ತ್ರೀಯರನ್ನು ನೋಡಿದನು. ಸುಗ್ರೀವನ ಅನುಚರರಲ್ಲಿ ಅತೃಪ್ತರಾದವರಾಗಲೀ, ಏಕಾಗ್ರವಾದ ಮನಸ್ಸಿಲ್ಲದೇ ಇರುವವರಾಗಲೀ, ಭೂಷಣಗಳಿಂದ ಅಲಂಕರಿಸಿಕೊಳ್ಳದೇ ಇರುವವರಾಗಲೀ ಅವನಿಗೆ ಕಾಣಿಸಲಿಲ್ಲ. ಶ್ರೀಮಂತನಾದ ಲಕ್ಷ್ಮಣನು ಅಲ್ಲಿ ಕಾಲಂದಿಗೆಗಳ ಶಬ್ದವನ್ನೂ, ಒಡ್ಯಾಣವೇ ಮೊದಲಾದ



CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

ಸ್ತ್ರೀಯರ ಆಭರಣಗಳ ಧ್ವನಿಯನ್ನೂ ಕೇಳಿ ಬಹಳವಾಗಿ ನಾಚಿಕೆಗೊಂಡನು. ಆಭರಣಗಳ ಶಬ್ದವನ್ನು ಮಾತ್ರವೇ ಕೇಳಿದ ಲಕ್ಷ್ಮಣನು ರೋಷಾವೇಷದಿಂದ ಅತ್ಯಂತಕ್ರುದ್ಧನಾಗಿ ಧನುಷ್ಟಂಕಾರಶಬ್ದದಿಂದ ಎಲ್ಲ ದಿಕ್ಕುಗಳನ್ನೂ ತುಂಬಿ ಬಿಟ್ಟನು. ಶ್ರೀರಾಮನ ಶೋಕದಿಂದ ಪ್ರಭಾವಿತನಾಗಿದ್ದ ಲಕ್ಷ್ಮಣನು ಮುನ್ನುಗ್ಗಿ ಹೋಗಬೇಕಾಗಿದ್ದರೂ- ಸದ್ವೃತ್ತಿಯುಳ್ಳವನಾದುದರಿಂದ ಹಿಂದಕ್ಕೆ ಸರಿದು ಸ್ತ್ರೀಸಮೂಹದಿಂದ ತುಂಬಿಹೋಗಿದ್ದ ಅಂತಃಪುರವನ್ನು ಪ್ರವೇಶಿಸದೇ ಏಕಾಂತವಾದೊಂದು ಸ್ಥಳದಲ್ಲಿ ನಿಂತುಕೊಂಡನು. ಪ್ಲವಗೇಶ್ವರನಾದ ಸುಗ್ರೀವನು ಧನುಷ್ಟಂಕಾರದ ಮಹಾಶಬ್ದದಿಂದ ಲಕ್ಷ್ಮಣನು ಬಂದಿರುವನೆಂಬುದನ್ನು ತಿಳಿದು ಬಹಳ ಭಯಗೊಂಡವನಾಗಿ ಸಿಂಹಾಸನದಿಂದ ಮುಗ್ಗರಿಸಿದನು. "ಹಿಂದೆ ಅಂಗದನು ಹೇಳಿದ್ದಂತೆ ಸೋದರಪ್ರೇಮಿಯಾದ ಲಕ್ಷ್ಮಣನು ಇಲ್ಲಿಗೆ ಬಂದಿರುವನೆಂಬುದು ಈಗ ಸ್ಪಷ್ಟವಾಯಿತು"–ಎಂದು ಉದ್ಗರಿಸಿದನು. ವಾನರೇಶ್ವರನಾದ ಸುಗ್ರೀವನಿಗೆ ಲಕ್ಷ್ಮಣನು ಕಿಷ್ಕಿಂಧೆಯ ಮಹಾದ್ವಾರದ ಬಳಿಗೆ ಬಂದಿರುವ ವಿಷಯವನ್ನು ಅಂಗದನೂ ಹೇಳಿದ್ದನು. ಧನುಷ್ಟಂಕಾರದ ಶಬ್ದದಿಂದಲೂ ಅಂತಃಪುರದ ಬಳಿಗೇ ಬಂದಿರುವನೆಂಬ ವಿಷಯವೂ ಸ್ಪಷ್ಟವಾಯಿತು. ಒಡನೆಯೇ ಅವನ ಮುಖವು ಬಾಡಿಹೋಯಿತು. ಭಯದಿಂದ ಭ್ರಾಂತಚಿತ್ತನಾದ ಆತನು ಸ್ವಲ್ಪ ಸಮಾಧಾನವನ್ನು ತಂದುಕೊಂಡು ಪ್ರಿಯದರ್ಶನಳಾದ ತಾರೆಗೆ ಹಿತಕರವಾದ ಈ ಮಾತನ್ನು ಹೇಳಿದನು:

"ಸುಂದರವಾದ ಹುಬ್ಬುಗಳುಳ್ಳವಳೇ! ಲಕ್ಷ್ಮಣನು ಸ್ವಭಾವದಿಂದ ಮೃದುವಾದ ಮನಸ್ಸಿನವನು. ಆದರೆ ಈಗ ಇವನು ಕ್ರುದ್ಧನಾಗಿ ಇಲ್ಲಿ ಬಂದಿರುವಂತೆ ಕಾಣುತ್ತಿದೆ. ಇವನ ಈ ಕೋಪಕ್ಕೆ ಕಾರಣವೇನಿರಬಹುದು? ಲಕ್ಷ್ಮಣಕುಮಾರನ ಕೋಪಕ್ಕೆ ಕಾರಣವನ್ನು ಊಹಿಸಬಲ್ಲೆಯಾ? ನರಶ್ರೇಷ್ಠನಾದ ಇವನು ನಿಷ್ಕಾರಣವಾಗಿ ಕೋಪಗೊಳ್ಳತಕ್ಕವನೂ ಅಲ್ಲ. ಇವನಿಗೆ ನಾವು ಯಾವುದಾದರೂ ಅಪರಾಧವನ್ನು ಮಾಡಿರುವೆವೇ? ನಾವು ಮಾಡಿರುವ ಅಪರಾಧವಾದರೂ ಏನು? ಇವನೇಕೆ ಕೋಪಗೊಂಡಿದ್ದಾನೆ? ಈ ವಿಷಯವನ್ನು ನೀನೀಗಲೇ ಬುದ್ಧಿಯಿಂದ ವಿಮರ್ಶಿಸಿ ಹೇಳು. ಅಥವಾ ನೀನು ಈ ಸಮಯದಲ್ಲಿ ಹೀಗೂ ಮಾಡಬಹುದಾಗಿದೆ. ನೀನೇ ಹೋಗಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಅವನನ್ನು ಕಂಡು ಸಾಂತ್ವನದ ಮಾತುಗಳಿಂದ ಪ್ರಸನ್ನಗೊಳಿಸಲೂ ಸಮರ್ಥಳು. ನಿನ್ನ ದರ್ಶನಮಾತ್ರದಿಂದಲೇ ವಿಶುದ್ಧವಾದ ಮನಸ್ಸನ್ನು ಹೊಂದುವ ಲಕ್ಷ್ಮಣನು ಕೋಪವನ್ನು ತ್ಯಜಿಸಿಬಿಡುವನು.

ನ ಹಿ ಸ್ತ್ರೀಷು ಮಹಾತ್ಮಾನಃ ಕ್ವಚಿತ್ಕುರ್ವನ್ತಿ ದಾರುಣಮ್ ॥೩೯॥

ಮಹಾತ್ಮರಾದವರು ಸ್ತ್ರೀಯರ ವಿಷಯದಲ್ಲಿ ಕ್ರೌರ್ಯವಾದ ಕಾರ್ಯವನ್ನೆಂದಿಗೂ ಮಾಡುವುದಿಲ್ಲ.

ನೀನು ಅವನನ್ನು ಸಂದರ್ಶಿಸಿದನಂತರ ನಿನ್ನ ಸಮಾಧಾನಕರವಾದ ಮಾತುಗಳ ಪ್ರಭಾವದಿಂದಾಗಿ ಪ್ರಸನ್ನವಾದ ಇಂದ್ರಿಯಗಳನ್ನೂ ಮನಸ್ಸನ್ನೂ ಹೊಂದುವ, ಶತ್ರುಹಂತಕನಾದ, ಕಮಲಪತ್ರಾಕ್ಷನಾದ ಲಕ್ಷ್ಮಣನನ್ನು ನಾನು ಸಂದರ್ಶಿಸುತ್ತೇನೆ."

ಸುಗ್ರೀವನು ಹೀಗೆ ಹೇಳಲು, ಮಧುಪಾನದಿಂದ ಚಂಚಲವಾದ ಕಣ್ಣುಗಳನ್ನು ಹೊಂದಿದ್ದ, ಜೋಲಾಡುತ್ತಿರುವ ಒಡ್ಯಾಣವನ್ನೂ, ಸುವರ್ಣಮಯವಾದ ಕಟಿಸೂತ್ರವನ್ನೂ ಧರಿಸಿದ್ದ, ಶುಭಲಕ್ಷಣಯುಕ್ತಳಾಗಿದ್ದ ತಾರಾದೇವಿಯು ತೊಡರಿದ ಹೆಜ್ಜೆಗಳನ್ನಿಡುತ್ತಾ ವಿನಯಭಾವದಿಂದ ಬಗ್ಗಿದ ಶರೀರವುಳ್ಳವಳಾಗಿ ಲಕ್ಷ್ಮಣನ ಬಳಿಗೆ ಹೋದಳು.

ಮಹಾತ್ಮನಾದ ಲಕ್ಷ್ಮಣನು ಸುಗ್ರೀವನ ಪತ್ನಿಯನ್ನು ನೋಡಿದೊಡನೆಯೇ ಉದಾಸೀನದಿಂದ ಮುಖವನ್ನು ತಗ್ಗಿಸಿಕೊಂಡು ನಿಂತನು. ಹೆಂಗಸಿನ ಮುಂದೆ ಅವನ ಕೋಪವೆಲ್ಲವೂ ಉಡುಗಿಹೋಯಿತು. ಮಧುಪಾನದ ಕಾರಣದಿಂದಲೂ ಚಕ್ರವರ್ತಿಯ ಮಗನಾದ ಲಕ್ಷ್ಮಣನ ಪ್ರಸನ್ನತೆಯ ದೃಷ್ಟಿಯಿಂದಲೂ ಪ್ರೋತ್ಸಾಹಿತಳಾದ ತಾರೆಯು ಲಜ್ಜೆಯನ್ನು ತೊರೆದು–ಮಹಾಪ್ರಯೋಜನಸಾಧಕವಾದ, ಅನುನಯರೂಪವಾದ, ಮೈತ್ರಿಯನ್ನು ಹೆಚ್ಚಿಸಲು ಸಮರ್ಥವಾದ, ಗಂಭೀರಾರ್ಥವುಳ್ಳ ಈ ಮಾತುಗಳನ್ನು ಹೇಳಿದಳು:

ಕಿಂ ಕೋಪಮೂಲಂ ಮನುಜೇನ್ದ್ರಪುತ್ರ
ಕಸ್ತೇ ನ ಸಂತಿಷ್ಠತಿ ವಾಙ್ನಿದೇಶೇ ।
ಕಃ ಶುಷ್ಕವೃಕ್ಷಂ ವನಮಾಪತನ್ತಂ
ದವಾಗ್ನಿಮಾಸೀದತಿ ನಿರ್ವಿಶಙ್ಕಃ ॥೪೦॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

"ರಾಜಪುತ್ರನೇ! ನಿನ್ನ ಕೋಪಕ್ಕೆ ಮೂಲಕಾರಣವೇನು? ನಿನ್ನ ಆಜ್ಞಾವಚನದಂತೆ ಯಾರೀಗ ನಡೆದುಕೊಳ್ಳುತ್ತಿಲ್ಲ? ಮರಗಳೆಲ್ಲಾ ಒಣಗಿ ಹೋಗಿರುವ ಅರಣ್ಯದಲ್ಲಿ ಹೊತ್ತಿಕೊಂಡು ವೇಗವಾಗಿ ಹರಡುತ್ತಿರುವ ಅಗ್ನಿಯ ಸಮೀಪಕ್ಕೆ ಭಯರಹಿತನಾಗಿ ಯಾವನು ತಾನೇ ಹೋಗಬಲ್ಲನು?"

ಲಕ್ಷ್ಮಣನು ತಾರೆಯ ಸಾಂತ್ವನಪೂರ್ವವಾದ ಮತ್ತು ಪ್ರೇಮಪೂರ್ವಕವಾದ ಭಾವವನ್ನು ಪ್ರಕಟಗೊಳಿಸುವ ಮಾತನ್ನು ಕೇಳಿದನು. ಅವಳ ಮಾತಿನಲ್ಲಿ ಅವನಿಗೆ ಸಂದೇಹವುಂಟಾಗಲಿಲ್ಲ. ಅವನು ತಾರೆಗೆ ಹೀಗೆಂದನು:

"ಪತಿಯ ಹಿತದಲ್ಲಿಯೇ ಆಸಕ್ತಳಾಗಿರುವವಳೇ! ನಿನ್ನ ಪತಿಯು ಕಾಮಾಭಿಭೂತನಾಗಿ ಧರ್ಮಾರ್ಥಸಂಗ್ರಹದಲ್ಲಿ ನಿರಾಸಕ್ತನಾಗಿರುವನೆಂಬ ವಿಷಯವು ನಿನಗಿನ್ನೂ ತಿಳಿದಿಲ್ಲವೇ?

ಅಮಾತ್ಯರಿಂದಲೂ ಪರಿಜನರಿಂದಲೂ ಪರಿವೃತನಾಗಿರುವ ನಿನ್ನ ಪತಿಯು ರಾಜ್ಯದ ಅರ್ಥವ್ಯವಸ್ಥೆಯ ಬಗೆಗೂ ಚಿಂತಿಸುತ್ತಿಲ್ಲ. ಶೋಕಪರಾಯಣರಾಗಿರುವ ನಮ್ಮ ವಿಷಯವಾಗಿಯೂ ಚಿಂತಿಸುತ್ತಿಲ್ಲ. ನಿರಂತರವಾಗಿ ಕಾಮೋಪಭೋಗಗಳಲ್ಲಿಯೇ ಆಸಕ್ತನಾಗಿದ್ದಾನೆ. ಸೀತೆಯನ್ನು ಹುಡುಕಲು ನಿಗದಿಪಡಿಸಿದ್ದ ನಾಲ್ಕು ತಿಂಗಳ ಅವಧಿಯು ಕಳೆದುಹೋದರೂ ಮಾದಕ ಪದಾರ್ಥಗಳ ಸತತವಾದ ಸೇವನೆಯಿಂದ ಮದೋನ್ಮತ್ತನಾಗಿರುವ ನಿನ್ನ ಪತಿಯು ಸ್ವೇಚ್ಛೆಯಿಂದ ವಿಹರಿಸುತ್ತಿದ್ದಾನೆ. ನಾಲ್ಕು ಮಾಸಗಳು ಕಳೆದು ಹೋಗಿವೆಯೆಂಬ ಅರಿವೇ ಅವನಿಗಿಲ್ಲವಾಗಿದೆ.

ನ ಹಿ ಧರ್ಮಾರ್ಥಸಿದ್ಧ್ಯರ್ಥಂ ಪಾನಮೇವಂ ಪ್ರಶಸ್ಯತೇ |
ಪಾನಾದರ್ಥಶ್ಚ ಕಾಮಶ್ಚ ಧರ್ಮಶ್ಚ ಪರಿಹೀಯತೇ ||೪೩||

ಧರ್ಮಾರ್ಥಗಳ ಸಿದ್ಧಿಗೆ ಯತ್ನಿಸುವವರು ಹೀಗೆ ಸತತವಾಗಿ ಸುರಾಪಾನ ಮಾಡುವುದನ್ನು ಪ್ರಶಂಸಿಸುವುದಿಲ್ಲ. ಸುರಾಪಾನದಿಂದ ಅರ್ಥ-ಧರ್ಮ-ಕಾಮಗಳೂ ವಿನಾಶಹೊಂದುತ್ತವೆ.

ಧರ್ಮಲೋಪೋ ಮಹಾಂಸ್ತಾವತ್ ಕೃತೇ ಹ್ಯಪ್ರತಿಕುರ್ವತಃ |
ಅರ್ಥಲೋಪಶ್ಚ ಮಿತ್ರಸ್ಯ ನಾಶೇ ಗುಣವತೋ ಮಹಾನ್ ||೪೪||

ಉಪಕಾರಮಾಡಿದವನಿಗೆ ಪ್ರತ್ಯುಪಕಾರವನ್ನು ಮಾಡದೇ ಇರುವುದ

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.

ರಿಂದ ಮಹತ್ತಾದ ಧರ್ಮಲೋಪವಾಗುತ್ತದೆ. ಗುಣವಂತನಾದ ಮಿತ್ರನ ವಿನಾಶದಿಂದಾಗಿ ಮಹತ್ತರವಾದ ಅರ್ಥನಾಶವೂ ಸಂಭವಿಸುತ್ತದೆ.

ಮಿತ್ರಂ ಹ್ಯರ್ಥಗುಣಶ್ರೇಷ್ಠಂ ಸತ್ಯಧರ್ಮಪರಾಯಣಮ್ ।
ತದ್ದ್ವಯಂ ತು ಪರಿತ್ಯಕ್ತಂ ನ ತು ಧರ್ಮೇ ವ್ಯವಸ್ಥಿತಮ್ ॥೪೭॥

ಅರ್ಥಕ್ಕೆ ಸಾಧನಭೂತನಾಗಿ, ದಕ್ಷತೆಯೇ ಮುಂತಾದ ಶ್ರೇಷ್ಠಗುಣಗಳಿಗೆ ಆಶ್ರಯಭೂತನಾದ, ಸತ್ಯಧರ್ಮಪರಾಯಣನಾದ ಮಿತ್ರನನ್ನು ಪರಿತ್ಯಜಿಸುತ್ತಿರುವ ಸುಗ್ರೀವನು ಧರ್ಮದಲ್ಲಿ ನೆಲೆಸಿಕ್ಕದೇ ಅರ್ಥ-ಕಾಮಗಳೆರಡರಿಂದಲೂ ವಂಚಿತನಾಗುತ್ತಾನೆ.

ಕಾರ್ಯದ ತತ್ತ್ವವನ್ನು ಅರಿತಿರುವವನೇ! ಧರ್ಮಾರ್ಥಗಳ ಲೋಪಕ್ಕೆ ಕಾರಣವಾದ ಕಾರ್ಯವು ಹೀಗೆ ನಡೆಯುತ್ತಿರುವಾಗ ನಾವು ಮುಂದೆ ಯಾವ ಕಾರ್ಯವನ್ನು ಮಾಡಬೇಕೆಂಬುದನ್ನು ಹೇಳಲು ನೀನೇ ಸಮರ್ಥನಾಗಿರುವೆ."

ತಾರೆಯು ಧರ್ಮಾರ್ಥಗಳ ಸಂಬಂಧದಿಂದ ಯುಕ್ತವಾಗಿದ್ದ, ಮಧುರ ಭಾವದಿಂದ ಕೂಡಿದ್ದ ಲಕ್ಷ್ಮಣನ ಮಾತನ್ನು ಕೇಳಿ, ಮನುಜೇಂದ್ರನಾದ ಶ್ರೀರಾಮನಿಗೆ ಪ್ರಯೋಜನಕರವಾದ ಸೀತಾನ್ವೇಷಣೆಯ ಕಾರ್ಯದಲ್ಲಿ ಸುಗ್ರೀವನು ತೊಡಗಿರುವನೆಂಬ ಬಗೆಗೆ ವಿಶ್ವಾಸವುಂಟಾಗುವಂತೆ ಲಕ್ಷ್ಮಣನಿಗೆ ಹೇಳಿದಳು:

ನ ಕೋಪಕಾಲಃ ಕ್ಷಿತಿಪಾಲಪುತ್ರ
ನ ಚಾತಿಕೋಪಃ ಸ್ವಜನೇ ವಿಧೇಯಃ ।
ತ್ವದರ್ಥಕಾಮಸ್ಯ ಜನಸ್ಯ ತಸ್ಯ
ಪ್ರಮಾದಮಪ್ಯರ್ಹಸಿ ವೀರ ಸೋಢುಮ್ ॥೫೦॥

"ರಾಜಪುತ್ರನೇ! ಇದು ಕೋಪಗೊಳ್ಳುವುದಕ್ಕೆ ಸರಿಯಾದ ಸಮಯವಲ್ಲ. ಮೇಲಾಗಿ ಸ್ವಜನರಲ್ಲಿ ಹೆಚ್ಚು ಕೋಪಗೊಳ್ಳುವುದೂ ಉಚಿತವಲ್ಲ. ನಿಮಗೆ ಪ್ರಯೋಜನವಾಗುವುದನ್ನೇ ಸರ್ವದಾ ಅಪೇಕ್ಷಿಸುತ್ತಿರುವ ಆ ನಿನ್ನ ಸ್ವಜನರಿಂದ ಪ್ರಮಾದವೇ ನಡೆದಿದ್ದರೂ-ಅದನ್ನೂ ಸಹಿಸಿಕೊಳ್ಳುವುದೇ ನಿನಗೆ ಉಚಿತವಾಗಿದೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಕೋಽಪಂ ಕಥಂ ನಾಮ ಗುಣಪ್ರಕೃಷ್ಟಃ
ಕುಮಾರ ಕುರ್ಯಾದಪಕೃಷ್ಟಸತ್ತ್ವೇ ।
ಕಸ್ತ್ವದ್ವಿಧಃ ಕೋಪವಶಂ ಹಿ ಗಚ್ಛೇ-
ತ್ಸತ್ತ್ವಾವರುದ್ಧಸ್ತಪಸಃ ಪ್ರಸೂತಿಃ ॥೫೧॥

ಕುಮಾರ! ಗುಣಗಳಿಂದ ಶ್ರೇಷ್ಠನಾಗಿರುವ ನೀನು ಹೀನಸತ್ತ್ವನಾದ ಸುಗ್ರೀವನ ವಿಷಯದಲ್ಲಿ ಹೇಗೆ ಕೋಪಿಸಿಕೊಳ್ಳುವೆ? ಶುದ್ಧಸತ್ತ್ವನಾದ, ಶಾಂತಿರೂಪವಾದ ತಪಸ್ಸಿಗೆ ಉಗಮಸ್ಥಾನನಾಗಿರುವ ನಿನ್ನಂತಹ ಯಾವನು ತಾನೇ ಕೋಪಕ್ಕೆ ವಶನಾಗುತ್ತಾನೆ?

ಜಾನಾಮಿ ರೋಷಂ ಹರಿವೀರಬನ್ಧೋ-
ರ್ಜಾನಾಮಿ ಕಾರ್ಯಸ್ಯ ಚ ಕಾಲಸಙ್ಗಮ್ ।
ಜಾನಾಮಿ ಕಾರ್ಯಂ ತ್ವಯಿ ಯತ್ಕೃತಂ ನ-
ಸ್ತಚ್ಚಾಪಿ ಜಾನಾಮಿ ಯದತ್ರ ಕಾರ್ಯಮ್ ॥೫೨॥

ಕಪೀಶ್ವರನಿಗೆ ಸ್ನೇಹಿತನಾಗಿರುವ ಶ್ರೀರಾಮನ ರೋಷಕ್ಕೆ ಕಾರಣವನ್ನು ನಾನು ಬಲ್ಲೆನು. ಸುಗ್ರೀವನು ಮಾಡಬೇಕಾಗಿರುವ ಸೀತಾನ್ವೇಷಣೆಯ ಕಾರ್ಯದಲ್ಲಿ ಆಗಿರುವ ವಿಳಂಬವನ್ನೂ ತಿಳಿದಿದ್ದೇನೆ. ನಮ್ಮ ಸಲುವಾಗಿ ನೀವು ಮಾಡಿರುವ ವಾಲಿವಧರೂಪವಾದ ಉಪಕಾರವನ್ನೂ ನಾನು ಬಲ್ಲೆನು. ಮುಂದೆ ಮಾಡಬೇಕಾದ ಕಾರ್ಯವೂ ನನಗೆ ತಿಳಿದಿದೆ.

ತಚ್ಚಾಪಿ ಜಾನಾಮಿ ತಥಾವಿಷಹ್ಯಂ
ಬಲಂ ನರಶ್ರೇಷ್ಠ ಶರೀರಜಸ್ಯ ।
ಜಾನಾಮಿ ಯಸ್ಮಿಂಶ್ಚ ಜನೇಽವಬದ್ಧಂ
ಕಾಮೇನ ಸುಗ್ರೀವಮಸಕ್ತಮದ್ಯ ॥೫೩॥

ನರಶ್ರೇಷ್ಠನೇ! ಮನ್ಮಥನ ಬಲವು ಸಹಿಸಲು ಅಸಾಧ್ಯವಾದುದೆಂಬುದನ್ನೂ ತಿಳಿದಿದ್ದೇನೆ. ಯಾವ ಜನರಲ್ಲಿ ಅವನು ಆಸಕ್ತನಾಗಿರುವನೆಂಬುದನ್ನೂ ತಿಳಿದಿದ್ದೇನೆ. ಈಗ ಅವನು ಎಲ್ಲ ಕಾರ್ಯಗಳಲ್ಲಿಯೂ ನಿರಾಸಕ್ತನಾಗಿರುವನೆಂಬುದನ್ನೂ ತಿಳಿದಿದ್ದೇನೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.


ನ ಕಾಮತನ್ತ್ರೇ ತವ ಬುದ್ಧಿರಸ್ತಿ
ತಂ ವೈ ಯಥಾ ಮನ್ಯುವಶಂ ಪ್ರಪನ್ನಃ ।
ನ ದೇಶಕಾಲೌ ಹಿ ನಚಾರ್ಥಧರ್ಮಾ-
ವಪೇಕ್ಷತೇ ಕಾಮರತಿರ್ಮನುಷ್ಯಃ ॥೫೪॥

ಕಾಮತಂತ್ರದಲ್ಲಿ ನಿನಗೆ ತಿಳಿವಳಿಕೆಯಿಲ್ಲ. ಅದರ ಮಹತ್ತ್ವವನ್ನು ನೀನು ತಿಳಿದಿಲ್ಲ. ಕಾಮಾಭಿಭೂತನಾದ ಸುಗ್ರೀವನ ವಿಷಯದಲ್ಲಿ ಕೋಪಗೊಂಡಿರುವುದೇ ಇದನ್ನು ಸೂಚಿಸುತ್ತದೆ. ಕಾಮದಲ್ಲಿಯೇ ಆಸಕ್ತನಾದ ಮನುಷ್ಯನು ಕಾಲ-ದೇಶಗಳನ್ನೂ ನೋಡುವುದಿಲ್ಲ. ಧರ್ಮಾರ್ಥಗಳನ್ನೂ ಲಕ್ಷಿಸುವುದಿಲ್ಲ.

ತ್ವ ಕಾಮವೃತ್ತಂ ಮಮ ಸಂನಿಕೃಷ್ಟಂ
ಕಾಮಾಭಿಯೋಗಾಚ್ಚ ವಿಮುಕ್ತಲಜ್ಜಮ್ ।
ಕ್ಷಮಸ್ವ ತಾವತ್ಪರವೀರಹನ್ತ-
ಸ್ತ್ವದ್ಭ್ರಾತರಂ ವಾನರವಂಶನಾಥಮ್ ॥೫೫॥

ಶತ್ರುವೀರಹಂತಕನೇ ! ಲಕ್ಷ್ಮಣ ! ಅತ್ಯಂತಕಾಮಾಸಕ್ತನಾಗಿ ನನ್ನ ಅಂತಃಪುರದಲ್ಲಿಯೇ ಇರುವ, ಕಾಮಾತುರನಾಗಿರುವುದರಿಂದಲೇ ನಿರ್ಲಜ್ಜನೂ ಆಗಿರುವ, ವಾನರವಂಶಕ್ಕೆ ಸ್ವಾಮಿಯಾದ, ನಿನ್ನ ಸಹೋದರನಾದ ಸುಗ್ರೀವನನ್ನು ಕ್ಷಮಿಸು.

ಮಹರ್ಷಯೋ ಧರ್ಮತಪೋಭಿಕಾಮಾಃ
ಕಾಮಾನುಕಾಮಾಃ ಪ್ರತಿಬದ್ಧಮೋಹಾಃ ।
ಅಯಂ ಪ್ರಕೃತ್ಯಾ ಚಪಲಃ ಕಪಿಸ್ತು
ಕಥಂ ನ ಸಜ್ಜೇತ ಸುಖೇಷು ರಾಜಾ ॥೫೬॥

ಧರ್ಮನಿಷ್ಠರಾದ, ತಪಸ್ಸಿನಲ್ಲಿಯೇ ನಿರತರಾದ ಮಹರ್ಷಿಗಳೂ ಕೂಡ ಕೆಲವು ವೇಳೆ ವಿಷಯಾಭಿಲಾಷಿಗಳಾಗಿ ವ್ಯಾಮೋಹದಿಂದ ಬಂಧಿಸಲ್ಪಡುತ್ತಾರೆ. ಅದರಲ್ಲೂ ಈತನು ಸ್ವಭಾವದಿಂದಲೇ ಚಪಲಚಿತ್ತನಾದ ಕಪಿಯು. ಇಂತಹವನು ಕಾಮೋಪಭೋಗಸುಖಗಳಲ್ಲಿ ಹೇಗೆ ತಾನೇ ಆಸಕ್ತನಾಗದೇ ಇದ್ದಾನು ? "

CC-0. Bhagavad Ramanuja National Research Institute, Melukote Collection.

 Funding: Tattva Heritage Foundation, Kolkata. Digitization: eGangotri.

ಸುರಾಪಾನದಿಂದ ಭ್ರಮಿಸುತ್ತಿದ್ದ ಕಣ್ಣುಗಳನ್ನು ಹೊಂದಿದ್ದ ಆ ವಾನರಿಯು ಅಪ್ರಮೇಯನಾದ ಲಕ್ಷ್ಮಣನಿಗೆ ಮಹಾರ್ಥಯುಕ್ತವಾದ ಈ ಮಾತುಗಳನ್ನು ಹೇಳಿ ಪುನಃ ತನ್ನ ಪತಿಗೆ ಹಿತಕರವಾದ ಮಾತುಗಳನ್ನು ಸಲಿಗೆಯಿಂದಲೇ ಹೇಳಿದಳು :

"ನರಶ್ರೇಷ್ಠನೇ ! ಸುಗ್ರೀವನು ಮನ್ಮಥನಿಗೆ ಅಧೀನನಾಗಿದ್ದರೂ ನಿಮ್ಮ ಪ್ರಯೋಜನಸಿದ್ಧಿಗಾಗಿ ಬಹಳ ಹಿಂದೆಯೇ ಸೀತಾನ್ವೇಷಣೆಯ ಕಾರ್ಯಕ್ಕೆ ಆಜ್ಞೆಯನ್ನಿತ್ತಿರುವನು. ಅವನ ಆಜ್ಞಾನುಸಾರವಾಗಿ ಕಾಮ ರೂಪಿಗಳಾದ, ಮಹಾವೀರ್ಯರಾದ, ನಾನಾಪರ್ವತಗಳಲ್ಲಿ ವಾಸಮಾಡು ತ್ತಿರುವ ವಾನರರು ಲಕ್ಷ-ಕೋಟಿಸಂಖ್ಯೆಯಲ್ಲಿ ಇಲ್ಲಿಗೆ ಆಗಮಿಸಿರುತ್ತಾರೆ. ಅಂತಃಪುರದಲ್ಲಿರುವ ಸ್ತ್ರೀಯರನ್ನು ನೋಡುವುದು ಅನುಚಿತವೆಂದು ಭಾವಿಸಿ ಹೊರಭಾಗದಲ್ಲಿಯೇ ನಿಂತಿರುವ ನೀನು ಸದಾಚಾರವನ್ನು ರಕ್ಷಿಸಿರುವೆ. ಈಗ ನಾನೇ ನಿನ್ನನ್ನು ಅಂತಃಪುರಕ್ಕೆ ಸ್ವಾಗತಿಸುತ್ತಿದ್ದೇನೆ. ಒಳಗೆ ಬಾ.

ಅಚ್ಛಲಂ ಮಿತ್ರಭಾವೇನ ಸತಾಂ ದಾರಾವಲೋಕನಮ್ ॥೬೦॥

ಇತರರ ಭಾರ್ಯೆಯರನ್ನು ಮಿತ್ರಭಾವದಿಂದ (ತಾಯಿ-ತಂಗಿಯ ರೆಂಬ ಭಾವನೆಯಿಂದ) ಕಾಣುವುದು ಸತ್ಪುರುಷರಿಗೆ ದೋಷಾವಹವಲ್ಲ."

ಮಹಾಬಾಹುವಾದ, ಶತ್ರುದರ್ಪವಿನಾಶಕನಾದ ಲಕ್ಷ್ಮಣನು ಹೀಗೆ ತಾರೆಯಿಂದಲೂ ಅನುಮತಿಯನ್ನು ಪಡೆದು ಕಾರ್ಯದ ತ್ವರೆಯಿಂದಲೂ ಪ್ರಚೋದಿತನಾಗಿ ಸುಗ್ರೀವನ ಅಂತಃಪುರವನ್ನು ಪ್ರವೇಶಿಸಿದನು.

ಆ ಸಮಯದಲ್ಲಿ ಸುಗ್ರೀವನು ಬಹುಮೂಲ್ಯವಾದ ರತ್ನಗಂಬಳಿಗಳನ್ನು ಹೊದ್ದಿಸಿದ್ದ, ಸುವರ್ಣಮಯವಾದ ಮತ್ತು ಶ್ರೇಷ್ಠವಾದ ಸಿಂಹಾಸನದಲ್ಲಿ ಕುಳಿತಿದ್ದನು. ಸೂರ್ಯಸದೃಶನಾಗಿದ್ದನು. ಶರೀರವನ್ನು ದಿವ್ಯವಾದ ಆಭ ರಣಗಳಿಂದ ಸಿಂಗರಿಸಿಕೊಂಡಿದ್ದನು. ದಿವ್ಯರೂಪನಾಗಿದ್ದನು. ದಿವ್ಯವಾದ ಮಾಲೆಗಳನ್ನು ಧರಿಸಿದ್ದನು. ಮಹೇಂದ್ರನಂತೆ ದುರ್ಜಯನಾಗಿದ್ದ ಯಶೋ ವಂತನಾದ ಅವನ ಸುತ್ತಲೂ ದಿವ್ಯವಾದ ಹಾರಗಳಿಂದಲೂ ಆಭರಣ ಗಳಿಂದಲೂ ಸಮಲಂಕೃತರಾಗಿದ್ದ ಪ್ರಮದೆಯರು ನಿಂತು ಅವನನ್ನು ಉಪ ಚರಿಸುತ್ತಿದ್ದರು. ಹೀಗೆ ಸುಖಲೋಲುಪನಾಗಿದ್ದ ಸುಗ್ರೀವನನ್ನು ನೋಡಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.


ಹೊಡನೆಯೇ ಲಕ್ಷ್ಮಣನ ಕೋಪವು ಅಧಿಕವಾಯಿತು. ಕಣ್ಣುಗಳು ಕೆಂಡದಂತಾದುವು. ಅವನು ಸಾಕ್ಷಾತ್ ಯಮರಾಜನಂತೆಯೇ ಕಾಣುತ್ತಿದ್ದನು.

ರುಮೆಯನ್ನು ಗಾಢವಾಗಿ ಆಲಿಂಗನೆಮಾಡಿಕೊಂಡು ಶ್ರೇಷ್ಠವಾದ ಸಿಂಹಾಸನದಲ್ಲಿ ಕುಳಿತಿದ್ದ, ಶುದ್ಧವಾದ ಚಿನ್ನದ ಬಣ್ಣದಿಂದ ಕಂಗೊಳಿಸುತ್ತಿದ್ದ, ವೀರನಾದ, ವಿಶಾಲನೇತ್ರನಾದ ಸುಗ್ರೀವನು ಮಹಾವೀರ್ಯನಾದ ಸುವಿಶಾಲನೇತ್ರನಾದ ಲಕ್ಷ್ಮಣನನ್ನು ನೋಡಿದನು.

೩೩ನೆಯ ಸರ್ಗವು ಮುಗಿಯಿತು.

ಕಿಷ್ಕಿಂಧಾಕಾಂಡ ೩೪ನೆಯ ಸರ್ಗ

## ಲಕ್ಷ್ಮಣನಿಂದ ಸುಗ್ರೀವನ ನಿಂದನೆ

ತಮಪ್ರತಿಹತಂ ಕ್ರುದ್ಧಂ ಪ್ರವಿಷ್ಟಂ ಪುರುಷರ್ಷಭಮ್ ।
ಸುಗ್ರೀವೋ ಲಕ್ಷ್ಮಣಂ ದೃಷ್ಟ್ವಾ ಬಭೂವ ವ್ಯಥಿತೇನ್ದ್ರಿಯಃ ॥೧॥

ತಡೆದು ನಿಲ್ಲಿಸಲು ಅಸಾಧ್ಯನಾಗಿದ್ದ, ಪುರುಷಶ್ರೇಷ್ಠನಾದ, ಕ್ರುದ್ಧನಾಗಿದ್ದ ಲಕ್ಷ್ಮಣನು ಅಂತಃಪುರಕ್ಕೆ ಪ್ರವೇಶಿಸಿದುದನ್ನು ನೋಡಿ ಸುಗ್ರೀವನು ವ್ಯಥೆಗೊಂಡನು.

ಪರಮಕ್ರುದ್ಧನಾಗಿದ್ದ, ನಿಟ್ಟುಸಿರುಬಿಡುತ್ತಿದ್ದ, ತೇಜಸ್ಸಿನಿಂದ ಪ್ರಜ್ವಲಿಸುತ್ತಿರುವನೋ ಎಂಬಂತೆ ಕಾಣುತ್ತಿದ್ದ, ಅಣ್ಣನ ವಿರಹವ್ಯಸನದಿಂದ ಸಂತಪ್ತನಾಗಿದ್ದ ಲಕ್ಷ್ಮಣನನ್ನು ನೋಡಿದೊಡನೆಯೇ, ವಾನರಶ್ರೇಷ್ಠನಾದ ಸುಗ್ರೀವನು ತಾನು ಕುಳಿತಿದ್ದ ಸುವರ್ಣಮಯವಾದ ಆಸನವನ್ನು ಬಿಟ್ಟು ಅಲಂಕೃತವಾದ ಇಂದ್ರಧ್ವಜದಂತೆ ಮೇಲೆದ್ದು ನಿಂತನು. ಆಕಾಶದಲ್ಲಿ ಪೂರ್ಣಚಂದ್ರನನ್ನು ಅನುಸರಿಸಿ ನಕ್ಷತ್ರಗಳು ಉದಯಿಸುವಂತೆ–ರುಮೆಯೇ ಮೊದಲಾದ ಸ್ತ್ರೀಯರೆಲ್ಲರೂ ಲಕ್ಷ್ಮಣನನ್ನು ನೋಡಿ ಮೇಲೆದ್ದು ನಿಂತ ಸುಗ್ರೀವನನ್ನೇ ಅನುಸರಿಸಿ ಮೇಲೆದ್ದು ನಿಂತರು. ಮದ್ಯಪಾನದಿಂದ ಮತ್ತನಾಗಿ ಕೆಂಗಣ್ಣನಾಗಿದ್ದ ಶ್ರೀಮಂತನಾದ ಸುಗ್ರೀವನು ತಡವರಿಸಿಕೊಂಡು ಹೆಜ್ಜೆಗಳನ್ನಿಡುತ್ತಾ ಕೈಮುಗಿದುಕೊಂಡು ದೊಡ್ಡದಾದೊಂದು ಕಲ್ಪವೃಕ್ಷದಂತೆ ಲಕ್ಷ್ಮಣನ ಮುಂದೆ ನಿಂತನು. ಕ್ರುದ್ಧನಾದ ಲಕ್ಷ್ಮಣನು ನಕ್ಷತ್ರ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಗಳಿಂದ ಕೂಡಿರುವ ಚಂದ್ರನಂತೆಯೇ ಚೆಲುವೆಯರಾದ ಸ್ತ್ರೀಯರ ಮಧ್ಯದಲ್ಲಿ ಪ್ರಕಾಶಿಸುತ್ತಿದ್ದ ರುಮೆಯ ಪಕ್ಕದಲ್ಲಿದ್ದ ಸುಗ್ರೀವನಿಗೆ ಹೇಳಿದನು :

ಸತ್ತ್ವಾಭಿಜನಸಂಪನ್ನಃ ಸಾನುಕ್ರೋಶೋ ಜಿತೇನ್ದ್ರಿಯಃ ।
ಕೃತಜ್ಞಃ ಸತ್ಯವಾದೀ ಚ ರಾಜಾ ಲೋಕೇ ಮಹೀಯತೇ ॥೭॥



“ಕಪಿರಾಜನೇ ! ಬಲಿಷ್ಠನೂ, ಸತ್ಕುಲಪ್ರಸೂತನೂ, ದಯಾಪರನೂ, ಜಿತೇಂದ್ರಿಯನೂ, ಮಾಡಿದ ಉಪಕಾರವನ್ನು ಸ್ಮರಿಸುವವನೂ, ಸತ್ಯನಿಷ್ಠನೂ ಆಗಿರುವ ರಾಜನು ಲೋಕದಲ್ಲಿ ಎಲ್ಲರಿಂದಲೂ ಗೌರವಿಸಲ್ಪಡುತ್ತಾನೆ.

ಯಸ್ತು ರಾಜಾ ಸ್ಥಿತೋಽಧರ್ಮೇ ಮಿತ್ರಾಣಾಮುಪಕಾರಿಣಾಮ್ ।
ಮಿಥ್ಯಾ ಪ್ರತಿಜ್ಞಾಂ ಕುರುತೇ ಕೋ ನೃಶಂಸತರಸ್ತತಃ ॥೮॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.


ಯಾವ ರಾಜನು ಅಧರ್ಮಪ್ರವೃತ್ತನಾಗಿರುವನೋ, ಉಪಕಾರ ಮಾಡಿದ ಮಿತ್ರರ ವಿಷಯದಲ್ಲಿ ಹುಸಿಯಾದ ಪ್ರತಿಜ್ಞೆಯನ್ನು ಮಾಡುವನೋ (ಪ್ರತ್ಯುಪಕಾರ ಮಾಡುವೆನೆಂದು ಪ್ರತಿಜ್ಞೆಯನ್ನು ಮಾಡಿ ಅನಂತರ ತಾನು ಮಾಡಿದ ಪ್ರತಿಜ್ಞೆಯಂತೆ ನಡೆದುಕೊಳ್ಳುವುದಿಲ್ಲವೋ) ಅಂತಹ ರಾಜನಿಗಿಂತಲೂ ಕ್ರೂರಿಯಾದವನು ಬೇರೆ ಯಾವನಿದ್ದಾನೆ?

ಶತಮಶ್ವಾನೃತೇ ಹನ್ತಿ ಸಹಸ್ರಂ ತು ಗವಾನೃತೇ ।
ಆತ್ಮಾನಂ ಸ್ವಜನಂ ಹನ್ತಿ ಪುರುಷಃ ಪುರುಷಾನೃತೇ ॥೯॥

ಕುದುರೆಯನ್ನು ದಾನಮಾಡುವೆನೆಂದು ಪ್ರತಿಜ್ಞೆಯನ್ನು ಮಾಡಿ ಅದನ್ನು ನೆರವೇರಿಸದಿದ್ದರೆ – ಅಶ್ವಾನೃತ (ಕುದುರೆಯ ಸಂಬಂಧವಾದ ಸುಳ್ಳು) ಎಂಬ ಪಾಪಕ್ಕೆ ಗುರಿಯಾಗುತ್ತಾನೆ. ನೂರು ಕುದುರೆಗಳನ್ನು ಕೊಂದ ಪಾಪವು ಅವನಿಗೆ ಉಂಟಾಗುತ್ತದೆ. ಹಸುವಿನ ವಿಷಯವಾಗಿ ಸುಳ್ಳು ಹೇಳಿದವನು (ಗೋದಾನ ಮಾಡುವುದಾಗಿ ಹೇಳಿ ಗೋದಾನ ಮಾಡದಿದ್ದರೆ) ಸಾವಿರ ಹಸುಗಳನ್ನು ಕೊಂದ ಪಾಪಕ್ಕೆ ಗುರಿಯಾಗುತ್ತಾನೆ. ಪುರುಷನೊಬ್ಬನಿಗೆ ಉಪಕಾರಮಾಡುವುದಾಗಿ ಪ್ರತಿಜ್ಞೆ ಮಾಡಿ ಆ ಪ್ರತಿಜ್ಞೆಯಂತೆ ನಡೆದುಕೊಳ್ಳದಿದ್ದರೆ – ಆತ್ಮಹತ್ಯೆಮಾಡಿಕೊಂಡ ಮತ್ತು ಸ್ವಜನರನ್ನು ಕೊಂದ ಮಹಾಪಾಪಕ್ಕೆ ಗುರಿಯಾಗುತ್ತಾನೆ.

ಪೂರ್ವಂ ಕೃತಾರ್ಥೋ ಮಿತ್ರಾಣಾಂ ನ ತತ್ಪ್ರತಿಕರೋತಿ ಯಃ ।
ಕೃತಘ್ನಃ ಸರ್ವಭೂತಾನಾಂ ಸ ವಧ್ಯಃ ಪ್ಲವಗೇಶ್ವರ ॥೧೦॥

ಕಪೀಶ್ವರನೇ! ಹಿಂದೆ ಮಿತ್ರರಿಂದ ಉಪಕಾರವನ್ನು ಹೊಂದಿ ಕೃತಾರ್ಥನಾಗಿ ತಾನು ಪಡೆದ ಉಪಕಾರಕ್ಕೆ ಪ್ರತ್ಯುಪಕಾರವನ್ನು ಮಾಡದಿರುವ ಕೃತಘ್ನನು ಸರ್ವಪ್ರಾಣಿಗಳಿಂದಲೂ ವಧಿಸಲ್ಪಡಲ್ಕು ಅರ್ಹನಾಗುತ್ತಾನೆ. ಅಂತಹವನು ನಿಶ್ಚಯವಾಗಿಯೂ ವಧಾರ್ಹನೇ ಸರಿ.

ಕೃತಘ್ನನ ವಿಷಯದಲ್ಲಿ ಕ್ರುದ್ಧನಾದ ಬ್ರಹ್ಮನೇ ಹಾಡಿರುವ ಈ ಶ್ಲೋಕವು ಎಲ್ಲ ಜನರಿಂದಲೂ ಶ್ಲಾಘಿಸಲ್ಪಟ್ಟಿದೆ. ಅದನ್ನೇ ನಿನಗೂ ಹೇಳುವೆನು, ಕೇಳು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಗೋಘ್ನೇ ಚೈವ ಸುರಾಪೇ ಚ ಚೋರೇ ಭಗ್ನವ್ರತೇ ತಥಾ ।
ನಿಷ್ಕೃತಿರ್ವಿಹಿತಾ ಸದ್ಭಿಃ ಕೃತಘ್ನೇ ನಾಸ್ತಿ ನಿಷ್ಕೃತಿಃ ॥೧೨॥

ಗೋಹತ್ಯೆಯನ್ನು ಮಾಡಿದವನಿಗೆ, ಮದ್ಯಪಾನಮಾಡಿದವನಿಗೆ, ಕಳ್ಳನಿಗೆ, ವ್ರತದಿಂದ ಭ್ರಷ್ಟನಾದವನಿಗೆ ಶಾಸ್ತ್ರೋಕ್ತವಾದ ಪ್ರಾಯಶ್ಚಿತ್ತವಿಧಿಗಳಿವೆ. ಆದರೆ ಕೃತಘ್ನನಿಗೆ ಯಾವ ಪ್ರಾಯಶ್ಚಿತ್ತವೂ ಇಲ್ಲ. (ಯಾವ ವಿಧವಾದ ಪ್ರಾಯಶ್ಚಿತ್ತದಿಂದಲೂ ಕೃತಘ್ನನ ಪಾಪವು ಪರಿಹಾರವಾಗುವುದಿಲ್ಲ.)

ಹಿಂದೆ ಶ್ರೀರಾಮನಿಂದ ಉಪಕಾರವನ್ನು ಪಡೆದು ಕೃತಾರ್ಥನಾಗಿ ಈಗ ಪ್ರತ್ಯುಪಕಾರವನ್ನು ಮಾಡದೇ ಇರುವ ನೀನು ಅನಾರ್ಯನೂ, ಕೃತಘ್ನನೂ ಮತ್ತು ಮಿಥ್ಯಾವಾದಿಯೂ ಆಗಿರುವೆ. ರಾಮನಿಂದ ಉಪಕಾರವನ್ನು ಪಡೆದು ಕೃತಾರ್ಥನಾಗಿರುವ ನೀನು ಪ್ರತ್ಯುಪಕಾರವನ್ನು ಮಾಡುವ ಇಚ್ಛೆಯುಳ್ಳವನೇ ಆಗಿದ್ದರೆ–ಸೀತೆಯನ್ನು ಹುಡುಕುವ ಪ್ರಯತ್ನವನ್ನು ಈ ವೇಳೆಗೆ ಮಾಡಲೇಬೇಕಾಗಿದ್ದಿತು. ಮಿಥ್ಯಾಪ್ರತಿಜ್ಞನಾದ ನೀನು ಸರ್ವಕಾಲದಲ್ಲಿಯೂ ಗ್ರಾಮ್ಯವಾದ ಸುಖೋಪಭೋಗಗಳಲ್ಲಿಯೇ ಆಸಕ್ತನಾಗಿರುವೆ. ಕಪ್ಪೆಯಂತೆ ವಟಗುಟ್ಟುವ ಹಾವಿನಂತೆ – ನೀನು ವಂಚಕಸ್ವಭಾವದವನೆಂಬ ವಿಷಯವನ್ನು ಶ್ರೀರಾಮನು ತಿಳಿಯಲಿಲ್ಲ.* ಮಹಾಭಾಗ್ಯಶಾಲಿಯಾದ, ಮಹಾತ್ಮನಾದ, ದಯಾಶೀಲನಾದ ಶ್ರೀರಾಮನು ಕಪಿಗಳ ರಾಜ್ಯವನ್ನೇ ನಿನಗೆ ಕೊಡಿಸಿದನು. ಆದರೆ ನೀನು ಮಾತ್ರ ದುರಾತ್ಮನೂ ಪಾಪಿಷ್ಠನೂ ಆಗಿರುವೆ. ಸುಗ್ರೀವ! ಈಗಲಾದರೂ ನೀನು – ಶ್ರೀರಾಮನು ನಿನಗೆ ಮಾಡಿರುವ ಉಪಕಾರವನ್ನು ಸ್ಮರಿಸಿಕೊಳ್ಳದಿದ್ದರೆ – ಶೀಘ್ರದಲ್ಲಿಯೇ ಶ್ರೀರಾಮನ ತೀಕ್ಷ್ಣವಾದ ಬಾಣಗಳಿಂದ ಹತನಾಗಿ ವಾಲಿಯನ್ನು ಸಂದರ್ಶಿಸುವೆ.

ನ ಚ ಸಂಕುಚಿತಃ ಪನ್ಥಾ ಯೇನ ವಾಲೀ ಹತೋ ಗತಃ ।
ಸಮಯೇ ತಿಷ್ಠ ಸುಗ್ರೀವ ಮಾ ವಾಲಿಪಥಮನ್ವಗಾಃ ॥೧೮॥

---

* ಸರ್ಪವು ಕಪ್ಪೆಯನ್ನು ಹಿಡಿಯಲು ಕಪ್ಪೆಯಂತೆಯೇ ವಟಗುಟ್ಟುತ್ತಿರುತ್ತದೆ. ಆ ಧ್ವನಿಗೆ ಆಕರ್ಷಿತವಾದ ಕಪ್ಪೆಯು ಕಪ್ಪೆಗಳೇ ಕೂಗುತ್ತಿರುವುವೆಂದು ಭ್ರಮಿಸಿ ಹಾವಿನ ಬಳಿಗೆ ಹೋಗುತ್ತದೆ. ಒಡನೆಯೇ ಹಾವು ಕಪ್ಪೆಯನ್ನು ನುಂಗಿಬಿಡುತ್ತದೆ. ವಂಚನೆಯನ್ನು ಲಕ್ಷ್ಮಣನು ಸುಗ್ರೀವನ ಮೇಲೆ ಆರೋಪಿಸುತ್ತಾನೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ವಾಲಿಯು ಹತನಾಗಿ ಯಾವ ಮಾರ್ಗದಿಂದ ಪರಲೋಕಕ್ಕೆ ಪ್ರಯಾಣ ಮಾಡಿದನೋ–ಆ ಮಾರ್ಗವು ಇಕ್ಕಟ್ಟಾಗಿಲ್ಲ. ನೀನೂ ಕೂಡ ಅದೇ ಮಾರ್ಗದಲ್ಲಿಯೇ ಹೋಗಬಹುದಾಗಿದೆ. ಆದುದರಿಂದ ಈಗಲಾದರೂ ನಿನ್ನ ಪ್ರತಿಜ್ಞೆಯಂತೆ ನಡೆದುಕೊ. ವಾಲಿಯನ್ನು ಅನುಸರಿಸಿ ಹೋಗಲು ಯತ್ನಿಸಬೇಡ.

ಇಕ್ಷ್ವಾಕುವಂಶಶಿರೋಮಣಿಯಾದ ಶ್ರೀರಾಮನ ಧನುಸ್ಸಿನಿಂದ ಹೊರಬರುವ, ವಜ್ರಾಯುಧಕ್ಕೆ ಸಮಾನವಾದ ಬಾಣಗಳ ಕಡೆಗೆ ನೀನಿನ್ನೂ ದೃಷ್ಟಿಯನ್ನು ಹಾಯಿಸಿಲ್ಲ. ಈ ಕಾರಣದಿಂದಲೇ ನೀನು ಗ್ರಾಮ್ಯಸುಖದಲ್ಲಿಯೇ ಆಸಕ್ತನಾಗಿರುವೆ. ಅದನ್ನೇ ಪರಮಸುಖವೆಂದು ಭಾವಿಸಿ ಶ್ರೀರಾಮನ ಕಾರ್ಯವನ್ನು ಮನಸ್ಸಿನಿಂದ ಕೂಡ ಸ್ಮರಿಸುತ್ತಿಲ್ಲ."

ಮೂವತ್ತನಾಲ್ಕನೆಯ ಸರ್ಗವು ಮುಗಿಯಿತು.

ಕಿಷ್ಕಿಂಧಾಕಾಂಡ ೩೫ನೆಯ ಸರ್ಗ

## ತಾರೆಯು ಯುಕ್ತಿಯುಕ್ತವಾದ ಮಾತುಗಳಿಂದ ಲಕ್ಷ್ಮಣನನ್ನು ಸಮಾಧಾನಗೊಳಿಸಿದುದು

ತಥಾ ಬ್ರುವಾಣಂ ಸೌಮಿತ್ರಿಂ ಪ್ರದೀಪ್ತಮಿವ ತೇಜಸಾ ।
ಅಬ್ರವೀಲ್ಲಕ್ಷ್ಮಣಂ ತಾರಾ ತಾರಾಧಿಪನಿಭಾನನಾ ॥೧॥

ತಾರಾಧಿಪನಾದ ಚಂದ್ರನ ಕಾಂತಿಗೆ ಸಮಾನವಾದ ಮುಖಕಾಂತಿಯಿಂದ ಬೆಳಗುತ್ತಿದ್ದ ತಾರೆಯು–ಹೀಗೆ ಮಾತನಾಡುತ್ತಿದ್ದ ಕೋಪದಿಂದ ಹುಟ್ಟಿದ ತೇಜಸ್ಸಿನಿಂದ ಪ್ರಜ್ವಲಿಸುತ್ತಿರುವನೋ ಎಂಬಂತೆ ಕಾಣುತ್ತಿದ್ದ ಸೌಮಿತ್ರಿಗೆ ಹೇಳಿದಳು :

" ಲಕ್ಷ್ಮಣ ! ನೀನು ಇಂತಹ ಮಾತುಗಳನ್ನು ಎಂದಿಗೂ ಆಡಬಾರದು. ಕಪೀಶ್ವರನಾದ ಸುಗ್ರೀವನು ಇಂತಹ ಕಠಿಣವಾದ ಮಾತುಗಳಿಗೆ ತಕ್ಕವನಲ್ಲ. ಅದರಲ್ಲಿಯೂ ವಿಶೇಷವಾಗಿ ನಿನ್ನಿಂದ ಅವನು ಇಂತಹ ಮಾತುಗಳನ್ನು ಕೇಳಬಾರದಾಗಿತ್ತು. ನೀನು ಭಾವಿಸಿರುವಂತೆ ಕಪೀಶ್ವರನು ನೀವು ಮಾಡಿರುವ ಉಪಕಾರವನ್ನು ಮರೆಯುತಕ್ಕವನಲ್ಲ. ಧೂರ್ತನಲ್ಲ. ಕ್ರೂರಿಯಲ್ಲ. ಸುಳ್ಳಾಡುವವನಲ್ಲ. ವಕ್ರಬುದ್ಧಿಯುಳ್ಳವನೂ ಅಲ್ಲ. ಯುದ್ಧದಲ್ಲಿ ಇತರರಿಂದ ಮಾಡಲು ಅತಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.

ದುಷ್ಕರವಾದ ಕಾರ್ಯವನ್ನು ಮಾಡಿರುವ ಶ್ರೀರಾಮನಿಂದ ಹೊಂದಿರುವ ಉಪಕಾರವನ್ನು ಕಪೀಶ್ವರನು ಖಂಡಿತವಾಗಿಯೂ ಮರೆತಿಲ್ಲ. ಶ್ರೀರಾಮನ ಅನುಗ್ರಹದಿಂದಲೇ ಇವನು ಯಶಸ್ಸನ್ನೂ, ಶಾಶ್ವತವಾದ ಕಪಿರಾಜ್ಯವನ್ನೂ, ನನ್ನನ್ನೂ ಮತ್ತು ರುಮೆಯನ್ನೂ ಪಡೆದುಕೊಂಡಿರುವನು. ಹಿಂದೆ ದುಃಖಿತನಾಗಿ ಏಕಾಕಿಯಾಗಿ ಪರ್ವತದ ಗುಹೆಯಲ್ಲಿ ಮಲಗುತ್ತಿದ್ದ ಸುಗ್ರೀವನು ಶ್ರೀರಾಮನ ಅನುಗ್ರಹದಿಂದ ಉತ್ತಮೋತ್ತಮವಾದ ಸುಖೋಪಭೋಗಗಳನ್ನು ಪಡೆದುಕೊಂಡನು. ಪ್ರತ್ಯುಪಕಾರವನ್ನು ಮಾಡಬೇಕಾದ ಕಾಲವು ಸನ್ನಿಹಿತವಾಗಿರುವುದೆಂಬ ಅರಿವು ವಿಶ್ವಾಮಿತ್ರನಂತೆ ಇವನಿಗೂ ಉಂಟಾಗಲಿಲ್ಲ. ನಿನಗೂ ತಿಳಿದಿರುವಂತೆ ಮಹಾಮುನಿಯಾದ ವಿಶ್ವಾಮಿತ್ರನು ಕಾಲದ ಪರಿವೆಯೇ ಇಲ್ಲದೆ ಘೃತಾಚಿಯೊಡನೆ (ಮೇನಕೆಯೊಡನೆ) ಹತ್ತು ವರ್ಷಗಳನ್ನು ಒಂದು ಹಗಲಿನಂತೆಯೇ ಕಳೆದನು. ಕಾಲವನ್ನು ತಿಳಿದವರಲ್ಲಿ ಶ್ರೇಷ್ಠನಾದ, ಮಹಾತೇಜಸ್ವಿಯಾದ ವಿಶ್ವಾಮಿತ್ರನೇ ಸ್ತ್ರೀಸಹವಾಸದಲ್ಲಿ ಹತ್ತು ವರ್ಷಗಳು ಕಳೆದುಹೋದುದನ್ನು ಅರಿಯದೇ ಇದ್ದಮೇಲೆ – ನಮ್ಮಂತಹ ಸಾಧಾರಣಪ್ರಾಣಿಗಳ ವಿಷಯವಾಗಿ ಹೇಳುವುದೇನಿದೆ? ಕುಮಾರ! ಮನುಷ್ಯರಿಗೂ ಪಶುಗಳಿಗೂ ಸಮಾನಧರ್ಮವಾಗಿರುವ ಆಹಾರ-ನಿದ್ರಾ-ಮೈಥುನಗಳೇ ಮೊದಲಾದ ದೇಹಧರ್ಮಗಳನ್ನು ಹೊಂದಿರುವ ಸುಗ್ರೀವನು ಈ ಹಿಂದೆ ಬಹಳ ಕಾಲದವರೆಗೆ ಅನೇಕವಾದ ಕಷ್ಟಗಳನ್ನು ಅನುಭವಿಸುತ್ತಾ ಬಹಳವಾಗಿ ಬಳಲಿದ್ದನು. ಈಗ ಶ್ರೀರಾಮನ ಕೃಪೆಯಿಂದಾಗಿ ಇವನಿಗೆ ಸುಖೋಪಭೋಗಗಳು ಲಭಿಸಿವೆ. ಆದರೆ ಅದರಲ್ಲಿ ಇವನಿಗಿನ್ನೂ ತೃಪ್ತಿಯುಂಟಾಗಿಲ್ಲ. ಈ ಕಾರಣದಿಂದಲೇ ಅವನು ತನ್ನ ಕರ್ತವ್ಯದಲ್ಲಿ ವಿಮುಖನಾಗಿದ್ದಾನೆ. ಈ ಅಪರಾಧವನ್ನು ಕ್ಷಮಿಸುವುದು ದಯಾಳುವಾದ ನಿನಗೆ ಯೋಗ್ಯವಾಗಿದೆ. ಯಥಾರ್ಥವಾದ ವಿಷಯವನ್ನು ತಿಳಿಯದೇ ಪಾಮರಮನುಷ್ಯನಂತೆ ಒಡನೆಯೇ ಕೋಪಕ್ಕೆ ವಶನಾಗುವುದು ನಿನ್ನಂತಹವನಿಗೆ ಉಚಿತವಾಗಿ ಕಾಣುವುದಿಲ್ಲ. ಸತ್ತ್ವಗುಣಯುಕ್ತರಾದ ನಿನ್ನಂತಹ ಮಹಾಪುರುಷರು ಯಾವುದನ್ನೂ ಸರಿಯಾಗಿ ವಿಮರ್ಶಿಸದೇ ಹಠಾತ್ತಾಗಿ ಕೋಪಕ್ಕೆ ವಶರಾಗುವುದಿಲ್ಲ. ಧರ್ಮಜ್ಞನೇ! ಸುಗ್ರೀವನಿಗೆ ಒಳ್ಳೆಯದನ್ನು ಮಾಡುವುದರಲ್ಲಿಯೇ ಏಕಾಗ್ರಚಿತ್ತಳಾಗಿರುವ ನಾನು ಸಮಾಧಾನಗೊಳ್ಳುವಂತೆ ನಿನ್ನನ್ನು ಬೇಡಿಕೊಳ್ಳು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ತ್ತೇನೆ. ಮಹಾರೋಷದಿಂದ ಉಂಟಾಗಿರುವ ಮನಸ್ಸಿನ ಕ್ಷೋಭೆಯನ್ನು ಈಗಲೇ ಪರಿತ್ಯಜಿಸು. ಶ್ರೀರಾಮನಿಗೆ ಪ್ರಿಯವನ್ನುಂಟುಮಾಡುವ ಸಲುವಾಗಿ ಸುಗ್ರೀವನು ರುಮೆಯನ್ನೂ, ನನ್ನನ್ನೂ, ಅಂಗದನನ್ನೂ, ಈ ರಾಜ್ಯವನ್ನೂ, ಧನ-ಧಾನ್ಯಾದಿ ಐಶ್ವರ್ಯಗಳನ್ನೂ ತ್ಯಜಿಸಲು ಸಿದ್ಧನಾಗಿರುವನೆಂಬುದು ನನ್ನ ಅಭಿಮತವಾಗಿದೆ. ಸುಗ್ರೀವನು ರಾಕ್ಷಸಾಧಮನಾದ ರಾವಣನನ್ನು ಸಂಹರಿಸಿ –ರೋಹಿಣಿಯು ಚಂದ್ರನೊಡನೆ ಸೇರುವಂತೆ– ಸೀತೆಯು ರಾಮನೊಡನೆ ಸೇರುವಂತೆ ಮಾಡುತ್ತಾನೆ. ಲಂಕೆಯಲ್ಲಿ ನೂರು ಕೋಟಿ ಸಹಸ್ರಸಂಖ್ಯಾತರಾದ ಮತ್ತು ಹತ್ತುಸಾವಿರದ ಮೂವತ್ತಾರು ಸಾವಿರ ಕೋಟಿ ಸಂಖ್ಯಾತರಾದ (ಅಪಾರಸಂಖ್ಯೆಯ) ರಾಕ್ಷಸರಿದ್ದಾರೆ. ಆ ಎಲ್ಲ ರಾಕ್ಷಸರನ್ನೂ ಸಂಹರಿಸದೇ ವೈದೇಹಿಯನ್ನು ಅಪಹರಿಸಿಕೊಂಡು ಹೋಗಿರುವ ರಾವಣನನ್ನು ಸಂಹರಿಸಲು ಸಾಧ್ಯವಿಲ್ಲ. ಯಾರೊಬ್ಬರ ಸಹಾಯವೂ ಇಲ್ಲದೇ ಏಕಾಕಿಯಾಗಿ ಯಾವ ವೀರನಿಗೂ ಅಸಂಖ್ಯಾತರಾದ ಆ ರಾಕ್ಷಸರನ್ನು ಸಂಹರಿಸಲು ಸಾಧ್ಯವಾಗುವುದಿಲ್ಲ. ಕ್ರೂರಕರ್ಮನಾದ ರಾವಣನನ್ನು ಸಂಹರಿಸಲೂ ಸಾಧ್ಯವಾಗುವುದಿಲ್ಲ. ಈ ಸಮಯದಲ್ಲಿ ವಿಶೇಷವಾಗಿ ಸುಗ್ರೀವನ ಸಹಾಯವನ್ನು ಪಡೆಯುವುದು ಅನಿವಾರ್ಯವಾಗಿದೆ. ರಾವಣನ ಬಳಿಯಲ್ಲಿ ಅಪಾರಸಂಖ್ಯೆಯ ಸೈನಿಕರಿರುವರೆಂಬ ವಿಷಯವನ್ನು ವಾಲಿಯೇ ನನಗೆ ಹೇಳಿದ್ದನು. ಅವನು ರಾವಣನ ಬಲ-ಪರಾಕ್ರಮಗಳನ್ನು ಚೆನ್ನಾಗಿ ತಿಳಿದುಕೊಂಡಿದ್ದನು. ಆದರೆ ರಾವಣನು ಆ ಅಪಾರಸಂಖ್ಯೆಯ ಸೈನಿಕರನ್ನು ಹೇಗೆ ಸಂಗ್ರಹಿಸಿದನೆಂಬ ವಿಷಯವು ನನಗೆ ತಿಳಿಯದು. ವಾಲಿಯಿಂದ ನಾನು ಯಾವ ವಿಷಯವನ್ನು ಕೇಳಿ ತಿಳಿದಿರುವೆನೋ – ಆ ವಿಷಯವನ್ನು ಮಾತ್ರವೇ ನಾನಿಲ್ಲಿ ಹೇಳಿದ್ದೇನೆ. ಯುದ್ಧದಲ್ಲಿ ನಿಮಗೆ ಸಹಾಯಮಾಡಬೇಕೆನ್ನುವ ಕಾರಣದಿಂದಲೇ ಅಪಾರಸಂಖ್ಯೆಯ ವಾನರಸೈನಿಕರೆಲ್ಲರನ್ನೂ ಕರೆತರುವ ಸಲುವಾಗಿ ಕಪಿನಾಯಕರನ್ನು ಎಲ್ಲ ಕಡೆಗಳಿಗೂ ಕಳುಹಿಸಿಕೊಡಲಾಗಿದೆ. ರಾಘವನ ಅರ್ಥಸಿದ್ಧಿಗಾಗಿ ವಿಕ್ರಾಂತಪರಾಕ್ರಮಿಗಳಾದ ಮಹಾಬಲಿಷ್ಠರಾದ ಕಪಿಮುಖ್ಯರನ್ನು ನಿರೀಕ್ಷಿಸುತ್ತಿರುವ ಸುಗ್ರೀವನು ಕಿಷ್ಕಿಂಧೆಯನ್ನು ಬಿಟ್ಟು ಇನ್ನೂ ಹೊರಬಂದಿಲ್ಲ.

ಸುಗ್ರೀವನು ಅವರೆಲ್ಲರೂ ಶೀಘ್ರವಾಗಿ ಬರುವಂತೆ ಒಂದು ಅವಧಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.



ಯನ್ನು ನಿಗದಿಪಡಿಸಿ ಒಳ್ಳೆಯ ವ್ಯವಸ್ಥೆಯನ್ನೇ ಮಾಡಿದ್ದಾನೆ. ಆ ಅವಧಿಯಂತೆ ಮಹಾಬಲಿಷ್ಠರಾದ ವಾನರಶ್ರೇಷ್ಠರೆಲ್ಲರೂ ಈ ದಿನವೇ ಇಲ್ಲಿಗೆ ಬರಬೇಕಾಗಿದೆ. ಸಾವಿರ ಕೋಟಿ ಕರಡಿಗಳೂ, ನೂರು ಕೋಟಿ ಗೋಲಾಂಗೂಲಗಳೂ,* ಪ್ರದೀಪ್ತವಾದ ತೇಜಸ್ಸಿನಿಂದ ಕೂಡಿರುವ ಅನೇಕಕೋಟಿ ಕಪಿಗಳೂ ಈ ದಿನವೇ ನಿನ್ನ ಬಳಿಗೆ ಬರುತ್ತವೆ. ಈ ವಿಷಯವನ್ನು ತಿಳಿದಮೇಲಾದರೂ ನೀನು ಕೋಪವನ್ನು ತ್ಯಜಿಸುವುದು ಉಚಿತವಾಗಿದೆ. ನಿನ್ನ ಮುಖವನ್ನೂ, ಕೋಪದಿಂದ ರಕ್ತದಂತೆ ಕೆಂಪಾಗಿರುವ ಕಣ್ಣುಗಳನ್ನೂ ನೋಡುತ್ತಿರುವ ಹರಿಶ್ರೇಷ್ಠನಾದ ಸುಗ್ರೀವನ ಪ್ರೇಯಸಿಯರು ಮನಃಶಾಂತಿಯನ್ನೇ ಕಳೆದುಕೊಂಡಿದ್ದಾರೆ. ಮೊದಲನೆಯದಾದ ವಾಲಿಯ ವಧೆಯಿಂದುಂಟಾದ ಭಯಕ್ಕೆ ಸಮಾನವಾದ ಮತ್ತೊಂದು ಭಯವು ಎಲ್ಲಿ ಪ್ರಾಪ್ತವಾಗುವುದೋ ಎಂದು ಇವರೆಲ್ಲರೂ ಸಂದೇಹಪಡುತ್ತಿದ್ದಾರೆ."

೩೫ನೆಯ ಸರ್ಗವು ಮುಗಿಯಿತು.



## ಸುಗ್ರೀವನು ತನ್ನ ಅಲ್ಪತನವನ್ನೂ ಶ್ರೀರಾಮನ ಮಹತ್ತ್ವವನ್ನೂ ಲಕ್ಷ್ಮಣನಿಗೆ ಹೇಳಿ ಕ್ಷಮೆ ಬೇಡಿದುದು : ಲಕ್ಷ್ಮಣನು ಸುಗ್ರೀವನನ್ನು ಪ್ರಶಂಸೆಮಾಡಿ ತನ್ನ ಜೊತೆಯಲ್ಲಿ ಬರುವಂತೆ ಹೇಳಿದುದು

ಇತ್ಯುಕ್ತಸ್ತಾರಯಾ ವಾಕ್ಯಂ ಪ್ರಶ್ರಿತಂ ಧರ್ಮಸಂಹಿತಮ್ ।
ಮೃದುಸ್ವಭಾವಃ ಸೌಮಿತ್ರಿಃ ಪ್ರತಿಜಗ್ರಾಹ ತದ್ವಚಃ ॥೧॥

ತಾರೆಯಾಡಿದ ವಿನಯಯುಕ್ತವಾದ ಮತ್ತು ಧರ್ಮಸಮ್ಮತವಾದ ಮಾತುಗಳನ್ನು ಕೇಳಿ ಮೃದುಸ್ವಭಾವದವನಾದ ಲಕ್ಷ್ಮಣನು ಆ ಮಾತುಗಳನ್ನು ಅಂಗೀಕರಿಸಿದನು. ಕೋಪವನ್ನು ಪರಿತ್ಯಜಿಸಿದನು.

ಲಕ್ಷ್ಮಣನು ತಾರೆಯ ಮಾತನ್ನು ಗೌರವಿಸಿ ಶಾಂತಭಾವವನ್ನು ತಳೆದನಂತರ ಸುಗ್ರೀವನು ಲಕ್ಷ್ಮಣನ ಕೋಪದಿಂದುಂಟಾಗಿದ್ದ ಮಹಾಭಯವನ್ನು–

---

* ಹಸುವಿನ ಬಾಲದಂತೆ ಬಾಲವನ್ನು ಹೊಂದಿರುವ ಕಪ್ಪುಮುಖದ ಕೋತಿಗಳು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.


ಒದ್ದೆಯಾಗಿರುವ ಬಟ್ಟೆಯನ್ನು ಬಿಚ್ಚಿಸೆಯುವಂತೆ–ಪರಿತ್ಯಜಿಸಿದನು. ಅಂತೆಯೇ ತನ್ನ ಕೊರಳಿನಲ್ಲಿದ್ದ ಬಹುಗುಣಯುಕ್ತವಾದ (ಕಾಮ-ಮದ-ಮೋಹಾದಿಗಳನ್ನುಂಟುಮಾಡುವ ಗುಣಗಳಿರುವ) ವಿಚಿತ್ರವಾದ ಹೂವಿನ ಮಾಲೆಯನ್ನೂ ಕಿತ್ತುಹಾಕಿದನು. ಅದರಿಂದವನು ಮದರಹಿತನೂ ಆದನು. ಸರ್ವವಾನರಶ್ರೇಷ್ಠನಾದ ಸುಗ್ರೀವನು ಭಯಂಕರ ಪರಾಕ್ರಮನಾದ ಲಕ್ಷ್ಮಣನನ್ನು ಸಂತೋಷಗೊಳಿಸುತ್ತಾ ನಯ-ವಿನಯಗಳಿಂದ ಯುಕ್ತವಾದ ಮಾತುಗಳನ್ನು ಹೇಳಿದನು :

" ಸುಮಿತ್ರಾನಂದವರ್ಧನನೇ! ಲಕ್ಷ್ಮಣ! ನನ್ನ ಸಂಪತ್ತು, ಕೀರ್ತಿ, ರಾಜ್ಯ–ಎಲ್ಲವೂ ಸಂಪೂರ್ಣವಾಗಿ ನಷ್ಟವಾಗಿಯೇ ಹೋಗಿದ್ದಿತು. ಪುನಃ ಪಡೆದುಕೊಳ್ಳುವೆನೆಂಬ ಆಶೆಯೂ ನನಗಿರಲಿಲ್ಲ. ಶ್ರೀರಾಮನ ಪ್ರಸಾದದಿಂದಾಗಿ ಈ ಎಲ್ಲವೂ ಪುನಃ ನನಗೆ ಲಭಿಸಿದುವು. ತನ್ನ ಪರಾಕ್ರಮಾದಿ ಗುಣಗಳಿಂದ ಸುವಿಖ್ಯಾತನಾಗಿರುವ ಶ್ರೀರಾಮನು ಮಾಡಿರುವ ಅಂತಹ ಮಹೋಪಕಾರಕ್ಕೆ ಪ್ರತ್ಯುಪಕಾರಮಾಡುವ ಸಾಮರ್ಥ್ಯವು ಯಾವನಿಗಿದೆ? ಶ್ರೀರಾಮನು ನನ್ನನ್ನು ನೆಪಮಾತ್ರಕ್ಕೆ ಸಹಾಯಕನನ್ನಾಗಿಟ್ಟುಕೊಂಡು ತನ್ನ ದಿವ್ಯತೇಜಸ್ಸಿನಿಂದಲೇ ರಾವಣನನ್ನು ಸಂಹರಿಸಿ ಸೀತೆಯನ್ನು ಪಡೆದುಕೊಳ್ಳುತ್ತಾನೆ. ಯಾವನು ಒಂದೇ ಬಾಣದಿಂದಲೇ ಸಪ್ತಮಹಾವೃಕ್ಷಗಳನ್ನೂ, ಬೆಟ್ಟವನ್ನೂ ಮತ್ತು ಭೂಮಿಯನ್ನೂ ಸೀಳಿದನೋ–ಅಂತಹ ಮಹಾಪರಾಕ್ರಮಿಗೆ ಯಾವ ಸಹಾಯಕನು ಏನು ತಾನೇ ಮಾಡಬಲ್ಲನು? ಯಾವನ ಧನುಸ್ಸಿನ ಟೇಂಕಾರವು ಪರ್ವತಗಳಿಂದ ಕೂಡಿರುವ ಭೂಮಿಯನ್ನೇ ನಡುಗಿಸಿಬಿಟ್ಟಿತೋ – ಅಂತಹ ಮಹಾನುಭಾವನಿಗೆ ಸಹಾಯಕರಿಂದ ಏನಾಗಬೇಕಾಗಿದೆ? ನಾನಾದರೋ ವೈರಿಯಾದ ರಾವಣನನ್ನು ಸಂಹರಿಸಲು ಹೋಗುವ ಶ್ರೀರಾಮನನ್ನು ಸೈನ್ಯಸಮೇತನಾಗಿ ಹಿಂಬಾಲಿಸಿ ಹೋಗುತ್ತೇನೆ. ಇಷ್ಟು ಮಾತ್ರ ಸಹಾಯವು ನನ್ನಿಂದಾಗುತ್ತದೆ. ಶ್ರೀರಾಮನು ನನ್ನ ವಿಷಯದಲ್ಲಿ ತಪ್ಪಾಗಿ ತಿಳಿಯಲಾರನೆಂಬ ವಿಶ್ವಾಸದಿಂದಲೋ ಹೆಚ್ಚಿನ ಸಲಿಗೆಯಿಂದಲೋ ಯಾವುದಾದರೂ ಅತಿಕ್ರಮವು ನನ್ನಿಂದ ನಡೆದಿದ್ದರೆ–ದಾಸ



CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

ನಾದ ನನ್ನನ್ನು ಕ್ಷಮಿಸುವುದು ಉಚಿತವಾಗಿದೆ. ಸ ಕಶ್ಚಿನ್ನಾಪರಾಧ್ಯತಿ–ಲೋಕದಲ್ಲಿ ಅಪರಾಧವನ್ನು ಮಾಡದಿರುವವರು ಯಾರೂ ಇಲ್ಲ."

ಹೀಗೆ ಹೇಳಿದ ಮಹಾತ್ಮನಾದ ಸುಗ್ರೀವನ ವಿಷಯದಲ್ಲಿ ಲಕ್ಷ್ಮಣನು ಪರಮಪ್ರೀತನಾಗಿ ಪ್ರೇಮಪೂರ್ವಕವಾದ ಮಾತನ್ನು ಹೇಳಿದನು :

"ವಾನರೇಶ್ವರನೇ! ನಿನ್ನಂತಹ ನಾಥನು ಸಿಕ್ಕಿರುವುದರಿಂದ–ಅದರಲ್ಲಿಯೂ ವಿಶೇಷವಾಗಿ ವಿನೀತನಾದ ನಾಥನು ಸಿಕ್ಕಿರುವುದರಿಂದ–ನಮ್ಮಣ್ಣನು ನಿಶ್ಚಯವಾಗಿಯೂ ಸನಾಥನೇ ಸರಿ. ನಿನ್ನ ಪ್ರಭಾವ, ಮನಸ್ಸಿನ ಪರಿಶುದ್ಧತೆ ಮತ್ತು ನಿನ್ನಲ್ಲಿರುವ ಋಜುತ್ವ–ಇವುಗಳಿಂದ ನೀನು ವಾನರರಾಜ್ಯದ ಉತ್ತಮೋತ್ತಮವಾದ ಸಂಪತ್ತನ್ನು ಉಪಭೋಗಿಸಲು ಅರ್ಹನಾಗಿರುವೆ.

ಪ್ರತಾಪವಂತನಾದ ಶ್ರೀರಾಮನು ನಿನ್ನ ಸಹಾಯದಿಂದ ಶತ್ರುಗಳನ್ನು ಬಹಳ ಬೇಗ ಸಂಹರಿಸುತ್ತಾನೆ. ಇದರಲ್ಲಿ ಸಂಶಯವೇ ಇಲ್ಲ. ಧರ್ಮಜ್ಞನಾದ, ಕೃತಜ್ಞನಾದ, ಯುದ್ಧಗಳಲ್ಲಿ ಎಂದೂ ಹಿಂದಿರುಗದ ನಿನ್ನಂತಹವನಿಗೆ ನೀನಾಡಿದ ಮಾತುಗಳು ಅನುರೂಪವಾಗಿಯೇ ಇವೆ. ನಮ್ಮಣ್ಣನನ್ನೂ ಮತ್ತು ನಿನ್ನನ್ನೂ ಬಿಟ್ಟರೆ– ಸಾಮರ್ಥ್ಯವಿದ್ದರೂ ಕೂಡ ತನ್ನ ತಪ್ಪನ್ನು ತಿಳಿದು ಇಷ್ಟು ವಿನಯಭಾವದಿಂದ ಮಾತನಾಡಲು ಬೇರೆ ಯಾವ ವಿದ್ವಾಂಸನಿಗೆ ತಾನೇ ಸಾಧ್ಯವಾಗುತ್ತದೆ? ನೀನು ಪರಾಕ್ರಮದಿಂದಲೂ ಮತ್ತು ಬಲದಿಂದಲೂ ನಮ್ಮಣ್ಣನಾದ ಶ್ರೀರಾಮನಿಗೆ ಸಮಾನನಾಗಿರುವೆ. ಬಹಳ ದಿವಸಗಳ ನಂತರ ನಮ್ಮಣ್ಣನಿಗೆ ದೇವತೆಗಳಿಂದಲೇ ಅನುಗ್ರಹಿಸಲ್ಪಟ್ಟಿರುವ ಸಹಾಯಕನು ನೀನು. ಸುಗ್ರೀವ! ನೀನೀಗಲೇ ನನ್ನ ಜೊತೆಯಲ್ಲಿ ಇಲ್ಲಿಂದ ಹೊರಟು ಬಾ. ಭಾರ್ಯಾಪಹಾರದಿಂದ ಅತ್ಯಂತದುಃಖಿತನಾಗಿರುವ ನಿನ್ನ ಮಿತ್ರನನ್ನು ಸಂತೈಸು. ಶೋಕತಪ್ತನಾಗಿದ್ದ ಶ್ರೀರಾಮನ ಮಾತುಗಳನ್ನು ಕೇಳಿ, ನಾನು ನಿನ್ನ ವಿಷಯದಲ್ಲಿ ಬಹಳ ಕಠಿಣವಾದ ಮಾತುಗಳನ್ನೇ ಆಡಿದೆನು. ಪ್ರಿಯಸಖನೇ! ಅದನ್ನು ಕ್ಷಮಿಸಿಬಿಡು."

೩೬ನೆಯ ಸರ್ಗವು ಮುಗಿಯಿತು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri


ಸುಗ್ರೀವನು ಹನುಮಂತನಿಗೆ ವಾನರಸೈನ್ಯವೆಲ್ಲವನ್ನೂ ಶೀಘ್ರವಾಗಿ ಒಟ್ಟುಗೂಡಿಸಲು ಆಜ್ಞೆ ಮಾಡಿದುದು : ರಾಜನ ಆಜ್ಞೆಯನ್ನು ಕೇಳಿದೊಡನೆಯೇ ಎಲ್ಲ ವಾನರನಾಯಕರೂ ಕಿಷ್ಕಿಂಧೆಯ ಕಡೆಗೆ ಹೊರಟುದು : ವಾನರದೂತರು ಸುಗ್ರೀವನ ಬಳಿಗೆ ಬಂದು ವಾನರಸೈನ್ಯವು ಕಿಷ್ಕಿಂಧೆಗೆ ಬರುತ್ತಿರುವ ಸಮಾಚಾರವನ್ನು ತಿಳಿಸಿದುದು

ಏವಮುಕ್ತಸ್ತು ಸುಗ್ರೀವೋ ಲಕ್ಷ್ಮಣೇನ ಮಹಾತ್ಮನಾ ।
ಹನುಮನ್ತಂ ಸ್ಥಿತಂ ಪಾರ್ಶ್ವೇ ವಚನಂ ಚೇದಮಬ್ರವೀತ್ ॥೧॥

ಮಹಾತ್ಮನಾದ ಲಕ್ಷ್ಮಣನು ಹೀಗೆ ಹೇಳಲು ಸುಗ್ರೀವನು ತನ್ನ ಪಕ್ಕದಲ್ಲಿಯೇ ನಿಂತಿದ್ದ ಹನುಮಂತನಿಗೆ ಹೇಳಿದನು :

" ಹನುಮಂತ ! ಮಹೇಂದ್ರಪರ್ವತ, ಹಿಮವತ್ಪರ್ವತ, ವಿಂಧ್ಯಪರ್ವತ, ಕೈಲಾಸಪರ್ವತ, ಬಿಳಿಯ ಬಣ್ಣದ ಶಿಖರವಿರುವ ಮಂದರಪರ್ವತ–ಈ ಐದೂ ಪರ್ವತಗಳಲ್ಲಿ ಯಾವ ವಾನರರು ವಾಸಮಾಡುತ್ತಿರುವರೋ–ಪಶ್ಚಿಮ ದಿಕ್ಕಿನ ಸಮುದ್ರದ ತೀರಪ್ರದೇಶಗಳಲ್ಲಿರುವ ಪರ್ವತಗಳಲ್ಲಿ ವಾಸಮಾಡುತ್ತಿರುವ, ಬಾಲಸೂರ್ಯನಂತೆ ಎಣ್ಣೆಗೆಂಪಾಗಿರುವ, ಸರ್ವಕಾಲದಲ್ಲಿಯೂ ಅತ್ಯಂತಪ್ರಕಾಶಮಾನವಾಗಿ ಕಾಣುವ ಯಾವ ವಾನರರು ವಾಸಮಾಡುತ್ತಿರುವರೋ–ಆ ಎಲ್ಲ ವಾನರರನ್ನೂ, ಸಾಮ-ದಾನಾದ್ಯುಪಾಯಗಳಿಂದ ಶೀಘ್ರವಾಗಿ ಇಲ್ಲಿಗೆ ಕರೆತರಲು ಸಮರ್ಥರಾದ ಕಪಿಮುಖ್ಯರನ್ನು ಕಳುಹಿಸಿ ಈಗಲೇ ಅವರೆಲ್ಲರನ್ನೂ ಇಲ್ಲಿಗೆ ಬರಮಾಡು. ಸಂಧ್ಯಾಕಾಲದ ಮೇಘದಂತೆಯೇ ಕಾಣುವ ಉದಯಾಚಲದಲ್ಲಿಯೂ, ಪದ್ಮಾತಾಲವನದ ಪ್ರದೇಶದಲ್ಲಿಯೂ ಭಯಂಕರವಾದ ಅನೇಕ ಕಪಿಶ್ರೇಷ್ಠರು ವಾಸಮಾಡುತ್ತಿದ್ದಾರೆ. ಅಂಜನಪರ್ವತದಲ್ಲಿಯೂ ಕಪ್ಪಾದ ಮೇಘಗಳಂತಿರುವ ಮತ್ತು ಮದಿಸಿದ್ದ ಆನೆಗಳಂತೆ ಪರಾಕ್ರಮದಿಂದ ಕೂಡಿರುವ ಕಪಿಶ್ರೇಷ್ಠರು ವಾಸಮಾಡುತ್ತಿದ್ದಾರೆ. ಅವರೆಲ್ಲರನ್ನೂ ಬರಮಾಡು. ಮಹಾಶೈಲದ ಗುಹೆಯಲ್ಲಿ ಸುವರ್ಣದ ಕಾಂತಿಯಿಂದ ಕೂಡಿರುವ ವಾನರರು ವಾಸಮಾಡುತ್ತಿದ್ದಾರೆ. ಅವರೆಲ್ಲರನ್ನೂ ಬರಮಾಡು. ಅಂತೆಯೇ ಮೇರುಪರ್ವತದ ಪಾರ್ಶ್ವದಲ್ಲಿರುವ ವಾನರರನ್ನೂ, ಧೂಮ್ರಪರ್ವತದಲ್ಲಿ ವಾಸಮಾಡುತ್ತಿರುವ ವಾನರರನ್ನೂ ಕರೆತರಿಸು. ಮಹಾರುಣವೆಂಬ

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

ಪರ್ವತದಲ್ಲಿ ಬಾಲಸೂರ್ಯನ ವರ್ಣದಿಂದ ಕೂಡಿರುವ ಕಪಿಶ್ರೇಷ್ಠರಿದ್ದಾರೆ. ಅವರೆಲ್ಲರೂ ಮಧು-ಮೈರೇಯಗಳನ್ನು ಪಾನಮಾಡುತ್ತಾ ಭಯಂಕರವೇಗ ಶಾಲಿಗಳಾಗಿದ್ದಾರೆ. ಅವರೆಲ್ಲರನ್ನೂ ಸಾಮ-ದಾನಗಳ ಮೂಲಕವಾಗಿ ಕರೆ ತರಲು ಸಮರ್ಥರಾದ ಕಪಿನಾಯಕರನ್ನು ಈಗಲೇ ಕಳುಹಿಸಿ ಇಲ್ಲಿಗೆ ಬರ ಮಾಡು. ಸುಗಂಧಯುಕ್ತವಾದ ಮತ್ತು ರಮ್ಯವಾಗಿರುವ ವನಗಳಲ್ಲಿಯೂ, ರಮ್ಯವಾದ ತಪಸ್ವಿಗಳ ಆಶ್ರಮಗಳಲ್ಲಿಯೂ, ಸುತ್ತಲೂ ಹರಡಿಕೊಂಡಿರುವ ಅರಣ್ಯಗಳಲ್ಲಿಯೂ ಇರುವ ವಾನರರನ್ನು ಕರೆತರಲು ಸಾಮ-ದಾನಾದಿ ಉಪಾಯಗಳನ್ನು ತಿಳಿದಿರುವ ವೇಗವಂತರಾದ ಕಪಿಮುಖ್ಯರನ್ನು ಈಗಲೇ ಕಳುಹಿಸು. ಮಹಾವೇಗವಂತರಾದ ದೂತರನ್ನು ಈ ಕಾರ್ಯಕ್ಕಾಗಿ ನಾನು ಈ ಮೊದಲೇ ಕಳುಹಿಸಿಕೊಟ್ಟಿದ್ದೇನೆ. ಅವರನ್ನು ಅವಸರಪಡಿಸುವ ಸಲು ವಾಗಿ ಪುನಃ ಬೇರೆ ಕಪಿಶ್ರೇಷ್ಠರನ್ನು ಕಳುಹಿಸು. ಯಾರು ಕಾಮಾಸಕ್ತ ರಾಗಿರುವರೋ, ಯಾರು ವಿಳಂಬಿಸಿ ಕಾರ್ಯಮಾಡುವರೋ–ಅಂತಹವರನ್ನೂ ನೀನು ನನ್ನ ಆಜ್ಞಾನುಸಾರವಾಗಿ ಇಲ್ಲಿಗೆ ಬೇಗನೆ ಕರೆದುಕೊಂಡು ಬಾ. ನನ್ನ ಆಜ್ಞಾನುಸಾರವಾಗಿ ಹತ್ತು ದಿವಸಗಳ ಅವಧಿಯಲ್ಲಿ ಯಾವ ದುರಾತ್ಮರು ಇಲ್ಲಿಗೆ ಬರುವುದಿಲ್ಲವೋ–ಅಂತಹವರೆಲ್ಲರೂ ಮರಣದಂಡನೆಗೆ ಗುರಿಯಾಗು ತ್ತಾರೆ. ನನ್ನ ಆಜ್ಞಾಪಾಲಕರಾಗಿರುವ ಲಕ್ಷ-ಕೋಟಿ ಸಂಖ್ಯೆಯ ವಾನರರು ಈಗಲೇ ಹೊರಡಲಿ. ಮೇರು-ಮಂದರಸದೃಶರಾದ ಘೋರರೂಪಿಗಳಾದ ಕಪಿಶ್ರೇಷ್ಠರು ಆಕಾಶವನ್ನೇ ಮುಚ್ಚಿಬಿಡುವ ರೀತಿಯಲ್ಲಿ ಗುಂಪು-ಗುಂಪಾಗಿ ಹಾರಿಕೊಂಡು ನನ್ನ ಆಜ್ಞೆಯಂತೆ ಇಲ್ಲಿಂದ ಪ್ರಯಾಣಮಾಡಲಿ. ಕಪಿಗಳ ವಾಸಸ್ಥಾನಗಳನ್ನು ತಿಳಿದಿರುವ ಎಲ್ಲ ವಾನರರೂ ವಾನರರಿರುವ ಸ್ಥಳಗಳಿಗೆ ಹೋಗಿ ನನ್ನ ಆಜ್ಞಾನುಸಾರವಾಗಿ ಅಲ್ಲಿರುವ ಎಲ್ಲ ವಾನರರನ್ನೂ ತ್ವರೆ ಯಿಂದ ಇಲ್ಲಿಗೆ ಕರೆತರಲಿ."

ಹನುಮಂತನು ವಾನರರಾಜನಾದ ಸುಗ್ರೀವನ ಮಾತನ್ನು ಕೇಳಿ ಮಹಾಪರಾಕ್ರಮಿಗಳಾದ ವಾನರರನ್ನು ಎಲ್ಲ ದಿಕ್ಕುಗಳಿಗೂ ಕಳುಹಿಸಿ ಕೊಟ್ಟನು. ಸುಗ್ರೀವನು ಕಳುಹಿಸಿದ ಎಲ್ಲ ಕಪಿಶ್ರೇಷ್ಠರೂ ಕ್ಷಣಮಾತ್ರದಲ್ಲಿ ತ್ರಿವಿಕ್ರಮರೂಪಿಯಾದ ಮಹಾವಿಷ್ಣುವಿನಿಂದ ಸಮಾಕ್ರಾಂತವಾಗಿದ್ದ ನಕ್ಷತ್ರ ಗಳ ಮತ್ತು ಪಕ್ಷಿಗಳ ಮಾರ್ಗವಾದ ಆಕಾಶಮಾರ್ಗದಲ್ಲಿ ಪ್ರಯಾಣಮಾಡುತ್ತಾ ಸಮುದ್ರದ ತೀರಗಳಲ್ಲಿಯೂ, ಪರ್ವತಗಳಲ್ಲಿಯೂ, ಅರಣ್ಯಗಳಲ್ಲಿಯೂ,

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಸರೋವರಗಳ ಪ್ರದೇಶಗಳಲ್ಲಿಯೂ ಸುತ್ತಾಡುತ್ತಾ, ಅಲ್ಲಿದ್ದ ವಾನರರನ್ನು ಶ್ರೀರಾಮನ ಸಹಾಯಾರ್ಥವಾಗಿ ಸುಗ್ರೀವನ ಬಳಿಗೆ ಬರುವಂತೆ ಪ್ರಚೋದಿಸಿದರು. ಶಿಕ್ಷೆಯನ್ನು ವಿಧಿಸುವುದರಲ್ಲಿ ಮೃತ್ಯುವಿನಂತೆಯೂ ಮಹಾಕಾಲನಂತೆಯೂ ಇದ್ದ ಸುಗ್ರೀವನ ಆಜ್ಞೆಯನ್ನು ಕೇಳಿ ಭಯದಿಂದ ಶಂಕಿತರಾದ ವಾನರರು ದೂತರ ನಿರ್ದೇಶದಂತೆ ರಾಮನ ಬಳಿಗೆ ಆಗಮಿಸಿದರು. ಕಾಡಿಗೆಯಂತೆ ಕಪ್ಪಾದ ಶರೀರವುಳ್ಳ, ಮಹಾವೇಗಶಾಲಿಗಳಾದ ಮೂರು ಕೋಟಿ ವಾನರರು ಶ್ರೀರಾಮನ ಕಾರ್ಯಾರ್ಥವಾಗಿ ಅಂಜನಪರ್ವತದಿಂದ ಋಷ್ಯಮೂಕಪರ್ವತಕ್ಕೆ ಆಗಮಿಸಿದರು. ಸೂರ್ಯನು ಮುಳುಗುವ ಅಸ್ತಾಚಲದಲ್ಲಿ ವಾಸಮಾಡುತ್ತಿದ್ದ, ಪುಟಕ್ಕೆ ಹಾಕಿದ ಚಿನ್ನದಂತೆ ಪ್ರಕಾಶಮಾನರಾಗಿದ್ದ, ಹತ್ತು ಕೋಟಿ ವಾನರರು ಅಸ್ತಾಚಲದಿಂದ ಆಗಮಿಸಿದರು. ಸಿಂಹದ ಕೊರಳಿನ ಕೇಸರಗಳ ಕಾಂತಿಯಂತೆ ಕಾಂತಿಯುಕ್ತರಾಗಿದ್ದ ಒಂದು ಸಾವಿರ ಕೋಟಿ ವಾನರರು ಕೈಲಾಸಪರ್ವತಶಿಖರದಿಂದ ಆಗಮಿಸಿದರು. ಫಲ-ಮೂಲಾದಿಗಳಿಂದಲೇ ಜೀವಿಸುತ್ತಿದ್ದ, ಹಿಮವತ್ಪರ್ವತವನ್ನು ಆಶ್ರಯಿಸಿದ್ದ ಸಾವಿರ-ಸಾವಿರ ಕೋಟಿ ವಾನರರು ಆಗಮಿಸಿದರು. ಅಂಗಾರಕನಿಗೆ ಸಮಾನರಾಗಿದ್ದ, ಭಯಂಕರರಾದ, ಭಯಂಕರಕರ್ಮರಾದ ಒಂದು ಸಾವಿರ ಕೋಟಿ ವಾನರರು ವಿಂಧ್ಯಪರ್ವತದಿಂದ ಶ್ರೀರಾಮನ ಕಾರ್ಯಾರ್ಥವಾಗಿ ಆಗಮಿಸಿದರು. ಕ್ಷೀರಸಾಗರದ ತೀರಪ್ರದೇಶದಲ್ಲಿದ್ದ ವಾನರರೂ, ಹೊಂಗೇತೋಪು-ತೆಂಗಿನ ತೋಟಗಳಲ್ಲಿ ವಾಸಮಾಡುತ್ತಿದ್ದ ವಾನರರೂ ಶ್ರೀರಾಮನ ಕಾರ್ಯಾರ್ಥವಾಗಿ ಆಗಮಿಸಿದರು. ಅವರ ಸಂಖ್ಯೆಯು ಅಗಣಿತವಾಗಿದ್ದಿತು. ಮಹಾಬಲಿಷ್ಠವಾಗಿದ್ದ ವಾನರಸೇನೆಯು ಅರಣ್ಯಗಳಿಂದಲೂ, ಗುಹೆಗಳಿಂದಲೂ, ನದೀ ನದಿಯ ತೀರಪ್ರದೇಶಗಳಿಂದಲೂ ಸೂರ್ಯನನ್ನೇ ನುಂಗಲು ಹೊರಟಿರು ಎಂಬಂತೆ ರಭಸದಿಂದ ಆಕಾಶಮಾರ್ಗದ ಮೂಲಕವಾಗಿ ಆಗಮಿಸಿತು.

ಪೃಥ್ವಿಯಲ್ಲಿರುವ ಎಲ್ಲ ವಾನರರನ್ನೂ ತ್ವರೆಯಿಂದ ಕರೆತರುವಂತೆ ಹನುಮಂತನಿಂದ ಹಿಮವತ್ಪರ್ವತಕ್ಕೆ ಕಳುಹಿಸಲ್ಪಟ್ಟಿದ್ದ ವಾನರರು ಸುಪ್ರಸಿದ್ಧವಾಗಿದ್ದ ಮಹೇಶ್ವರನ ಯಜ್ಞಕಾಲದ ಒಂದು ಮಹಾವೃಕ್ಷವನ್ನು ನೋಡಿದರು. ಪುಣ್ಯತಮವಾದ ಆ ಹಿಮವತ್ಪರ್ವತದಲ್ಲಿ ಹಿಂದೆ ಸರ್ವದೇವತೆಗಳ ಮನಸ್ಸಿಗೂ ಸಂತೋಷವನ್ನುಂಟುಮಾಡಿದ, ಸುಮನೋಹರವಾದ,

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಮಹೇಶ್ವರದೇವತಾಕವಾದ ಮಹಾಯಜ್ಞವೊಂದು ನಡೆಯಿತು. ಆ ಸ್ಥಳದಲ್ಲಿ ಹರಿಯುತ್ತಿದ್ದ ಆಜ್ಯ-ಚರು-ಪಾಯಸಗಳಿಂದಲೇ ಹುಟ್ಟಿದ್ದ ಅಮೃತರಸದಂತೆ ರುಚಿಕರವಾಗಿದ್ದ ಫಲಗಳನ್ನೂ ಗೆಡ್ಡೆ-ಗೆಣಸುಗಳನ್ನೂ ವಾನರರು ನೋಡಿದರು. ಹೋಮದ್ರವ್ಯಗಳ ಆಶ್ರಯದಿಂದಲೇ ಹುಟ್ಟಿದ್ದ ದಿವ್ಯವಾದ ಆ ಫಲ-ಮೂಲಗಳನ್ನು ಯಾವನಾದರೂ ಒಮ್ಮೆ ಭಕ್ಷಿಸಿದರೆ ಅವನು ಒಂದು ಮಾಸದವರೆಗೆ ತೃಪ್ತನಾಗಿರುತ್ತಿದ್ದನು. (ಒಂದು ತಿಂಗಳವರೆಗೆ ಅವನಿಗೆ ಬೇರೆ ಆಹಾರವೇ ಬೇಕಾಗುತ್ತಿರಲಿಲ್ಲ.) ಕಂದ-ಮೂಲ-ಫಲಗಳನ್ನೇ ತಿಂದು ಜೀವಿಸುತ್ತಿದ್ದ ಕಪಿನಾಯಕರು ಅಲ್ಲಿದ್ದ ಗೆಡ್ಡೆ-ಗೆಣಸುಗಳನ್ನೂ, ಫಲಗಳನ್ನೂ, ಸಂಜೀವಿನಿಯೇ ಮೊದಲಾದ ದಿವ್ಯೌಷಧಮೂಲಿಕೆಗಳನ್ನು ಸಂಗ್ರಹಿಸಿಕೊಂಡರು. ಹಾಗೆಯೇ ಆ ಯಜ್ಞಭೂಮಿಯಲ್ಲಿದ್ದ ಸುಗಂಧಯುಕ್ತವಾದ ಪುಷ್ಪಗಳನ್ನೂ ಸುಗ್ರೀವನಿಗೆ ಸಂತೋಷವನ್ನುಂಟುಮಾಡುವ ಸಲುವಾಗಿ ಸಂಗ್ರಹಿಸಿಕೊಂಡರು. ಹನುಮಂತನು ಕಳುಹಿಸಿದ್ದ ಎಲ್ಲ ವಾನರರೂ ಪ್ರಪಂಚದಲ್ಲಿದ್ದ ಎಲ್ಲ ವಾನರರನ್ನೂ ಶೀಘ್ರವಾಗಿ ರಾಮನ ಬಳಿಗೆ ಬರುವಂತೆ ಪ್ರಚೋದಿಸಿ ಪ್ರಯಾಣಹೊರಟ ವಾನರರ ಮುಂಭಾಗದಲ್ಲಿ ತಾವೂ ಹೊರಟರು. ಶೀಘ್ರಗಾಮಿಗಳಾಗಿದ್ದ ಆ ಎಲ್ಲ ಯೂಥಪತಿಗಳೂ ಮುಹೂರ್ತಮಾತ್ರದಲ್ಲಿ ಸುಗ್ರೀವನಿದ್ದ ಕಿಷ್ಕಿಂಧಾಪಟ್ಟಣಕ್ಕೆ ಆಗಮಿಸಿದರು. ಹನುಮಂತನಿಂದ ಕಳುಹಿಸಲ್ಪಟ್ಟು ಹಿಮವತ್ಪರ್ವತದ ಕಡೆಗೆ ಹೋಗಿದ್ದ ಆ ಕಪಿಶ್ರೇಷ್ಠರು ಯಜ್ಞಭೂಮಿಯಲ್ಲಿದ್ದ ಫಲ-ಮೂಲಗಳನ್ನೂ ಓಷಧಿಲತೆಗಳನ್ನೂ ಸಂಗ್ರಹಿಸಿಕೊಂಡು ಸುಗ್ರೀವನ ಬಳಿಗೆ ಹೋಗಿ ಅವನಿಗೆ ಅವೆಲ್ಲವನ್ನೂ ಸಮರ್ಪಿಸಿ ವಿನೀತರಾಗಿ ಹೇಳಿದರು :

"ಮಹಾರಾಜ ! ನಿನ್ನ ಆಜ್ಞೆಯಂತೆ ಇಲ್ಲಿಂದ ಹೊರಟ ನಾವು ಎಲ್ಲ ಪರ್ವತಗಳಲ್ಲಿಯೂ, ನದಿಗಳ ತೀರಪ್ರದೇಶಗಳಲ್ಲಿಯೂ, ಅರಣ್ಯಗಳಲ್ಲಿಯೂ ಸಂಚರಿಸಿ ಅಲ್ಲಿದ್ದ ವಾನರರೆಲ್ಲರಿಗೂ ನಿನ್ನ ಆಜ್ಞೆಯನ್ನು ತಿಳಿಸಿದೆವು. ನಿನ್ನ ಆಜ್ಞಾನುಸಾರವಾಗಿ ಪೃಥ್ವಿಯಲ್ಲಿರುವ ಎಲ್ಲ ವಾನರರೂ ಇಷ್ಟರಲ್ಲಿಯೇ ಇಲ್ಲಿಗೆ ಆಗಮಿಸಲಿದ್ದಾರೆ."

ಪ್ಲವಗೇಶ್ವರನಾದ ಸುಗ್ರೀವನು ಕಪಿಶ್ರೇಷ್ಠರು ಹೇಳಿದ ಆ ಮಾತನ್ನು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಕೇಳಿ ಪರಮಸಂತುಷ್ಟನಾಗಿ ಅವರು ಭಕ್ತಿಯಿಂದೊಪ್ಪಿಸಿದ ಫಲ-ಮೂಲಗಳೇ ಮೊದಲಾದ ಕಾಣಿಕೆಗಳನ್ನು ಪ್ರೀತಿಯಿಂದ ಸ್ವೀಕರಿಸಿದನು.

೩೭ನೆಯ ಸರ್ಗವು ಮುಗಿಯಿತು.

ಕಿಷ್ಕಿಂಧಾಕಾಂಡ ೩೮ನೆಯ ಸರ್ಗ

## ಲಕ್ಷ್ಮಣನೊಡನೆ ಬಂದ ಸುಗ್ರೀವನನ್ನು ಶ್ರೀರಾಮನು ಸಮಾಧಾನಗೊಳಿಸಿದುದು : ಸೈನ್ಯಸಂಗ್ರಹಣೆಗಾಗಿ ಮಾಡಿರುವ ಅವನ ಪ್ರಯತ್ನವನ್ನು ಕೇಳಿ ಶ್ರೀರಾಮನು ಪ್ರಸನ್ನನಾದುದು

ಪ್ರತಿಗೃಹ್ಯ ಚ ತತ್ಸರ್ವಮುಪಾಯನಮುಪಾಹೃತಮ್ ।
ವಾನರಾನ್ಸಾನ್ತ್ವಯಿತ್ವಾ ಚ ಸರ್ವಾನೇವ ವ್ಯಸರ್ಜಯತ್ ॥೧॥

ಸುಗ್ರೀವನು ಕಪಿನಾಯಕರು ತಂದಿದ್ದ ಕಾಣಿಕೆಗಳನ್ನು ಸ್ವೀಕರಿಸಿ ಅವರೆಲ್ಲರನ್ನೂ ಸವಿಮಾತುಗಳಿಂದ ಸಂತೈಸಿ ಬೀಳ್ಕೊಟ್ಟನು.

ಕೃತಕೃತ್ಯರಾಗಿ ಬಂದ ಕಪಿಶ್ರೇಷ್ಠರನ್ನು ಕಳುಹಿಸಿಕೊಟ್ಟನಂತರ ಸುಗ್ರೀವನು, ತಾನು ಕೃತಾರ್ಥನಾದೆನೆಂದೂ ಶ್ರೀರಾಮನ ಕಾರ್ಯವೂ ಪೂರ್ಣವಾಯಿತೆಂದೂ ಭಾವಿಸಿದನು. ಲಕ್ಷ್ಮಣನು ಎಲ್ಲ ವಾನರರಿಗೂ ಶ್ರೇಷ್ಠನಾದ ಭೀಮಬಲನಾದಸುಗ್ರೀವನನ್ನು ಆನಂದಗೊಳಿಸುತ್ತಾ ವಿನಯಪೂರ್ವಕವಾಗಿ ಹೇಳಿದನು :

" ಸೌಮ್ಯನೇ ! ನಿನಗೆ ಉಚಿತವೆನಿಸಿದರೆ ನೀನೀಗಲೇ ಕಿಷ್ಕಿಂಧೆಯಿಂದ ಹೊರಡು."

ಲಕ್ಷ್ಮಣನ ಆ ಒಳ್ಳೆಯ ಮಾತನ್ನು ಕೇಳಿ ಪರಮಪ್ರೀತನಾದ ಸುಗ್ರೀವನು " ಲಕ್ಷ್ಮಣ ! ಹಾಗೆಯೇ ಆಗಲಿ ; ಇಬ್ಬರೂ ಹೊರಡೋಣ. ನಿನ್ನ ಆಜ್ಞೆಯಂತೆ ನಡೆದುಕೊಳ್ಳುವುದೇ ನನ್ನ ಕರ್ತವ್ಯವಾಗಿರುವುದು "– ಎಂದನು.

ಸುಗ್ರೀವನು ಲಕ್ಷ್ಮಣನಿಗೆ ಹೀಗೆ ಹೇಳಿ ತಾರೆಯನ್ನೂ ಉಳಿದ ಸ್ತ್ರೀಯರನ್ನೂ ಅರಮನೆಗೆ ಕಳುಹಿಸಿಕೊಟ್ಟನು.

ಬಳಿಕ ಸುಗ್ರೀವನು ಎಲ್ಲ ವಾನರರನ್ನೂ–' ಇತ್ತ ಬನ್ನಿರಿ '–ಎಂದು ಗಟ್ಟಿಯಾಗಿ ಕೂಗಿ ಕರೆದನು. ಅವನ ಆ ಮಾತನ್ನು ಕೇಳಿ ಎಲ್ಲ ವಾನರರೂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.


ಅವನ ಬಳಿಗೆ ಧಾವಿಸಿದರು. ಅಂತಃಪುರದ ಸ್ತ್ರೀಯರನ್ನು ನೋಡಲು ಕೂಡ ಅರ್ಹತೆಯನ್ನು ಹೊಂದಿದ್ದ ಆ ವಾನರರು ಕೈಮುಗಿದುಕೊಂಡು ತನ್ನ ಸಮೀಪಕ್ಕೆ ಬಂದುದನ್ನು ನೋಡಿ ಸೂರ್ಯನ ಪ್ರಭೆಗೆ ಸಮಾನವಾದ ಪ್ರಭೆಯಿಂದ ಬೆಳಗುತ್ತಿದ್ದ ಸುಗ್ರೀವನು ಹೇಳಿದನು :

" ವಾನರಪ್ರಮುಖರೇ ! ನೀವೆಲ್ಲರೂ ಈಗಲೇ ನನ್ನ ಪಲ್ಲಕ್ಕಿಯನ್ನು ಸಿದ್ಧಗೊಳಿಸಿರಿ."



ಸುಗ್ರೀವನ ಆ ಮಾತನ್ನು ಕೇಳಿದೊಡನೆಯೇ ಶೀಘ್ರವಾದ ನಡಿಗೆಯುಳ್ಳ ವಾನರರು ಬಹಳ ಸುಂದರವಾಗಿ ಕಾಣುತ್ತಿದ್ದ ಪಲ್ಲಕ್ಕಿಯನ್ನು ಸಿದ್ಧಗೊಳಿಸಿದರು. ಬಳಿಕ ಸುಗ್ರೀವನು ಲಕ್ಷ್ಮಣನಿಗೆ ಪಲ್ಲಕ್ಕಿಯಲ್ಲಿ ಕುಳಿತುಕೊಳ್ಳುವಂತೆ ಹೇಳಿದನು. ಸೂರ್ಯಸದೃಶವಾಗಿದ್ದ, ಸ್ವರ್ಣಮಯವಾದ ಪಲ್ಲಕ್ಕಿಯನ್ನು ಸುಗ್ರೀವ-ಲಕ್ಷ್ಮಣರು ಹತ್ತಿದರು. ಅನೇಕವಾನರಶ್ರೇಷ್ಠರು

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

ಆ ಪಲ್ಲಕ್ಕಿಯನ್ನು ಹೊತ್ತಿದ್ದರು. ಸುಗ್ರೀವನ ತಲೆಯ ಮೇಲೆ ಶ್ವೇತಚ್ಛತ್ರ
ವಿದ್ದಿತು. ವಾನರಸೇವಕರು ಪಲ್ಲಕ್ಕಿಯ ಸುತ್ತಲೂ ನಿಂತು ಚಾಮರ
ಗಳನ್ನು ಬೀಸುತ್ತಿದ್ದರು. ವಂದಿ-ಮಾಗಧರು ವಾನರರಾಜನನ್ನು ನಾನಾವಿಧ
ವಾಗಿ ಸ್ತೋತ್ರಮಾಡುತ್ತಿದ್ದರು. ಪಲ್ಲಕ್ಕಿಯ ಮುಂಭಾಗದಲ್ಲಿ ಶಂಖ-ಭೇರಿಗಳ
ನಿನಾದವಾಗುತ್ತಿದ್ದಿತು. ಹೀಗೆ ಶ್ರೇಷ್ಠವಾದ ರಾಜಮರ್ಯಾದೆಯೊಡನೆ
ಸುಗ್ರೀವ-ಲಕ್ಷ್ಮಣರು ಪಲ್ಲಕ್ಕಿಯಲ್ಲಿ ಹೊರಟರು. ಶಸ್ತ್ರಗಳನ್ನು ಹಿಡಿದಿದ್ದ
ತೀಕ್ಷ್ಣರಾದ ನೂರಾರು ಕಪಿವೀರರಿಂದ ಸಮಾವೃತನಾಗಿದ್ದ ಸುಗ್ರೀವನು
ಲಕ್ಷ್ಮಣನೊಡನೆ ಶ್ರೀರಾಮನಿದ್ದೆಡೆಗೆ ಪ್ರಯಾಣಮಾಡಿದನು. ಶ್ರೀರಾಮ
ನಿಂದ ಸೇವಿತವಾಗಿದ್ದ ಪರಮಪವಿತ್ರವಾದ ಆ ಪ್ರದೇಶಕ್ಕೆ ಹೋದೊಡನೆಯೇ
ಸುಗ್ರೀವನು ಲಕ್ಷ್ಮಣನೊಡನೆ ಪಲ್ಲಕ್ಕಿಯಿಂದ ಕೆಳಗಿಳಿದನು. ರಾಮನ
ಸನ್ನಿಧಿಗೆ ಬಂದ ಸುಗ್ರೀವನು ಕೈಮುಗಿದು ನಿಂತುಕೊಳ್ಳಲು, ಎಲ್ಲ ವಾನರರೂ
ತಮ್ಮ ರಾಜನಂತೆಯೇ ಕೈಮುಗಿದುಕೊಂಡು ವಿನೀತರಾಗಿ ಶ್ರೀರಾಮನ
ಸುತ್ತಲೂ ನಿಂತರು. ಕಮಲದ ಮೊಗ್ಗುಗಳಿಂದ ಕೂಡಿರುವ ಸರೋವರ
ದಂತೆಯೇ ಕಾಣುತ್ತಿದ್ದ ಅಂಜಲಿಪುಟಗಳಿಂದ ಕೂಡಿದ್ದ ಆ ವಾನರಮಹಾ
ಸೈನ್ಯವನ್ನು ನೋಡಿ ಶ್ರೀರಾಮನು ಸುಗ್ರೀವನ ವಿಷಯದಲ್ಲಿ ಪರಮಪ್ರೀತ
ನಾದನು.

ಶ್ರೀರಾಮನು–ಪಾದಪದ್ಮಗಳಲ್ಲಿ ತಲೆಯನ್ನಿಟ್ಟು ನಮಸ್ಕರಿಸುತ್ತಿದ್ದ
ಸುಗ್ರೀವನನ್ನು ಎರಡು ಕೈಗಳಿಂದಲೂ ಮೇಲೆತ್ತಿ ಪ್ರೇಮದಿಂದಲೂ ಅವ
ನನ್ನು ಗೌರವಿಸುವ ಸಲುವಾಗಿಯೂ ಗಾಢವಾಗಿ ಆಲಿಂಗಿಸಿಕೊಂಡನು.
ಬಳಿಕ ರಾಮನು ಸುಗ್ರೀವನಿಗೆ ಕುಳಿತುಕೊಳ್ಳುವಂತೆ ಹೇಳಿದನು. ತನ್ನ
ಮಾತಿನಂತೆ ನೆಲದ ಮೇಲೆ ಕುಳಿತ ಅವನಿಗೆ ಶ್ರೀರಾಮನು ಹೇಳಿದನು:

ಧರ್ಮಮರ್ಥಂ ಚ ಕಾಮಂ ಚ ಕಾಲೇ ಯಸ್ತು ನಿಷೇವತೇ ।
ವಿಭಜ್ಯ ಸತತಂ ವೀರ ಸ ರಾಜಾ ಹರಿಸತ್ತಮ ॥೨೦॥

"ಕಪಿಶ್ರೇಷ್ಠನೇ! ವೀರನೇ! ಯಾವನು ಧರ್ಮವನ್ನು ಆಚರಿಸ
ಬೇಕಾದ, ಅರ್ಥವನ್ನು ಸಂಗ್ರಹಿಸಬೇಕಾದ, ಕಾಮವನ್ನು ಉಪಭೋಗಿಸ
ಬೇಕಾದ ಕಾಲಗಳನ್ನು ತಿಳಿದು ಅದನ್ನು ಯಥಾಯೋಗ್ಯವಾಗಿ ವಿಭಾಗಮಾಡಿ
ಧರ್ಮ-ಅರ್ಥ-ಕಾಮಗಳನ್ನು ಸತತವಾಗಿ ಸೇವಿಸುವನೋ–ಅವನೇ ರಾಜ
ನೆನಿಸಿಕೊಳ್ಳುವನು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಹಿತ್ವಾ ಧರ್ಮಂ ತಥಾರ್ಥಂ ಚ ಕಾಮಂ ಯಸ್ತು ನಿಷೇವತೇ ।
ಸ ವೃಕ್ಷಾಗ್ರೇ ಯಥಾ ಸುಪ್ತಃ ಪತಿತಃ ಪ್ರತಿಬುಧ್ಯತೇ ॥೨೦॥

ಧರ್ಮವನ್ನೂ ಅರ್ಥವನ್ನೂ ಬಿಟ್ಟು ಕಾಮದಲ್ಲಿಯೇ ಆಸಕ್ತನಾಗಿರುವವನು-ಮರದ ಮೇಲೆ ಮಲಗಿ ನಿದ್ರಿಸುವವನು ಎಚ್ಚರದಪ್ಪಿ ಕೆಳಕ್ಕೆ ಬೀಳುವಂತೆ-ಪತಿತನಾಗುತ್ತಾನೆ.*

ಅಮಿತ್ರಾಣಾಂ ವಧೇ ಯುಕ್ತೋ ಮಿತ್ರಾಣಾಂ ಸಂಗ್ರಹೇ ರತಃ ।
ತ್ರಿವರ್ಗಫಲಭೋಕ್ತಾ ತು ರಾಜಾ ಧರ್ಮೇಣ ಯುಜ್ಯತೇ ॥೨೧॥

ಶತ್ರುಗಳ ವಧೆಯಲ್ಲಿ ನಿರತನಾದ, ಮಿತ್ರನನ್ನು ಸೇರಿಸಿಕೊಳ್ಳುವುದರಲ್ಲಿ ಆಸಕ್ತನಾಗಿರುವ, ಧರ್ಮಾರ್ಥ-ಕಾಮಗಳನ್ನು ಯಥಾಯೋಗ್ಯವಾದ ಕಾಲದಲ್ಲಿ ಉಪಭೋಗಿಸುವ ರಾಜನು ರಾಜಧರ್ಮದಿಂದ ಸಂಪನ್ನನಾಗುತ್ತಾನೆ.

ಸುಗ್ರೀವ! ಕಾರ್ಯವನ್ನು ಮಾಡಬೇಕಾದ ಕಾಲವೀಗ ಸನ್ನಿಹಿತವಾಗಿದೆ. ಕಪಿಮುಖ್ಯರೊಡನೆಯೂ ಮತ್ತು ಮಂತ್ರಿಗಳೊಡನೆಯೂ ಸೇರಿ ಕಾರ್ಯದ ವಿಧಾನವನ್ನು ಸಮಾಲೋಚಿಸು."

ಶ್ರೀರಾಮನು ಹೀಗೆ ಹೇಳಲು ಸುಗ್ರೀವನು ಯಥಾಯೋಗ್ಯವಾಗಿ ಉತ್ತರಿಸಿದನು:

"ಮಹಾಬಾಹುವೇ! ರಾಘವ! ನನ್ನ ಸಂಪತ್ತು-ಕೀರ್ತಿಗಳು ಹಾಳಾಗಿದ್ದುವು. ಶಾಶ್ವತವಾದ ರಾಜ್ಯವೂ ಕೈಬಿಟ್ಟುಹೋಗಿದ್ದಿತು. ನಿನ್ನ ಅನುಗ್ರಹದಿಂದಲೇ ಎಲ್ಲವೂ ಪುನಃ ನನಗೆ ಲಭಿಸಿವೆ. ನಿನ್ನ ಮತ್ತು ನಿನ್ನ ತಮ್ಮನಾದ ಲಕ್ಷ್ಮಣನ ಅನುಗ್ರಹದಿಂದಾಗಿ ಈ ಎಲ್ಲವನ್ನೂ ಪುನಃ ನಾನು ಪಡೆದುಕೊಂಡೆನು. ಕೃತಂ ನ ಪ್ರತಿಕುರ್ಯಾದ್ಯಃ ಪುರುಷಾಣಾಂ ಸ ದೂಷಕಃ ॥ ಮಾಡಿದ ಉಪಕಾರಕ್ಕೆ ಪ್ರತ್ಯುಪಕಾರವನ್ನು ಮಾಡದಿರುವವನು ಮನುಷ್ಯರಲ್ಲಿ ಅಧಮನೇ ಸರಿ. ಬಲಿಷ್ಠರಾದ ನೂರಾರು ವಾನರಮುಖ್ಯರು ಪೃಥ್ವಿಯಲ್ಲಿರುವ ಎಲ್ಲ ವಾನರರನ್ನೂ ಇಲ್ಲಿಗೆ ಕರೆತಂದಿರುತ್ತಾರೆ. ಕಾಂತಾರ-ವನ-ದುರ್ಗಪ್ರದೇಶಗಳನ್ನು ಚೆನ್ನಾಗಿ ತಿಳಿದಿರುವ, ಭಯಂಕರವಾಗಿ ಕಾಣುವ ಋಕ್ಷರೂ (ಕರಡಿಗಳೂ), ವಾನರರೂ ಹಸುವಿನ ಬಾಲದಂತೆ ಬಾಲಗಳನ್ನು

*ಧರ್ಮಾರ್ಥಗಳಿಲ್ಲದ ಕಾಮವು ಪತನಕ್ಕೆ ಕಾರಣವಾಗುತ್ತದೆ. ಮರದ ಮೇಲೆ ಮಲಗಿ ನಿದ್ರಿಸುತ್ತಿರುವವನು ಅವಲಂಬನೆಯಿಲ್ಲದೇ ಕೆಳಕ್ಕೆ ಬೀಳುವಂತೆ-ಕಾಮಾಸಕ್ತನು ಧರ್ಮಾರ್ಥಗಳ ಅವಲಂಬನೆಯಿಲ್ಲದೇ ಪತಿತನಾಗುತ್ತಾನೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಧರಿಸಿರುವ ವಾನರರೂ ಅಪರಿಮಿತಸಂಖ್ಯೆಯಲ್ಲಿ ಆಗಮಿಸಿರುತ್ತಾರೆ. ದೇವ-ಗಂಧರ್ವರ ಮಕ್ಕಳಾದ, ಕಾಮರೂಪಿಗಳಾದ ಅನೇಕ ವಾನರರು ತಮ್ಮ-ತಮ್ಮ ಸೈನ್ಯಗಳೊಡನೆ ಹಾದಿಯಲ್ಲಿ ಬರುತ್ತಿದ್ದಾರೆ. ಅವರಲ್ಲಿ ಕೆಲವು ಕಪಿ ಮುಖ್ಯರು ನೂರು ವಾನರರಿಂದ ಸಮಾವೃತರಾಗಿ ಬರುತ್ತಿದ್ದಾರೆ. ಕೆಲವರು ಸಾವಿರ ಕಪಿಗಳಿಂದಲೂ, ಕೆಲವರು ಲಕ್ಷಕಪಿಗಳಿಂದಲೂ, ಕೆಲವರು ಕೋಟಿ ಕಪಿವೀರರಿಂದಲೂ, ಕೆಲವರು ಹತ್ತು ಕೋಟಿ ಕಪಿವೀರರಿಂದಲೂ, ಕೆಲವರು ಲಕ್ಷಕೋಟಿ ( ಶಂಕು ) ಕಪಿವೀರರಿಂದಲೂ ಸಮಾವೃತರಾಗಿ ಬಂದಿರುತ್ತಾರೆ. ಕೆಲವು ಕಪಿವೀರರ ಹಿಂಬದಿಯಲ್ಲಿ ಅರ್ಬುದ ಸಂಖ್ಯೆಯ ಕಪಿವೀರರಿದ್ದಾರೆ. ಮತ್ತೆ ಕೆಲವರ ಹಿಂಬದಿಯಲ್ಲಿ ನೂರು ಅರ್ಬುದಸಂಖ್ಯೆಯ ಕಪಿವೀರರಿದ್ದಾರೆ. ಕೆಲವರು ಮಧ್ಯಸಂಖ್ಯೆಯ ಕಪಿವೀರರಿಂದಲೂ, ಕೆಲವರು ಅಂತ್ಯ ಸಂಖ್ಯೆಯ ಕಪಿವೀರರಿಂದ ಸಮಾವೃತರಾಗಿ ಬರುತ್ತಿದ್ದಾರೆ. ಹೀಗೆ ಹರಿ ಪ್ರಮುಖರು ಸಮುದ್ರ-ಪರಾರ್ಧಸಂಖ್ಯಾತರಾಗಿದ್ದಾರೆ.* ಮೇರು-ವಿಂಧ್ಯ ಪರ್ವತಗಳಲ್ಲಿ ವಾಸಮಾಡುತ್ತಿರುವ, ಮೇರು-ಮಂದರಸದೃಶರಾದ, ಮಹೇಂದ್ರನ ಪರಾಕ್ರಮಕ್ಕೆ ಅನುರೂಪವಾದ ಪರಾಕ್ರಮವನ್ನು ಹೊಂದಿರುವ ಕಪಿಶ್ರೇಷ್ಠರೆಲ್ಲರೂ ಇಷ್ಟರಲ್ಲಿಯೇ ಇಲ್ಲಿಗೆ ಆಗಮಿಸುತ್ತಾರೆ. ಅವರೆಲ್ಲರೂ ಸಬಾಂಧವನಾದ ರಾವಣನೊಡನೆ ಯುಧ್ಧಮಾಡುವ ಸಲುವಾಗಿಯೇ ಇಲ್ಲಿಗೆ ಬರುತ್ತಿದ್ದಾರೆ. ಯುದ್ಧದಲ್ಲಿ ರಾವಣನನ್ನು ಸಂಹರಿಸಿ ಮೈಥಿಲಿಯನ್ನು ನಿನ್ನ ಬಳಿಗೆ ಕರೆತರುತ್ತಾರೆ."

ಹೀಗೆ ಸುಗ್ರೀವನು ತನ್ನ ಕಾರ್ಯವಿಧಾನವನ್ನು ವಿವರಿಸಿ ಹೇಳಲು ಶ್ರೀರಾಮನು ತನ್ನ ಆಜ್ಞಾನುವರ್ತಿಯಾಗಿದ್ದ ಸುಗ್ರೀವನ ಕಾರ್ಯಚಟುವಟಿಕೆಯನ್ನು ನೋಡಿ ಹರ್ಷಗೊಂಡನು. ವಿಕಸಿತವಾದ ನೀಲಕಮಲವು ಸುಂದರವಾಗಿ ಕಾಣುವಂತೆ–ಆ ಸಮಯದಲ್ಲಿ ಶ್ರೀರಾಮನು ಬಹಳ ಸುಂದರವಾಗಿ ಕಾಣುತ್ತಿದ್ದನು. ಸಂತೋಷದಿಂದ ಅವನ ಮುಖಕಮಲವು ಅರಳಿತು.

ಇ೮ನೆಯ ಸರ್ಗವು ಮುಗಿಯಿತು.

---

*ನಮ್ಮಲ್ಲಿನ ಸಂಖ್ಯಾಗಣನೆಯು ಹೀಗಿದೆ: ಏಕ=ಒಂದು, ಹತ್ತು ಒಂದುಗಳು=ಒಂದು ದಶ, ಹತ್ತು ದಶಗಳು=ಒಂದು ಶತ, ಹತ್ತು ಶತಗಳು=ಒಂದು ಸಹಸ್ರ, ಹತ್ತು ಸಹಸ್ರಗಳು=ಒಂದು ಆಯುತ, ಹತ್ತು ಅಯುತಗಳು=ಒಂದು ಲಕ್ಷ, ಹತ್ತು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಶ್ರೀರಾಮನು ಸುಗ್ರೀವನಿಗೆ ಕೃತಜ್ಞತೆಯನ್ನು ಸೂಚಿಸಿದುದು :
ನಾನಾಕಡೆಗಳಿಂದ ಸೈನ್ಯಸಮೇತರಾದ ಸೇನಾನಾಯಕರ ಆಗಮನ

ಇತಿ ಬ್ರುವಾಣಂ ಸುಗ್ರೀವಂ ರಾಮೋ ಧರ್ಮಭೃತಾಂ ವರಃ ।
ಬಾಹುಭ್ಯಾಂ ಸಂಪರಿಷ್ವಜ್ಯ ಪ್ರತ್ಯುವಾಚ ಕೃತಾಞ್ಜಲಿವ್ ॥೧॥

ಧರ್ಮಾತ್ಮರಲ್ಲಿ ಶ್ರೇಷ್ಠನಾದ ಶ್ರೀರಾಮನು ಕೈಮುಗಿದುಕೊಂಡು ನಿಂತಿದ್ದ ಸುಗ್ರೀವನನ್ನು ತನ್ನೆರಡು ತೋಳುಗಳಿಂದಲೂ ಗಾಢವಾಗಿ ಆಲಿಂಗಿಸಿಕೊಂಡು ಹೇಳಿದನು :

ಯದಿನ್ದ್ರೋ ವರ್ಷತೇ ವರ್ಷಂ ನ ತಚ್ಚಿತ್ರಂ ಭವೇತ್ಕ್ವಚಿತ್ ।
ಆದಿತ್ಯೋ ವಾ ಸಹಸ್ರಾಂಶುಃ ಕುರ್ಯಾದ್ವಿತಿಮಿರಂ ನಭಃ ॥೨॥
ಚನ್ದ್ರಮಾ ರಜನೀಂ ಕುರ್ಯಾತ್ಪ್ರಭಯಾ ಸೌಮ್ಯ ನಿರ್ಮಲಾವ್।
ತ್ವದ್ವಿಧೋ ವಾಪಿ ಮಿತ್ರಾಣಾಂ ಪ್ರೀತಿಂ ಕುರ್ಯಾತ್ಪರಂತಪ ॥೩॥

" ಸುಗ್ರೀವ ! ಇಂದ್ರನು ಮಳೆಗರೆಯುವನೆಂಬುದು ಎಲ್ಲಿಯೂ ವಿಚಿತ್ರದ ಸಂಗತಿಯಾಗುವುದಿಲ್ಲ. ಹಾಗೆಯೇ ಸಹಸ್ರಕಿರಣನಾದ ಸೂರ್ಯನೂ ಅಂತರಿಕ್ಷವನ್ನು ಅಂಧಕಾರವಿಲ್ಲದಂತೆ ಮಾಡುವುದರಲ್ಲಿಯೂ ಯಾವ ಆಶ್ಚರ್ಯವೂ ಕಾಣುವುದಿಲ್ಲ. ಚಂದ್ರನು ತನ್ನ ಕಿರಣಗಳಿಂದ ರಾತ್ರಿಯನ್ನು ನಿರ್ಮಲವನ್ನಾಗಿ ಮಾಡುವನೆಂಬುದರಲ್ಲಿಯೂ ಅತಿಶಯವೇನಿಲ್ಲ. ಇವೆಲ್ಲವೂ ಇಂದ್ರ-ಸೂರ್ಯ-ಚಂದ್ರರ ಸ್ವಭಾವಗುಣಗಳೇ ಆಗಿವೆ. ಅದೇ ರೀತಿಯಲ್ಲಿ ನಿನ್ನಂತಹವರು ತಮ್ಮ ಮಿತ್ರರಿಗೆ ಪ್ರೀತಿಯನ್ನುಂಟುಮಾಡುವ ಕಾರ್ಯವನ್ನು ಸ್ವಾಭಾವಿಕವಾಗಿಯೇ ಮಾಡುತ್ತಾರೆ. ಆದುದರಿಂದ ನೀನು ನಿನ್ನ ಮಿತ್ರನ ಸಲುವಾಗಿ ಅಪಾರಸೈನ್ಯವನ್ನು ಸಂಗ್ರಹಿಸಿರುವುದರಲ್ಲಿ ಯಾವ ಆಶ್ಚರಿಯೂ ಇಲ್ಲ.

ಲಕ್ಷಗಳು= ಒಂದು ಪ್ರಯುತ, ಹತ್ತು ಪ್ರಯುತಗಳು= ಒಂದು ಕೋಟಿ, ಹತ್ತು ಕೋಟಿಗಳು= ಒಂದು ಅರ್ಬುದ, ಹತ್ತು ಅರ್ಬುದಗಳು= ಒಂದು ಅಬ್ಜ, ಹತ್ತು ಅಬ್ಜಗಳು= ಒಂದು ಖರ್ವ, ಹತ್ತು ಖರ್ವಗಳು= ಒಂದು ನಿಖರ್ವ, ಹತ್ತು ನಿಖರ್ವಗಳು= ಒಂದು ಮಹಾಪದ್ಮ, ಹತ್ತು ಮಹಾಪದ್ಮಗಳು= ಒಂದು ಶಂಕು, ಹತ್ತು ಶಂಕುಗಳು= ಒಂದು ಜಲಧಿ, ಹತ್ತು ಜಲಧಿಗಳು= ಒಂದು ಅಂತ್ಯ, ಹತ್ತು ಅಂತ್ಯಗಳು= ಒಂದು ಮಧ್ಯ, ಹತ್ತು ಮಧ್ಯಗಳು= ಒಂದು ಪರಾರ್ಧ ( ನಾರದ ಪುರಾಣ )

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ನಿನ್ನ ಸ್ವಾಭಾವಿಕವಾದ ಗುಣದಿಂದಲೇ ನೀನು ಹೀಗೆ ಮಾಡಿರುವೆ. ನೀನು ಯಾವಾಗಲೂ ಮಿತ್ರರ ವಿಷಯದಲ್ಲಿ ಪ್ರಿಯವಾದ ಮಾತುಗಳನ್ನೇ ಆಡುವೆ ಯೆಂಬುದನ್ನು ನಾನು ಬಲ್ಲೆನು. ನಿಶ್ಚಯವಾಗಿಯೂ ನಾನು ನಿನ್ನಿಂದ ಸನಾಥನಾಗಿರುವೆನು. ನಿನ್ನನ್ನು ನಾಥನನ್ನಾಗಿ ಹೊಂದಿರುವ ನಾನು ಯುದ್ಧ ದಲ್ಲಿ ಎಲ್ಲ ಶತ್ರುಗಳನ್ನೂ ಜಯಿಸುತ್ತೇನೆ. ನೀನೇ ನನಗೆ ಒಳ್ಳೆಯ ಮನಸ್ಸಿ ನಿಂದ ಕೂಡಿರುವ ಮಿತ್ರನಾಗಿರುವೆ. ಆದುದರಿಂದ ನೀನು ಈ ಸಮಯದಲ್ಲಿ ನನಗೆ ಸಹಾಯವನ್ನೆಸಗಲು ಯೋಗ್ಯನಾಗಿರುವೆ. ಅನುಹ್ಲಾದನು ಹೇಗೆ ಶಚಿಯನ್ನು ಅಪಹರಿಸಿ ಆತ್ಮವಿನಾಶಕ್ಕೆ ಕಾರಣನಾದನೋ – ಹಾಗೆಯೇ ರಾವಣನು ಸೀತೆಯನ್ನು ವಂಚಿಸಿ ಕದ್ದೊಯ್ದು ತನ್ನ ವಿನಾಶಕ್ಕೆ ತಾನೇ ಕಾರಣನಾಗಿದ್ದಾನೆ.* ಶಚೀದೇವಿಯ ತಂದೆಯಾದ, ಮದದಿಂದ ಕೊಬ್ಬಿದ್ದ ಪುಲೋಮರಾಕ್ಷಸನನ್ನು ಯುದ್ಧದಲ್ಲಿ ಶತಕ್ರತುವಾದ ಇಂದ್ರನು ಸಂಹರಿಸಿ ದಂತೆ ನಾನು ರಾವಣನನ್ನೂ ನಿಶಿತವಾದ ಬಾಣಗಳಿಂದ ಅತ್ಯಲ್ಪಕಾಲ ದಲ್ಲಿಯೇ ಸಂಹಾರಮಾಡುತ್ತೇನೆ."

ಶ್ರೀರಾಮ-ಸುಗ್ರೀವರು ಹೀಗೆ ಮಾತನಾಡುತ್ತಿದ್ದಾಗ ಸಹಸ್ರಾಂಶು ವಾದ ಸೂರ್ಯನ ಉಷ್ಣವಾಗಿಯೂ ಮತ್ತು ಪ್ರಖರವಾಗಿಯೂ ಇದ್ದ ಪ್ರಭೆ ಯನ್ನೂ ಮುಚ್ಚುವಂತಹ ಧೂಳು ಸರ್ವತ್ರ ವ್ಯಾಪಿಸಿಕೊಂಡಿತು. ಹಾಗೆ ಹುಟ್ಟಿದ ಧೂಳಿನಿಂದ ಎಲ್ಲ ದಿಕ್ಕುಗಳಲ್ಲಿಯೂ ಕತ್ತಲು ಕವಿಯಿತು. ಅದೇ ಸಮಯದಲ್ಲಿ ಶೈಲ-ವನ-ಕಾನನಗಳಿಂದ ಕೂಡಿರುವ ಭೂಮಿಯೂ ನಡುಗಿತು. ಸ್ವಲ್ಪಹೊತ್ತಿನಲ್ಲಿಯೇ ಪರ್ವತೋಪಮರಾದ, ಹರಿತವಾದ ಕೋರೆಹಲ್ಲು ಗಳನ್ನು ಹೊಂದಿದ್ದ, ಮಹಾಬಲರಾದ ಅಸಂಖ್ಯಾತ ಕಪಿಶ್ರೇಷ್ಠರಿಂದ ಅಖಂಡ ಭೂಮಂಡಲವೂ ತುಂಬಿಹೋಯಿತು. ನಿಮಿಷಮಾತ್ರದಲ್ಲಿ ನದೀತೀರಗಳಲ್ಲಿ, ಪರ್ವತಪ್ರದೇಶಗಳಲ್ಲಿ, ಸಮುದ್ರದ ತೀರಪ್ರದೇಶಗಳಲ್ಲಿ ವಾಸಮಾಡುತ್ತಿದ್ದ ಮಹಾಬಲರಾದ ಮೇಘದಂತೆಯೇ ಗರ್ಜನೆಮಾಡುತ್ತಿದ್ದ ಕಪೀಶ್ವರರಿಂದಲೂ,

*ಅನುಹ್ಲಾದನೆಂಬ ರಾಕ್ಷಸನು ಪುಲೋಮನೆಂಬ ರಾಕ್ಷಸನ ಅನುಮತಿಯನ್ನು ಪಡೆದು ಆವನ ಮಗಳಾದ ಶಚಿಯನ್ನು ಅಪಹರಿಸಿಕೊಂಡು ಹೋದನೆಂದೂ, ಅದನ್ನು ತಿಳಿದ ಇಂದ್ರನು ಅಪಹರಣಕ್ಕೆ ಅನುಮತಿಸಿದ ಪುಲೋಮರಾಕ್ಷಸನನ್ನೂ ಮತ್ತು ಅನುಹ್ಲಾದ ನನ್ನೂ ಸಂಹರಿಸಿ ಶಚೀದೇವಿಯನ್ನು ಮದುವೆಯಾದನೆಂದೂ ಪುರಾಣಕಥೆಯಿದೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

ವನವಾಸಿಗಳಾದ ಬಾಲಸೂರ್ಯನ ಬಣ್ಣದಿಂದ ಕೂಡಿದ್ದ ಕಪಿಮುಖ್ಯರಿಂದಲೂ, ಚಂದ್ರನಂತೆ ಬೆಳ್ಳಗಿದ್ದ ಕಪಿಗಳಿಂದಲೂ, ಪದ್ಮದ ಕುಸುರಿನ ಬಣ್ಣವಿದ್ದ ಕಪಿಗಳಿಂಧಲೂ, ಮೇರುಪರ್ವತದಲ್ಲಿ ವಾಸವಾಗಿದ್ದ ಶ್ವೇತಕಪಿಗಳಿಂದಲೂ ಆ ಭೂಭಾಗವೆಲ್ಲವೂ ತುಂಬಿಹೋಯಿತು. ಇಂತಹ ಹತ್ತು ಸಾವಿರ ಕೋಟಿಯನ್ನೂ ಮೀರಿದ್ದ ವಾನರಶ್ರೇಷ್ಠರಿಂದ ಪರಿವೃತನಾಗಿದ್ದ ಶ್ರೀಮಂತನಾದ ಶತಬಲಿ-ಎಂಬ ಹೆಸರಿನ ವಾನರನು ಅಲ್ಲಿ ಕಾಣಿಸಿಕೊಂಡನು. ಮೇರುಪರ್ವತದ ಕಾಂತಿಯನ್ನು ಹೊಂದಿದ್ದ, ವೀರ್ಯವಂತನಾದ, ತಾರೆಯ ತಂದೆಯಾದ ಸುಷೇಣನು ಅನೇಕಸಹಸ್ರಕೋಟಿ ವಾನರರೊಡನೆ ಅಲ್ಲಿಗೆ ಬಂದನು. ಅದೇ ರೀತಿಯಲ್ಲಿ ರುಮೆಯ ತಂದೆಯಾದ, ಸುಗ್ರೀವನ ಮಾವನಾದ ವಿಭುವಾದ ತಾರನು ಸಾವಿರ ಕೋಟಿ ವಾನರರೊಡನೆ ಅಲ್ಲಿಗೆ ಆಗಮಿಸಿದನು. ತಾವರೆಯ ಕುಸುರಿನ ಕಾಂತಿಯನ್ನು ಹೊಂದಿದ್ದ, ಬಾಲಸೂರ್ಯನಿಗೆ ಸದೃಶವಾದ ಮುಖವನ್ನು ಹೊಂದಿದ್ದ, ಬುದ್ಧಿವಂತನಾದ, ಎಲ್ಲ ವಾನರರಿಗೂ ಶ್ರೇಷ್ಠನಾದ ಹನುಮಂತನ ತಂದೆಯಾದ, ಶ್ರೀಮಂತನಾದ ಕೇಸರಿಯು ಅನೇಕ ಸಾವಿರ ವಾನರರಿಂದ ಕೂಡಿ ಅಲ್ಲಿಗೆ ಆಗಮಿಸಿದನು. ಗೋಲಾಂಗೂಲಗಳೆಂಬ ವಾನರಜಾತಿಗೆ ರಾಜನಾದ ಭಯಂಕರಪರಾಕ್ರಮನಾದ ಗವಾಕ್ಷನು ಸಾವಿರ ಕೋಟಿ ಸಂಖ್ಯಾತರಾದ ವಾನರರಿಂದ ಪರಿವೃತವಾಗಿ ಅಲ್ಲಿ ಕಾಣಿಸಿಕೊಂಡನು. ಭಯಂಕರವೇಗಶಾಲಿಗಳಾದ, ಮಹಾಪರಾಕ್ರಮಿಗಳಾದ ಕರಡಿಗಳ ನಾಯಕನಾದ ಶತ್ರುನಾಶಕನಾದ ಧೂಮ್ರನು ಎರಡು ಸಾವಿರ ಕೋಟಿ ಕರಡಿಗಳಿಂದ ಕೂಡಿಕೊಂಡು ಅಲ್ಲಿಗೆ ಆಗಮಿಸಿದನು. ಮಹಾವೀರ್ಯನಾದ ಪನಸನೆಂಬ ದಂಡನಾಯಕನು ಮಹಾಪರ್ವತೋಪಮರಾದ, ಸುಘೋರರಾದ ಮೂರುಕೋಟಿ ವಾನರರೊಡನೆ ಅಲ್ಲಿಗೆ ಆಗಮಿಸಿದನು. ಕಾಡಿಗೆಯ ರಾಶಿಯಂತೆ ಆಕಾರವುಳ್ಳವನಾಗಿದ್ದ, ಮಹಾಕಾಯನಾಗಿದ್ದ ನೀಲನೆಂಬ ಹೆಸರಿನ ದಂಡನಾಯಕನು ಹತ್ತು ಕೋಟಿ ವಾನರಸೈನಿಕರಿಂದ ಸಮಾವೃತನಾಗಿ ಬಂದನು. ಮೇರುಪರ್ವತಸದೃಶನಾಗಿದ್ದ ಮಹಾವೀರ್ಯನಾದ ಗಯನೆಂಬ ದಂಡನಾಯಕನು ಐದು ಕೋಟಿ ವಾನರರೊಡನೆ ಆಗಮಿಸಿದನು. ಬಲಿಷ್ಠನಾದ ದರೀಮುಖನೆಂಬ ದಂಡನಾಯಕನು ಒಂದುಸಾವಿರ ಕೋಟಿ ವಾನರರೊಡನೆ ಸುಗ್ರೀವನಿದ್ದಲ್ಲಿಗೆ ಬಂದು ಸೇರಿದನು. ಮಹಾಬಲರಾದ ಅಶ್ವಿನೀಪುತ್ರರಾದ ಮೈಂದ-ದ್ವಿವಿದರು ಕೋಟಿ-ಕೋಟಿ ಸಹಸ್ರವಾನರರಿಂದ ಸಮಾ

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

ವೃತರಾಗಿ ಆಗಮಿಸಿದರು. ಮಹಾಬಲಿಷ್ಠನಾದ, ವೀರನಾದ, ಮಹಾತೇಜಸ್ವಿಯಾದ ಗಜನೆಂಬ ದಂಡನಾಯಕನು ಮೂರುಕೋಟಿ ವಾನರರಿಂದ ಸಮಾವೃತನಾಗಿ ಸುಗ್ರೀವನ ಬಳಿಗೆ ಬಂದನು. ಮಹಾತೇಜಸ್ವಿಯಾದ ಜಾಂಬವಂತನೆಂಬ ಹೆಸರಿನ ಕರಡಿಗಳ ರಾಜನು ಹತ್ತುಕೋಟಿ ಸೈನಿಕರೊಡನೆ ಸುಗ್ರೀವನ ಬಳಿಗೆ ಬಂದನು. ತೇಜಸ್ವಿಯಾದ, ಮಹಾಬಲಿಷ್ಠನಾದ ರುಮಣ್ವಂತನು ಮಹಾಪರಾಕ್ರಮಿಗಳಾದ ನೂರುಕೋಟಿ ವಾನರರಿಂದ ಸಮಾವೃತನಾಗಿ ಸುಗ್ರೀವನ ಬಳಿಗೆ ಬಂದನು. ಅವನ ಹಿಂದೆಯೇ ಗಂಧಮಾದನನೆಂಬ ಕಪಿನಾಯಕನು ಕೋಟಿ-ಕೋಟಿಸಹಸ್ರಸಂಖ್ಯಾತರಾದ ಕಪಿಗಳೊಡನೆ ಅಲ್ಲಿಗೆ ಆಗಮಿಸಿದನು. ತಂದೆಗೆ ಸದೃಶವಾದ ಪರಾಕ್ರಮವನ್ನು ಹೊಂದಿದ್ದ ಅಂಗದನು ಸಹಸ್ರಪದ್ಮಸಂಖ್ಯಾತರಾದ ಮತ್ತು ಶತಶಂಕುಸಂಖ್ಯಾತರಾದ ವಾನರರಿಂದೊಡಗೂಡಿ ಸುಗ್ರೀವನ ಬಳಿಗೆ ಬಂದನು. ನಕ್ಷತ್ರಗಳ ಕಾಂತಿಯಂತೆ ಕಾಂತಿಯುಳ್ಳವನಾಗಿದ್ದ ತಾರನು ಭಯಂಕರಪರಾಕ್ರಮಿಗಳಾದ ಐದುಕೋಟಿ ಕಪಿವೀರರಿಂದ ಸಮಾವೃತನಾಗಿ ದೂರದಲ್ಲಿ ಬರುತ್ತಿರುವುದು ಕಂಡುಬಂದಿತು. ವೀರನಾದ, ಕಪಿನಾಯಕನಾದ, ಹನ್ನೊಂದುಕೋಟಿ ಕಪಿವೀರರಿಗೆ ಒಡೆಯನಾದ ಇಂದ್ರಜಾನುವು ತನ್ನ ಅಪಾರವಾದ ಸೈನಿಕರಿಂದ ಸಮಾವೃತನಾಗಿ ಬರುತ್ತಿರುವುದು ಕಂಡುಬಂದಿತು. ಬಾಲಸೂರ್ಯಸದೃಶನಾಗಿದ್ದ ರಂಭನೆಂಬ ವಾನರಶ್ರೇಷ್ಠನು ನೂರುಕೋಟಿ ವಾನರರಿಂದ ಸಮಾವೃತನಾಗಿ ಸುಗ್ರೀವನ ಬಳಿಗೆ ಬಂದನು. ಯೂಥಪತಿಯಾದ, ಬಲಿಷ್ಠನಾದ, ಮಹಾವೀರನಾದ ದುರ್ಮುಖನೆಂಬ ವಾನರಶ್ರೇಷ್ಠನು ಎರಡುಕೋಟಿ ವಾನರರಿಂದ ಪರಿವೃತನಾಗಿ ಬರುತ್ತಿರುವುದು ಕಂಡುಬಂದಿತು. ಹನುಮಂತನು - ಕೈಲಾಸಶಿಖರದಂತೆ ಬೃಹತ್ತಾದ ಆಕಾರಗಳನ್ನು ಹೊಂದಿದ್ದ ಭಯಂಕರಪರಾಕ್ರಮಿಗಳಾದ ಒಂದುಸಾವಿರ ಕೋಟಿ ವಾನರರಿಂದ ಪರಿವೃತನಾಗಿ ಸುಗ್ರೀವನ ಬಳಿಗೆ ಬರುತ್ತಿರುವುದು ಕಂಡುಬಂದಿತು. ಮಹಾವೀರ್ಯನಾದ ನಲನು ವೃಕ್ಷಗಳಲ್ಲಿ ವಾಸಮಾಡುತ್ತಿದ್ದ ಸಾವಿರದ ನೂರುಕೋಟಿ ವಾನರಸೈನಿಕರೊಡನೆ ಸುಗ್ರೀವನ ಬಳಿಗೆ ಆಗಮಿಸಿದನು. ಸುಗ್ರೀವನಿಗೆ ಪರಮಪ್ರಿಯನಾದ, ಶ್ರೀಮಂತನಾದ ದಧಿಮುಖನೆಂಬ ಕಪಿಶ್ರೇಷ್ಠನು ಹತ್ತುಕೋಟಿ ವಾನರರಿಂದ ಪರಿವೃತನಾಗಿ ಅಲ್ಲಿಗೆ ಆಗಮಿಸಿದನು. ಶರಭ-

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಕುಮುದ-ವಹ್ನಿ-ರಂಹ ಇವರೇ ಅಲ್ಲದೇ ಕಾಮರೂಪಿಗಳಾದ ಇನ್ನೂ ಅನೇಕ ವಾನರಪ್ರಮುಖರು ಸೈನ್ಯಸಮೇತರಾಗಿ ಅಲ್ಲಿಗೆ ಆಗಮಿಸಿದರು. ಅವರೆಲ್ಲರೂ ಪರ್ವತ-ವನಗಳಿಂದ ಕೂಡಿರುವ ಭೂಮಂಡಲವನ್ನೇ ಆವರಿಸಿಕೊಂಡಿದ್ದರು. ಅಂತಹವರ ಸಂಖ್ಯೆಯು ಎಷ್ಟೆಂಬುದು ತಿಳಿಯುತ್ತಿರಲಿಲ್ಲ. ಅವರು ಅಪಾರಸಂಖ್ಯೆಯಲ್ಲಿದ್ದರು. ಹೀಗೆ ಸುಗ್ರೀವನ ಆಜ್ಞಾನುಸಾರವಾಗಿ ಭೂಮಂಡಲದಲ್ಲಿದ್ದ ಎಲ್ಲ ವಾನರರೂ ಆಗಮಿಸಿದರು. ಕ್ಷಣಕಾಲ ವಿಶ್ರಮಿಸಿಕೊಂಡ ಆ ಕಪಿಸೈನಿಕರು ಒಂದು ಕಡೆಯಿಂದ ಮತ್ತೊಂದು ಕಡೆಗೆ ನೆಗೆದಾಡುತ್ತಾ ಮೇಘಗಳ ಸಮೂಹಗಳು ಸೂರ್ಯನನ್ನು ಆವರಿಸುವಂತೆ-ಸುಗ್ರೀವನನ್ನು ಸುತ್ತುವರಿದರು. ಶೋಭಾಯಮಾನವಾದ ತೋಳುಗಳನ್ನು ಹೊಂದಿದ್ದ, ಪರಮಸಂತುಷ್ಟರಾಗಿದ್ದ ವಾನರರು ಬಹಳವಾಗಿ ಕೋಲಾಹಲಮಾಡುತ್ತಾ ವಾನರೇಂದ್ರನಾದ ಸುಗ್ರೀವನಿಗೆ ತಲೆಬಾಗಿ ನಮಸ್ಕಾರಮಾಡುವುದರ ಮೂಲಕ ತಮ್ಮ ಆಗಮನವನ್ನು ತಿಳಿಯಪಡಿಸಿದರು. ಕೆಲವರು ವಾನರಶ್ರೇಷ್ಠರು ಸುಗ್ರೀವನನ್ನು ಸಂಧಿಸಿ ಸಮಯೋಚಿತವಾದ ಮಾತುಗಳನ್ನಾಡಿ ಹಿಂದಿರುಗಿದರು. ಮತ್ತೆ ಕೆಲವರು ಅವನ ಬಳಿಗೆ ಬಂದು ಕೈಮುಗಿದುಕೊಂಡು ಅಲ್ಲಿಯೇ ನಿಂತಿದ್ದರು.

ಧರ್ಮಜ್ಞನಾದ ಸುಗ್ರೀವನು ಆಗಮಿಸಿದ ಎಲ್ಲ ಕಪಿಮುಖ್ಯರನ್ನೂ ಕೈಮುಗಿದುಕೊಂಡು ಶ್ರೀರಾಮನಿಗೆ ಪರಿಚಯಮಾಡಿಕೊಟ್ಟು ಯೂಥಪತಿಗಳಿಗೆ ಹೇಳಿದನು :

"ವಾನರೇಂದ್ರರೇ! ಪರ್ವತಗಳಲ್ಲಿ ಚಿಲುಮೆಗಳಿರುವ ಪ್ರದೇಶಗಳಲ್ಲಿಯೂ, ಅರಣ್ಯಗಳಲ್ಲಿಯೂ, ಸಾಧ್ಯವಾಗುವ ಎಲ್ಲ ಕಡೆಗಳಲ್ಲಿಯೂ ನಿಮ್ಮ ಸೈನ್ಯಗಳನ್ನು, ಸರ್ವರಿಗೂ ಸುಖವಾಗುವ ರೀತಿಯಲ್ಲಿ ನೆಲೆಗೊಳಿಸಿರಿ"-ಎಂದು ಹೇಳಿ ಸೈನಿಕರ ಬಲವೆಷ್ಟೆಂಬುದನ್ನು ನೋಡಿದ ಮಾತ್ರದಿಂದಲೇ ತಿಳಿಯಲು ಸಮರ್ಥನಾದ ಸುಗ್ರೀವನು ಸೈನ್ಯದ ಬಲವನ್ನು ತಿಳಿಯಲು ಉದ್ಯುಕ್ತನಾದನು.

ಙನೆಯ ಸರ್ಗವು ಮುಗಿಯಿತು.

ಐದನೆಯ ಸಂಪುಟವು ಮುಗಿಯಿತು.

ಶ್ರೀಕೃಷ್ಣಾರ್ಪಣಮಸ್ತು ಶ್ರೀಸದ್ಗುರುಚರಣಾರವಿನ್ದಾರ್ಪಣಮಸ್ತು

ಓಂ ತತ್ಸತ್

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

# ಪರಿಶಿಷ್ಟ

## ಭಿಕ್ಷುರೂಪದಲ್ಲಿದ್ದ ಹನುಮಂತನು ಶ್ರೀರಾಮನಿಗೆ ನಮಸ್ಕರಿಸಿದ ಔಚಿತ್ಯ

ಜಿಜ್ಞಾಸೆಗೆ ಇಲ್ಲೊಂದು ವಿಷಯವಿದೆ. ಭಿಕ್ಷುರೂಪವನ್ನು ಅರ್ಥಾತ್ ಸಂನ್ಯಾಸಿಯ ರೂಪವನ್ನು ತಾಳಿದ ಹನುಮಂತನು ರಾಮನಿಗೆ ನಮಸ್ಕಾರ ಮಾಡುತ್ತಾನೆ. ಹಾಗೆ ಮಾಡಬಹುದೇ? ಸಂನ್ಯಾಸಿಯು ಗೃಹಸ್ಥನಿಗೆ ನಮಸ್ಕಾರವನ್ನು ಮಾಡಿದ್ದು ಸರಿಯೇ? ಇದನ್ನು ಸಮಂಜಸವಾಗುವಂತೆ ಮಾಡಲು ವ್ಯಾಖ್ಯಾನಕಾರರು ಪ್ರಯತ್ನಿಸಿದ್ದಾರೆ. ಭಿಕ್ಷುರೂಪಂ–ಎಂಬು ದಕ್ಕೆ ಒಬ್ಬ ವ್ಯಾಖ್ಯಾನಕಾರರು ಪ್ರಾಕೃತತಾಪಸರೂಪಂ–ಸಾಮಾನ್ಯ ತಪಸ್ವಿಯ ರೂಪವೆಂದೂ, ಮತ್ತೊಬ್ಬರು ಸಂನ್ಯಾಸಿಯ ರೂಪವೆಂದೂ, ಇನ್ನೊಬ್ಬರು ನೈಷ್ಠಿಕಬ್ರಹ್ಮಚಾರಿಯ ರೂಪವೆಂದೂ ಅರ್ಥಮಾಡಿರುತ್ತಾರೆ. ಈ ಶ್ಲೋಕದಲ್ಲಿ –' ರಾಮ-ಲಕ್ಷ್ಮಣರನ್ನು ಭಿಕ್ಷುರೂಪದಲ್ಲಿದ್ದ ಹನುಮಂತನು ನಮಸ್ಕರಿಸಿದನು '–ಎಂದಿರುವುದರಿಂದ ವ್ಯಾಖ್ಯಾನಕಾರರು ಈ ಮೂರು ವಿಧ ವಾದ ಅರ್ಥಗಳನ್ನು ಮಾಡಿರುತ್ತಾರೆ. ಸಂನ್ಯಾಸಿಯ ರೂಪವನ್ನು ಧರಿಸಿದ್ದ ಹನುಮಂತನು ರಾಮನಿಗೆ ನಮಸ್ಕಾರಮಾಡಿದುದು ಸರಿಯೇ? ತಿಳಿದು ಮಾಡಿದನೇ? ತಿಳಿಯದೇ ಮಾಡಿದನೇ?

ಸಂನ್ಯಾಸಿಯು ದುರಾಚಾರಿಯಾದ ಗೃಹಸ್ಥನಿಗೆ ನಮಸ್ಕರಿಸಬಾರದೇ ಹೊರತು ಒಳ್ಳೆಯ ಗೃಹಸ್ಥನಿಗೆ ನಮಸ್ಕಾರಮಾಡಬಹುದು–ಭಿಕ್ಷುರೂಪಸ್ಯ ಹನುಮತಃ ಪ್ರಣಾಮಾತ್ ಅನ್ಯತ್ರಾಪಿ ಭಿಕ್ಷೋರ್ಗೃಹಸ್ಥಾದಿ ವಿಷಯೇ ಪ್ರಣಾಮಃ ಕರ್ತವ್ಯ ಏವೇತಿ ವಿಜ್ಞಾಯತೇ । ಭಿಕ್ಷುರೂಪ ನಾದ ಮೇಧಾವಿಯಾದ ಹನುಮಂತನು ಗೃಹಸ್ಥನಾದ ಶ್ರೀರಾಮನಿಗೆ ನಮ ಸ್ಕಾರಮಾಡಿರುವುದರಿಂದ ಬೇರೆ ಕಡೆಗಳಲ್ಲಿಯೂ ಸಂನ್ಯಾಸಿಯು ಗೃಹಸ್ಥನಿಗೆ ನಮಸ್ಕಾರಮಾಡಬಹುದೆಂದು ಇದರಿಂದ ತಿಳಿಯಲ್ಪಡುತ್ತದೆ – ಎಂಬುದು ಒಬ್ಬ ವ್ಯಾಖ್ಯಾನಕಾರರ ಅಭಿಪ್ರಾಯವಾಗಿದೆ.

ಆದರೆ ಆಶ್ರಮಗಳಲ್ಲಿ ಗೃಹಸ್ಥಾಶ್ರಮವು ಶ್ರೇಷ್ಠವಾದರೂ ಸಂನ್ಯಾಸಾ ಶ್ರಮವು ಗೃಹಸ್ಥಾಶ್ರಮಕ್ಕಿಂತಲೂ ಹಿರಿದೆಂಬುದರಲ್ಲಿ ಭಿನ್ನಾಭಿಪ್ರಾಯವಿರ ಲಾರದು. ಮಗನು ಸಂನ್ಯಾಸಿಯಾದರೆ ತಂದೆಯಾದವನು ಅವನಿಗೆ ನಮಸ್ಕಾರ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಮಾಡುವ ರೂಢಿಯಿರುವಾಗ ಗೃಹಸ್ಥನಾದವನ ವಿಷಯದಲ್ಲಿ ಹೇಳತಕ್ಕದ್ದೇನಿದೆ? ಆದುದರಿಂದ ಭಿಕ್ಷುರೂಪನಾದ ಹನುಮಂತನು ಗೃಹಸ್ಥನಾದ ರಾಮನಿಗೆ ನಮಸ್ಕಾರಮಾಡಿದುದರಿಂದ ಸಂನ್ಯಾಸಿಯು ಗೃಹಸ್ಥನಿಗೆ ನಮಸ್ಕಾರಮಾಡಬಹುದೆಂದು ಸಿದ್ಧಾಂತಮಾಡುವುದು ಅಷ್ಟು ಸಮಂಜಸವಾಗಿ ಕಾಣುವುದಿಲ್ಲ.

ಮತ್ತೊಬ್ಬರು: ಭಿಕ್ಷುಪದಕ್ಕೆ ಸಾಧಾರಣತಪಸ್ವೀ–ಎಂದು ಅರ್ಥಮಾಡಿರುತ್ತಾರೆ. ಕಾಷಾಯ-ದಂಡಗಳನ್ನು ಧರಿಸಿದ ಸಂನ್ಯಾಸಿಯಾಗಿರದೇ ಸಾಧುವೇಷವನ್ನು ಧರಿಸಿದನೆಂದು ಅರ್ಥಮಾಡಿದರೆ ಶಾಸ್ತ್ರ-ಸಂಪ್ರದಾಯಗಳಿಗೆ ವಿರೋಧವಾದುದಾಗುವುದಿಲ್ಲ.

ಇನ್ನೊಬ್ಬರು: ಹನುಮಂತನು ಸಂನ್ಯಾಸಿಯ ರೂಪದಿಂದ ರಾಮನ ಸಮೀಪಕ್ಕೆ ಬಂದಿದ್ದರೂ ಅವನ ಅತ್ಯದ್ಭುತರೂಪದರ್ಶನದಿಂದ ವಿಸ್ಮಯಗೊಂಡು ತಾನು ಸಂನ್ಯಾಸಿಯ ರೂಪವನ್ನು ಧರಿಸಿರುವೆನೆಂಬುದನ್ನೇ ಮರೆತು ನಮಸ್ಕಾರಮಾಡಿದನು–ಎಂದು ವ್ಯಾಖ್ಯೆಮಾಡಿರುತ್ತಾರೆ.

ಮಹಾಮೇಧಾವಿಯಾದ ಹನುಮಂತನು ಮೈಮರೆಯುತ್ತಾನೆಯೇ?–ಎಂಬ ಸಂಶಯವುಂಟಾಗುತ್ತದೆ. ಆದುದರಿಂದ ಈ ವ್ಯಾಖ್ಯಾನವೂ ಅಷ್ಟು ಸಮಂಜಸವಾಗಿ ಕಾಣುವುದಿಲ್ಲ. ಮತ್ತೊಬ್ಬರು: ಭಿಕ್ಷುಪದಕ್ಕೆ–'ಬ್ರಹ್ಮಚಾರೀ'–ಎಂದು ಅರ್ಥಮಾಡಿರುತ್ತಾರೆ. ಹನುಮಂತನು ಆಜನ್ಮಬ್ರಹ್ಮಚಾರಿಯೇ ಆಗಿದ್ದನು. ರಾಮನನ್ನು ಸಂಧಿಸುವಾಗ ಮಾನವವಟುವಾಗಿ ಕಾಣಿಸಿಕೊಂಡನು. ಹೀಗೆ ಅರ್ಥಮಾಡಿದರೆ ವಿರೋಧಾಭಾಸವಿರುವುದಿಲ್ಲ.

ಈ ವಿಷಯದಲ್ಲಿ ನಮ್ಮ ಅಭಿಪ್ರಾಯವು ಹೀಗಿದೆ:

ಭಿಕ್ಷುಶಬ್ದಕ್ಕೆ ಭಿಕ್ಷೆ ಬೇಡುವವನು, ಯಾಚಕ ಎಂದರ್ಥ. ಪಾರಿಭಾಷಿಕವಾಗಿ ಈ ಶಬ್ದಕ್ಕೆ ಸಂನ್ಯಾಸೀ ಎಂದು ಅರ್ಥ. (ಮೋಕ್ಷಧರ್ಮವನ್ನು ಹೇಳುವ ಬ್ರಹ್ಮಸೂತ್ರಕ್ಕೆ ಭಿಕ್ಷುಸೂತ್ರ ಎಂಬ ಹೆಸರೂ ಇದೆ.) ಬ್ರಹ್ಮಚಾರಿಯೂ ಸಂನ್ಯಾಸಿಯಂತೆ ಅನ್ನಭಿಕ್ಷೆ ಬೇಡುವ ಅಧಿಕಾರದಲ್ಲಿರುವುದರಿಂದ ಅವನನ್ನೂ ಭಿಕ್ಷು ಎಂದು ಕರೆಯಬಹುದು. ಇಲ್ಲಿ ಭಿಕ್ಷುರೂಪವನ್ನು ತಾಳಿದ ಹನುಮಂತನು ಗೃಹಸ್ಥನಾದ ಶ್ರೀರಾಮಚಂದ್ರನಿಗೆ ನಮಸ್ಕರಿಸಿದುದಾಗಿ ಹೇಳಿದೆ. ಸಂನ್ಯಾಸಿಯು ಗೃಹಸ್ಥನಿಗೆ ನಮಸ್ಕರಿಸುವುದು ಶಾಸ್ತ್ರನಿಷಿದ್ಧ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಹಾಗಾದರೆ ವೇದವ್ಯಾಸರನ್ನು ಸಂನ್ಯಾಸಿಗಳು ಪೂಜಿಸಬಹುದೇ? ಎಂದರೆ: ಅಲ್ಲಿ ವ್ಯಾಸರಿಗೂ ವೇದಾಂತಿಸಂನ್ಯಾಸಿಗಳಿಗೂ ಗುರು-ಶಿಷ್ಯಸಂಬಂಧವಿರುವುದರಿಂದ ಸಂನ್ಯಾಸಿಗಳು ವ್ಯಾಸರನ್ನು ಪೂಜಿಸಬಹುದು. ಪ್ರಕೃತದಲ್ಲಿ ಶ್ರೀರಾಮನು ಆಂಜನೇಯನಿಗೆ ಗುರುಸ್ಥಾನದಲ್ಲಿ ಇಲ್ಲವಾದ್ದರಿಂದ ಗೃಹಸ್ಥನಾದ ಶ್ರೀರಾಮನಿಗೆ ಸಂನ್ಯಾಸಿವೇಷದ ಹನುಮಂತನು ನಮಸ್ಕರಿಸುವುದು ಶಾಸ್ತ್ರಸಮ್ಮತವಾಗುವುದಿಲ್ಲ. ಆದುದರಿಂದ ಹನುಮಂತನು ಬ್ರಹ್ಮಚಾರಿರೂಪವನ್ನು ತಾಳಿದ—ಎಂದು ಅರ್ಥೈಸಬಹುದು. ಆದರೆ ಶ್ರೀರಾಮನು ಕ್ಷತ್ರಿಯಶ್ರೇಷ್ಠನು. ಆದುದರಿಂದ ಹನುಮಂತನು ಕ್ಷತ್ರಿಯ ಅಥವಾ ವೈಶ್ಯ ಬ್ರಹ್ಮಚಾರಿಯ ರೂಪವನ್ನು ತಳೆದ—ಎಂದು ವಿವರಣೆ ನೀಡಬೇಕಾಗುತ್ತದೆ.

ಆದರೆ ಇಲ್ಲಿ ಹನುಮಂತನು ಒಬ್ಬ ಸಾಧಾರಣಭಿಕ್ಷುಕ (ಯಾಚಕ) ರೂಪವನ್ನು ತಾಳಿದ—ಎಂದು ನೇರವಾದ ಅರ್ಥವನ್ನೇ ಹೇಳಿದರೆ ಯಾವ ವಿರೋಧವೂ ಬರುವುದಿಲ್ಲ. ಭಿಕ್ಷುಕಸಾಧುವು ಕ್ಷತ್ರಿಯಶ್ರೇಷ್ಠನಿಗೆ ನಮಸ್ಕರಿಸುವುದರಲ್ಲಿ ಅಸಮಂಜಸವೇನೂ ಇಲ್ಲ. ಹನುಮಂತನು ಭಿಕ್ಷು (ಸಂನ್ಯಾಸಿ) ವೇಷವನ್ನು ತಾಳಿಬಂದರೂ ಶ್ರೀರಾಮನ ದಿವ್ಯಾದ್ಭುತರೂಪವನ್ನು ನೋಡಿ, ತನ್ನ ವರ್ಣ-ಆಶ್ರಮ ಇತ್ಯಾದಿಗಳನ್ನು ಮರೆತು ಆತನಿಗೆ ನಮಸ್ಕರಿಸಿಬಿಟ್ಟ ಎಂದು ಅರ್ಥ ಹೇಳಬಹುದು. ಇದು ಸಹಜವೇ. ಇದಕ್ಕೆ ಉದಾಹರಣೆ: ಗಿರಿಜಾಕಲ್ಯಾಣಪ್ರಸಂಗದಲ್ಲಿ ಹಿಮವಂತನು ಅಳಿಯನಾದ ಶಿವನನ್ನು ಸಂಧಿಸುವ ಸಮಯ, 'ಈತನು ನನ್ನ ಅಳಿಯನಾದರೂ ಲೋಕೇಶ್ವರನು. ಈತನ ನಮಸ್ಕಾರವನ್ನು ಹೇಗೆ ಸ್ವೀಕರಿಸಲಿ?'—ಎಂದು ಸಂಕೋಚಪಡುತ್ತಿದ್ದ. ಆದರೆ ಶಿವನನ್ನು ಕಂಡೊಡನೆಯೇ ಎಲ್ಲ ಲೋಕಮರ್ಯಾದೆಯನ್ನೂ ಮರೆತು ಆತನ ತೇಜಸ್ಸಿಗೆ ವಶನಾಗಿ ಅವನಿಗೆ ತಾನೇ ನಮಸ್ಕರಿಸಿಬಿಟ್ಟ—ಎಂದು ಕಾಳಿದಾಸಕವಿ ಹೇಳುತ್ತಾನೆ. ಆದರೆ ಸಂನ್ಯಾಸಿಯು ತನಗೆ ನಮಸ್ಕರಿಸುವುದನ್ನು ಶ್ರೀರಾಮನು ಏಕೆ ನಿಷೇಧಿಸಲಿಲ್ಲ? ಎಂಬ ಪ್ರಶ್ನೆ ಬರುತ್ತದೆ. ಆಂಜನೇಯನಂತೆ ಶ್ರೀರಾಮನೂ ಮೈಮರೆತು ಆತನ ನಮಸ್ಕಾರವನ್ನು ಸ್ವೀಕರಿಸಿಬಿಟ್ಟ ಎಂದು ವಿವರಣೆಯನ್ನು ನೀಡಬೇಕಾಗುತ್ತದೆ.

ಶ್ರೀರಾಮನು ದೇವರು. ಆಂಜನೇಯನು ಆತನ ಭಕ್ತ—ಎಂಬ ಅಭಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಪ್ರಾಯವು ಇಲ್ಲಿ ಇನ್ನೂ ಬಂಧಿರುವುದಿಲ್ಲ. ಆದುದರಿಂದ ಭಿಕ್ಷುಶಬ್ದಕ್ಕೆ ಯಾಚಕ, ಸಾಧು–ಎಂದು ಅರ್ಥ ಹೇಳುವುದೇ ಲೇಸೆಂದು ಕಾಣುತ್ತದೆ.

——

ಶ್ರೀಗುರುಭ್ಯೋ ನಮಃ ಶ್ರಿಯೈ ನಮಃ

## ಶ್ರೀರಾಮನ ವಿಲಾಪ

ಪ್ರಶ್ನೆ :– ಸೀತಾಪಹರಣವಾದನಂತರ ಶ್ರೀರಾಮ-ಲಕ್ಷ್ಮಣರು ಆಕೆಯನ್ನು ಹುಡುಕಲು ಪ್ರಾರಂಭಿಸುತ್ತಾರೆ. ಆ ಸಮಯದಲ್ಲೇನೋ ಶ್ರೀರಾಮನು ವಿಲಪಿಸುವುದು ಸರಿಯೆ. ಆದರೆ ಮುಂದೆ ಬರುತ್ತಾ ಅದು ಅತಿಯಾಯಿತು ಎನಿಸುತ್ತದಲ್ಲವೇ ? ಲಕ್ಷ್ಮಣನೂ ಭಾರ್ಯಾರಹಿತನಾಗಿದ್ದಾನೆ. ಅವನೆದುರಿನಲ್ಲೇ ಗೋಳಾಡುವುದು ಹೇಗೆ ಸರಿ ? ಶ್ರೀರಾಮನ ಧೀರೋದಾತ್ತಗುಣಕ್ಕೆ ಇದು ಹೇಗೆ ಹೊಂದಿಕೊಳ್ಳುತ್ತದೆ ?

ಉತ್ತರ :– ತನ್ನ ಯಾವುದೇ ಕರ್ತವ್ಯವನ್ನೂ ಗಂಭೀರವಾಗಿ ಪರಿಗಣಿಸುವುದು ಶ್ರೀರಾಮನ ಗುಣ. ಪ್ರಸಕ್ತಸಂದರ್ಭದಲ್ಲಿ ಸೀತಾ-ಲಕ್ಷ್ಮಣರ ಯೋಗ-ಕ್ಷೇಮಗಳ ಸಂಪೂರ್ಣಹೊಣೆ ಅವನದೇ. ವನವಾಸಕ್ಕೆ ಹೊರಡುವ ಸಮಯದಲ್ಲಿ ಸೀತೆಯೇ–"ನನ್ನ ರಕ್ಷಣೆಗೆ ನೀನಿರುವಾಗ ನನಗೇತರ ಭಯ ?"–ಎಂದು ಹೇಳಿ ತನ್ನ ಸಂಪೂರ್ಣರಕ್ಷಣೆಯ ಭಾರವನ್ನು ಅವನಿಗೊಪ್ಪಿಸಿ ತಾನು ನಿರ್ಭರಳಾಗುತ್ತಾಳೆ. ಕರ್ತವ್ಯಚ್ಯುತಿಯನ್ನು ಶ್ರೀರಾಮನು ಎಷ್ಟುಮಾತ್ರಕ್ಕೂ ಸಹಿಸುವವನಲ್ಲ. ಲಕ್ಷ್ಮಣನು ಸೀತೆಯೊಬ್ಬಳನ್ನೇ ಬಿಟ್ಟು ಬಂದಾಗ ಇದನ್ನು ಸ್ಪಷ್ಟವಾಗಿ ಹೇಳುತ್ತಾನೆ. ಪ್ರಾಣಕ್ಕಿಂತಲೂ ಪ್ರಿಯಳಾದ ಪತ್ನಿಯ ಅಪಹರಣ, ತನ್ನ ಕರ್ತವ್ಯನಿರ್ವಹಣೆಯಲ್ಲಿ ಚ್ಯುತಿಯುಂಟಾಯಿತೆಂಬ ಅನಿಸಿಕೆ–ಅವನ ವಿಲಾಪಕ್ಕೆ ಮತ್ತು ಲಕ್ಷ್ಮಣನ ಮೇಲಿನ ಕೋಪಕ್ಕೆ ಕಾರಣವಾಗುವುದು ಸಹಜ. ಇನ್ನು ಲಕ್ಷ್ಮಣನ ಭಾರ್ಯೆ ಅಯೋಧ್ಯೆಯಲ್ಲಿದ್ದಾಳೆ. ಅವಳಿಗೆ ಕೆಡುಕೇನೂ ಆಗಿಲ್ಲ. ಇದು ಅರಣ್ಯವಾಸದ ಕೊನೆಯ ವರ್ಷ. ಕೆಲವೇ ತಿಂಗಳುಗಳಲ್ಲಿ ಅವಳೊಡನೆ ಮಿಲನವಾಗುತ್ತದೆ. ಇದಿಷ್ಟು ಐಹಿಕಪರವಾದ ಅರ್ಥವಾಯಿತು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಆಧ್ಯಾತ್ಮಿಕವಾದ ಅರ್ಥ ಹೀಗಿದೆ :

ಕೈತವರಹಿತಂ ಪ್ರೇಮ ನ ಹಿ ಭವತಿ ಮಾನುಷೇ ಲೋಕೇ ।
ಯದಿ ಭವತಿ ಕಸ್ಯ ವಿರಹೋ ವಿರಹೇ ಸತ್ಯಪಿ ಕೋ ಜೀವತಿ ॥

ಮನುಷ್ಯಲೋಕದಲ್ಲಿ ನಿಷ್ಕಪಟಪ್ರೇಮವುಂಟಾಗುವುದೇ ಇಲ್ಲ. ಅತ್ಯಂತ ಅಪರೂಪಕ್ಕೆ ಒಮ್ಮೆ ಯಾರಿಗಾದರೂ ಉಂಟಾದರೂ ಪ್ರೇಮದ ಸಾರವಾದ ವಿರಹವೇದನೆಯುಂಟಾಗುವುದಿಲ್ಲ. ಒಮ್ಮೆ ವಿರಹವೇದನೆಯುಂಟಾದರೆ ಜೀವಿಸಿರಲು ಸಾಧ್ಯವೇ ಇಲ್ಲ.

ಪ್ರೇಮೈವ ಗೋಪರಾಮಾಣಾಂ ಕಾಮ ಇತ್ಯಗಮತ್ಪ್ರಥಾ ।

ವ್ರಜಗೋಪಿಯರ ವಿಶುದ್ಧಪ್ರೇಮವೇ 'ಕಾಮ' ವೆಂಬ ಹೆಸರಿನಿಂದ ಪ್ರಚಲಿತವಾಯಿತು. ಗೋಪಿಯರ 'ಕಾಮ'ದಲ್ಲಿ ತಮ್ಮ ಸುಖದ ಸಾಧನೆ ಲೇಶವಾದರೂ ಇರಲಿಲ್ಲ. ಅವರ ಎಲ್ಲ ಚಟುವಟಿಕೆಗಳೂ ಶ್ರೀಕೃಷ್ಣನ ಪ್ರೀತಿಗಾಗಿ, ಅವನ ಪ್ರಸನ್ನತೆಗಾಗಿ ಇದ್ದುವು. ಈ ಪ್ರೇಮ ಅಥವಾ ರಾಗದಲ್ಲಿ ಮೂರು ಭೇದಗಳಿವೆ.

ಪೂರ್ವರಾಗ, ಮಿಲನ ಮತ್ತು ವಿರಹ.

ವೈಷ್ಣವಶಾಸ್ತ್ರೀಯಗ್ರಂಥಗಳಲ್ಲಿ–ಅದರಲ್ಲಿಯೂ ರಾಗ ಅಥವಾ ಪ್ರೇಮ ಮಾರ್ಗೀಯ ವೈಷ್ಣವಪಂಥದ ಗ್ರಂಥಗಳಲ್ಲಿ ಈ ಪ್ರೇಮದ ಎಲ್ಲ ದಶೆಗಳೂ ವಿಸ್ತಾರವಾಗಿ ವರ್ಣಿಸಲ್ಪಟ್ಟಿವೆ. ವಿಶೇಷವಾಗಿ ಅಷ್ಟಸಾತ್ತ್ವಿಕವಿಕಾರಗಳ ವರ್ಣನೆಯೂ ಬರುತ್ತದೆ. ಆ ಎಂಟು ಸಾತ್ತ್ವಿಕವಿಕಾರಗಳು ಇಂತಿವೆ– ಸ್ತಂಭ, ಕಂಪ, ಸ್ವೇದ, ವೈವರ್ಣ್ಯ, ಅಶ್ರು, ಸ್ವರಭಂಗ, ಪುಲಕ ಮತ್ತು ಪ್ರಲಯ. ಇವುಗಳ ವಿಸ್ತಾರ ಇಲ್ಲಿ ಸಾಧ್ಯವಿಲ್ಲ.

ಹಿಂದೆ ಪ್ರೇಮದ ಮುಖ್ಯದಶೆಗಳಾದ ಪೂರ್ವರಾಗ, ಮಿಲನ, ವಿರಹಗಳ ಬಗೆಗೆ ಪ್ರಸ್ತಾಪಿಸಲಾಗಿದೆ.

ಪೂರ್ವರಾಗವೆಂದರೆ ಪರಾಭಕ್ತಿ. ಪ್ರೇಮಿಯ ಸಾಕ್ಷಾತ್ಕಾರವಾಗಿಲ್ಲ. ಆದರೆ ಅವನಿಗಾಗಿ ಚಿತ್ತವು ಹಾತೊರೆಯುತ್ತಿದೆ. ಹಗಲೂ-ರಾತ್ರಿ ಅವನದೇ ಧ್ಯಾನ, ಚಿಂತೆ; ಅವನ ಸಂಬಂಧವಾದ ಜ್ಞಾನವೇ. ಅವನ ದರ್ಶನದ ಇಚ್ಛೆಯು ಉತ್ತರೋತ್ತರವಾಗಿ ಹೆಚ್ಚುತ್ತಿರಲೆಂಬ ಉತ್ಕಟೇಚ್ಛೆ–ಇದೇ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಪೂರ್ವರಾಗ್ಯ. ಈ ದಶೆಯಲ್ಲಿ ತನ್ನ ಮನೆ-ಮಠ, ಶರೀರ, ಜೀವನದಲ್ಲಿಯೇ ಉತ್ಕಟವೈರಾಗ್ಯವುಂಟಾಗುತ್ತದೆ.

ಮಿಲನವೆಂದರೆ ಪರಜ್ಞಾನ. ಈ ಸ್ಥಿತಿ ವರ್ಣನಾತೀತ. ಕೇವಲ ಅನುಭವಗಮ್ಯ. ಪ್ರೇಮಿ ಮತ್ತು ಪ್ರೇಮಪಾತ್ರನಾದವ–ಇವರನ್ನು ಬಿಟ್ಟು ಇತರರಿಗೆ ತಿಳಿಯುವ ಸಾಧ್ಯತೆಯೇ ಇಲ್ಲ. ತಾನೇ ವರ್ಣಿಸಲು ಹೊರಟರೆ ಶಬ್ದಗಳೇ ಸಾಲದೆನಿಸುತ್ತವೆ.

ವಿರಹ ಅಥವಾ ಪರಮಭಕ್ತಿ–ಈ ಮೂರರಲ್ಲಿ ಉತ್ತರೋತ್ತರವಾಗಿ ಒಂದಕ್ಕಿಂತಲೂ ಒಂದು ಶ್ರೇಷ್ಠವೆನಿಸುತ್ತವೆ. ಪೂರ್ವರಾಗಕ್ಕಿಂತಲೂ ಮಿಲನ, ಮಿಲನಕ್ಕಿಂತಲೂ ವಿರಹ ಶ್ರೇಷ್ಠವೆನಿಸುತ್ತದೆ. ಪ್ರೇಮವೆಂಬ ಹಾಲಿನಲ್ಲಿ ಸಾರರೂಪವಾದ ಕೆನೆಯೇ ವಿರಹ. ವಿರಹದಲ್ಲಿಯೂ ಮೂರು ಭೇದಗಳಿವೆ. ಭವಿಷ್ಯವಿರಹ, ವರ್ತಮಾನವಿರಹ ಮತ್ತು ಭೂತವಿರಹ. ಇವುಗಳಲ್ಲಿಯೂ ಉತ್ತರೋತ್ತರವಾಗಿ ಒಂದಕ್ಕಿಂತ ಒಂದು ಶ್ರೇಷ್ಠವೆನಿಸುತ್ತವೆ.

ಪ್ರೇಮಿಯು ನಾಳೆ ತನ್ನನ್ನು ಬಿಟ್ಟು ಹೊರಟುಹೋಗುತ್ತಾನೆ ಎಂಬ ಭಾವನೆಯು ಹೃದಯದಲ್ಲಿ ಬಂದೊಡನೆಯೇ ಒಂದು ಅಸೀಮ ಅವರ್ಣನೀಯ ವೇದನೆಯಾಗುತ್ತದೆ. ಇದನ್ನೇ ಭಾವೀವಿರಹವೆನ್ನುತ್ತಾರೆ. ಶ್ರೀಕೃಷ್ಣನು ಬೃಂದಾವನದಿಂದ ಮಥುರೆಗೆ ಹೊರಟಾಗ ಗೋಪಿಯರಿಗೆ ಉಂಟಾದ ಸ್ಥಿತಿ, ಅದರಲ್ಲಿಯೂ ರಾಧೆಗೆ ಉಂಟಾದ ವಿರಹದುಃಖವು ಭಾವೀವಿರಹಕ್ಕೆ ಅತ್ಯುತ್ಕೃಷ್ಟವಾದ ಉದಾಹರಣೆ.

ಶ್ರೀಕೃಷ್ಣನು ಮಥುರೆಗೆ ಹೋಗುತ್ತಾನೆ ಎಂಬ ಸುದ್ದಿ ತಿಳಿದ ಕ್ಷಣದಲ್ಲಿ ಉಂಟಾದ ಸ್ಥಿತಿ ಇದಾದರೆ–ಅವನು ಸಾಕ್ಷಾತ್ತಾಗಿ ಹೊರಟುನಿಂತಾಗ ಉಂಟಾಗುವ ಸ್ಥಿತಿ ವರ್ತಮಾನವಿರಹ. ಶ್ರೀಮದ್ಭಾಗವತದಲ್ಲಿ ಶ್ರೀ ಶುಕರು ಪರೀಕ್ಷಿತನಿಗೆ ಹೇಳುತ್ತಾರೆ:

ಏವಂ ಬ್ರುವಾಣಾ ವಿರಹಾತುರಾ ಭೃಶಂ
ವ್ರಜಸ್ತ್ರಿಯಃ ಕೃಷ್ಣವಿಷಕ್ತಮಾನಸಾಃ ।
ವಿಸೃಜ್ಯ ಲಜ್ಜಾಂ ರುರುದುಃ ಸ್ಮ ಸುಸ್ವರಂ
ಗೋವಿಂದ ದಾಮೋದರ ಮಾಧವೇತಿ ॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



"ಕೃಷ್ಣನಲ್ಲಿಯೇ ಅತ್ಯಂತವಾಗಿ ಆಸಕ್ತಿ ಹೊಂದಿದ ಮನಸ್ಸುಳ್ಳವರಾದ ಗೋಪಿಕೆಯರು, ಅವನ ವಿರಹವನ್ನು ತಡೆಯಲಾರದೇ, ಲಜ್ಜೆಯನ್ನು ತೊರೆದು–ಹಾ ಗೋವಿಂದ ! ಹಾ ದಾಮೋದರ ! ಹಾ ಮಾಧವ ! – ಎಂದು ಗಟ್ಟಿಯಾಗಿ ಸುಸ್ವರದಿಂದ ಅಳಲು ತೊಡಗಿದರು."

ಪ್ರೇಮಿಯು ಹೊರಟುಹೋದನಂತರ ಉಂಟಾಗುವ ವಿರಹವು ಭೂತ ವಿರಹ. ಪುನಃ ಅವನೊಡನೆ ಮಿಲನವುಂಟಾಗುವುದೋ ಇಲ್ಲವೋ ಎಂಬ ದ್ವೈಧೀಭಾವ. ಆಸೆ-ನಿರಾಸೆಗಳ ಸಮ್ಮಿಶ್ರಣ ಈ ವಿರಹದಲ್ಲಿದೆ. ಪುನರ್ಮಿಲನದ ಆಸೆಯೇ ಇಲ್ಲದಿದ್ದರೆ ಬದುಕಿದ್ದು ಪ್ರಯೋಜನವಾದರೂ ಏನು ? ಈ ಕ್ಷಣದಲ್ಲಿಯೇ ಈ ಶರೀರವು ಭಸ್ಮವಾಗುವುದೇ ಒಳ್ಳೆಯದು. ಆದರೆ ಪುನರ್ಮಿಲನದ ಆಸೆಯಿದ್ದೇ ಇದೆ. ಆದರೆ ಎಂದಾಗುತ್ತದೆ ಎಂಬುದು ಗೊತ್ತಿಲ್ಲ. ಒಮ್ಮೆ ಪ್ರೇಮಿಯ ದರ್ಶನವಾದರೆ ಸಾಕು – ಎಂಬ ಒಂದೇ ನಿರೀಕ್ಷೆಯಲ್ಲಿ ವಿಯೋಗಿನಿಯು ತನ್ನ ಪ್ರಾಣವನ್ನು ಧರಿಸಿಕೊಂಡಿರುತ್ತಾಳೆ. ಈ ವಿರಹದಲ್ಲಿಯೂ ಹತ್ತು ದಶೆಗಳಿವೆ. ಉಜ್ಜ್ವಲನೀಲಮಣಿ ಎಂಬ ವೈಷ್ಣವ ಶಾಸ್ತ್ರಗ್ರಂಥದಲ್ಲಿ ಅವುಗಳನ್ನು ಹೀಗೆ ಹೇಳಿದೆ :

ಚಿನ್ತಾತ್ರ ಜಾಗರೋದ್ವೇಗೌ ತಾನವಂ ಮಲಿನಾಙ್ಗತಾ ।
ಪ್ರಲಾಪೋ ವ್ಯಾಧಿರುನ್ಮಾದೋ ಮೋಹೋ ಮೃತ್ಯುರ್ದಶಾ ದಶ ॥

ಚಿಂತೆ, ಜಾಗರಣೆ, ಉದ್ವೇಗ, ಕೃಶತೆ, ಮಲಿನತೆ, ಪ್ರಲಾಪ, ವ್ಯಾಧಿ, ಉನ್ಮಾದ, ಮೋಹ ಮತ್ತು ಮೃತ್ಯು–ಇವು ವಿರಹದ ಹತ್ತು ದಶೆಗಳು.

ಚಿಂತೆ :– ಕುಳಿತಾಗ-ನಿಂತಾಗ, ಎಚ್ಚರದಲ್ಲಿ-ನಿದ್ರೆಯಲ್ಲಿ ಎಲ್ಲ ಅವಸ್ಥೆಗಳಲ್ಲಿಯೂ ಒಂದೇ ಚಿಂತೆ – ಪ್ರೇಮಿಯ ಚಿಂತೆ. ಬೇರೆ ಯಾವ ಆಲೋಚನೆಗೂ ಮನದಲ್ಲಿ ಪ್ರವೇಶವಿರುವುದಿಲ್ಲ.

ಜಾಗರಣೆ :– ನಿದ್ರೆಯಿಲ್ಲದಿರುವುದೇ ಜಾಗರಣೆ. ವಿರಹಿಣಿಗೆ ಒಂದು ಕ್ಷಣ ನಿದ್ರೆ ಬಂದರೆ ಸ್ವಪ್ನದಲ್ಲಾದರೂ ಪ್ರಿಯತಮನ ದರ್ಶನವಾಗಬಹುದು. ಆದರೆ ವಿರಹಿಣಿಗೆ ನಿದ್ರೆಯಲ್ಲಿಯದು ? ರಾಧೆಯು ಹೇಳುತ್ತಾಳೆ :

ಯಾಃ ಪಶ್ಯನ್ತಿ ಪ್ರಿಯಂ ಸ್ವಪ್ನೇ ಧನ್ಯಾಸ್ತಾಃ ಸಖಿ ಯೋಷಿತಃ ।
ಅಸ್ಮಾಕಂ ತು ಗತೇ ಕೃಷ್ಣೇ ಗತಾ ನಿದ್ರಾಪಿ ವೈರಿಣೀ ॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



"ಸಖಿ! ಸ್ವಪ್ನದಲ್ಲಾದರೂ ಪ್ರಿಯತಮನ ದರ್ಶನವನ್ನು ಮಾಡುವ ಸ್ತ್ರೀಯರೇ ಧನ್ಯರು. ವೈರಿಣಿಯಾದ ನನ್ನ ನಿದ್ರೆಯಾದರೋ ಕೃಷ್ಣ ನೊಂದಿಗೇ ಮಥುರೆಗೆ ಹೊರಟುಹೋದಳು. ನನ್ನ ಹತ್ತಿರವೂ ಸುಳಿಯ ಲೊಲ್ಲಳು."

ಉದ್ವೇಗ :- ಮನಸ್ಸಿನಲ್ಲಿ ಒಂದು ವಿಧವಾದ ವಿವರಿಸಲಾಗದ ತಳ ಮಳವುಂಟಾಗುತ್ತದೆ. ಹೇಳಿಕೊಳ್ಳಲಾಗದ ಸಂಕಟವುಂಟಾಗುತ್ತದೆ. 'ಗಾಯಗೊಂಡವರಿಗೇ ಗೊತ್ತು ಗಾಯಗೊಂಡವರ ಸ್ಥಿತಿ'-ಎಂಬಂತೆ ಇದು.

ಕೃಶತೆ :- ಪ್ರಿಯತಮನ ಧ್ಯಾನದಲ್ಲಿಯೇ ಇದ್ದು ಊಟ-ಉಪಚಾರ ಗಳೂ ಬೇಡವಾಗಿ ಹಗಲು-ರಾತ್ರಿಗಳು ಕಳೆಯುವುದೂ ತಿಳಿಯದೇ ಶರೀರವು ಕೃಶವಾಗುತ್ತದೆ. ಇದಕ್ಕೆ 'ತಾನವ' ಎನ್ನುತ್ತಾರೆ.

ಮಲಿನಾಙ್ಗತಾ :- ಶರೀರದ ಮೇಲೆ ಜ್ಞಾನವೇ ಇಲ್ಲದುದರಿಂದ ಸ್ನಾನ-ಪಾನಗಳ ಅರಿವಿಲ್ಲದೇ ಶರೀರವು ಕೊಳೆಯಿಂದ ಮುಚ್ಚಿಹೋಗುತ್ತದೆ.

ಪ್ರಲಾಪ :- ವಿರಹಶೋಕದ ಆವೇಗದಲ್ಲಿ ತಾನು-ಪರರೆಂಬ ಭಾವವೇ ಲುಪ್ತವಾಗಿ ಉನ್ಮತ್ತನಂತೆ ಹಿಂದು-ಮುಂದಿಲ್ಲದ ಮಾತನಾಡುತ್ತಾ ಹೋಗು ವುದೇ ಪ್ರಲಾಪ.

ಸೀತಾದೇವಿಯನ್ನು ಹುಡುಕುತ್ತಾ ಲಕ್ಷ್ಮಣನೊಡನೆ ಶ್ರೀರಾಮನು ಹೋಗುತ್ತಿದ್ದಾನೆ. ಅವನು ಅತ್ಯಂತಶೋಕದಿಂದ ಪೀಡಿತನಾಗಿದ್ದಾನೆ. ತಾನು-ಪರರು, ಜಡ-ಚೇತನಗಳೆಂಬ ಭಾವನೆಯೇ ಲುಪ್ತವಾದಂತಿದೆ. ದೇಹದ ಭಾವವೂ ಇಲ್ಲ. ನಡೆಯುತ್ತಿದ್ದವನು ಥಟ್ಟನೆ ನಿಂತು ಪ್ರಲಾಪಿಸು ತ್ತಾನೆ.

ಕೋಽಹಂ ಬ್ರೂಹಿ ಸಖೇ ಸ್ವಯಂ ಸ ಭಗವಾನಾರ್ಯಃ
ಸ ಕೋ ರಾಘವಃ
ಕೇ ಯೂಯಂ ಬತ ನಾಥ ಕಿಮಿದಂ ದಾಸೋಽಸ್ಮಿ ತೇ ಲಕ್ಷ್ಮಣಃ ॥
ಕಾಂತಾರೇ ಕಿಮಿಹಾಸ್ಮಹೇ ಬತ ಸಖೇ ದೇವ್ಯಾ ಗತಿರ್ಮೃಗ್ಯತೇ
ಕಾ ದೇವೀ ಜನಕಾಧಿರಾಜತನಯಾ ಹಾ ಜಾನಕಿ ಕ್ವಾಸಿ ಹಾ ॥

ಕಾಡಿನಲ್ಲಿ ಹೋಗುತ್ತಾ, ಶ್ರೀರಾಮನು ಬೆಚ್ಚಿಬಿದ್ದು ಲಕ್ಷ್ಮಣನನ್ನು ಕೇಳುತ್ತಾನೆ-"ಮಿತ್ರ! ನಾನಾರೆಂಬುದನ್ನು ದಯವಿಟ್ಟು ಹೇಳುವೆಯಾ"?

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಲಕ್ಷ್ಮಣನು ಹೇಳುತ್ತಾನೆ – "ಆರ್ಯ! ನೀನು ಸಾಕ್ಷಾತ್ ಭಗವಂತನು."

ಶ್ರೀರಾಮನು ಪುನಃ ಕೇಳುತ್ತಾನೆ – "ಭಗವಂತನೇ? ಅವನು ಯಾರು?"

ಲಕ್ಷ್ಮಣ–"ರಘುವಂಶದಲ್ಲಿ ಅವತರಿಸಿದ ಶ್ರೀರಾಮ."

ಶ್ರೀರಾಮನು 'ಸುತ್ತಲೂ ನೋಡಿ' ಮತ್ತೊಮ್ಮೆ ಕೇಳುತ್ತಾನೆ:

"ಅದು ಸರಿಯೇ; ನೀನಾರು ಮಿತ್ರ?"

ಇದನ್ನು ಕೇಳಿ ಅಧೀರನಾದ ಲಕ್ಷ್ಮಣನು ಹೇಳುತ್ತಾನೆ:

"ಸ್ವಾಮಿನ್! ದಯಾನಿಧೇ! ಎಂತಹ ಮಾತನ್ನಾಡುತ್ತಿರುವೆ? ನಾನು ನಿನ್ನ ದಾಸನಾದ ಲಕ್ಷ್ಮಣನಲ್ಲವೇ?"

ಶ್ರೀರಾಮ–"ಹಾಗಾದರೆ ನಾವಿಬ್ಬರೂ ಈ ಅರಣ್ಯದಲ್ಲಿ ಏಕೆ ಅಲೆಯುತ್ತಿದ್ದೇವೆ?"

ಲಕ್ಷ್ಮಣ:– "ಅಣ್ಣ! ನಾವು ದೇವಿಯನ್ನು ಹುಡುಕುತ್ತಿದ್ದೇವೆ."

ಶ್ರೀರಾಮನು ಬೆಚ್ಚಿಬಿದ್ದು ಕೇಳುತ್ತಾನೆ–"ಯಾವ ದೇವಿ?"

ಲಕ್ಷ್ಮಣ:–"ಜಗದ್ವಂದ್ಯಳಾದ ಜನಕನಂದಿನಿಯಾದ ಜಾನಕೀದೇವಿ."

ಸೀತೆಯ ಹೆಸರನ್ನು ಕೇಳಿದೊಡನೆಯೇ–"ಹಾ ಸೀತೇ! ಹಾ ಜಾನಕಿ! ಎಲ್ಲಿರುವೆ?" – ಎಂದು ಕೂಗುತ್ತಾ ಶ್ರೀರಾಮನು ಮೂರ್ಛಿತನಾಗುತ್ತಾನೆ. ವಿರಹಾತಿಶಯದಿಂದ ಹೀಗೆ ತಲೆ-ಬುಡವಿಲ್ಲದ ಮಾತುಗಳನ್ನಾಡುವುದಕ್ಕೇ ಪ್ರಲಾಪವೆನ್ನುತ್ತಾರೆ. ಶ್ರೀಮದ್ರಾಮಾಯಣದಲ್ಲಿ ಬರುವ ಶ್ರೀರಾಮನ ವಿರಹಾಲಾಪವು ಪ್ರೇಮಯೋಗದ ಅತ್ಯುನ್ನತಸ್ಥಿತಿಯಲ್ಲಿ ಉಂಟಾದುದು. ಅತ್ಯಂತಪರಿಶುದ್ಧವಾದ ಪ್ರೇಮವಿರುವೆಡೆಯಲ್ಲಿಯೇ ಈ ಅವಸ್ಥೆಗಳು ಕಾಣಬರುತ್ತವೆ.

ವ್ಯಾಧಿ:– ಶರೀರದ ವೇದನೆಗೆ ವ್ಯಾಧಿ, ಮನಸ್ಸಿನ ವೇದನೆಗೆ ಆಧಿ ಎನ್ನುತ್ತಾರೆ. ವಿರಹದಲ್ಲಿ ಇವು ಸಹಜವೇ.

ಉನ್ಮಾದ:– ಈ ಸ್ಥಿತಿಯಲ್ಲಿ ಸಾಧಾರಣವಾದ ಸಹಜ ಚೇಷ್ಟೆಗಳು ವಿರಹದ ಆವೇಗದಲ್ಲಿ ಆಗಾಗ ತಿರುಗು-ಮುರುಗಾಗುತ್ತವೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಮೋಹ :– ವಿರಹದ ಅತ್ಯುತ್ಕಟದಶೆಯಲ್ಲಿ ಆಗಾಗ ಮೂರ್ಛೆಯುಂಟಾಗುತ್ತದೆ.

ಮೃತ್ಯು :– ಮೃತ್ಯುಸಮಾನವಾದ ದಶೆಯುಂಟಾಗುತ್ತದೆ.

ಮುಂದಿನ ಸ್ಥಿತಿಗಳು :– ಭಾವ, ಮಹಾಭಾವ ( ರೂಢಮಹಾಭಾವ, ಅಧಿರೂಢಮಹಾಭಾವ), ಮಾದನ-ಮೋಹನ ಅನಂತರ ದಿವ್ಯೋನ್ಮಾದ- ಎಂದು ವೈಷ್ಣವಶಾಸ್ತ್ರಗ್ರಂಥಗಳು ಹೇಳುತ್ತವೆ.

ಆದುದರಿಂದ ಪ್ರೇಯಸಿಯಾದ ಸೀತೆಯ ಬಗೆಗೆ ಶ್ರೀರಾಮವಿಲಾಪದಲ್ಲಿ ಅತಿಶಯವೇನೂ ಕಂಡುಬರುವುದಿಲ್ಲ.

( ಪರಮಪೂಜ್ಯ ಶ್ರೀ ಪ್ರಭುದತ್ತಬ್ರಹ್ಮಚಾರಿಯವರ ಲೇಖನದ ಆಧಾರ )

—ಶ್ರೀಹರಿ.

—·—

## ಶಬರಿ

ಶಬರಜಾತಿಯವಳಾದ ಶಬರಿಯು ಸುಪ್ರಸಿದ್ಧ ರಾಮಭಕ್ತಳು. ಅವಳು ಪಂಪಾತೀರದಲ್ಲಿ ಮತಂಗವನದಲ್ಲಿರುತ್ತಾಳೆ. ಶ್ರೀರಾಮನಿಗೆ ಶಬರಿಯು ಅಲ್ಲಿರುವುದು ಕಬಂಧನಿಂದ ತಿಳಿಯುತ್ತದೆ. ಶ್ರೀರಾಮನು ಲಕ್ಷ್ಮಣನೊಡನೆ ಶಬರಿಯ ಬಳಿಗೆ ಹೋಗುತ್ತಾನೆ. ರಾಮ-ಲಕ್ಷ್ಮಣರಿಬ್ಬರಿಗೂ ಅವಳು ಕಾಲುಮುಟ್ಟಿ ನಮಸ್ಕರಿಸುತ್ತಾಳೆ. ಶ್ರೀರಾಮನಿಗೂ ಶಬರಿಗೂ ಪರಸ್ಪರವಾಗಿ ಮಾತುಕತೆಗಳಾದನಂತರ ಅವಳು ಬಹಳ ದಿವಸಗಳಿಂದಲೂ ಸಂಗ್ರಹಿಸಿಟ್ಟಿದ್ದ ಹಣ್ಣುಗಳನ್ನು ಶ್ರೀರಾಮ-ಲಕ್ಷ್ಮಣರಿಗೆ ಅರ್ಪಿಸುತ್ತಾಳೆ.

ಮಯಾ ತು ಸಂಚಿತಂ ವನ್ಯಂ ವಿವಿಧಂ ಪುರುಷರ್ಷಭ ।
ತವಾರ್ಥೇ ಪುರುಷವ್ಯಾಘ್ರ ಪಮ್ಪಾಯಾಸ್ತೀರಸಂಭವಮ್ ॥ ೧೭॥

‘ ಪುರುಷಶ್ರೇಷ್ಠನೇ ! ನಾನು ನಿನ್ನ ಸಲುವಾಗಿ ಪಂಪಾಸರೋವರದ ತೀರಪ್ರದೇಶದಲ್ಲಿ ಬೆಳೆದ ಹಣ್ಣು-ಹಂಪಲುಗಳನ್ನೂ ಗೆಡ್ಡೆ-ಗೆಣಸುಗಳನ್ನೂ ಸಂಗ್ರಹಿಸಿಟ್ಟಿದ್ದೇನೆ.’

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

ಹೀಗೆಯೇ ಅಧ್ಯಾತ್ಮರಾಮಾಯಣ-ತುಲಸೀರಾಮಾಯಣಗಳಲ್ಲಿಯೂ ಬರುತ್ತದೆ.

ಶಬರಿಯು ಹಣ್ಣಿನ ರುಚಿಯನ್ನು ಮೊದಲು ನೋಡಿ ಚೆನ್ನಾಗಿ ರುಚಿಯಾಗಿರುವ ಹಣ್ಣುಗಳನ್ನೇ ರಾಮನಿಗಾಗಿ ಇಟ್ಟಿದ್ದಳೆಂಬ ಕಥೆಯು ಸಾಮಾನ್ಯವಾಗಿ ಸರ್ವತ್ರ ಪ್ರಚಾರದಲ್ಲಿದೆ. ಈ ಸುಪ್ರಸಿದ್ಧವಾದ ಕಥೆಯು ತತ್ತ್ವಸಂಗ್ರಹರಾಮಾಯಣದಲ್ಲಿ ಬರುತ್ತದೆ.

ಫಲಾನಿ ಚ ಸುಪಕ್ವಾನಿ ಮೂಲಾನಿ ಮಧುರಾಣಿ ಚ ।
ಸ್ವಯಮಾಸ್ವಾದ್ಯ ಮಾಧುರ್ಯಂ ಪರೀಕ್ಷ್ಯ ಪರಭಕ್ತಿತಃ ॥೩೯॥
ಪಶ್ಚಾನ್ನಿವೇದಯಾಮಾಸ ರಾಘವಾಭ್ಯಾಂ ದೃಢವ್ರತಾ ॥೪೦॥

ದೃಢವ್ರತಳಾದ ಆ ಶಬರಿಯು ಪಕ್ವವಾದ ಫಲಗಳನ್ನೂ, ಮಧುರವಾದ ಕಂದ-ಮೂಲಗಳನ್ನೂ ಮೊದಲು ತಾನು ಆಸ್ವಾದಿಸಿ ಅವುಗಳ ಮಾಧುರ್ಯವನ್ನು ರುಚಿನೋಡಿ ಬಳಿಕ ಮಹಾಭಕ್ತಿಯಿಂದ ರಾಮ-ಲಕ್ಷ್ಮಣರಿಗೆ ಅರ್ಪಿಸಿದಳು.

ಲಕ್ಷ್ಮಣನು ಆ ಹಣ್ಣುಗಳನ್ನು ತಿನ್ನಲಿಲ್ಲವೆಂಬ ಒಂದು ಕಥೆಯೂ ಪ್ರಚಲಿತವಾಗಿದೆ. ಅದು ಎಲ್ಲಿದೆಯೆಂಬುದು ತಿಳಿಯದು. ವಾಲ್ಮೀಕಿರಾಮಾಯಣದಲ್ಲಿ ಹೊರತಾಗಿ ಅಧ್ಯಾತ್ಮರಾಮಾಯಣ, ತುಲಸೀರಾಮಾಯಣ ಮತ್ತು ತತ್ತ್ವಸಂಗ್ರಹರಾಮಾಯಣಗಳಲ್ಲಿ ಶ್ರೀರಾಮನು ಒಂಬತ್ತು ವಿಧವಾದ ಭಕ್ತಿಗಳನ್ನು ಶಬರಿಗೆ ಉಪದೇಶಿಸುತ್ತಾನೆ.



## ವಾಲಿಯ ವಧೆ ಸರಿಯೆ !

ಈ ಬಗೆಗೆ ವಿದ್ವಾನ್ ವರದದೇಶಿಕಾಚಾರ್ಯರ ವಿದ್ವತ್ಪರಿಪೂರ್ಣವಾದ ಲೇಖನವನ್ನು ಇದೇ ಸಂಪುಟದಲ್ಲಿ ಕೊಡಲಾಗಿದೆ. ಇಲ್ಲಿ ಇತರ ರಾಮಾಯಣಗಳಲ್ಲಿ ಬಂದಿರುವ ವಿಷಯವನ್ನು ನಿರೂಪಿಸಲಾಗುವುದು.

ಅಧ್ಯಾತ್ಮರಾಮಾಯಣ ಮತ್ತು ತುಲಸೀರಾಮಾಯಣಗಳಲ್ಲಿ ವಾಲ್ಮೀಕಿರಾಮಾಯಣದಲ್ಲಿ ಬಂದಿರುವಂತೆಯೇ ಶ್ರೀರಾಮನು ತಾನು ಮಾಡಿದುದನ್ನು ಸಮರ್ಥಿಸಿಕೊಳ್ಳುತ್ತಾನೆ. ವಾಲಿಯೂ ತಾನು ಮಾಡಿದುದು ಅಪರಾಧವೆಂದು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಒಪ್ಪಿಕೊಳ್ಳುತ್ತಾನೆ. ತತ್ತ್ವಸಂಗ್ರಹರಾಮಾಯಣದಲ್ಲಿ ಇದು ಬೇರೆಯ ರೀತಿಯಲ್ಲೇ ಬಂದಿದೆ.

ಮರೆಯಲ್ಲಿ ನಿಂತು ಶ್ರೀರಾಮನು ವಜ್ರಾಯುಧಕ್ಕೆ ಸಮಾನವಾಗಿದ್ದ ಮಹಾವೇಗಯುಕ್ತವಾಗಿದ್ದ ಐಂದ್ರಾಸ್ತ್ರವನ್ನು ವಾಲಿಯ ಮೇಲೆ ಪ್ರಯೋಗಿಸುತ್ತಾನೆ. ಆ ಬಾಣವು ವಾಲಿಯ ಹೃದಯವನ್ನೇ ಭೇದಿಸುತ್ತದೆ. ವಾಲಿಯು ಗಟ್ಟಿಯಾಗಿ ಕೂಗಿಕೊಳ್ಳುತ್ತಾ ಮೇಲಕ್ಕೆ ಹಾರಿ ಭೂಮಿಯ ಮೇಲೆ ಬಿದ್ದು ಮರಣಹೊಂದುತ್ತಾನೆ.

ಈ ವಿಷಯವನ್ನು ಶಿವನಿಂದ ಕೇಳಿದ ಪಾರ್ವತಿಯು ಪತಿಯನ್ನು ಪ್ರಶ್ನಿಸುತ್ತಾಳೆ:

ರಾಮೇಣ ನಿಹತೋ ವಾಲೀ ಕಥಮನ್ಯೇನ ಸಂಗತಃ ।
ಅಯುಕ್ತಂ ಛದ್ಮನಾ ಯುದ್ಧಂ ರಾಮಸ್ಯ ವಿದಿತಾತ್ಮನಃ ॥೧೧॥
ಭೂಭಾರಹರಣಾರ್ಥಾಯ ದೇವಕಾರ್ಯಚಿಕೀರ್ಷಯಾ ।
ಅವತೀರ್ಣೋ ಹರಿರಿತಿ ಶ್ರೂಯತೇ ಲೋಕವೇದಯೋಃ ।
ನ ತಸ್ಯ ಮಿತ್ರಂ ನ ದ್ವೇಷ್ಯೋ ಲಾಭಾಲಾಭೌ ಪ್ರಿಯಾಪ್ರಿಯೇ ॥
ಇನ್ದ್ರಾತ್ಮಜೇ ಹರೀನ್ದ್ರೇ ತು ನಿಧನಂ ಲೋಕಗರ್ಹಿತಮ್ ।
ಕಿಮರ್ಥಮಕರೋದ್ರಾಮೋ ಸರ್ವಜ್ಞಃ ಸರ್ವಸಮ್ಮತಃ ॥೧೩॥
ಏವಂ ಮೇ ಸಂಶಯೋ ಶರ್ವೋ ನುದ ಭಾನುರ್ಯಥಾ ತಮಃ ॥

"ಪ್ರಭುವೇ ! ವಾಲಿಯು ಯುದ್ಧಸನ್ನದ್ಧನಾಗಿ ತನ್ನೆದುರಿಗೆ ಬರದೇ ಮತ್ತೊಬ್ಬರೊಡನೆ ಯುದ್ಧಮಾಡುತ್ತಿರುವಾಗ ಶ್ರೀರಾಮನು ಅವನನ್ನು ಹೇಗೆ ಕೊಂದನು ? ಸರ್ವಜ್ಞನಾದ ಶ್ರೀರಾಮನು ಹೀಗೆ ಕಪಟದಿಂದ ಯುದ್ಧಮಾಡಿದುದು ಯುಕ್ತವಲ್ಲವೆಂದು ತೋರುವುದಿಲ್ಲವೇ ? ಭೂಭಾರವನ್ನು ಪರಿಹರಿಸುವುದಕ್ಕಾಗಿಯೂ ದೇವತೆಗಳ ಕಾರ್ಯವನ್ನು ಮಾಡುವುದಕ್ಕಾಗಿಯೂ ಶ್ರೀಹರಿಯು ರಾಮನ ರೂಪದಲ್ಲಿ ಅವತರಿಸಿದನೆಂದು ಲೋಕದಲ್ಲಿ ಪ್ರಸಿದ್ಧವಾಗಿರುವುದು. ಇದೇ ಅರ್ಥವು ಉಪನಿಷತ್ತುಗಳಲ್ಲಿಯೂ ಹೇಳಲ್ಪಟ್ಟಿರುವುದು. ಶ್ರೀಹರಿಗಾದರೋ ಮಿತ್ರರೂ ಇಲ್ಲ; ಶತ್ರುಗಳೂ ಇಲ್ಲ; ಲಾಭವೂ ಇಲ್ಲ; ನಷ್ಟವೂ ಇಲ್ಲ; ಪ್ರಿಯವೂ ಇಲ್ಲ; ಅಪ್ರಿಯವೂ ಇಲ್ಲ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri

ಹೀಗಿರುವಾಗ ದೇವಕಾರ್ಯಾರ್ಥವಾಗಿಯೇ ಅವತರಿಸಿ ಧರ್ಮಜ್ಞನೆಂದು ಸರ್ವರಿಂದಲೂ ಸಮ್ಮತನಾಗಿರುವ ಶ್ರೀರಾಮಚಂದ್ರನು ಸಕಲದೇವತೆಗಳಿಗೂ ಅಧಿಪತಿಯಾಗಿರುವ ಸಾಕ್ಷಾನ್ಮಹೇಂದ್ರನ ಪುತ್ರನಾದ ವಾಲಿಯನ್ನು ಲೋಕವೆಲ್ಲವೂ ನಿಂದಿಸುವಂತೆ ಕಪಟದಿಂದ ಹೀಗೇಕೆ ಕೊಂದನು ? ಸೂರ್ಯನು ತಮಸ್ಸನ್ನು ಹೋಗಲಾಡಿಸುವಂತೆ–ನೀನು ಈ ನನ್ನ ಸಂಶಯವನ್ನು ಪರಿಹರಿಸು."

ಇದಕ್ಕೆ ಉತ್ತರವಾಗಿ ಈಶ್ವರನು ಹೇಳುತ್ತಾನೆ :

" ಪಾರ್ವತಿ ! ಶ್ರೀರಾಮನು ಮರೆಯಲ್ಲಿ ನಿಂತು ವಾಲಿಯನ್ನು ಸಂಹರಿಸಲು ಕಾರಣವನ್ನು ಹೇಳುವೆನು ; ಕೇಳು. ಈ ವಿಷಯವನ್ನು ಕೇಳಿದ ಮಾತ್ರದಿಂದಲೇ ಶ್ರೀರಾಮನಲ್ಲಿ ಅಧಿಕವಾದ ಭಕ್ತಿಯು ಹುಟ್ಟುವುದು.

ಹಿಂದೆ ಸುರಾಸುರರು ಒಟ್ಟಾಗಿ ಬ್ರಹ್ಮನ ಬಳಿಗೆ ಹೋಗಿ ಸಾಯದಿರಲು, ರೋಗಿಗಳಾಗದಿರಲು ಉಪಾಯವನ್ನು ಕೇಳಿದರು. ಬ್ರಹ್ಮನು ಅದರ ಸಾಧನೋಪಾಯವನ್ನು ಸೂಚಿಸುತ್ತಾ ಹೇಳಿದನು :

" ದೇವಾಸುರರೇ ! ಮಂದರಪರ್ವತವನ್ನು ಕಡೆಗೋಲನ್ನಾಗಿ ಮಾಡಿಕೊಳ್ಳಿರಿ. ವಾಸುಕಿಯನ್ನು ಹಗ್ಗವನ್ನಾಗಿ ಮಾಡಿಕೊಳ್ಳಿರಿ. ಅಮೃತವು ಸಿಕ್ಕುವವರೆಗೂ ಕ್ಷೀರಸಮುದ್ರವನ್ನು ಕಡೆಯುತ್ತಲೇ ಇರಿ. ಅಮೃತವು ಸಿಕ್ಕಿದ ಬಳಿಕ ನಿಮ್ಮ ಇಷ್ಟಾರ್ಥವು ಕೈಗೂಡುವುದು."

ಬ್ರಹ್ಮನ ಆ ಮಾತನ್ನು ಕೇಳಿ ದೇವಾಸುರರು ಸಮುದ್ರವನ್ನು ಕಡೆಯಲು ಪ್ರಾರಂಭಿಸಿದರು.

ದೇವತೆಗಳು ವಾಸುಕಿಯ ಬಾಲವನ್ನು ಹಿಡಿದಿದ್ದರು. ಅದರಿಂದ ಅವರಿಗೆ ಹೆಚ್ಚಿನ ಕ್ಲೇಶವಾಯಿತು. ಆ ಸಮಯದಲ್ಲಿ ವಾಲಿಯೂ ಸಮುದ್ರವನ್ನು ಹೇಗೆ ಕಡೆಯುವರೆಂಬುದನ್ನು ನೋಡುವ ಕುತೂಹಲದಿಂದ ಅಲ್ಲಿಗೆ ಬಂದಿದ್ದನು. ಅವನು ಮಹಾಬಲಿಷ್ಠನಾಗಿದ್ದ ಕಾರಣ ದೇವತೆಗಳೊಡನೆ ಅವನೂ ಸೇರಿಕೊಂಡರೆ ದೇವತೆಗಳ ಆಯಾಸವು ಕಡಿಮೆಯಾಗುವುದೆಂಬ ಆಶಯದಿಂದ ಮಹಾವಿಷ್ಣುವು ವಾಲಿಯನ್ನು ಹತ್ತಿರಕ್ಕೆ ಕರೆದು–

' ಯಾರು ನಿನ್ನ ಎದುರಿಗೆ ನಿಂತು ಯುದ್ಧಮಾಡುವರೋ ಅವರ ಬಲ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ವಲ್ಲಿ ಅರ್ಧಭಾಗವು ನಿನಗೆ ಲಭಿಸಲಿ' – ಎಂಬ ವರವನ್ನೂ ದಿವ್ಯವಾದ ಸುವರ್ಣಕಮಲಹಾರವನ್ನೂ ಕೊಟ್ಟು ತಂದೆಯಾದ ಇಂದ್ರನಿಗೆ ಸಹಾಯ ಮಾಡುವಂತೆ ಅವನಿಗೆ ಹೇಳಿದನು.

ಬಳಿಕ ವಾಲಿಯು ಸಮುದ್ರವನ್ನು ಕಡೆಯಲು ದೇವತೆಗಳಿಗೆ ಸಹಾಯ ಮಾಡಿದನು. ದೇವತೆಗಳೂ ಕೃತಕೃತ್ಯರಾದರು. ಸುವರ್ಣಮಯ ಮಾಲಿಕೆಯ ಧಾರಣೆಯಿಂದಾಗಿ ವಾಲಿಯ ಜ್ಞಾನ-ವೀರ್ಯಗಳು ವೃದ್ಧಿ ಹೊಂದಿದುವು.

ಮಹಾವಿಷ್ಣುವಾಗಿದ್ದಾಗ ತಾನೇ ವಾಲಿಗೆ ವರವನ್ನು ಕೊಟ್ಟು ಈಗ ಅದಕ್ಕೆ ವಿರೋಧವಾಗಿ ವರ್ತಿಸಬಾರದೆಂಬ ಅಭಿಪ್ರಾಯದಿಂದ ಶ್ರೀರಾಮನು ವಾಲಿಗೆ ಎದುರಾಗಿ ನಿಲ್ಲದೇ ಮರೆಯಲ್ಲಿ ನಿಂತುಕೊಂಡನು. ಇದೊಂದು ಕಾರಣ. ಮತ್ತೊಂದು ಕಾರಣವು ಹೀಗಿದೆ. ಶ್ರೀರಾಮನು ಯಾವುದೇ ಕಾರಣದಿಂದಲೂ ತಾನು ಮಾಡಿದ ಪ್ರತಿಜ್ಞೆಗೆ ಭಂಗಬರುವಂತೆ ವ್ಯವಹರಿಸುವುದಿಲ್ಲ.

ಲಕ್ಷ್ಮೀಶ್ಚನ್ದ್ರಾದಪೇಯಾದ್ವಾ ಹಿಮವಾನ್ವಾ ಹಿಮಂ ತ್ಯಜೇತ್ ।
ಅಹಂ ತ್ಯಜೇ ನ ಪ್ರತಿಜ್ಞಾಂ ಸಮುದ್ರೋಽಪ್ಯಜಲೋ ಯದಿ ॥ ೨೫ ॥

'ಚಂದ್ರನನ್ನು ಬಿಟ್ಟು ಬೆಳದಿಂಗಳು ಬೇರೆಯಾಗಬಹುದು. ಹಿಮವತ್ಪರ್ವತವು ಹಿಮವನ್ನಾದರೂ ಬಿಡಬಹುದು. ಸಮುದ್ರವು ನೀರಿಲ್ಲದೆಯೇ ಇರಬಹುದು. ಆದರೆ ನಾನು ಮಾತ್ರ ನನ್ನ ಪ್ರತಿಜ್ಞೆಯನ್ನು ಬಿಡಲಾರೆನು.'

ಇದು ರಾಮನ ಮಾತು.

ಶ್ರೀರಾಮನು ವಾಲಿಯನ್ನು ಕೊಲ್ಲುವುದಾಗಿ ಸುಗ್ರೀವನಿಗೆ ಪ್ರತಿಜ್ಞೆ ಮಾಡಿಕೊಟ್ಟಿದ್ದನು. ಈ ಕಾರಣದಿಂದ ಶ್ರೀರಾಮನು ವಾಲಿಯನ್ನು ಕೊಲ್ಲಲೇಬೇಕಾಗಿತ್ತು. ಒಂದು ವೇಳೆ ರಾಮನು ವಾಲಿಯ ಎದುರಾಗಿ ಯುದ್ಧಕ್ಕೆ ನಿಂತುದಾದರೆ ವಾಲಿಯು ರಾಮನಿಗೆ ಶರಣಾಗತನಾಗಿ ಬಿಡುತ್ತಿದ್ದನು.

ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ ।
ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಂ ಮಮ ॥ ೨೭ ॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation, Kolkata. Digitization: eGangotri.

"ಯಾವನು ನನ್ನಲ್ಲಿ ಭಕ್ತಿಯನ್ನಿಟ್ಟು ಶರಣಾಗತನಾಗಿ ಒಂದೇ ಒಂದು ಸಲವಾದರೂ ನಾನು ನಿನ್ನವನಾಗಿದ್ದೇನೆಂದು ಬೇಡುವನೋ-ಅಂತಹವನಿಗೆ ಯಾವ ಪ್ರಾಣಿಗಳಿಂದಲೂ ಭಯವಿಲ್ಲದಿರುವಂತೆ ನಾನು ನೋಡಿಕೊಳ್ಳು ವೆನು. ಇದೇ ನನ್ನ ವ್ರತವು-ಎಂದು ಅವನೇ ಪ್ರತಿಜ್ಞೆ ಮಾಡಿದ್ದಾನೆ."

ಹೀಗಿರುವ ಕಾರಣ ಶರಣಾಗತನಾಗುವ ವಾಲಿಗೆ ಅಭಯಪ್ರದಾನ ಮಾಡಿದರೆ ಸುಗ್ರೀವನಿಗೆ ಮಾಡಿಕೊಟ್ಟ ಪ್ರತಿಜ್ಞೆಯ ಭಂಗವಾಗುವುದು. ಇದಲ್ಲದೇ ಮತ್ತೊಂದು ಅನರ್ಥಕ್ಕೂ ಇದು ಕಾರಣವಾಗುತ್ತದೆ. ವಾಲಿಯು ರಾವಣನಿಗೆ ಪರಮಮಿತ್ರನು. ವಾಲಿಯು ಶರಣಾಗತನಾದರೆ ವಾಲಿಯ ಮಿತ್ರನಾದ ರಾವಣನೂ ಶರಣಾಗತನಾಗಿ ಬಿಡುತ್ತಾನೆ. ನನ್ನ ಶರಣಾಗತ ರಕ್ಷಣಾಧರ್ಮದಂತೆ ರಾವಣನನ್ನೂ ರಕ್ಷಿಸಲೇಬೇಕಾಗುತ್ತದೆ. ಹೀಗೆ ನಾನು ರಾವಣನನ್ನೂ ಸಂಹರಿಸದೇ ಬಿಟ್ಟುಬಿಟ್ಟರೆ ನಾನು ಈ ಅವತಾರವನ್ನು ಮಾಡಿದುದಕ್ಕೆ ಫಲವಿಲ್ಲದಂತಾಗುತ್ತದೆ.

ರಾವಣಸ್ಯ ವಧಾಭಾವಾತ್ ಅವತಾರಫಲಂ ನ ಹಿ ॥೨೮॥
ಇತ್ಥಮಾಲೋಚ್ಯ ರಾಮೇಣ ಹ್ಯದೃಶ್ಯೇನ ಹತಃ ಕಪಿಃ ॥೨೯॥

ಇಷ್ಟನ್ನೆಲ್ಲಾ ಯೋಚಿಸಿ ಸರ್ವಜ್ಞನಾದ ಶ್ರೀರಾಮನು ಅಗೋಚರ ನಾಗಿಯೇ ಇದ್ದುಕೊಂಡು ವಾಲಿಯನ್ನು ಸಂಹರಿಸಿದನು.

——

## ದುಂದುಭಿ-ಮಾಯಾವಿಗಳ ಸಂಬಂಧ

ಕಿಷ್ಕಿಂಧಾಕಾಂಡದ ೯ನೆಯ ಸರ್ಗದ ೪ನೆಯ ಶ್ಲೋಕವು ಹೀಗಿದೆ:

ಮಾಯಾವೀ ನಾಮ ತೇಜಸ್ವೀ ಪೂರ್ವಜೋ ದುನ್ದುಭೇಃ ಸುತಃ ।
ತೇನ ತಸ್ಯ ಮಹದ್ವೈರಂ ಸ್ತ್ರೀಕೃತಂ ವಿಶ್ರುತಂ ಪುರಾ ॥೪॥

ಇಲ್ಲಿರುವ ಶ್ಲೋಕಕ್ಕೆ ಯಥಾವತ್ತಾಗಿ ಅರ್ಥಮಾಡಿದರೆ ದುಂದುಭಿಯ ಮಗನೂ-ಅಣ್ಣನೂ ಆದ ತೇಜಸ್ವಿಯಾದ ಮಾಯಾವೀ ಎಂಬ ರಾಕ್ಷಸ ನಿದ್ದನು-ಎಂದು ಅರ್ಥವಾಗುತ್ತದೆ. ಮಗನೂ ಅಣ್ಣನೂ ಆಗಲು ಸಾಧ್ಯ ವಿಲ್ಲ. ಆದುದರಿಂದ ವ್ಯಾಖ್ಯಾನಕಾರರು ಮಯಸ್ಯ ಎಂಬುದನ್ನು ಅಧ್ಯಾ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಹಾರ ಮಾಡಿಕೊಂಡು ಮಯನ ಮಗನೂ, ದುಂದುಭಿಯ ಅಣ್ಣನೂ ಆದ ಮಾಯಾವೀ–ಎಂದು ಅರ್ಥಮಾಡಿರುತ್ತಾರೆ. ಇದು ಸಮಂಜಸವೂ ಆಗಿದೆ. ವಾಯುಪುರಾಣದಲ್ಲಿದ್ದೂ ಮತ್ತು ಬ್ರಹ್ಮಪುರಾಣದಲ್ಲಿಯೂ ಮಯನಿಗೆ ರಂಭೆಯಲ್ಲಿ ಮಾಯಾವೀ ಮತ್ತು ದುಂದುಭಿ ಎಂಬ ಇಬ್ಬರು ಗಂಡು ಮಕ್ಕಳೂ, ಮಂಡೋದರೀ ಎಂಬ ಹೆಣ್ಣುಮಗಳೂ ಇದ್ದರೆಂದು ಹೇಳಿದೆ. ಈ ಪಾಠದ ಪ್ರಕಾರ ನಾವು ಇಲ್ಲಿ ಬರುವ ಪ್ರಕರಣವನ್ನು ಸಮನ್ವಯಿಸ ಬಹುದಾಗಿದೆ. ಈ ಮಾಯಾವೀ ಮತ್ತು ದುಂದುಭಿಗಳು ಮಯನ ಮಕ್ಕಳು. ಮಾಯಾವಿಯು ಜ್ಯೇಷ್ಠನು. ದುಂದುಭಿಯು ಕನಿಷ್ಠನು. ದುಂದುಭಿಯು ಯುದ್ಧಮದದಿಂದ ಎಮ್ಮೆಯ ರೂಪವನ್ನು ತಾಳಿ ವಾಲಿಯ ಮೇಲೆ ಯುದ್ಧಕ್ಕೆ ಹೋಗಿ ಪ್ರಾಣತೊರೆಯುತ್ತಾನೆ. ಇದರಿಂದ ಕುಪಿತನಾದ ದುಂದುಭಿಯ ಅಣ್ಣ ಮಾಯಾವಿಯು ಅಣ್ಣನನ್ನು ಕೊಂದ ಸೇಡನ್ನು ತೀರಿಸಿಕೊಳ್ಳಲು ವಾಲಿಯನ್ನು ಯುದ್ಧಕ್ಕೆ ಆಹ್ವಾನಿಸಿ ಸುಗ್ರೀವನ ಜೊತೆಯಲ್ಲಿದ್ದ ವಾಲಿಯನ್ನು ನೋಡಿ ಭಯಗೊಂಡು ಬಿಲದೊಳಗೆ ಪ್ರವೇಶಿಸುತ್ತಾನೆ. ವಾಲಿಯು ಬಿಲದೊಳಕ್ಕೂ ನುಗ್ಗಿ ಅವನನ್ನು ಸಂಹರಿಸುತ್ತಾನೆ.

ಆದರೆ: ತೇನ ತಸ್ಯ ಮಹದ್ವೈರಂ ಸ್ತ್ರೀಕೃತಂ– ಎಂಬುದಾಗಿ ಎಲ್ಲ ಪುಸ್ತಕಗಳಲ್ಲಿಯೂ ಪಾಠವಿದೆ. ತಮ್ಮನ ಸಲುವಾಗಿ ವೈರವುಂಟಾಯಿತು– ಎಂಬುದು ಇಲ್ಲಿ ಉಲ್ಲೇಖವಾಗಿಲ್ಲ. ಆದರೆ ಹೆಂಗಸಿನ ಸಲುವಾಗಿ ಅವರಿಬ್ಬರಿಗೂ ದ್ವೇಷವುಂಟಾಗಿದ್ದಿತೆಂಬುದಕ್ಕೆ ಎಲ್ಲಿಯೂ ಆಧಾರವು ಕಂಡುಬರುವುದಿಲ್ಲ. 'ಅಯಮಿತಿಹಾಸಃ ಕ್ವಚಿತ್ಪುರಾಣೇ ಶೋಧನೀಯೋ ಬಹುದರ್ಶಭಿಃ – ಈ ಇತಿಹಾಸವನ್ನು ಯಾವುದಾದರೂ ಪುರಾಣದಲ್ಲಿ ವಿದ್ವಾಂಸರಾದವರು ಹುಡುಕಲೇಬೇಕಾಗಿದೆ'–ಎಂದು ಒಬ್ಬ ವ್ಯಾಖ್ಯಾನಕಾರರು ಹೇಳಿ ಮುಗಿಸಿದ್ದಾರೆ. ಈ ಉತ್ತರಾರ್ಧದಲ್ಲಿ ಅಕ್ಷರಸ್ಖಾಲಿತ್ಯವಿರಬಹುದೆಂದೂ ಊಹಿಸಬಹುದಾಗಿದೆ. ಸ್ವೀಕೃತಂ ಎಂಬುದು 'ಸ್ತ್ರೀಕೃತಂ' ಆಗಿರಬಹುದು. 'ಸ್ವೀಕೃತಂ' ಎಂಬುದು ಪೂರ್ವಾಪರ ಕಥೆಗಳಿಗೆ ಸಮಂಜಸವಾಗಿ ಹೊಂದಿಕೊಳ್ಳುತ್ತದೆ. ವಿದ್ವಾಂಸರು ಇದನ್ನು ಪರಿಶೀಲಿಸಬೇಕು.



CC-0. Bhagavad Ramanuja National Research Institute, Melukote Collection.

